

*Photo : Udit Gopal*

# ಜವಾಹರಲಾಲ್ ನೆಹರು

( ಜೀವನ ಚರಿತ್ರೆ )

**ಕಂದಾಡೆ ಕೃಷ್ಣಯ್ಯಂಗಾರ್**

ಅಧ್ಯಾಪಕ, ದೇಶೀಯ ವಿದ್ಯಾಶಾಲೆ, ಬೆಂಗಳೂರು

**ಡಾ॥ ನಾ. ಸು. ಹರ್ಡಿಕರ್**

ಅವರ ಮುನ್ನುಡಿಯೊಡನೆ

1945

**ಬಿ. ಬಿ. ಡಿ. ಪವರ್ ಪ್ರೆಸ್**

ಅರಳೆಪೇಟೆ, ಬೆಂಗಳೂರು ಸಿಟಿ

# ಮುನ್ನುಡಿ

ಈಗಾಗಲೆ ಕನ್ನಡ ಬರಹಗಾರರು ಕೆಲವರು ಪಂಡಿತ್ ಜವಾಹರ ಲಾಲ್ ನೆಹರು ಜೀವನ ಕಥೆಯನ್ನು ಬರೆದು ಜನರೆದುರಿಗಿಟ್ಟಿದಾರೆ. ಈ ಜೀವನ ಚರಿತ್ರೆಯಾದರೆ ನಮ್ಮ ಪುಸ್ತಕ ಭಂಡಾರಗಳಿಗೆ ಭೂಷಣ ಪ್ರಾಯವಾದುದು. ಭಾರತದ ಸ್ವಾತಂತ್ರ್ಯವನ್ನು ಸಾಧಿಸುವ ಮಹ ದುದ್ಯಮದಲ್ಲಿ ಅತಿಮುಖ್ಯನಾಗಿರುವಾತನ ವೃತ್ತಾಂತವನ್ನು ತಿಳಿಯು ದಿರಲು ಸಾಧ್ಯವಿಲ್ಲ. ಈ ಪುಸ್ತಕವನ್ನೊದಗಿಸಿಟ್ಟು ಮ|| ರಾ|| ಕೃಷ್ಣ ಯ್ಯಂಗಾರ್ಯರು ಸತ್ಕಾರ್ಯವನ್ನೆಸಗಿದ್ದಾರೆ. ಸಾಹಿತ್ಯರಂಗದಲ್ಲಿ ಪ್ರೌಢ ಸಾಮರ್ಥ್ಯವನ್ನು ಪಡೆದವರೂ ಸದಾವ್ಯಾಸಂಗನಿರತರೂ ಆಗಿರುವ ಕಾರಣದಿಂದ ಪುಸ್ತಕವನ್ನು ಸಾರ್ಥಕಗೊಳಿಸಲು ಸರ್ವ ಪ್ರಯತ್ನ ವನ್ನು ನಡೆಸಿದ್ದಾರೆ. ನನ್ನ ಪಾಲಿಗೆ ಈ ಪುಸ್ತಕವೊಂದು ಹಬ್ಬ ವಾಯಿತು.

ಪಂಡಿತ್ ಜವಾಹರಲಾಲರ ಜೀವನ ಸಾಧನೆಯೆಂಬುದು ತೆರೆ ದಿಟ್ಟ ಪುಸ್ತಕದ ಹಾಗೆ; ಮುಚ್ಚುಮರೆಗಳಿಲ್ಲ. ಒಟ್ಟು ಜಗತ್ತಿನ ವಿದ್ಯಾವಂತರಿಗೆ ಜವಾಹರಲಾಲರು ಕಾರ್ಯತತ್ಪರರೆಂದು ಗೊತ್ತಿದೆ. ಭಾರತೀಯ ಜನಸಮುದಾಯವನ್ನು ಮಹಾ ಪಲ್ಲಟದೆಡೆಗೊಯ್ಯುತ್ತಿರ ತಕ್ಕವರೆಂದು ತಿಳಿದಿದೆ. ಆ ಕಾರಣದಿಂದ ದೂರದಲ್ಲಿರುವವರು ಕೂಡ ಜವಾಹರಲಾಲರನ್ನೂ ಜವಾಹರಲಾಲರ ಕಾರ್ಯಕಲಾಪಗಳನ್ನೂ ಕಾಣುತ್ತ ಮನಸ್ಸಿನಲ್ಲಿ ಪ್ರೀತಿಯನ್ನೂ ಪ್ರೀತಿಯೊಂದಿಗೆ ದಿಗಿಲನ್ನೂ ತಾಳುವರು.

ಭಾರತೀಯ ಜನರಾಶಿಗೆ ಜವಾಹರಲಾಲರಲ್ಲಿ ಪ್ರೀತಿ; ಪರಮೋ ತ್ಸಾಹ. ಆತನಿಗಾಗಿ ಏನುಬೇಕಾದರೂ ನೆರವೇರಿಸಲು ಸಿದ್ಧರಾಗಿರು ವರು. ಪ್ರೀತಿಪಾತ್ರನಾದ ಯುವಕನಾಯಕ ಜವಾಹರಲಾಲ್‌ ಆಜ್ಞೆಯನ್ನು ಹೊರುವುದರಲ್ಲಿ ಎಂತಹ ತ್ಯಾಗವಾದಾಗ್ಯೂ ಅವರಿಗೆ ಅಲ್ಪವೆನಿಸುವುದು. ಆತನುಸಿರಿದ ಮಾತುಗಳನ್ನು ಕೇಳುವುದಕ್ಕೂ

ಆತನ ಉಕ್ತಿಯಂತೆ ವರ್ತಿಸುವುದಕ್ಕೂ ಎಷ್ಟು ತವಕಪಡುವರೆಂಬುದನ್ನು ಜನರಾಶಿಯ ಆಚರಣೆಯೇ ಕಾಣಿಸಿಕೊಡುತ್ತದೆ. ತಮ್ಮ ಶಿರಸ್ಸುಗಳ ಮೇಲೆ ಆತನನ್ನೆತ್ತಿಕೊಂಡು ವೈಮರೆತ ಸಂತೋಷದಿಂದ ಕುಣಿದಾಡಲು ಆತುರರಾಗಿರುತ್ತಾರೆ. ವಿಪುಲ ಭಾರತದ ಜನಬಾಹುಲ್ಯಕ್ಕೆ ಜವಾಹರಲಾಲರು ದಿವ್ಯಮೂರ್ತಿ.

ಭಾರತೀಯ ಜನ ಸಾಮಾನ್ಯ ಸಮೂಹವೆಷ್ಟು ಪ್ರೀತ್ಯಾದರಗಳನ್ನು ಜವಾಹರಲಾಲರಲ್ಲಿ ಕಾಣಿಸುವರೆಂಬುದನ್ನು ತಿಳಿಯಲು ಕಣ್ಣಿನಿಂದ ಪ್ರತ್ಯಕ್ಷವಾಗಿ ಕಂಡು ಮನಸ್ಸಿನಲ್ಲಿ ಭಾವಿಸಿಕೊಳ್ಳಬೇಕೇ ವಿನಾ ಮಾತುಗಳಿಂದ ವ್ಯಕ್ತಪಡಿಸಲು ಸಾಧ್ಯವಿಲ್ಲ. ಜವಾಹರಲಾಲರ ಮೇಲೆ ದೇಶೀಯರು ವೃಷ್ಟಿಗರೆವ ಪ್ರೀತಿಯ ಆವೇಗವನ್ನು ಅನೇಕ ವೇಳೆಗಳಲ್ಲಿ ನಾನು ಕಣ್ಣಾರೆ ಕಂಡಿದ್ದೇನೆ. ಆಹ! 1929ನೆ ಡಿಸೆಂಬರ್ 31ನೆಯ ರಾತ್ರಿ ಎಷ್ಟು ಪುಳಕದಾಯಕವಾಗಿತ್ತು! ಶಿಬಿರ ಸಮಸ್ತವೂ ಎಚ್ಚೆತ್ತಿದ್ದಿತು. ಜಯಕಾರಗಳನ್ನು ಘೋಷಿಸುತ್ತ ಅಲ್ಲಲ್ಲಿ ತಿರುಗಾಡುತ್ತಿದ್ದ ಲಕ್ಷಾಂತರ ಜನರ ಸಂತೋಷಪೂರಿತ ಮುಖಗಳ ಪ್ರಕಾಶದಿಂದ ಆ ವಿಶಾಲ ಶಿಬಿರವೇ ದೇದೀಪ್ಯಮಾನವಾಗಿತ್ತು. ತಮ್ಮ ಹೆಗಲಮೇಲೆ ಜವಾಹರಲಾಲರನ್ನೇರಿಸಿಕೊಂಡು ಸ್ವಾತಂತ್ರ್ಯ ಗೀತೆಗಳನ್ನು ಹಾಡುತ್ತ ಕುಣಿಯುತ್ತಲಿದ್ದವರು 1930ನೆ ಜನವರಿ ಮೊದಲನೆ ದಿನ ಮುಂಜಾನೆ 5 ಗಂಟೆವರೆಗೂ ಆತನನ್ನು ಕೆಳಕ್ಕಿಳಿಸದಾದರು. ಯಾವ ದೇಶಭಕ್ತನಿಗೆ ತಾನೇ ಈ ದೃಶ್ಯವನ್ನು ಮರೆಯಲು ಸಾಧ್ಯವಾದೀತು? ಕಾಲಗತಿಯಲ್ಲಿ ಆ ಪ್ರೀತ್ಯುತ್ಸಾಹಗಳು ಉತ್ಕರ್ಷ ಪಡೆಯುತ್ತಿರುವುವಲ್ಲದೆ ಬೇರಿಲ್ಲ. 1936ರಲ್ಲಿ ಚುನಾವಣೆಗಳ ಸನ್ನಾಹಕ್ಕೆಂದು ತುಫಾನಿನಂತೆಯೆ ಸಂಚಾರ ನಡೆಸಿದಾಗ ಜನಾನುರಾಗವಾತನಲ್ಲಿ ಬರಬರುತ್ತ ಏರುತ್ತಿದ್ದ ಸಂಗತಿ ಸ್ಪಷ್ಟವಾಯಿತು. ಅಂತಹ ಸಂದರ್ಭಗಳು ಮತ್ತೆಷ್ಟೋ! ಗಂಟೆಗಳ ಗಟ್ಟಲೆ ಮಾತ್ರವಲ್ಲದೆ ಬೆಳಗ್ಗಿನಿಂದ ಸಂಜೆವರೆಗೆ ರಾಶಿ ರಾಶಿಯಾಗಿ ಸ್ತ್ರೀ ಬಾಲ ಸಮೂಹ ಸಹಿತರಾಗಿ ನೆರೆದ ವೃದ್ಧರೂ ವಯಸ್ಕರೂ ಪೂರ್ವ ವಯಸ್ಕರೂ ಹಸಿವು ನೀರಡಿಕೆಗಳೆನ್ನದೆ ಉರಿಯುವ ಬಿಸಿಲನ್ನೂ ಹೊಡೆಯುವ ಮಳೆಯನ್ನೂ ಕೊರೆಯುವ ಚಳಿ

ಯನ್ನೂ ಅಲಕ್ಷ್ಯಗೈದು ಹಗಲುಪೂರ್ತಿಯಾಗಿ ಕಾದಿದ್ದರು ಜವಾಹರ ಲಾಲರನ್ನು ಕ್ಷಣಕಾಲ ಕಾಣುವುದಕ್ಕೆ ಅಥವಾ ಆತನ ಮುಖದಿಂದ ಎರಡು ಮಾತನ್ನು ಕೇಳುವುದಕ್ಕೆ! ಆ ಸಂಚಾರ ಕ್ರಮದಲ್ಲಿ ನಾನೂ ಸ್ವಲ್ಪಕಾಲ ಸೇರಿದ್ದೆನಾದುದರಿಂದ ಜನರು ತಮ್ಮ ಆನಂದವನ್ನು ತೋರುತ್ತಲಿದ್ದ ಪರಿಯನ್ನೂ ಜವಾಹರಲಾಲರನ್ನು ಕುರಿತು ಆಡಿ ಕೊಳ್ಳುತ್ತಿದ್ದ ಮಾತುಕತೆಗಳನ್ನೂ ಅನುಭವಿಸಿದೆ. ಸ್ವಾತಂತ್ರ್ಯ ಸಾಧನೆಗೆಂದು ತಾವು ಪಡುತ್ತಿರುವ ಶ್ರಮಕ್ಕೆ ಪ್ರತಿಯಾಗಿ ಲಭಿಸತಕ್ಕ ಫಲದ ಸವಿಯನ್ನೊದಗಿಸಿಡುವ ಒಲವಿನ ನಾಯಕನನ್ನು ಭಾರತೀಯ ಜನಸಾಮಾನ್ಯರು ಜವಾಹರಲಾಲರಲ್ಲಿ ಕಾಣುವರು.

ಜನಸಮುದಾಯದ ಅನುರಾಗವನ್ನು ಗೆದ್ದಿರುವುದೇನೆಂದು ತಿಳಿ ಯಲು ಜವಾಹರಲಾಲರ ಮನಸ್ಸೆಂತಹುದೆಂದು ಕಾಣಬೇಕು; ಆತನ ಹೃದಯವೆಂತಹುದೆಂದು ಅರಿಯಬೇಕು. ಆತನಾಡುವ ಮಾತುಗಳಂತ ಹವು; ಮಾಡುವ ಕೆಲಸವಂತಹುದು; ಅನ್ಯರಲ್ಲಿ ವರ್ತಿಸುವ ರೀತಿಯಂತ ಹುದು. ಆತನ ಚರ್ಯೆಯೋ ಹತ್ತುಸಾವಿರ. ಎಲ್ಲರ ಮನಸ್ಸುಗಳಲ್ಲಿಯೂ ಆತನ ಕಾರ್ಯಕಲಾಪಗಳು ಪ್ರತಿಬಿಂಬಿಸುತ್ತಲಿರತಕ್ಕವು; ಎಲ್ಲರ ಅಂತ ರಂಗಗಳಲ್ಲಿಯೂ ಚಿರಕಾಲ ನೆಲೆಮಾಡಿಕೊಂಡಿರತಕ್ಕವು. ಅಂತಹ ನಾಯಕನ ಕಥೆಯನ್ನು ಗೌರವಪಾತ್ರರಾದ ನನ್ನ ಗೆಳೆಯರು ಕೃಷ್ಣ ಯ್ಯಂಗಾರ್ಯರು ಬರೆದಿದ್ದಾರೆ. ಜವಾಹರಲಾಲರ ಆಪ್ತಪರಿಚಯ ಲಭಿಸಿದ್ದ ಪಕ್ಷದಲ್ಲಿ ಆತನಿಗೆ ಇತರರು ಬರೆದ ಪುಸ್ತಕಗಳು ಬೇಕಾಗು ತ್ತಿರಲಿಲ್ಲ. ಆದರೆ ಹಾಗೆ ನಡೆಯದಾಯಿತು. ಆದಾಗ್ಗೂ ವಿಶೇಷವಾದ ಶ್ರಮವನ್ನು ವಹಿಸಿ ಈ ಪುಸ್ತಕದಲ್ಲಿ ಸ್ವಾರಸ್ಯ ತುಂಬಿದ್ದಾರೆ. ಆ ಕಾರಣ ದಿಂದ ಪುಸ್ತಕ ನನಗೆ ಇಷ್ಟವಾಗಿದೆ.

ಪಂಡಿತ್‌ಜೀಯವರನ್ನು ನಾನು ಮೊದಲು ಕಂಡದ್ದು 1922ರಲ್ಲಿ. ಆಗ ಅಷ್ಟು ದೊಡ್ಡವರೆನಿಸಿರಲಿಲ್ಲ. ಯುವಕ ಜವಾಹರಲಾಲರ ಸುತ್ತ ಮೋತಿಲಾಲರ ಪ್ರಭೆ ಪರಿವೇಷದಂತಿತ್ತು. ದಿನಗಳೂ ವರ್ಷಗಳೂ ಕಳೆಯುತ್ತ ಬಂದಂತೆ ಈ ತರುಣ ನಾಯಕರು ಕೇವಲ ಕರ್ತವ್ಯಶ್ರದ್ಧೆ ಯಿಂದಲೂ ಸಾಧನೆಗಾಗಿ ಮಾಡಿದ ತ್ಯಾಗದಿಂದಲೂ ಮುಂದುಮುಂಗಕ್ಕೆ

ಬಂದು ಅಗ್ರಶ್ರೇಣಿಯಲ್ಲಿ ಸೇರಿ ಹಿಂದೆ ತನಗಿಂತ ದೊಡ್ಡವರೆನಿಸಿದ್ದವರಿಗಿಂತ ದೊಡ್ಡವರೆನಿಸಿ ಪ್ರಭಾಶಾಲಿಗಳಾದರು. ಇಂದು ಮಹಾತ್ಮಾಜಿಯವರೊಬ್ಬರನ್ನು ವಿನಾ ಈತನಿಗಿಂತ ದೊಡ್ಡವರಿಲ್ಲವೆನ್ನುವಂತಾಯಿತು.

ರೂಪರೇಖಾ ವಿಲಾಸಗಳನ್ನು ಕಾಣುವುದಾದರೆ ಮಹಾತ್ಮಾಜಿಯೊಬ್ಬರನ್ನು ವಿನಾ ಜವಾಹರಲಾಲರಂತೆ ಮತ್ತಾವ ನಾಯಕರೂ ಇಲ್ಲ. ಜವಾಹರಲಾಲರ ಕರ್ತವ್ಯ ವಿಧಾನಗಳು ಆತನವೇ ಎನ್ನುವಂತಿದೆ; ಅಂತಃಕರಣಶುದ್ಧಿಯಿಂದ ಕೂಡಿ ಆ ವಿಧಾನಗಳನ್ನು ಅನುಸರಿಸುತ್ತಿರುತ್ತಾರೆ. ಆತನ ಜತೆಗೂಡಿ ಕರ್ತವ್ಯನಿರತನಾಗಿದ್ದ ವರ್ಷಗಳಲ್ಲಿ ನನ್ನ ಮೇಲೆಯೂ ಆತನ ಪ್ರಭಾವವು ಬೀರಿತು; ಆತನ ಸಾಧನೆಯ ಮಾರ್ಗಗಳನ್ನು ಕಂಡು ನನ್ನ ರೀತಿಯನ್ನು ನಾನು ಬದಲಾಯಿಸಿಕೊಂಡೆನು. ಆ ಕಾಲದಲ್ಲಿ ನನ್ನಮೇಲಾತನು ಬೀರಿದ ಪ್ರಭಾವವಿಂದಿಗೂ ಅಚ್ಚಳಿಯದೆಯೆ ಇದೆ.

ಜವಾಹರಲಾಲರ ಚಿತ್ತ ವೇಗದಿಂದಲೂ ಚಾಪಲ್ಯದಿಂದಲೂ ಕೂಡಿದುದು; ಸುಲಭ ಕೋಪವೆನ್ನಬಹುದು. ಆದರೆ ಎಷ್ಟುವೇಗವಾಗಿ ಉದಯಿಸುವುದೋ ಅಷ್ಟೇ ವೇಗವಾಗಿ ಆ ಕೋಪ ಅಸ್ತಮಿಸುವುದು. ಅತ್ಯಲ್ಪಕಾಲಾವಧಿಯಲ್ಲಿಯೆ ಕೋಪವನ್ನು ಮರೆತು ನಡೆದ ಅಕ್ರಮವನ್ನು ಗಣನೆಗೆ ತಾರದೆ ನಿಶ್ಚಲಮನಸ್ಸನ್ನು ಕಾಣಿಸುತ್ತಲಿರುವರು. ನಡೆದ ಅಚಾತುರ್ಯದ ಕಾರಣಪರಿಣಾಮಗಳನ್ನು ಮರೆತು ಎರಡು ಮೂರು ನಿಮಿಷಗಳಲ್ಲಿಯೇ ತಮ್ಮ ಚಿತ್ತವನ್ನು ಸ್ವಾಧೀನಕ್ಕೆ ತಂದಿಟ್ಟುಕೊಂಡಿರುವರು. ಆತನ ಸಂಪರ್ಕ ಪಡೆದವರೆಲ್ಲರೂ ಈ ಲಕ್ಷಣವನ್ನು ಕಂಡು ಗುರುತಿಸಿ ಆಶ್ಚರ್ಯಚಕಿತರಾಗಿದ್ದಾರೆ.

ಆದರ್ಶಮಗ್ನಮನಸ್ಕರಾದುದರಿಂದ ಆತನ ಮನಸ್ಸಿನಲ್ಲಿ ಸದಾ ಆ ಆದರ್ಶಗಳ ಸಾಧನೆಯ ಚಿಂತೆಯೇ ತುಂಬಿರುತ್ತದೆ. ಯಾವ ವಿಷಯವನ್ನಾದರೂ ಗ್ರಹಿಸುವುದರಲ್ಲಿ ಬಲು ಚುರುಕು; ಮುಂದಿಟ್ಟು ಕೊಂಡು ನೆರವೇರಿಸುವುದರಲ್ಲಿಯೂ ಅದೇ ಚುರುಕು. 1923 ನೆ ಡಿಸೆಂಬರಿನಲ್ಲಿ ಅಖಿಲಭಾರತ ಸೇವಕ ಸಮ್ಮೇಳನ ಕಾಕಿನಾಡದಲ್ಲಿ ನಡೆಯಬೇಕಾಗಿ ಬಂದು ಅಧ್ಯಕ್ಷತೆ ವಹಿಸಿಕೊಳ್ಳುವಂತೆ ಯಾರಾದರೂ

ನಾಯಕರನ್ನು ನಾನು ಕೇಳಿಕೊಳ್ಳುವ ಸಂದರ್ಭದಲ್ಲಿ ಹಲವರು ಮಿತ್ರರು ಜವಾಹರಲಾಲರನ್ನು ಕೇಳಬೇಕೆಂದು ಸೂಚನೆ ಕೊಟ್ಟರು. ಆ ಪ್ರಕಾರ ನಾನು ಪ್ರಯಾಗಕ್ಕೆ ಹೊರಟು ಜವಾಹರಲಾಲರ ಬಳಿ ಎರಡು ದಿನಗಳನ್ನು ಕಳೆದೆ. ಅಖಿಲಭಾರತಕ್ಕನ್ವಯಿಸುವಂತೆ ಸೇವಕ ಮಂಡಲಿಯನ್ನು ಕಟ್ಟುವ ಯೋಚನೆ ಆತನಿಗೊಪ್ಪಿತು. ತಮ್ಮ ಕಾಲವನ್ನಾಗಲಿ ನನ್ನ ಕಾಲವನ್ನಾಗಲಿ ವ್ಯರ್ಥಗೊಳಿಸದೆ "ಠೀಕ್ ಹೈ! ಒಳ್ಳೆ ಯೋಚನೆ. ನೀವು ಮುಂದುವರಿಸಿ. ಅಧ್ಯಕ್ಷತೆ ವಹಿಸಿ ನನ್ನ ಪಾಲಿನ ಕರ್ತವ್ಯವನ್ನು ನಡೆಸಿಕೊಡಲು ನಾನು ಸಿದ್ಧನಾಗಿದ್ದೇನೆ" ಎಂದರು. ಆ ಯೋಚನೆಯನ್ನು ಮನಸ್ಸಿನಲ್ಲಿ ಪೋಷಿಸಿಕೊಂಡು ಅದಕ್ಕಾಗಿ ಶ್ರಮಿಸಿದರು. ಇಟ್ಟುಕೊಂಡ ಪ್ರತಿ ಕಾರ್ಯದಲ್ಲಿಯೂ ಇದೇ ತೆರನಾದ ಮನಸ್ಸು ಆತನಿಗೆ. ಆ ಕಾರಣದಿಂದಲೇ ಭಾರತೀಯ ಜನಸ್ತೋಮಕ್ಕೆ ಆತನು ಜವಾಹರ್ (ಆಭರಣ) ಆಗಿ ಇರುವುದು.

ದಿನಕ್ಕೆ 18 ಗಂಟೆ ಕಾಲ ಅವಿಚ್ಛಿನ್ನವಾಗಿಯೂ ಅವಿಶ್ರಾಂತವಾಗಿಯೂ ನಡೆಯುವುದು ಜವಾಹರಲಾಲರ ದುಡಿತ. ವಿಶ್ರಾಂತಿ ದೊರಕಿದರೂ ದೊರಕದಿದ್ದರೂ ಕೆಲಸಮಾತ್ರ ನಿಲ್ಲದೆ ಮುಂದೆ ಸಾಗುತ್ತಿರಬೇಕು. 1920ನೆ ವರ್ಷದಿಂದ ಮೊನ್ನೆವರೆಗೂ ಆತನು ಆ ರೀತಿಯಲ್ಲಿ ಶ್ರಮಿಸುತ್ತಿದ್ದಾಗ್ಗೂ ಆಯಾಸ ತೋರಿತೆಂದು ಒಂದುಬಾರಿಯಾದರೂ ಹೇಳಿಕೊಂಡುದಿಲ್ಲ. ಕಾಲು ಶತಮಾನ ಕಳೆಯಬೇಕಾಯಿತು ಆತನು "ನನಗೆ ಆಯಾಸವಾಗಿದೆ, ಪ್ರೆಸ್ ಸಮ್ಮೇಳನಕ್ಕೆ ಬರಲಾರೆ"ನೆಂದು ಹೇಳುವುದಕ್ಕೆ. ಯಾವ ಕೆಲಸವಾದರೂ ಆತನ ದೃಷ್ಟಿಯಲ್ಲಿ ಸಣ್ಣದೆನಿಸುವುದಿಲ್ಲ. ಅಖಿಲಭಾರತ ಕಾಂಗ್ರೆಸ್ ಕಮಿಟಿಯ ಜನರಲ್ ಸೆಕ್ರೆಟರಿಯಾಗಿ ಟಪಾಲ್ ಕೆಲಸ ಮಾಡುತ್ತಿದ್ದಾಗ ತಾವೇ ಗುಡಿಸಿಕೊಂಡು ಧೂಳು ಹೊಡೆದು ಸೈಕ್ಲೋಸ್ಟೈಲೆತ್ತಿ ಪ್ರತಿಗಳನ್ನು ರವಾನೆಗೆ ಸಿದ್ಧಮಾಡುತ್ತಿದ್ದುದನ್ನು ನಾನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ಹಿಂದಿನ ಕಾಲದಲ್ಲಿ ಒಳ್ಳೆಯ ಕೆಲಸಗಾರರಾಗಿದ್ದ ಕಾರಣದಿಂದಲೇ ಇಂದಿನ ಕಾಲದಲ್ಲಿ ಒಳ್ಳೆಯ ನಾಯಕರಾಗಿದ್ದಾರೆ. ತನ್ನ ಸ್ವಂತ ಕೈಗಳಿಂದ ಕೆಲಸಮಾಡಲು ಬಾರದ ನಾಯಕನು ನಾಯಕನಾಗಿರಲಾರನೆಂಬ ಪಾಠವನ್ನು ಜವಾಹರ

ಲಾಲರು ತಾವು ತೋರುವ ಆದರ್ಶದಿಂದಲೇ ಕಲಿಸುತ್ತಿದ್ದಾರೆ. ನಾನಾ ಶಾಖೆಗಳನ್ನು ಪಡೆದು ಸರ್ವಾಂಗಶೋಭಿತವಾಗಿಯೂ ಸರ್ವಸಮರ್ಪಕ ವಾಗಿಯೂ ಪ್ರಯಾಗದಲ್ಲಿ ಕಾಂಗ್ರೆಸ್ ಕಚೇರಿಗಳು ವ್ಯೂಹಗೊಂಡು ಕರ್ತವ್ಯನಿರ್ವಾಹಗೆಯ್ಯುತ್ತಿರುವ ಸಾಧನೆಯ ಯಶಸ್ಸೆಲ್ಲವೂ ಜವಾಹರ ಲಾಲರಿಗೆ ಸಲ್ಲತಕ್ಕದ್ದು. ಅದನ್ನು ಮನಸ್ಸಿನಲ್ಲಿ ಯೋಚಿಸಿ ತಾವೇ ಸ್ವಯಂ ಶ್ರಮಿಸಿ ನಿರ್ಮಿಸಿದರು. ಶೂನ್ಯದಿಂದಾರಂಭಿಸಿ ಶೋಭಾಯ ಮಾನವಾದ ನಿರ್ಮಾಣವನ್ನು ರಚಿಸಿದರು. ಅಖಿಲಭಾರತ ಕಾಂಗ್ರೆಸ್ಸಿ ಗಾಗಿ ನಡೆಸಿದ ಆ ರಚನೆ ಶಾಶ್ವತವಾಗಿ ನಿಲ್ಲತಕ್ಕುದು.

ದೂರದೃಷ್ಟಿಯಿರುವ ಕಾರಣದಿಂದ ಭವಿಷ್ಯತ್ತಿನ ಚಿತ್ರವನ್ನು ಮನ ದಲ್ಲಿ ಕಂಡು ಜವಾಹರಲಾಲರು ತಮ್ಮ ಕರ್ತವ್ಯಕ್ರಮವನ್ನು ಗೊತ್ತು ಪಡಿಸಿಕೊಳ್ಳುತ್ತಾರೆ. ಐರೋಪ್ಯ ದೇಶಗಳಲ್ಲಿ ವಿಸ್ತಾರವಾದ ಸಂಚಾರ ನಡೆಸಿ 1927ರಲ್ಲಿ ಮದರಾಸಿನಲ್ಲಿ ಕಾಂಗ್ರೆಸ್ ಸಭೆ ನಡೆದ ವೇಳೆಗೆ ಹಿಂತಿರುಗಿ ಬಂದು ಪಾಶ್ಚಾತ್ಯ ಜಗತ್ತಿನಲ್ಲಿ ಸ್ವಲ್ಪಕಾಲದಲ್ಲಿಯೇ ಭೀಕರ ಸಂಗ್ರಾಮ ಮೊದಲಾದೀತೆಂದು ಎಚ್ಚರಿಕೆ ಕೊಟ್ಟರು. ಆವೇಳೆಗಾಗಲೆ ಅವರ ದೃಷ್ಟಿಗೆ ಗೋಚರವಾಗಿತ್ತು. ಜವಾಹರಲಾಲರು ಪೋಷಿಸಿರುವ ಇಂಗ್ಲಿಷ್ ಜಾತಿಯವರ ಸಂಪರ್ಕದಿಂದಲೂ ರಾಷ್ಟ್ರಾಂತರ ವ್ಯವಹಾರದ ಚರಿತ್ರೆಯನ್ನು ಕೂಲಂಕಷವಾಗಿ ವ್ಯಾಸಂಗ ಮಾಡಿರುವುದರಿಂದಲೂ ಭಾರತದ ರಾಷ್ಟ್ರನಾಯಕರುಗಳ ಮನೋಗತಿಯೇ ವ್ಯತ್ಯಸ್ತಗೊಂಡಿದೆ. ಪೃಥ್ವಿಯ ನಾನಾ ರಾಷ್ಟ್ರಗಳ ನಕ್ಷೆಯಲ್ಲಿ ಭಾರತರಾಷ್ಟ್ರಕ್ಕೆ ಯೋಗ್ಯ ವಾದ ಸ್ಥಾನ ಸೂಚನೆಯಾಗಲು ಆತನೇ ಕಾರಣ. ಜಗತ್ತಿಗೆ ಹೆಸರಾದ ತತ್ವಜ್ಞರೂ ರಾಷ್ಟ್ರನೀತಿಜ್ಞರೂ ಭಾರತರಾಷ್ಟ್ರದ ಸ್ಥಿತಿಗತಿಗಳನ್ನು ಕುರಿತು ಯೋಚಿಸುವಂತೆ ಪರಿಣಮಿಸಲು ಆತನೇ ಕಾರಣ. ರಷ್ಯ, ಜರ್ಮನಿ, ಫ್ರಾನ್ಸ್, ಸ್ಪೆಯ್ನ್, ಚೀನ, ಬರ್ಮ, ಸ್ಟ್ರೈಟ್ಸ್ ಸೆಟ್ಲ್‌ಮೆಂಟ್ಸ್ ಮುಂತಾದ ದೇಶಗಳಲ್ಲಿ ಜವಾಹರಲಾಲರು ಸಂಚರಿಸಿ ಅಲ್ಲಿಯ ಪ್ರಮುಖರೊಂದಿಗೆ ಪ್ರಸ್ತಾಪಿಸದೆ ಇದ್ದರೆ ಈ ಪರಿಣಾಮ ನೆರವೇರುತ್ತಿರಲಿಲ್ಲ.

ಜಗತ್ತಿನ ಲಕ್ಷ್ಯವನ್ನು ಮಹಾತ್ಮಾ ಗಾಂಧೀಜಿ ಸೆಳೆದು ತಾವು ಅನುಸರಿಸಿದ ಧರ್ಮದಲ್ಲಿಯೂ ಭಾರತರಾಷ್ಟ್ರದಲ್ಲಿ ತಾವು ಅವಲಂಬಿಸಿದ

ಹೊಸ ಯುದ್ಧನೀತಿಯಲ್ಲಿಯೂ ಇತರ ದೇಶಸ್ಥರು ದೃಷ್ಟಿಯಿಡುವಂತೆ ನೆರವೇರಿಸಿದುದು ನಿಜ. ಭಾರತದ ಕಡೆಗೆ ಜಗತ್ತಿನ ದೃಷ್ಟಿಯನ್ನು ಮೊದಲು ಸೆಳೆದವರು ಮಹಾತ್ಮಾಜಿಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಐರೋಪ್ಯ ಪೌರಸ್ತ್ಯ ಪ್ರಮುಖರ ಪರಿಚಯ ಮೈತ್ರಿಗಳನ್ನು ತಾವೇ ಕಟ್ಟಿ ಅವರೆಲ್ಲರೂ ಭಾರತದ ರಾಜಕೀಯ ಸ್ಥಿತಿಯನ್ನು ಆಲೋಚಿಸುತ್ತ ಹೆಚ್ಚುಹೆಚ್ಚಾಗಿ ತಿಳಿಯಲು ಪ್ರಯತ್ನಿಸುವಂತೆ ಎಸಗಿದವರು ಜವಾಹರಲಾಲರು. ಅಷ್ಟುಮಾತ್ರವೇ ಅಲ್ಲ. ಅನ್ಯದೇಶಗಳಲ್ಲಿ ದಳಿತರೂ ಆರ್ತರೂ ಆದವರಿಗೆ ಭಾರತದಿಂದ ಸಹಾಯವನ್ನೊದಗಿಸಿ ಆ ಮೂಲಕ ತಮ್ಮಂತೆಯೆ ಕಷ್ಟಕ್ಕೆ ಗುರಿಯಾದ ಇತರರಿಗೆ ತಮ್ಮ ಸಹಾಯವೊದಗ ತಕ್ಕುದೆಂಬ ಪರಿಜ್ಞಾನ ಆ ಜನರಲ್ಲಿ ಮೂಡುವಂತೆ ನೆರವೇರಿಸಿದರು. ಜವಾಹರಲಾಲರು ನಡೆಸಿರುವ ಈ ಕೆಲಸ ಸಣ್ಣದಲ್ಲ. ಇದೇ ಆತನ ಜೀವನದ ಹೊರೆ. ಆ ಕಾರಣದಿಂದಲೇ ಜಗತ್ತಿನ ನಾನಾ ರಾಷ್ಟ್ರಗಳ ಪರಸ್ಪರ ವ್ಯವಹಾರ ಮಧ್ಯೆ ಭಾರತರಾಷ್ಟ್ರದ ಕರ್ತವ್ಯವನ್ನೂ ಗತಿಯನ್ನೂ ಸೂಚಿಸಿಕೊಡುವ ಮಾರ್ಗದರ್ಶಕ ತಾರೆಯೆಂದು ಜವಾಹರಲಾಲರನ್ನೊಪ್ಪಿಕೊಂಡಿರುವುದು.

ತಮ್ಮ ಕಿರೀಟವು ಜವಾಹರಲಾಲರಿಗೆ ಸಲ್ಲತಕ್ಕುದೆಂದು ಗಾಂಧೀಜಿಯವರು ನುಡಿದರು. ಭಾರತದ ನಾಲ್ವತ್ತುಕೋಟಿ ಜನಸಮುದಾಯವನ್ನು ಲಕ್ಷ್ಯದೆಡೆಗೆ ನಡೆಸುತ್ತ ಆ ಕಿರೀಟವನ್ನು ಧರಿಸತಕ್ಕಾತನ ಜೀವನ ಚರಿತ್ರೆಯ ಪ್ರತ್ಯಂಶವನ್ನು ಈ ದೇಶದ ಭವಿಷ್ಯವನ್ನಪ್ಪಿಕೊಳ್ಳತಕ್ಕ ಪ್ರತಿಯೊಬ್ಬರೂ ಅವಶ್ಯವಾಗಿ ತಿಳಿಯಬೇಕು.

ಹುಬ್ಬಳ್ಳಿ
12-12-1945

ನಾ. ಸು. ಹರ್ಡಿಕರ್.

## FOREWORD

A number of Kannada writers have already placed before the public the life story of Pandit Jawaharlal Nehru. This one is another which will adorn our shelves. Mr. K. Krishnaiengar has done well in presenting this volume to our readers who cannot afford to remain in ignorance about a man who has made himself indispensable in India's Fight for Freedom. Being a man of great literary ability and studious habits, the writer has spared no pains in making his book presentable. To me it is a feast.

Pandit Jawaharlal's life work is an open book. The intelligentsia of the world knows Jawaharlal as a man of action. They know that he is leading the Indian masses to revolution. Therefore, with an admixture of love and fear, they look at him and watch his activities.

The masses of India love him. They are enthusiastic about him. They are ready to do anything for him. No sacrifice is too big for them if it is at the bidding of Jawaharlal—their beloved young leader. Their actions show how very ready they are to swallow the words he utters and act as per his advice. They are ready to take him high on their heads and dance joyfully. Jawaharlal is the idol of the teeming population of India.

The love that is exhibited by the Indian masses towards Jawaharlal Nehru can only be seen and felt; it cannot be expressed in words. On more than one occasion I have been a witness to the outbursts of love that was showered on the Pandit by his countrymen. Oh! how thrilling was

the night of 31st December 1929!! The whole camp was up. It was glittering with the faces of lakhs of people who were moving about hither and thither shouting "Jais'" and frisking with joy. Upto 5 a.m. on the morning of the first of January 1930, Jawaharlal was not allowed to get down from the shoulders of those who were singing freedom's songs and dancing. A scene it was which is impossible for any lover of the country to forget. During 1936 his hurricane electioneering campaign was another of many such occasions when one could see and feel the growing popularity of the man. Literally for hours, in some cases for a whole day, crowds and crowds of people—men, women and children—waited without food and water in the burning sun, pouring rain and biting cold to have a glimpse of Jawaharlal or to hear a few words from his lips. Being a participant in some of those campaigns I saw how the people expressed their joy and heard what they said about him. In Jawaharlal, the Indian masses see a loving leader who gives them the foretaste of freedom.

It is the quality of head and heart that has made Jawaharlal popular. It is the word he utters, the work he does, and the treatment he gives that attract him to the people. It is the action of the man that speaks volumes about him. His actions have been such that he is on the minds of all and will remain in their hearts for ages to come. Such is the hero of the story written by my esteemed friend Krishnaiengar. If he had come in closer contact with Panditji he would not have had to depend upon books written by any one for this work of his. But it was not to be. Still he has striven hard to make his book interesting and comprehensive, and therefore I like it.

I met Panditji in 1922 for the first time. He was a small man then. The halo round his father overshadowed young Jawaharlal. But gradually as days and years rolled by, he, the young Pandit, by sheer devotion to work and by the sacrifices he made towards the cause, came more and more to the fore and outshone those who had outshadowed him. Today he is the tallest of all except the Mahatma.

He has a personality of his own which no other leader in India (Mahatma Gandhi excepted) possesses. His methods of work are his own and he follows them conscientiously. All throughout those years that I worked with him his personality influenced me. His methods of work made me change my own. The power that he wielded over me then is not a whit less even today.

Panditji is a quick tempered man. But the quickness disappears as quick as it starts and he is seen to be quite calm and unconcerned with what has happened. The cause and its effect are forgotten and within a few minutes he is master of his own. Every one who has come in contact with him has seen this wonderful trait in him and has expressed surprise at it.

Being an idealist, his mind works towards the achievement of the ideals which he cherishes. He is quick in gripping a subject and pushing it through. When I was in search of a leader to preside over the first All India Volunteers' Conference to be held at Coconada in December 1923, a few of my friends suggested his name. So, I went to Allahabad. I was with him for two days. He liked the idea of an All India Volunteers' Organisation and without wasting his or my time, he said "Splendid !

Good Idea! Go ahead with it. I am willing to preside and play my part." He cherished the idea and strove to work it out. He has been maintaining this kind of spirit in every undertaking of his. That is why he has become the 'Jawahar' of the Indian People.

He works incessantly and continuously for over 18 hours of the day. Rest or no rest, the work must go on. At no time since 1920 has he been heard complaining of tiresomeness. It took him a quarter of a century to say "I am tired and I will not attend the Press Conference." No work is too small for him. When he was working as the General Secretary of the All India Congress Committee I have seen him do cleaning, dusting, cyclostyling, despatching and attending to the mail work. He is a good leader today because he was a good worker yesterday. By his example he has proved that no leader can lead if he does not know how to work with his own hands. The credit of creating an uptodate Congress Secretariat at Allahabad with so many departments goes only to Pandit Jawaharlal. He thought of it and personally laboured for it. From nothing he carved a beautiful edifice. It is indeed a monumental work that Panditji accomplished for the Indian National Congress.

Being a man of vision he pictures the future and plans his activities. After his extensive tour in Europe he attended the Madras session of the Congress in 1927 and for the first time he gave an alarum of the impending war in the West. He foresaw it. His contact with the English people and his keen study of international politics have helped immensely in changing the trend of thought of the Indian Leaders. He has been mainly responsible for

painting India on the map of International Politics. It was he who made many thinkers and politicians of the world think about Indian political affairs. This would not have been possible if he had not visited Russia, Germany, France, Spain, China, Burma, Straits Settlements and other countries and come in contact with the front rank politicians there.

It is certainly true that Mahatma Gandhi made the people of the world think about his own philosophy and the new tactics of warfare that he was using in India. As such he was the first that attracted the attention of the world towards India. But it was Jawaharlal who, by his personal contact with those who were in power in European and Eastern Countries, compelled them to think and study more and more about the Indian Political situation. Not only that but also by the offer of India's help to suffering humanity in their countries he made them realise the necessity of extending their co-operation similarly to suffering people outside. This work of Jawaharlal is not small. It is his life work. That is why he is looked upon as the guiding star of India with regard to International affairs and India's foreign relations.

Gandhiji's crown according to him is to go to Jawaharlal. The life of the wearer of this crown who is to guide the destinies of the four hundred millions of India ought to be studied in detail by every one who is going to share the fate of this country in future.

Hubli
12-12-1945.

N. S. HARDIKAR.

# ಬಿನ್ನಹ

ಈ ಪುಸ್ತಕವನ್ನೋದುವಾಗ ನಿಮಗೆ ಕಾಣುವ ಸ್ವಾರಸ್ಯವೆಲ್ಲಕ್ಕೂ ಜವಾಹರ ಲಾಲರು ಕಾರಣರು. ಸ್ವಾರಸ್ಯ ಕೆಟ್ಟಿದ್ದರೆ ಅಥವಾ ಕಾಣದಿದ್ದರೆ ಅದಕ್ಕೆ ಹೊಣೆ ನನ್ನದು. ಏಕೆಂದರೆ ಜವಾಹರಲಾಲರೆಂಬ ವ್ಯಕ್ತಿ ಸಾಮಾನ್ಯವಾದುದಲ್ಲ.

ಮದರಾಸಿನಲ್ಲಿ ಯಾವುದೋ ಒಂದು ಸಭೆಗೆ ಹೊರಡುತ್ತ ನಿರ್ದಿಷ್ಟ ವೇಳೆಗೆ ಸರಿಯಾಗಿ ಮೋಟಾರಿನಲ್ಲಿ ಕುಳಿತ ಜವಾಹರಲಾಲರ ಬಳಿಗೆ ಇಬ್ಬರು ಮೂವರು ಯುವಕರು ನುಗ್ಗಿ ಹಸ್ತಾಕ್ಷರವನ್ನಪೇಕ್ಷಿಸಿದರು. "ನಿಯಮಬದ್ಧನಾಗಿ ನಡೆಯ ತಕ್ಕವನು ನಾನೆಂದು ನಿಮಗೆ ತಿಳಿದಿರಬೇಕಲ್ಲವೆ? ಈಗ ಹೊರಡುವ ವೇಳೆಯಾ ಯಿತು, ನನ್ನನ್ನು ಬಿಟ್ಟುಬಿಡಿ" ಎಂದರು ಜವಾಹರಲಾಲರು. ಯುವಕರಲ್ಲೊಬ್ಬನು "ಬಹಳ ಆಸೆಯಿಂದಿದ್ದೇವೆ ನಾವು. ಭಿಕ್ಷುಕರಂತೆಯೆ ನಿಮ್ಮಲ್ಲಿ ಬೇಡುತ್ತಿದ್ದೇವೆ" ಎಂದರೆ "ಹಾಗೆ ಬೇಡ ಬೇಡಿ! ಭಿಕ್ಷುಕರನ್ನು ಕಂಡರೆ ನನಗಾಗದು!" ಎಂಬ ಉತ್ತರ ಬಂತು. ಯುವಕನು ಜಾಣ. "ಪಂಡಿತ್ ಜೀ! ಭಾರತವೆಲ್ಲವೂ ಭಿಕ್ಷುಕ ರಿಂದ ತುಂಬಿದ್ದಲ್ಲವೇ?" ಎಂದನು. "ರೇಗಿಸುವ ಮಾತನ್ನಾಡುತ್ತಿದ್ದೀರಿ! ನನ್ನ ಭಾರತದಲ್ಲಿ ಭಿಕ್ಷುಕರಿಲ್ಲ, ಬ್ರಿಟಿಷರಾಳುವ ಭಾರತದಲ್ಲಿರಬಹುದು!" ಎನ್ನುತ್ತ ಮೋಟಾರನ್ನು ಬಿಟ್ಟುಕೊಂಡು ಹೊರಟುಬಿಟ್ಟರು. ಈ ಸಣ್ಣ ದೃಷ್ಟಾಂತವೊಂದ ರಿಂದಲೇ ಎಂತಹ ವ್ಯಕ್ತಿಯೆಂಬ ಕಲ್ಪನೆ ಬೆಳಸಲವಕಾಶವಾದೀತಲ್ಲವೆ?

ಇಂತಹ ಜವಾಹರಲಾಲರ ಆತ್ಮಕಥೆ ಇಂಗ್ಲಿಷಿನಲ್ಲಿ ರೂಪಗೊಂಡು ಒಂಭತ್ತು ವರ್ಷಗಳಾದವು. ಕನ್ನಡದಲ್ಲಿ ಅದರ ಭಾಷಾಂತರವನ್ನು ಕೆಲವರು ಉತ್ಸಾಹದಿಂದ ನೆರವೇರಿಸಿದ್ದಾಗ್ಯೂ ಅದನ್ನೋದಿಕೊಂಡವರು ವಿರಳ. ಮೂಲದಂತೆಯೆ ಕನ್ನಡದಲ್ಲಿ ಪಾಠಮಾಡಿಕೊಳ್ಳುವುದು ಸುಲಭವೂ ಅಲ್ಲ. ಹೀಗಾಗಿ ಕನ್ನಡ ಮಾತನ್ನಾಡುವವರಿಗೆ ಜವಾಹರಲಾಲರ ಜೀವನ ಪರಿಚಯವಿರಬೇಕಾದಷ್ಟಿರುವುದಿಲ್ಲ. ಅಷ್ಟು ಮಾತ್ರವನ್ನು ಕನ್ನಡ ಮಹಿಳೆಯರಿಗೆ ಈ ಪುಸ್ತಕ ಒದಗಿಸಿಕೊಡುವುದಾದರೆ ನಾನು ಧನ್ಯ.

ಆಟೊಬಯೋಗ್ರಫಿ ಅಥವಾ ಆತ್ಮವೃತ್ತಾಂತವೆಂಬ ಗ್ರಂಥದಲ್ಲಿ ರಾಜಕೀಯ ಸಾಮಾಜಿಕ ವಿಚಾರಗಳೆಷ್ಟೋ ತುಂಬಿವೆ. ಅವುಗಳನ್ನು ವರ್ಜಿಸಿ ಜೀವನಚರಿತ್ರೆ ಯನ್ನು ಮಾತ್ರವೇ ಇಲ್ಲಿ ಬರೆದಿದೆ. ಆ ಪುಸ್ತಕವನ್ನೇ ಹೆಚ್ಚಾಗಿ ಆಶ್ರಯಿಸಿರುವು ದಾದರೂ ಅನೇಕಾಂಶಗಳನ್ನು ಇತರೆಡೆಗಳಿಂದ ಸಂಗ್ರಹಿಸಿದೆ. ಜವಾಹರಲಾಲರು ಬರೆದಿರುವ ಇತರ ಪುಸ್ತಕಗಳು, ಶ್ರೀಮತಿ ಕೃಷ್ಣಾಹತೀಸಿಂಗರು ಬರೆದಿರುವ

"**With No Regrets**", ಯಂಗ್ ಇಂಡಿಯ ಮತ್ತು ಹರಿಜನ್ ಸಂಪುಟಗಳು; ಮಹಾದೇವಭಾಯಿ, ಅಲ್‌ಕಾಫಿರ್, ಪ್ರೊ|| ಅಬ್ದುಲ್ ಮಜೀದ್‌ಖಾನ್, ಡಾ|| ಪಟ್ಟಾಭಿ ಸೀತಾರಾಮಯ್ಯ, ಕೃಷ್ಣಲಾಲ ಶ್ರೀಧರಾಣಿ, ದೀನಬಂಧು ಆಂಡ್ರೂಸ್, ಜೋಕಿಂ ಆಲ್ವ, ಟಾಂಪ್ಸನ್ ಮುಂತಾದವರ ಲೇಖನಗಳು; ಮಾಡರ್ನ್ ರೆವ್ಯೂ ಸಂಪುಟಗಳು; ಶ್ರೀ ರಾಮನಾಥ ಸುಮನ್ ಎಂಬಾತ ಬರೆದಿರುವ 'ಹಮಾರೇ ರಾಷ್ಟ್ರ ನಿರ್ಮಾತಾ'—ಇಷ್ಟನ್ನೂ ಅಲ್ಲದೆ ಮಿತ್ರಪರ್ಯರಾದ ಮುದುವೀಡು ಕೃಷ್ಣರಾಯರು, ಕೆ. ಎಸ್. ಕೃಷ್ಣಯ್ಯರ್, ಸಿದ್ದವನ ಹಳ್ಳಿ ಕೃಷ್ಣಶರ್ಮ, ಎ. ಎಸ್. ಏಕಾಮ್ರಯ್ಯರ್ ಅವರು ಪ್ರತ್ಯಕ್ಷವಾಗಿ ಕಂಡು ವಿವರಿಸಿದ ವೃತ್ತಾಂತಗಳನ್ನೂ ಸಮಾಚಾರ ಪತ್ರಿಕೆಗಳಲ್ಲಿ ಕಂಡಿದ್ದ ಸುದ್ದಿ ವಿವರಗಳನ್ನೂ ಸಂದರ್ಭೋಚಿತವಾಗಿ ಉಪಯೋಗಿಸಲಾಗಿದೆ. ಎಲ್ಲರಲ್ಲಿಯೂ ನಾನು ಋಣಿಯಾಗಿದ್ದೇನೆ. ಪ್ರಮಾಣವಿಲ್ಲದ ಅಂಶವನ್ನು ಪುಸ್ತಕದಲ್ಲಿ ಸೇರಿಸಿಲ್ಲವೆಂದು ಧೈರ್ಯವಾಗಿ ಹೇಳಬಹುದು.

ಜವಾಹರಲಾಲರ ಸ್ವಂತ ಮುಖದಿಂದ ಹೊರಟಂತೆ ಪ್ರತ್ಯಕ್ಷವಾಗಿ ಕೇಳಬೇಕಾದ ಮಾತುಗಳ ಅನುವಾದವನ್ನು ಸಣ್ಣಕ್ಷರಗಳಲ್ಲಿ ಕೊಟ್ಟಿದೆ. ಸ್ವಾರಸ್ಯತುಂಬಿದ ಭಾಗ ಗಳನ್ನು ಬಿಡಲಾಗದೆಂದು ಆದಷ್ಟು ಸುಲಭವಾಗಿಯೂ ಸಂಕ್ಷೇಪವಾಗಿಯೂ ಪರಿವರ್ತಿ ಸಿಡುವ ನನ್ನ ಪ್ರಯತ್ನ ಓದುಗರಿಗೊಪ್ಪಿಗೆಯಾದಾಗ ಮಾತ್ರ ಸಾರ್ಥಕ.

ನಾನಾ ಕರ್ತವ್ಯಗಳನ್ನಿಟ್ಟುಕೊಂಡು ಅವಿಶ್ರಾಂತರಾಗಿ ದುಡಿಯುವುದರಲ್ಲಿಯೆ ತಮ್ಮ ಜೀವನವನ್ನು ಕಳೆಯುತ್ತಿರುವ ಡಾ|| ಹರ್ಡಿಕರರಲ್ಲಿ ನಾನೆಷ್ಟು ಕೃತಜ್ಞನಾಗಿ ದ್ದರೂ ಸಾಲದು. ಸಾಹಸದಿಂದ ನಾನಿಟ್ಟುಕೊಂಡ ಕೆಲಸಕ್ಕೆ ಜವಾಹರಲಾಲರ ಅನುಮತಿಯನ್ನು ಒದಗಿಸಿಕೊಟ್ಟುದಲ್ಲದೆ ನನ್ನನ್ನು ಪ್ರೋತ್ಸಾಹಿಸಿ ತಮ್ಮ ಕಾರ್ಯ ಕಲಾಪಗಳ ನಡುವೆ ಕಾಲವನ್ನು ಕದ್ದು ನನ್ನ ಕಡತವನ್ನೋದಿ ಮುನ್ನುಡಿಯನ್ನೂ ಬರೆದುಕೊಟ್ಟಿದ್ದಾರೆ. ಅವರ ಮುನ್ನುಡಿಯೇ ಒಂದು ತೂಕ. ಏಕಂದರೆ ಕನ್ನಡ ನಾಡಿನಲ್ಲಿ ಜವಾಹರಲಾಲರ ಜತೆಗಾರರೆನಿಸತಕ್ಕವರು ಮತ್ತಾರು?

ಬಿ. ಬಿ. ಡಿ. ಪ್ರೆಸ್ಸಿನವರಂತೂ ನಾನಿಟ್ಟ ತೊಂದರೆಯನ್ನು ತೃಣೀಕರಿಸಿ ತಮ್ಮ ಸಂಕಲ್ಪ ಬಲದಿಂದಲೇ ಈ ಕೆಲಸವನ್ನು ಸಾಧಿಸಿದ್ದಾರೆ. ಅವರ ಸಹಕಾರವಿಲ್ಲದಿದ್ದ ಪಕ್ಷದಲ್ಲಿ ಈ ಪ್ರಯತ್ನವೇ ನಡೆಯುತ್ತಿರಲಿಲ್ಲ.

ಬೆಂಗಳೂರು. **ಕಂದಾಡೆ ಕೃಷ್ಣಯ್ಯಂಗಾರ್.**

# ಅನುಕ್ರಮಣಿಕಾ

---

# ಸೆರೆಯಲ್ಲಿ

| | | | |
|---|---|---|---|
| 1921 | — | ಲಖನೌ ಜೈಲ್ | ... 3 ತಿಂಗಳು |
| 1922 | — | ,, | ... 21 ತಿಂಗಳು |
| 1924 | — | ನಾಭ | ... ಮೂರು ವಾರಗಳು |
| 1930 | — | ನೈನಿ ಜೈಲ್ | ... 6 ತಿಂಗಳು |
| ,, | — | ,, | ... 29 ತಿಂಗಳು ಗೊತ್ತಾಗಿ 3½ ತಿಂಗಳು ಕಳೆದುದು |
| 1931<br>1932<br>1933 | | ನೈನಿ, ಬರೈಲಿ,<br>ಡೇರಾಡೂನ್ | ... 30 ತಿಂಗಳು ಗೊತ್ತಾಗಿ 20 ತಿಂಗಳು ಕಳೆದುದು |
| 1934<br>1935 | | ಆಲಿಪುರ<br>ಡೇರಾಡೂನ್<br>ನೈನಿ, ಆಲ್ಮೋಡ | ... 24 ತಿಂಗಳು |
| 1940<br>1941 | | ಡೇರಾಡೂನ್ | ... 48 ತಿಂಗಳು ಗೊತ್ತಾಗಿ 13 ತಿಂಗಳು ಕಳೆದುದು |
| 1942 | — | ಅಹಮದ್ ನಗರ | ... 35 ತಿಂಗಳುಗಳು. |

# ಸ್ಮರಣೀಯ

---

1889 ನವೆಂಬರ್ 14 ; ವಿಕ್ರಮ ಸಂವತ್ಸರ 1946, ಮಾರ್ಗಶಿರ ಬಹುಳ
ಸಪ್ತಮಿ—ಜನನ

1931 ಫೆಬ್ರುವರಿ 6 ; ಮೋತಿಲಾಲರ ಮರಣ

1936 ಫೆಬ್ರುವರಿ 28 ; ಕಮಲಾದೇವಿ ಮರಣ

1938 ಜನವರಿ 10 ; ಸ್ವರೂಪರಾಣಿದೇವಿಯ ಮರಣ.

---

# 1

## ಭವ್ಯತೇಜೋರಾಶಿ

1945ರಲ್ಲಿ ವೈಸರಾಯ್ ಲಾರ್ಡ್ ವವೆಲ್ ಸಿಮ್ಲದಲ್ಲಿ ನಡೆಸಿದ ಸಮ್ಮೇಳನಕ್ಕಾಗಿ ಕಾಂಗ್ರೆಸ್ ಪರವಾಗಿ ಅಧ್ಯಕ್ಷ ಆಝಾದರೊಬ್ಬರೇ ಹೊರಡತಕ್ಕದೆಂದು ಗೊತ್ತಾಯಿತು. "ಇದೆಂತು! ನೆಹರು ಹೋಗುವುದಿಲ್ಲವೇ?" ಎಂದು ದೇಶಸ್ಥರು ಮಾತ್ರರಲ್ಲದೆ ಇಂಗ್ಲಂಡ್ ಅಮೆರಿಕಗಳಲ್ಲಿಯ ಪ್ರಮುಖರೂ ಆಡಿಕೊಂಡರು. ಮುಂಬಯಿಯಲ್ಲಿ ಯಾರೋ ಒಬ್ಬರು ನೆಹರು ಬಳಿಗೈದಿ ಕೇಳಿಯೂ ಕೇಳಿದರು "ನೀವು ಸಿಮ್ಲಕ್ಕೆ ಹೊರಡುವುದಿಲ್ಲವೇ?" ಎಂದು. ಪ್ರತ್ಯುತ್ತರವಾಗಿ "ಏತಕ್ಕೆ ಹೋಗಬೇಕು? ನಮ್ಮ ಅಧ್ಯಕ್ಷರು ಹೊರಡುವಾಗ! ಅವರ ಆಜ್ಞೆಯಾದಾಗ ಹೊರಡುವ ಯೋಚನೆ." ಅಂತೂ ಆಜ್ಞಾಧೀನನಾದ ಸಿಪಾಹಿ; ರಾಷ್ಟ್ರ ನಾಯಕರಲ್ಲಿ ಪ್ರಥಮ ಶ್ರೇಣಿಗೆ ಸೇರಿ ಅಲ್ಲಿಯೂ ಅಗ್ರಗಣ್ಯನಾಗಿದ್ದು ಹೀಗೆ; ಸರದಾರನಾದರೂ ಸಿಪಾಹಿಯಂತೆ ಆಜ್ಞಾಧಾರಕನಾಗಿಯೇ ಉಳಿಯುವ ವಿಧೇಯ.

ಸೆರೆಯಿಂದ ಬಿಡುಗಡೆಯಾದ ತಕ್ಷಣ ಮುಂಬಯಿಗೆ ಬಂದ ಪರಿಯೋ! ಸ್ಟೇಷನ್ ಸ್ಟೇಷನ್ನಿಗೂ ಜನರು ಕಿಕ್ಕಿರಿದು ಈತನ ಮುಖದರ್ಶನಕ್ಕಾಗಿ ತಪಿಸಿ ಜಯಘೋಷಗಳನ್ನು ಗೈದುದೋ! ಹಾರಗಳನ್ನೂ ಹಣವನ್ನೂ ಸೋಕಿಸಿದುದೋ! ಮುಂಬಯಿ ತಲಪಿ ರೈಲ್ ಸ್ಟೇಷನ್ನಿನಲ್ಲಿಳಿದಾತನು ತನ್ನ ತಂಗಿ ಕೃಷ್ಣೆ ಮನೆಗೆ ಹೊರಡುವ ವೈಭವವನ್ನು ವರ್ಣಿಸಲು ಸಾಧ್ಯವಲ್ಲ. ಮುಂಬಯಿ ಮುಂಬಯಿಗೇ ಹುಚ್ಚುಹಿಡಿದಂತಾಯಿತು; ಸಂತೋಷದಿಂದ ಜನರತ್ತರು. ತಂಗಿ ಮನೆ ಸೇರಿ ಒಂದೆಡೆ ಕುಳಿತಕೂಡಲೆ ಹೂವಿನ ಹಾರಗಳನ್ನು ಕುತ್ತಿಗೆಯಿಂದ ತೆಗಿದಿಟ್ಟರೆ ಅದೇ ಅರ್ಧಗಾಡಿ ತುಂಬುವಷ್ಟಾದುದೇನು ಆಶ್ಚರ್ಯವಲ್ಲ. ಕಿಸೆಗಳೊಳಗೆ ಕಯ್ಯಿಟ್ಟು ಒಂದೊಂದು ಕಿಸೆಯನ್ನೂ ಬರಿದಾಗಿ ಮಾಡುತ್ತ ಒಳಗಿದ್ದುದನ್ನು ಎಳೆದೆಳೆದು ಹೊರಗಿಡುತ್ತಾರೆ ಆ ತರುವಾಯ—ಸಣ್ಣದಾದ ಒಂದು ಕುಪ್ಪೆಯಾಯಿತು, ನೋಟುಗಳ ಕುಪ್ಪೆ, ನೂರು

ರೂಪಾಯಿ ನೋಟುಗಳ ಕುಪ್ಪೆ! ಮುಂಬಯಿಗೆ ಬರುತ್ತ ಸ್ಟೇಷನ್ ಸ್ಟೇಷನ್ನಿನಲ್ಲಿಯೂ ಈತನ ಗಾಡಿ ಬಳಿಗೆ ಕಂಡವರೂ ಕಾಣದವರೂ ಬಂದು ಕಯ್ಯಲ್ಲಿ ತುರುಕಿದ್ದ ನೂರು ರೂಪಾಯಿ ನೋಟುಗಳು ಅವು! ಸಮಸ್ತ ಭಾರತ ವರ್ಷಕ್ಕೆ ಮುದ್ದಿನ ರಾಜಕುವರನೋ ಬೇರೆಯೋ? ಭಾವೀ ಭಾರತ ವರ್ಷದ ಸೌಭಾಗ್ಯ ಗೌರವಗಳ ಉದಯವನ್ನು ತಾನು ಹೋದೆಡೆಯಲ್ಲೆಲ್ಲ ಬೀರಿ ಅಂತರಿಕ್ಷದಲ್ಲೆಲ್ಲೆಲ್ಲಿಯೂ ಪ್ರತಿಧ್ವನಿತವಾಗುವಂತೆ ಜಯಘೋಷವನ್ನು ಆಬಾಲವೃದ್ಧರಿಂದೆಬ್ಬಿಸುವ ಧೀರಲಲಿತ ಮೂರ್ತಿ ಜವಾಹರಲಾಲ್! ಆತನ ಸಂದರ್ಶನವಾದಾಗ ಹೆಮ್ಮೆಪಡೆದ ಭಾರತೀಯನಿಲ್ಲ, ಸಂತೋಷಗೊಳ್ಳದ ಮಾನವನಿಲ್ಲ.

ಜವಾಹರಲಾಲರನ್ನು ಕಾಣುವ ಆಸೆಯಿಂದಲೇ ಸಾಮಾನ್ಯ ಜನರಲ್ಲಿ ಮೂಡುವ ಶಕ್ತಿಯನ್ನಾದರೂ ನೋಡೋಣವೇ! ಜನಸಂದಡಿಯಲ್ಲಿ ಕುಳ್ಳರಾದವರು ಎತ್ತರವಾಗಿ ಬೆಳೆಯುವುದೇನು, ಕೈಲಾಗದವರು ಒಂದು ಕಾಲಮೇಲೆ ನಿಂತಿರುವುದೇನು, ಮನೆಮನೆಯಲ್ಲಿಯೂ ಆಜ್ಞಾಧೀನರಾಗಿ ಅಡಗಿರುವ ಅಬಲೆಯರು ತಮ್ಮ ಯಜಮಾನರೊಂದಿಗೆ ಕಾದುವ ಕಲಹದ ಕಾತೋರ್ಯವೇನು! ದಾರಿಯುದ್ದಕ್ಕೂ ನೂರು ರೂಪಾಯಿ ನೋಟುಗಳನ್ನು ಈತನ ಕಯ್ಯಲ್ಲಿಟ್ಟವರ ಮನೋಭಾವವಾದರೂ ಎಂತು? ಬಾಪುಜಿಗೆ ಸಲ್ಲಿಸುವಾಗ ಭಕ್ತಿಯ ಕಾಣಿಕೆ, ಪುಣ್ಯ ಕೆಲಸದಲ್ಲಿ ಸೇರಿಕೊಂಬಾಸೆ; ಜವಾಹರಲಾಲರಿಗೆ ಕೊಡುವಾಗ ಭಕ್ತಿಯಲ್ಲ ಪ್ರಧಾನ, ಹೆಮ್ಮೆ ಪ್ರಧಾನ. "ಈ ಧೀರಪುರುಷ ನಮ್ಮವನು" ಎಂಬ ಹೆಮ್ಮೆಯೇ ಹೆಚ್ಚು ಜನರ ಮನಗಳಲ್ಲಿ. ಪುಣ್ಯಲಾಭ ಪಾಪನಷ್ಟಗಳೆಂಬ ಯೋಚನೆ ಕೆಲಬರಿಗೆ ಮಾತ್ರ ಇದ್ದೀತು. ಬಹು ಜನಕ್ಕೆ ಜವಾಹರ್ ನಮ್ಮ ಅರಸುಗುವರನೆಂಬ ಹೆಮ್ಮೆಯೇ ಇರುವುದು. ನಾಳೆ ನಮ್ಮ ದೇಶಕ್ಕೆ ಇಂಡಿಯ ಎಂಬ ವಕ್ರನಾಮವು ಮಾಯವಾಗಿ ಹಿಂದುಸ್ತಾನ್ ಎಂದೋ ಭಾರತ್ ಎಂದೋ ಪೃಥ್ವಿಗೆಲ್ಲ ಪ್ರಕಟಿತವಾಗಿ ಸ್ವರಾಜ್ಯಸಿದ್ಧಿಯಾದಲ್ಲಿ ಯಾರನ್ನು ರಾಷ್ಟ್ರಪುರುಷನನ್ನಾಗಿ ಆರಿಸಬೇಕು? ಆ ಗೌಗವವನ್ನೂ ಠೀವಿಯನ್ನೂ ಯಾರು ಸಹಜರೀತಿಯಿಂದ ಧರಿಸಬಲ್ಲವರು? ಮಹಾತ್ಮಾಜಿಯೆ? ಅಪಚಾರವೆನ್ನಿಸುವುದು. ಬಾಬು

ರಾಜೇಂದ್ರ ಪ್ರಸಾದ್, ರಾಜಾಜಿ, ಸರದಾರ್ ವಲ್ಲಭ್ಭಾಯ್—ಇವರೆಲ್ಲರಲ್ಲಿಯೂ ಯಾವುದೋ ವೈರಾಗ್ಯ ಕಾಣುವುದು. ರಾಜಮರ್ಯಾದೆಯನ್ನು ಅವರು ಪೋಷಿಸಬಲ್ಲವರಾದಾಗ್ಯೂ ಅವರಿಗೊಪ್ಪತಕ್ಕದಲ್ಲ. ಮೌಲಾನಾ ಆಜ಼ಾದ್ ಅಥವಾ ಜವಾಹರಲಾಲ—ಇಬ್ಬರಲ್ಲೊಬ್ಬರಾದರೆ ಒಪ್ಪೀತು. ಆಜ಼ಾದರ ಗಾಂಭೀರ್ಯ ಮೊಗಲಾಯ್ ಗಾಂಭೀರ್ಯವಾದುದರಿಂದ ಒಪ್ಪುವುದು; ಆದರೆ ಆಜ಼ಾದರಲ್ಲಿ ಚಾಪಲ್ಯಚಾಟುಲ್ಯಗಳಿಲ್ಲ. ಎರಡನ್ನೂ ಮನೋಹರವಾಗಿ ಕಾಣಬೇಕಾದರೆ ಜವಾಹರಲಾಲರಲ್ಲಿ. ಸಿಮ್ಲಾದಲ್ಲಿ ವೈಸರಾಯಿ ಬಿಡಾರಕ್ಕೆ ಹೊರಡಲು ಇತರರು ರಿಕ್ಷಾ ಏರಿಕೊಂಡರು; ಜವಾಹರಲಾಲರು ಕುದುರೆ ಏರಿಕೊಂಡು ಹೊರಟರು. ಸಿಂಗದ ಮರಿಯನ್ನೆತ್ತಿಕೊಂಡು ಅದರ ಬಾಯಿಬಿಡಿಸಿ ಹಲ್ಲುಗಳನ್ನೆಣಿಸಿಕೊಳ್ಳುವ ಸರ್ವದಮನ ದೌಷ್ಯಂತಿ ಭರತನ ನೆನಪಾಗದಿದ್ದೀತೆ?

ಜವಾಹರಲಾಲರೊಂದಿಗೆ ಹೋಲಿಸುತ್ತ ಹೊರಟರೆ ಇತರ ನಾಯಕರೆಲ್ಲರೂ ವೃದ್ಧರಂತೆ ಕಾಣುವರು. ವಯಸ್ಸಿನಲ್ಲಿ ಜವಾಹರರಿಗಿಂತ ಸಣ್ಣವರಾದಾಗ್ಯೂ ನಮ್ಮ ದೃಷ್ಟಿಗೆ ವೃದ್ಧರಂತೆಯೆ. ಚಿರಯೌವನವೆಂಬುದು ಜವಾಹರರನ್ನು ಅಗಲಲಾರದಂತೆ ತೋರುವುದಿಲ್ಲವೆ? ಆತನ ಮಾತುಕತೆಗಳೆಲ್ಲ ದೃಢಯೌವನದ ಗರ್ಜನೆ. ಆತನೇನು ಹೇಳಿದರೂ ಅದರಲ್ಲಿ ಚುರುಕುಂಟು, ಬಲ್ಮೆಯುಂಟು. ದೃಢವಾದ ಆರೋಗ್ಯವನ್ನು ತನ್ನ ಚೈತನ್ಯದಲ್ಲಿ ತುಂಬಿಕೊಂಡಾತನ ಚಟುಲತನವನ್ನು ಕಾಣಲು ಎಷ್ಟು ದೃಷ್ಟಾಂತಗಳನ್ನಾದರೂ ಪೋಣಿಸಬಹುದು. ಸೆರೆಮನೆಯಲ್ಲಿರುವಾಗ್ಗೆ ಯಾರಿಗೆ ತಾನೇ ಪೂರ್ಣವಾದ ಆರೋಗ್ಯವೂ ಅದರೊಂದಿಗೆ ಮನಸ್ಸಮಾಧಾನವೂ ಇದ್ದೀತು? ಜೈಲಿನಲ್ಲಿದ್ದು ತೂಕವನ್ನು ಹೆಚ್ಚಿಸಿಕೊಂಡವರಿದ್ದಾಗ್ಯೂ ಅವರಿಗೆ ಮನಸ್ಸಮಾಧಾನವಿಲ್ಲ; ಯತಿಗಳಂತೆ ಸೆರೆಮನೆಗಳಲ್ಲಿ ಕಾಲ ಕಳೆದವರಿಗೆ ಮನಸ್ಸಮಾಧಾನವಿದ್ದರೂ ದೇಹಾರೋಗ್ಯ ಮಾತ್ರ ದುರ್ಬಲ, ಸೂಕ್ಷ್ಮ. ಜವಾಹರಲಾಲರಿಗಾದರೆ? ಮೊನ್ನೆ ಅಹಮದ್‌ನಗರದಲ್ಲಿರುವಾಗ್ಗೆ ಆತನನ್ನು ಯಾರಾದರೂ ಸಮೀಪಿಸಿ ಆರೋಗ್ಯಸಂಬಂಧವಾಗಿ ಕುಶಲ ಪ್ರಶ್ನೆಗೈದರೆ ಆತನಿಗೆ ಕ್ಷಣಿಕ

ಕೋಪ! ಆತನ ಮನಸ್ಸಿಗೆ ಅಂತಹ ಪ್ರಶ್ನೆಯಿಂದ ಹಿಂಸೆ! "ನನಗೇನು ಆರೋಗ್ಯವಾಗಿರುವುದು ಹೇಗೆಂದು ಗೊತ್ತಿಲ್ಲವೆ! ನಾನೇನು ಮಗುವೆ ಇವರು ಬಂದು ಹೀಗೆ ವಿಚಾರಿಸುವುದಕ್ಕೆ?" ಎಂಬ ಚಟುಲರೀತಿಯು ಅಸಹನ! ದೇಹಾಲಸ್ಯವೆಂದರರ್ಥವೇನು ಎಂದು ಕೇಳುವ ಚೈತನ್ಯ.

ಭಕ್ತಿಯಿಂದ ಕೂಡಿ ಮತ್ತೊಬ್ಬರ ಕಾಲುಮುಟ್ಟಿ ನಮಸ್ಕಾರ ಮಾಡುವುದು ಜವಾಹರಲಾಲರಿಗೆ ಸರಿಬೀಳದು. ಆತನನ್ನು ಕಂಡ ವೇಳೆಯಲ್ಲಿ ಮುಂದೆ ನುಗ್ಗಿ ಆತನ ಪಾದಗಳನ್ನು ಹಿಡಿದು ಮಣಿಯುವ ಆತುರ ಎಷ್ಟೋ ಜನರಿಗೆ! ಅದನ್ನು ಹೇಗೋ ಸೈರಿಸಿಕೊಳ್ಳುವರು; ಅನೇಕ ಸಲ ಅನುಚಿತವೆಂದು ಛೀಗುಟ್ಟುವರು. ಮೊನ್ನೆ ಲಾಹೋರಿನ ಸಭೆಯಲ್ಲಿ ಆ ಅಂಶವನ್ನು ಬಿಚ್ಚಿ ಹೇಳುತ್ತ "ಒಬ್ಬ ಮನುಷ್ಯನು ಮತ್ತೊಬ್ಬ ಮನುಷ್ಯನಿಗೇಕೆ ಸಾಷ್ಟಾಂಗವಿಡಬೇಕು? ಇದು ಮಾನಿಗಳಿಗೆ ಯೋಗ್ಯವಲ್ಲ" ಎಂದವರಲ್ಲವೇ?

ಸ್ವಂತ ವಿಷಯವನ್ನು ಮನಸ್ಸಿನಲ್ಲಿ ನೆನಸಿದಾಗ ಆತನು ಉಬ್ಬುವುದೇ ಇಲ್ಲ. ಈಯೊಂದು ಲಕ್ಷಣವೇ ಆತನಲ್ಲಿ ಅತಿಸೋಜಿಗ. ಯಾರೋ ಗೆಳೆಯರೊಬ್ಬರು ಗಾಂಧೀಜಿಯವರನ್ನು "ನಿಮ್ಮ ಪಟ್ಟ ನಿಮ್ಮ ತರುವಾಯ ಯಾರಿಗೆ?" ಎಂಬ ಕುಚೋದ್ಯ ಪ್ರಶ್ನೆಯನ್ನು ಕೇಳಿದಾಗ ಅದಕ್ಕುತ್ತರವಾಗಿ ಬಾಪುಜಿ "ಜವಾಹರಲಾಲ" ಎಂದಿದ್ದರಷ್ಟೆ! ಅದನ್ನು ಜವಾಹರಲಾಲರಿಗೆ ತಿಳಿಸಿದಾಗ ಏನು ಹೇಳಬಹುದಾಗಿತ್ತು? "ಸಮಸ್ತ ಭಾರತಕ್ಕೆ ಕಿರೀಟ ಮಾತ್ರ ರಹಿತ ಭೂಪತಿಯಿನ್ನು ನಾನೇ" ಎಂದು ಮನಸ್ಸಿನಲ್ಲಿ ಭಾವನೆ ಬೆಳೆಸಿ ಮೈಯುಬ್ಬಿ ಮುಖವರಳಿ ಸಂತೋಷವನ್ನೋ ಹೆಮ್ಮೆಯನ್ನೋ ಸೂಚಿಸಬಹುದಾಗಿದ್ದಿತೇ! ಹೊರಟ ಪ್ರತ್ಯುತ್ತರ ಹಾಗಲ್ಲ. "ಹಾಗಂದರೇನರ್ಥ?" ಎಂಬ ಪ್ರಶ್ನೆಯೇ ಪ್ರತ್ಯುತ್ತರ. ಸ್ವಂತ ವಿಚಾರದಲ್ಲಿ ಹೆಮ್ಮೆ-ಅಹಂಕಾರಗಳೆಂಬುದು ಲವಲೇಶವಾದರೂ ಇಲ್ಲ ಆ ಚಿತ್ತದಲ್ಲಿ.

1929ರಲ್ಲಿ ಜವಾಹರಲಾಲರು ಕಾಂಗ್ರೆಸ್ಸಿನ ಅಧ್ಯಕ್ಷರು—ಪೂರ್ಣ ಸ್ವರಾಜ್ಯ ಧ್ಯೇಯಕ್ಕೆ ಕಾರಣಕರ್ತರು. ಪುನಃ ಪುನಃ ಭಾರತಕ್ಕೆ ಸರ್ವ ರಾಷ್ಟ್ರಾಧ್ಯಕ್ಷ ಅಥವಾ ರಾಷ್ಟ್ರಪತಿಯಾದರು; ಅತಿ ಸಹಜವಾದ ರೀತಿ

ಯಲ್ಲಿ ಆ ಗೌರವವನ್ನು ಹೊತ್ತರು. ಅದುವರೆಗೂ ಜವಾಹರರನ್ನು ಮೋತಿಲಾಲರ ಮಗನೆಂಬ ಕಾರಣದಿಂದ ಗೌರವಿಸುತ್ತಲಿದ್ದವರು ಅಂದಿನಿಂದ ಜವಾಹರರಲ್ಲಿ ಪ್ರತ್ಯೇಕವೂ ಸ್ವತಂತ್ರವೂ ಆದ ಸಾಮರ್ಥ್ಯ ಮಹತ್ವಗಳಿವೆಯೆಂದೊಪ್ಪಿದರು. 1936ರಲ್ಲಿ ಆತನ ಸ್ವಕೀಯ ವೃತ್ತಾಂತ ಪ್ರಕಟವಾಯಿತು; ಸೆರೆಮನೆಯಲ್ಲಿ ಸುಮ್ಮನಿರಲಾರದೆ ಇಟ್ಟುಕೊಂಡು ಪೂರಯಿಸಿದ ಬರಹ. ಆ ಗ್ರಂಥವನ್ನು ಕಂಡವರು ವಿಸ್ಮಯದಲ್ಲಿ ಮಗ್ನರಾದರು; ವಿರೋಧಿಗಳಾಗಿದ್ದವರೂ ಅಸೂಯಾವಿಷ್ಟರಾಗಿದ್ದ ಸಮವಯಸ್ಕರೂ ಅಧಿಕವಯಸ್ಕರೂ ಶತವೃದ್ಧರೂ ಆ ಪುಸ್ತಕವನ್ನೋದಿ ಮರುಳಾಗಿ ಆ ಚೈತನ್ಯವನ್ನು ಅಂತಃಕರಣಶುದ್ಧಿಯಿಂದ ಮೆಚ್ಚಿಮಣಿದರು. 'ಘೋಷಾ' ಕಟ್ಟಿಕೊಂಡಂತೆ ತಮ್ಮ ಹಳೆಪಾಠಾವಳಿಯನ್ನು ಮುಂದಿಟ್ಟುಕೊಂಡು ತಮ್ಮ ಯೋಗ್ಯತೆಯನ್ನು ತಾವೇ ಮೆಚ್ಚಿಕೊಳ್ಳುತ್ತಿದ್ದ ಕಾಲೇಜ್ ಪ್ರೊಫೆಸರುಗಳು ಅದನ್ನು ಕಂಡು ಅಪ್ರತಿಭರಾದರು. ವೈರಿಸ್ಥಾನದ ಐರೋಪ್ಯರು ಅದನ್ನೋದಿ "ಈತನ ಬರೆವಣಿಗೆಯನ್ನೋದುತ್ತ ಓದುತ್ತ ಅವಮಾನವುದಿಸಿ ಉಕ್ಕಿ ಮುಖನೇತ್ರಗಳಲ್ಲಿ ನೆತ್ತರು ಮುಕ್ಕುಳಿಸಿ ಕಣ್ಣೀರು ಸುರಿವುದು—ಅವಮಾನದ ಕಣ್ಣೀರು ಜಳಜಳನೆ ಸುರಿವಾಗ ನಡೆಸಿದ ಅನ್ಯಾಯಗಳನ್ನು ಬಚ್ಚಿಡಲು ಎಲ್ಲಿ ತಾನೇ ನಮ್ಮ ತಲೆಯನ್ನು ಮರೆಸಿಟ್ಟೇವು" ಎಂದುಕೊಂಡರು. ಎಲ್ಲರೂ ಈತನಿಗೆ ಪೂರ್ಣಾಯುಸ್ಸನ್ನು ಭಗವಂತ ಕೊಡಲೆಂದು ಮೌನವಾಗಿಯೇ ಹರಸಿ "ದೊಡ್ಡತನದಿಂದ ಮೆರೆದ ತಂದೆ ಮೋತಿಲಾಲರಿಗಿಂತ ಪ್ರೀತಿಪಾತ್ರನೀತನು; ಆ ತಂದೆಯ ಮಗನೆಂದು ಮಾತ್ರವಲ್ಲ, ತಾನಾಗಿಯೆ ಅಪೂರ್ವ ತೇಜಸ್ಸನ್ನು ತುಂಬಿಕೊಂಡಿರುವಾತನು" ಎಂದು ತ್ರಿಕರಣಪೂರ್ವಕವಾಗಿ ಒಪ್ಪಿಕೊಂಡರು.

ಹಿಂದಿನ ವೈಭವವನ್ನು ಹೇಳಿಕೊಂಡು ಮರುಳಾಗುವುದು ಜವಾಹರರ ದೃಷ್ಟಿಯಲ್ಲಿ ವ್ಯರ್ಥಚೇಷ್ಟೆ. ಜಗತ್ತಿನ ಇತಿಹಾಸವನ್ನು ಬರೆದಾಗ್ಗೂ ಹಿಂದಿನ ವಿವರದಲ್ಲಿ ನೋಟ ನಾಟುವುದೇ ಇಲ್ಲ; ದೃಷ್ಟಿಯೆಲ್ಲ ಮುಂದೆ ಆಗುವುದರಲ್ಲಿ, ನಡೆಯಬೇಕಾದುದನ್ನು ಸಾಧಿಸುವುದರಲ್ಲಿ. ಆದುದರಿಂದ ನವಭಾರತದ ಚೈತನ್ಯವೇ ಜವಾಹರಲಾಲರ ಮೂರ್ತಿ

ಯನ್ನು ತಾಳಿ ದೇಶದಲ್ಲಿ ಓಡಾಡುತ್ತ ಅವಿಶ್ರಾಂತ ರೀತಿಯಿಂದ ಕಾರ್ಯೋನ್ಮುಖವಾಗಿರುವುದು. ಕಾಲಹರಣ ಮಾಡುವವರನ್ನೂ ಸೋಮಾರಿಗಳನ್ನೂ ವ್ಯರ್ಥಾಲಾಪ ಪ್ರಲಾಪಗಳನ್ನೂ ಬಾರುಕೋಲಿನಿಂದ ಬಾರಿಸಿದಂತೆ ಪ್ರಹರಿಸುತ್ತಿರುವುದು. ಹಾಯಾಗಿ ಕಾಲುಚಾಚಿಕೊಂಡು ಕುಳಿತು ವಿರಾಮಸುಖವೆಂಬ ಹೆಸರಿನಿಂದ ಶತಸೋಮಾರಿಗಳಾಗಿರುವ ಧ್ಯೇಯವನ್ನು ಮನಸ್ಸಿನಲ್ಲಿ ಬೆಳೆಸಿ ಸರ್ಕಾರೀ ನೌಕರಿಪಿಂಚನ್ನುಗಳಿಗಾಗಿ ಬಾಯಿಬಿಟ್ಟು ಆತ್ಮಗೌರವವನ್ನು ಮೋಹದಲ್ಲಿ ಕದಡಿಕೊಂಡವರಿಗೆ ಪಿಡುಗು ! ಹುದ್ದೆದಾರರಾಗಿದ್ದು ಹತ್ತುಮಂದಿ ನೌಕರರಿಂದ ಸಲಾಮಿಸಿ ಕೊಳ್ಳುತ್ತ ಕೈತುಂಬ ಸಂಬಳ ಸೆಳೆಯುತ್ತ ತಾವೇ ಶ್ರೇಷ್ಠ ಲೋಕೋಪ ಕಾರಿಗಳೆಂಬುದನ್ನು ಮಾತಿಮಾತಿಗೂ ಸೂಚಿಸಿಕೊಡತಕ್ಕವರಿಗೆ ಜವಾ ಹರಲಾಲರು ಧೂಮಕೇತು ! "ಇದೇನಪ್ಪಾ ಈ ಚೈತನ್ಯ ! ನಮಗೆ ಅರ್ಥ ವಾಗುವುದೇ ಇಲ್ಲ, ನಮ್ಮ ಸಂಬಂಧವೇ ಇಲ್ಲದಹಾಗಿದೆಯಲ್ಲ!" ಎಂದು ಚಕಿತರಾಗಬೇಕು. ನವಭಾರತದಲ್ಲಿ ಸುಲಭತೃಪ್ತಿಗೆ ಆಸ್ಪದವಿಲ್ಲ, ಸೋಮಾರಿತನಕ್ಕೆ ಆಶ್ರಯವಿಲ್ಲ, ಸಣ್ಣ ಮನಸ್ಸಿನ ಎಣಿಕೆಗಳಿಗೆ ಎಡೆ ಯಿಲ್ಲ. ಧೈರ್ಯ, ಉಲ್ಲಾಸ, ಸಾಹಸ, ಚಾಟುಲ್ಯಗಳಿಗೆ ಮಾತ್ರವೇ ಸ್ಥಳ.

ಆತ್ಮವೃತ್ತಾಂತವೆಂಬ ಪುಸ್ತಕ ಹೊರಬಿದ್ದ ತರುವಾಯ ಒಂದು ಸಂದರ್ಭದಲ್ಲಿ ಗಾಂಧೀಜಿಯವರೂ ಶ್ರೀನಿವಾಸಶಾಸ್ತ್ರಿಗಳೂ ಪರಸ್ಪರ ವಾಗಿ ಕುಶಲ ಪ್ರಶ್ನೆಗಳನ್ನು ಮಾಡಿಕೊಂಡರು. ಇಬ್ಬರೂ ಸಮವಯ ಸ್ಕರು, ಸಮಾನತೀರ್ಥರು, ಪುಣ್ಯಜೀವನದಲ್ಲಿ ಜರ್ಜರಿತ ಶರೀರಿಗಳು. "ಗಾಂಧೀಜಿ! ಸದಾಶ್ರಮಿಸುತ್ತಲಿದ್ದರೆ ಹೇಗೆ? ಹೇಗಾದರೂ ವಿಶ್ರಾಂತಿ ಯನ್ನಿಟ್ಟುಕೊಳ್ಳಬೇಕು ನೀವು" ಎನ್ನುತ್ತಾರೆ ಶಾಸ್ತ್ರಿಗಳು. "ಸುಮ್ಮನೆ ಹೇಗಿರುವುದು ! ಈ ಜವಾಹರರನ್ನು ನೋಡಿ. ಸುಮ್ಮನಿರುವುದು ಸಾಧ್ಯವೇ ಆತನಿಗೆ?" ಎಂದು ಗಾಂಧೀಜಿಯವರುಲ್ಲಾಸದಿಂದ ನುಡಿದರೆ ಶಾಸ್ತ್ರಿಗಳು "ಆತನೇ ! ತಾನು ಸುಮ್ಮನಿರುವುದೂ ಇಲ್ಲ, ಇತರರನ್ನು ಸುಮ್ಮನೆ ಬಿಡುವುದೂ ಇಲ್ಲ!" ಎಂದರು. ಆಕ್ಷಣದಲ್ಲಿಬ್ಬರೂ ಏಕ ಮನಸ್ಕರಾಗಿ ಜವಾಹರಲಾಲರನ್ನು ಮೌನದಿಂದಲೇ ಹರಸಿದರು; ಹೆಮ್ಮೆ ಗೊಂಡರು.

ಭಾರತರಾಷ್ಟ್ರವು ಸ್ವತಂತ್ರಗೊಂಡಾಗ ಜವಾಹರಲಾಲರೇ ರಾಷ್ಟ್ರಾಧ್ಯಕ್ಷರಾದಾರೆಂದು ಇತರ ದೇಶಸ್ಥರ ಮನಸ್ಸುಗಳಲ್ಲಿಯೂ ನಿರೀಕ್ಷೆಯಿರುವುದು. ಗಾಂಧೀಜಿಯುವರು ಲೆನಿನ್ನಿನಂತೆಂದೋ ಸುನ್ಯಾತ್ಸೇನರಂತೆಂದೋ ಭಾವಿಸುವವರು ಜವಾಹರಲಾಲರನ್ನು ಸ್ಟಾಲಿನ್ನಿಗೂ, ಚಿಯಾಂಗ್‌ಕೈಷೇಕಿಗೂ ಹೋಲಿಸಿಕೊಳ್ಳುವರು. ವಾಸ್ತವವಾಗಿ ಜನರಾಶಿಯ ಪ್ರೀತಿಯೂ ಹಾಗೆಯೆ. ಗಾಂಧೀಜಿಯುವರನ್ನು ಪೂಜಿಸುವರು; ಜವಾಹರಲಾಲರನ್ನೆತ್ತಿಕೊಂಡು ಮೆರವಣಿಗೆ ನಡೆಸುವರು. ಮತ್ತಾರಲ್ಲಿಯೂ ಜನರ ಪ್ರೀತಿವಿಶ್ವಾಸಗಳು ಇಷ್ಟಾಗಿ ಕಾಣುವುದೇ ಇಲ್ಲ.

ಯಾರಿಗಾದರೂ ಜವಾಹರಲಾಲರನ್ನು ಮೊದಲು ಕಂಡಕೂಡಲೆ ಎಂತಹ ರೂಪರಾಶಿಯೆನಿಸುವುದು. ತಾರಕಾಸುರನೊಡನೆ ಯುದ್ಧ ಬೆಳೆಸಲು ದೇವತೆಗಳನ್ನು ಕರೆದುಕೊಂಡು ಹೊರಟ ಕುಮಾರಸ್ವಾಮಿಯನ್ನು ಯಾರಾದರೂ ಚಿತ್ರಿಸಬೇಕಾದರೆ ಜವಾಹರಲಾಲರ ಚಿತ್ರದ ನಕಲನ್ನು ಗುರುತಿಸಿಡುವುದು ಸುಲಭವೂ ಸಮರ್ಪಕವೂ ಆದ ಉಪಾಯ. ಹದಿನಾರೂವರಾಣೆ ಆರ್ಯಸಂತತಿ; ಆಪಾದಮಸ್ತಕವಾಗಿ ಶುಭ್ರಧಾವಳ್ಯ. ಎತ್ತರದ ಆಕೃತಿ, ಮನೋಹರವಾದ ಮುಖ; ನಖಶಿಖಪರ್ಯಂತ ನಿರ್ಮಲ. ಸ್ವಚ್ಛ ಖಾದಿಯ ವಸನ. ಪ್ರೀತಿಯನ್ನು ಸೂಸುತ್ತ ಕಾಂತಿಯನ್ನು ಕಾರುವ ಕಣ್ಣುಗಳು; ಅಭಿವ್ಯಕ್ತಶೀಲವಾದ ಓಷ್ಠ—ಇಷ್ಟು ಜವಾಹರಲಾಲ್. ಸಾಧಾರಣ ವೇಳೆಗಳಲ್ಲಿ ಕಣ್ಣುಗಳು ಸೌಮ್ಯ ಸಹಿಷ್ಣುತೆಗಳಿಂದ ಅರಳಿದಂತೆ ಕಾಣುವುದಾದರೂ ಮಾತನಾಡುವ ವೇಳೆಗಳಲ್ಲಿ ಗಾಢಶಕ್ತಿಯ ಕಾಂತಿಯನ್ನು ಚೆಲ್ಲುತ್ತಿರುತ್ತವೆ. ಕೋಪ ಬಂದ ವೇಳೆಯಾದರೆ ಕಣ್ಣುಗಳಲ್ಲಿ ಅದೇ ಶಕ್ತಿಯು ಮಿಂಚಿನಂತೆ ಬಳುಕುತ್ತದೆ, ತುಟಿಗಳದಿರಿದಂತೆ ಕಂಡು ಮಾತು ತೊದಲಿದಂತೆ ತೋರುತ್ತದೆ. ಅರೆಕ್ಷಣ ಕೂಡ ಆ ತೊದಲಿರುವುದಿಲ್ಲ; ಬಿರುಸು ಬಿರುಸಾಗಿ ವೇಗವೇಗವಾಗಿ ಮಾತುಗಳು ಸಿಡಿಯುತ್ತವೆ. ಅಂತಹ ವೇಳೆಗಳಲ್ಲಿಯೂ ಅಪಶಬ್ದಗಳು ನೂರು ಮೈಲಿ ದೂರದಲ್ಲಿಯೇ ಭಯಗೊಂಡು ಓಡಿಹೋಗುತ್ತಿರುತ್ತವೆ.

ರೂಪವನ್ನೂ ರೀತಿಯನ್ನೂ ಗುರುತಿಸಿಕೊಳ್ಳುತ್ತಲಿರುವವರಿಗೆ ಈತನು ಅತಿ ಶ್ರೇಷ್ಠ ಜಾತನೆನಿಸುತ್ತದೆ. ಟೋಪಿ ಜುಬ್ಬ ವೆಸ್ಟ್‌ಕೋಟು ಗಳು ಮಾತ್ರವೇ ಆದರೂ ಅವುಗಳನ್ನು ಧರಿಸುವ ರೀತಿಯಲ್ಲಿ ಶ್ರೇಷ್ಠ ವರ್ಗದ ಸೊಗಸು ಕಾಣುವುದು. ಅಜ್ಞಾನಿ ಬಡಪಾಯಿಗಳ ವಿಚಾರವನ್ನೇ ಮಾಡುತ್ತ ಅತಿ ಸಾಮಾನ್ಯನಂತೆ ವೇಷಭೂಷಣಗಳನ್ನು ತಾಳಿದ್ದರೂ ಈತನು ಸಾಮಾನ್ಯನಲ್ಲವೆಂದು ಕ್ಷಣಕ್ಷಣಕ್ಕೂ ಅಡಿಗಡಿಗೂ ಗೋಚರ ವಾಗುತ್ತಿರುತ್ತದೆ. ಗಾಂಧೀಜಿಯ ಶಿಷ್ಯನಾಗಿ ಅತಿ ಸರಳವಾದ ಅಲಂಕಾರ ವನ್ನು ಧರಿಸಿದ್ದರೂ ಆ ಸರಳತೆಯಲ್ಲಿಯೇ ರಾಜಠೀವಿ ಕಾಣುತ್ತಿರುತ್ತದೆ.

ಕುದುರೆ ಸವಾರಿಯಲ್ಲಿ ಇಷ್ಟವುಳ್ಳಾತನಿಗೆ ತನ್ನ ಮೋಟಾರನ್ನು ತಾನೇ ನಡೆಸಿಕೊಂಡುಹೋಗಲು ಇಷ್ಟ. ಸ್ನೇಹಿತರನ್ನು ಕೂರಿಸಿಕೊಂಡು ತಾವೇ ಬಂಡಿ ಬಿಡುತ್ತ ಆನಂದಭವನಕ್ಕೆ ಕರೆದುಕೊಂಡುಹೋಗುವರು. ಈಗಿನದು ಎರಡನೆ ಆನಂದಭವನ. ಮೊದಲನೆ ಆನಂದಭವನವೆಂಬುದು ಈಗ ಸ್ವರಾಜ್ ಭವನ; ಕಮಲಾದೇವಿ ಹೆಸರಿನ ಆಸ್ಪತ್ರೆಗೂ ಕಾಂಗ್ರೆಸ್ ಕಚೇರಿಗೂ ನಿಲಯ. ಎರಡನೆ ಆನಂದಭವನ ಮೊದಲನೆಯದರಷ್ಟಿಲ್ಲ ದಿದ್ದರೂ ಸುಂದರವಾಗಿ ಕಾಣುತ್ತದೆ; ಅತಿ ಮನೋಹರವಾದ ಹೂ ತೋಟದ ಆವರಣದ ಮಧ್ಯೆ ಆಭರಣದಂತೆ ಕಂಗೊಳಿಸುತ್ತದೆ. ಆ ಮನೆ ಯಲ್ಲಿ ಪ್ರಾಯಶಃ ಎಲ್ಲ ಹೊತ್ತುಗಳಲ್ಲಿಯೂ ಮಕ್ಕಳ ಕಿಲಕಿಲಹಾಸ್ಯವೋ ಕ್ರೀಡಾಧ್ವನಿಯೋ ತುಂಬಿರುತ್ತದೆ. ಏಕಂದರೆ ಜವಾಹರಲಾಲರಿಗೆ ಮಕ್ಕಳಲ್ಲಿ ಬಲು ಆದರ. ಹದಿನೈದು ವರ್ಷಗಳಿಗೆ ಹೆಚ್ಚಿನ ಆಯುಷ್ಯವನ್ನು ಜೈಲಿನಲ್ಲಿ ಕಳೆದುದರ ಪ್ರಭಾವವಿದ್ದರೂ ಇರಬಹುದು. ಅತಿಥಿಗಳಿಗೆ ಊಟ ಉಪಚಾರಗಳಲ್ಲಿ ಯಾವ ಲೋಪವೂ ಕಾಣುವುದಿಲ್ಲ. ಪತ್ತೆ ಕೊಡದೆ ಅತಿಥಿಗಳ ಇಷ್ಟವನ್ನೂ ಸೌಕರ್ಯವನ್ನೂ ಪತ್ತೆಮಾಡಿಕೊಂಬ ಮತ್ತು ಒದಗಿಸಿಡುವ ಜಾಣತನವುಂಟು. ಆದರೆ ಹಿಂದಿನಕಾಲದ ವೈಭವದ ಅಡಿಗೆಗಳಿಲ್ಲ. ಯಾವುದೋ ತಿಂಡಿಯನ್ನಾಶಿಸಿ ನೀರೂರಿಸಿ ಕೊಳ್ಳುವುದನ್ನು ದೌರ್ಬಲ್ಯವೆಂದುಕೊಳ್ಳುವ ಲಕ್ಷಣ ಜವಾಹರಲಾಲರಲ್ಲಿ ಇತ್ತೀಚಿಗೆ ಬಲವಾಗಿದೆ. ಯಾವಾಗಲಾದರೂ ಆಲೂಗಡ್ಡೆ ಬಜ್ಜಿಯನ್ನು ಆಶಿಸಿದರೆ ಅಷ್ಟೇ ಹೆಚ್ಚು. ಆದರೇನು! ಎಷ್ಟು ಸಾಧಾರಣವಾದ

ಪದಾರ್ಥವಾದರೂ ಅಡಿಗೆಯಲ್ಲಿ ಸ್ವಲ್ಪವಾದರೂ ದೋಷ ಕಾಣುವುದಿಲ್ಲ. ವಸ್ತು ಸಾಮಾನ್ಯವಾದರೂ ಅಡಿಗೆ ಸೊಗಸಾಗಿರುವುದು.

ಜವಾಹರಲಾಲರು ಮನೆಯಲ್ಲಿರುವಾಗ ಹೆಚ್ಚು ಕಾಲಕಳೆಯುವುದು ತಮ್ಮ ಗ್ರಂಥಭಂಡಾರದಲ್ಲಿ. ಅಲ್ಲಿ ಮೋತಿಲಾಲರ ಚಿತ್ರದೊಂದಿಗೆ ಗಾಂಧೀಜಿಯ ಚಿತ್ರ ಪ್ರಧಾನವಾಗಿ ಕಾಣುವುದು; ಅಲ್ಲಲ್ಲಿ ಚಿಯಾಂಗ್ ಕೈಷೇಕ್ ಮುಂತಾದ ಇತರ ಮಿತ್ರರ ಚಿತ್ರಗಳು ಗೋಚರವಾಗುವುವು. ಆದರೆ ಎಲ್ಲೆಡೆಗಳಲ್ಲಿಯೂ ಕಾಣುತ್ತಿರುವುದು ಇಂದಿರೆಯ ಚಿತ್ರಗಳು. ಸಾವಿರಾರು ಪುಸ್ತಕಗಳು, ನೂರಾರು ಪತ್ರಿಕೆಗಳು ಕಂಡರೂ ಜವಾಹರಲಾಲರನ್ನಲ್ಲಿ ಕಟ್ಟಿಹಾಕಲು ಇಂದಿರೆಯೊಬ್ಬಳೇ ಆದಳು.

ಮೊದಲು ತಂದೆಯವರು, ತರುವಾಯ ಪತ್ನಿ, ಆ ಬಳಿಕ ತಾಯಿ ಮೃತ್ಯುವಿಗಾಹುತಿಯಾದರು. ಇದ್ದ ಮಗಳೊಬ್ಬಳು ಮದುವೆಯಾಗಿ ಹೊರಟಳು. ಜವಾಹರಲಾಲರು ಒಂಟಿಗರಾದರು. ಇಪ್ಪತ್ತೈದು ವರ್ಷಾವಧಿಯಲ್ಲಿ ಹದಿನೇಳೂಮುಕ್ಕಾಲು ವರ್ಷಗಳಷ್ಟು ಕಾಲವನ್ನು ಜೈಲುಗಳಲ್ಲಿ ಕಳೆಯಬೇಕೆಂಬುದು ಬ್ರಿಟಿಷ್ ಆಡಳಿತದ ನ್ಯಾಯಸ್ಥಾನಗಳ ತೀರ್ಪಾಯಿತು.

ಈ (1945) ನವೆಂಬರ್ 14ನೇ ತಾರೀಖಿಗೆ ಜವಾಹರಲಾಲರಿಗೆ ಐವತ್ತಾರನೆ ವರ್ಷ ಮುಕ್ತಾಯವಾಗುವುದು.

## II

## 1. ಕಾಶ್ಮೀರೀ ಪಂಡಿತ್ ಮೋತಿಲಾಲ್

ಶುಭ್ರತುಷಾರ ಕಿರೀಟಿನಿ ಭಾರತಭೂದೇವಿ. ಕಾಶ್ಮೀರವೇ ಆ ಕಿರೀಟವೆನ್ನಬಹುದು. ಸಮಸ್ತ ಪೃಥ್ವೀಮಂಡಲಕ್ಕೇ ಕಿರೀಟಪ್ರಾಯವಾದ ಆ ಪ್ರದೇಶದೆದುರಿನಲ್ಲಿ ಸ್ವಿಟ್ಸರ್ಲಂಡ್ ಭಿಕಾರಿ ಮಾತ್ರ. ಕಾಳಿದಾಸಾದಿ ಸಂಸ್ಕೃತ ಕವಿಗಳಿಗೂ ಅಮೀರ್‌ಖುಸ್ರು ಮುಂತಾದ ಫಾರಸೀ ಕವಿಗಳಿಗೂ ಅತಿ ಪ್ರಿಯವಾದ ಆ ನಾಡಿನ ಇತಿಹಾಸವಾದರೂ ಅತಿ ಪ್ರಾಚೀನ. ರಾಜತರಂಗಿಣಿಯೆಂಬ ಉತ್ಕೃಷ್ಟಕಾವ್ಯ ಆ ನಾಡಿನ ಕಥೆ. ಎಷ್ಟು ಪ್ರಾಚೀನವೋ ಅಷ್ಟು ಪವಿತ್ರವೂ ಆದ ಆ ಕ್ಷೇತ್ರದಲ್ಲಿ ಸಿಕಂದರ್ ಘಾಸ್ಸಿಯೆಂಬ ನಿಷ್ಠಾಮತ್ತ ಸುಲ್ತಾನನು ಆಳಿದಾಗ ಬಲವಂತದ ಇಸ್ಲಾಮೀಕರಣ ನಡೆದು ಅಲ್ಲಿಯ ಜನರಲ್ಲಿ ಮುಕ್ಕಾಲುಪಾಲಿನವರು ಮುಸಲ್ಮಾನರೆನಿಸಿದರು. ಹಿಂದುಗಳಾಗಿಯೇ ಉಳಿದವರಿಗೆ ಒದಗಿದ ದುರ್ದಶೆ ಜೈನುಲ್ಲಾಬುದೀನ್ ಸುಲ್ತಾನನ ಆಳಿಕೆಯಿಂದ ಸ್ವಲ್ಪಮಾತ್ರ ತಪ್ಪಿದಾಗ್ಯೂ ಕಾಶ್ಮೀರ ಕ್ಷೇತ್ರದಲ್ಲಿ ಹಿಂದುಗಳಾಗಿ ನಿಂತ ಜನರು ಅಲ್ಪಸಂಖ್ಯಾಕರಾದರು. ಸಿಂಧು ಪ್ರಾಂತದಲ್ಲಿ ಹೇಗೋ ಹಾಗೆಯೇ ವೇಷಭೂಷಗಳಲ್ಲಿಯೂ ಆಚಾರ ಪದ್ಧತಿಗಳಲ್ಲಿಯೂ ಈ ಅಲ್ಪಸಂಖ್ಯಾಕ ಹಿಂದುಗಳು ಎಷ್ಟೋ ಅಂಶಗಳಲ್ಲಿ ಮುಸಲ್ಮಾನರ ಬಹಿರಾಚಾರಗಳನ್ನು ಅವಲಂಬಿಸತಕ್ಕವರಾದರು. ರೂಪರೇಖೆಗಳಲ್ಲಿ ಹದಿನಾರಾಣೆ ಆರ್ಯರಾದ ಕಾಶ್ಮೀರೀ ಬ್ರಾಹ್ಮಣರು ದಾಕ್ಷಿಣಾತ್ಯರ ಕಣ್ಣಿಗೆ ಮುಸಲ್ಮಾನರಂತೆಯೇ ಕಂಡರೂ ಕಂಡಾರು.

ಬಹಿರಾಚಾರಗಳ ಅನುಸರಣೆಯಲ್ಲಿ ದಾಕ್ಷಿಣಾತ್ಯರಿಗಿರುವ ನಿಷ್ಠೆಯೂ ಶುದ್ಧಿಯೂ ಸಾಧಾರಣವಾಗಿ ಔತ್ತರೇಯರಿಗಿರುವುದಿಲ್ಲ. ಈ ಸಂಗತಿಯಿಂದಲೇ ಪ್ರಾಯಶಃ ನರ್ಮದೆಗುತ್ತರವಾದರೆ ಪುಣ್ಯಭೂಮಿಯೆಂಬುದಾಗಿಯೂ ದಕ್ಷಿಣವಾದರೆ ಕರ್ಮಭೂಮಿಯೆಂಬುದಾಗಿಯೂ ಹೊಸದಾಗಿ ವಿಭಾಗಕಲ್ಪನೆ ಮಾಡಿಕೊಂಡುದು. ಪುಣ್ಯಭೂಮಿಯೆಂಬ ವಿಭಾಗದಲ್ಲಿರುವವರು ಅಷ್ಟಾಗಿ ಕರ್ಮಠರಾಗಿರಬೇಕಾ

ದುದಿಲ್ಲವೆಂಬ ಸಮಯ ಸಿಂಧು ಕಾಲಸ್ಥಿತಿಗೆ ಅಡಿಯಾಳಾಗಿ ಹೊರಟಿತು. ಬಂಗಾಳ, ಅಯೋಧ್ಯೆ, ಕನ್ಯಾಕುಬ್ಜ ಮುಂತಾದೆಡೆಗಳಲ್ಲಿಯೇ ಶ್ರೇಷ್ಠ ಜಾತಿಯವರು ಮಾಂಸಾಹಾರಿಗಳಾಗಿ ಉಳಿದರು. ಕಾಶ್ಮೀರೀ ಬ್ರಾಹ್ಮಣರು ಅವರಿಗಿಂತ ಎರಡು ಬೆರಳು ಹೆಚ್ಚು. ಆ ಗುಂಪಿನವರು ಕಾಶ್ಮೀರದಲ್ಲಿಯೆ ಅಲ್ಲದೆ ಇತರೆಡೆಗಳಲ್ಲಿಯೂ ನೆಲೆಸಿದ್ದಾರೆ. ದೃಷ್ಟಾಂತಕ್ಕೆ ಪಂಜಾಬಿನಲ್ಲಿ ನೆಲೆಸಿದ ಮನೆತನಕ್ಕೆ ಸೇರಿದ ಸರ್ ಮಹಮ್ಮದ್ ಎಕ್ಬಾಲ್, ದಿಲ್ಲಿ ಕಾನ್ಪುರ ಇಲಾಹಾಬಾದುಗಳಲ್ಲಿ ಹೆಸರಾದ ನೆಹರು, ಸಪ್ರು, ಧಾರ್ ಮುಂತಾದವರು ಕಾಶ್ಮೀರೀ ಬ್ರಾಹ್ಮಣ ಗುಂಪಿನವರು. ಸುಮಾರು ಐದುಸಾವಿರ ಮಾತ್ರ ಕಾಶ್ಮೀರದ ಹೊರಗೆ. ಬ್ರಾಹ್ಮಣರಾದುದರಿಂದ ಅವರೆಲ್ಲರಿಗೂ ಸಾಮಾನ್ಯವಾಗಿ ಪಂಡಿತ್ ಎಂದೇ ರೂಢಿ. ಪಾಂಡಿತ್ಯವಿಲ್ಲದಿದ್ದಾಗಲೂ ಪಂಡಿತರೇ.

ಮುಘಲಬಾದಶಾಹಿಯ ಇಳಿಗಾಲ. ಫರ್ರುಖ್‌ಸಿಯರ್ ಎಂಬ ಬಾದಶಹ ಕಾಶ್ಮೀರಕ್ಕೆ ವಿಹಾರಾರ್ಥವಾಗಿ ಬಂದಿದ್ದಾಗ ರಾಜಾಕೌಲ್ ಎಂಬ ಅಲ್ಲಿಯ ಬ್ರಾಹ್ಮಣನು ಸಂಸ್ಕೃತ ಫಾರಸೀ ಭಾಷೆಗಳಲ್ಲಿ ಪರಮ ಪಂಡಿತನೆಂಬುದನ್ನು ತಿಳಿದನು. ತನ್ನ ಆಸ್ಥಾನದಲ್ಲಿಯೆ ಆ ವಿದ್ವಾಂಸನಿರುವಂತೆ ಬಯಸಿದನು. ಸುಮಾರು 1716ರಲ್ಲಿ ಆ ವಿದ್ವಾಂಸನು ದಿಲ್ಲಿಯಲ್ಲಿ ನೆಲೆಸಿ ಬಾದಶಹನಿಂದ ಒಂದು ಜಹಗೀರನ್ನೂ ಮನೆಯನ್ನೂ ಸಂಪಾದಿಸಿದನು. ಮನೆಯು ಒಂದಾನೊಂದು ಕಾಲುವೆ ಪಕ್ಕದಲ್ಲಿದ್ದುದರಿಂದ ಕಾಲುವೆ ಮನೆಯವರೆಂದು (ನೆಹರು; ನಹರ್ = ಕಾಲುವೆ) ಹೆಸರಾಯಿತು. ನೆಹರು ಎಂಬುದೇ ಮನೆತನದ ಹೆಸರಾಗಿ ನಿಂತಿತು.

ಕಾಲಗತಿಯಲ್ಲಿ ಜಹಗೀರ್ ಮಾಯವಾಯಿತು. ನೆಹರು ಮನೆತನಕ್ಕೆ ಯಜಮಾನನಾದ ಲಕ್ಷ್ಮೀನಾರಾಯಣ ನೆಹರು ಇಂಗ್ಲಿಷ್ ಈಸ್ಟಿಂಡಿಯ ಕಂಪನಿಯ ವಕೀಲನಾಗಿ ಕಾಲ ತಳ್ಳಿದನು; ಆತನ ಮಗ ಗಂಗಾಧರ ನೆಹರು ದಿಲ್ಲಿಯ ಕೊತ್ತವಾಲನಾಗಿದ್ದನು. 1857ರಲ್ಲಿ ದಿಲ್ಲಿಯಲ್ಲಿ ಪ್ರಚಂಡವಾಗಿ ದಂಗೆ ರೇಗಿತು. ನೆಹರು ಮನೆತನದವರು ಸಂಪಾದಿಸಿಕೊಂಡಿದ್ದ ಆಸ್ತಿಪಾಸ್ತಿಗಳು ನಷ್ಟವಾದವು. ಗಂಗಾಧರ ನೆಹರು ತನ್ನ ಮಕ್ಕಳನ್ನು ಕರೆದುಕೊಂಡು ದಿಲ್ಲಿಯನ್ನು ಬಿಟ್ಟು ಹೊರಡ

ಬೇಕಾಯಿತು. ಆಗ್ರಾ ಕಡೆಗೆ ಹೊರಡುತ್ತಲಿರಲು ಮಾರ್ಗದಲ್ಲಿ ತಂದೆ ಮಕ್ಕಳನ್ನು ಕೆಲವರು ಬ್ರಿಟಿಷ ಸೋಜಾರಿ*ಗಳು ಅಡ್ಡಪಡಿಸಿ "ನೀವು ಯಾರೋ ಇಂಗ್ಲಿಷ್ ಜಾತಿಯ ಹುಡುಗಿಯನ್ನು ಎತ್ತಿಕೊಂಡುಹೋಗು ತ್ತಿದ್ದೀರಿ. ನಿಲ್ಲಿ!" ಎಂದು ಕೂಗಿ ತಡೆದರು. ಗಂಗಾಧರ ನೆಹರುವಿನ ಮಗಳ ರೂಪವು ಆ ಭ್ರಾಂತಿಯನ್ನು ಆ ಸೋಜಾರಿಗಳಲ್ಲಿ ಹುಟ್ಟಿಸಿದ್ದಿತು. ಇಂಗ್ಲಿಷ್ ಭಾಷೆಯನ್ನು ಸ್ವಲ್ಪ ತಿಳಿದಿದ್ದ ಸೋದರನು ಸಮಾಚಾರವನ್ನು ಬಿಚ್ಚಿಹೇಳಿ ಆ ಗಂಡವನ್ನು ತಪ್ಪಿಸಿದನು. ಆಗ್ರಾ ನಗರದಲ್ಲಿ ನೆಲೆಸಿದ ತರುವಾಯ 1861ನೆ ಇಸವಿಯಲ್ಲಿ ಗಂಗಾಧರನ ಕಡೆಯ ಮಗ ಮೋತೀ ಲಾಲ ಹುಟ್ಟಿದನು. ಆಗ್ರಾ ನಗರದಲ್ಲಿ ಮೋತಿಲಾಲ ಹುಟ್ಟಿದ ವೇಳೆ ಯಲ್ಲಿಯೇ ಬಂಗಾಳದಲ್ಲಿ ರಬೀಂದ್ರನಾಥನೂ ಹುಟ್ಟಿದುದು.

ಆಗ್ರಾ ಪಟ್ಟಣವನ್ನು ಸೇರಿಕೊಂಡ ಸ್ವಲ್ಪಕಾಲದಲ್ಲಿಯೇ ಗಂಗಾ ಧರ ನೆಹರು ಕಾಲವಶನಾದನು. ಜ್ಯೇಷ್ಠಪುತ್ರ ವಂಶೀಧರ ನೆಹರು ಸರ್ಕಾರೀ ಹುದ್ದೆಯನ್ನು ಸೇರಿಕೊಂಡು ಸ್ಥಲದಿಂದ ಸ್ಥಲಕ್ಕೆ ವರ್ಗವಾಗು ತ್ತಿದ್ದನು. ಎರಡನೆಯವನಾದ ನಂದಲಾಲ ನೆಹರು ರಾಜಸ್ಥಾನದಲ್ಲಿ ಖೇತ್ರಿ ಸಂಸ್ಥಾನದ ದಿವಾನನಾಗಿ ಹತ್ತು ವರ್ಷ ಕಳೆದು ಪುನಃ ಆಗ್ರಾ ನಗರದಲ್ಲಿಯೆ ನೆಲೆಸಿ ವಕೀಲನಾಗಿರುತ್ತಿದ್ದನು. ನ್ಯಾಯವಾದಿಯಾಗಿ ಹೈಕೋರ್ಟಿನಲ್ಲಿ ವಾದಿಸುತ್ತಿದ್ದನು. ಕೆಲಕಾಲದ ಬಳಿಕ ಹೈಕೋರ್ಟು ಇಲಾಹಾಬಾದಿಗೆ ಹೊರಟಿತು; ನಂದಲಾಲ ನೆಹರುವೂ ಅಲ್ಲಿಗೆ ಹೊರಟನು. ಪ್ರಯಾಗ ಅಥವಾ ಇಲಾಹಾಬಾದೇ ಮನೆತನಕ್ಕೆ ನೆಲೆಯಾಯಿತು.

ಭಾರತವರ್ಷದ ಸಿಂಹವೆನಿಸಿದ ಮೋತಿಲಾಲರ ಬಾಲ್ಯ ಈ ಅಣ್ಣ ನಂದಲಾಲನ ಪೋಷಣೆಯಲ್ಲಿ ಕಳೆಯಿತು. ಕಡೆಯ ಮಗನಾದುದ ರಿಂದಲೇನೋ ತಾಯಿಗೆ ಮೋತಿಲಾಲ ಪ್ರೀತಿ ಪುತ್ರ. ಹನ್ನೆರಡನೆ ವರ್ಷದವರೆಗೆ ಒಂದಾನೊಂದು ಮಕ್ತಬ್ಬಿನಲ್ಲಿ ಫಾರ್ಸೀ ಮತ್ತು ಅರಬ್ಬಿ ಭಾಷೆಗಳಲ್ಲಿ ಶಿಕ್ಷಣ; 1873ರಲ್ಲಿ ಕಾನ್ಪುರದ ಹೈಸ್ಕೂಲಿನಲ್ಲಿ ಪ್ರವೇಶ. ಮೋತಿಲಾಲರು ಇಂಗ್ಲಿಷ್ ವ್ಯಾಸಂಗವನ್ನು ಮೊದಲಿಟ್ಟುದು ವಯಸ್ಸಾದ

---

* Soldierಗೆ ತದ್ಭವ

ಮೇಲೆ. ಕೌಮಾರದಲ್ಲಿಯೇ ಫಾರಸೀ ಅರಬ್ಬಿಗಳನ್ನು ತಿಳಿದವನೆಂಬ ಕಾರಣದಿಂದ ಇತರರು ಈತನನ್ನು ಗೌರವದಿಂದ ಕಾಣುತ್ತಿದ್ದರು. ಹೈಸ್ಕೂಲ್ ಶಿಕ್ಷಣ ಮುಗಿದ ಬಳಿಕ ಪ್ರಯಾಗದಲ್ಲಿನ ಮ್ಯೂರ್‌ಸೆಂಟ್ರಲ್ ಕಾಲೇಜನ್ನು ಸೇರಿ ಬಿ.ಎ. ವರೆಗೆ ಓದಿದರು. ವಿದ್ಯಾರ್ಥಿ ಗುಂಪಿನಲ್ಲಿ ಮೋತಿಲಾಲ ಕುರಿಯಲ್ಲ, ನರಿಯೂ ಅಲ್ಲ, ಹುಲಿ ಅಥವಾ ಸಿಂಹ. ಓದಿಗಿಂತಲೂ ಆಟಪಾಟಗಳಲ್ಲಿ ಹೆಚ್ಚು ಆಸಕ್ತಿ; ಅದರಲ್ಲೂ ಕುಸ್ತಿಯಲ್ಲಿ ಗೀಳು. ಕಾನ್ಪುರದಲ್ಲಿ ನಡೆದ ಕುಸ್ತಿಗಳಲ್ಲಿ ಮೋತಿಲಾಲರು ಒಂದನ್ನಾದರೂ ಕಾಣದೆ ಬಿಡಲಿಲ್ಲ. ಕಾಲೇಜಿನ ಪ್ರೊಫೆಸರುಗಳ ದೃಷ್ಟಿಯಲ್ಲಿ ಮೋತಿಲಾಲರು ನಮ್ರರಾಗಿ ಕಂಡವರೇ ಅಲ್ಲ; ಜಗಳಗಂಟಿಯಾಗಿ ಕಂಡವರು. ಆದರೆ ಆ ಅಧ್ಯಾಪಕರೆಲ್ಲರಿಗೂ ಮೋತಿಲಾಲ ಮೇಧಾವಿಯೆಂದು ಗೊತ್ತು. ಬಿ.ಎ ಪರೀಕ್ಷೆಯ ವೇಳೆಯೊದಗಿತು. ಮೊದಲನೆ ಪ್ರಶ್ನಪತ್ರಿಕೆಗೆ ಸಮರ್ಪಕವಾದ ಉತ್ತರಗಳನ್ನು ತಾವು ಬರೆಯಲಿಲ್ಲವೆಂದುಕೊಂಡು ಮೋತಿಲಾಲರು ಉಳಿದ ಪ್ರಶ್ನಾವಳಿ ಪತ್ರಿಕೆಗಳನ್ನು ಬಿಟ್ಟುಬಿಟ್ಟು ಪರೀಕ್ಷಾ ಮಂದಿರವನ್ನೇ ತ್ಯಾಗಮಾಡಿ ತಾಜ್‌ಮಹಲ್ ಬಳಿ ಅಷ್ಟು ಹೊತ್ತನ್ನೂ ಕಳೆದರಂತೆ. ಆಮೇಲೆ ಪ್ರೊಫೆಸರು ಕರೆಸಿ "ಮೊದಲನೆ ಪತ್ರಿಕೆಗೆ ನೀನು ಬರೆದ ಉತ್ತರಗಳು ಚೆನ್ನಾಗಿಯೆ ಇದ್ದವು. ಮುಂದಿನ ಪರೀಕ್ಷೆಯನ್ನೇ ಬಿಟ್ಟು ಅವಿವೇಕವನ್ನು ನಡೆಸಿದೆಯೆ ನೀನು!" ಎಂದರಂತೆ. ಆದರೆ ಮೋತಿಲಾಲರಿಗೆ ಬೇಕಾದುದು ಅಗ್ರಸ್ಥಾನ! ಸುಮಾರಾಗಿರುವುದು, ಪರವಾ ಇಲ್ಲ ಎನ್ನುವುದು, ಜೀವನಾಂಶ ಸಂಪಾದನೆ (Securing the minimum)ಯೆನ್ನುವುದು ಆತನ ಸ್ವಭಾವಕ್ಕೆ ಅಸಹ್ಯ. ಅಲ್ಪತೃಪ್ತಿಯಿಂದ ಸುಖಪಡುವ ಸಂಕುಚಿತ ಸ್ವಭಾವವೇ ಅಲ್ಲ. ಧೈರ್ಯದ ತಳಾದಿಯ ಮೇಲೆ ಸಾಹಸದ ಕಟ್ಟಡ; ಆ ಸಾಹಸದೊಂದಿಗೆ ವಿಜೃಂಭಿಸುವ ದರ್ಪ ಗಾಂಭೀರ್ಯಗಳುಳ್ಳ ಸ್ವಭಾವ.

ಬಿ.ಎ. ಪ್ಯಾಸನ್ನೇನೋ ಮಾಡಲಿಲ್ಲ. ಆದರೆ ಸ್ವಲ್ಪಕಾಲದಲ್ಲಿಯೆ ವಕೀಲಿ ವೃತ್ತಿಯನ್ನು ಅನುಸರಿಸುವ ಸಂಕಲ್ಪಮಾಡಿ ಹೈಕೋರ್ಟು ವಕೀಲಿ ಪರೀಕ್ಷೆಗೆ ಕುಳಿತು ಅಗ್ರಶ್ರೇಣಿಯಲ್ಲಿ ಪ್ಯಾಸ್‌ಮಾಡಿ ಕಾನ್ಪುರದ

ಜಿಲ್ಲಾ ಕೋರ್ಟುಗಳಲ್ಲಿ ವಕಾಲತ್ ವಹಿಸಿದರು. ಅಲ್ಲಿ ಮೂರು ವರ್ಷ ಕಳೆದ ಬಳಿಕ ಇಲಾಹಾಬಾದ್ ಕೋರ್ಟಿನಲ್ಲಿಯೇ ವಕಾಲ್ತಿ ನಡೆಸಲು ನಿಶ್ಚಯಿಸಿ ಇಲಾಹಾಬಾದಿನಲ್ಲಿಯೇ ನೆಲೆಸಿದರು. ಅದೇ ವೇಳೆಗೆ ಅಣ್ಣ ನಂದಲಾಲ ನೆಹರು ದೈವಾಧೀನನಾಗಲು ಮೋತಿಲಾಲರೇ ಕುಟುಂಬ ಭಾರವೆಲ್ಲವನ್ನೂ ವಹಿಸಬೇಕಾಯಿತು.

1882ರಲ್ಲಿ ಮೋತಿಲಾಲರು ಅನುರೂಪಳಾದ ಸ್ವರೂಪರಾಣಿ ದೇವಿಯನ್ನು ವಿವಾಹಮಾಡಿಕೊಂಡರು. ಸರ್ವ ವಿಧಗಳಲ್ಲೂ ಅನು ಕೂಲದಾಂಪತ್ಯವಾಯಿತು. ಮನೆಗೆ ತಾವೇ ಯಜಮಾನರಾದ ಬಳಿಕ ಮೋತಿಲಾಲರಿಗೆ ವಕೀಲಿ ವೃತ್ತಿಯೇ ಸರ್ವಸ್ವ. ವಕೀಲರಲ್ಲಿ ಅಗ್ರ ಗಣ್ಯರಾಗಬೇಕೆಂಬ ಸಂಕಲ್ಪದಿಂದ ರಾತ್ರಿ ಹಗಲು ಕೇಸುಗಳು, ಕೋರ್ಟುಗಳು, ಕಕ್ಷಿಗಾರರು, ವಾದ-ಪ್ರತಿವಾದಗಳು ವಗೈರೆಗಳಲ್ಲಿಯೇ ಮನಶ್ಶಕ್ತಿಯನ್ನು ಆಡಿಸಿದರು. ಸ್ವಲ್ಪ ಕಾಲದಲ್ಲಿಯೇ ದೊಡ್ಡ ದೊಡ್ಡ ಕೇಸುಗಳು ಬಂದವು. ಗೆಲ್ಲುವ ಛಟದಿಂದ ಮೋತಿಲಾಲರು ಎದುರಾದವರನ್ನು ಧೂಳೀಪಟಮಾಡುತ್ತ ವಕೀಲರಲ್ಲಿ ಅಗ್ರಗಾಮಿ ಯಾದರು. ಸಂಪಾದನೆಯೂ ಹೆಚ್ಚಿತು; ಅದರಂತೆ ಮನೆ ವೆಚ್ಚವೂ ಹೆಚ್ಚಿತು. ಹೆಚ್ಚಾಗಿ ಸಂಪಾದಿಸಿದ್ದನ್ನುಳಿಸುವ ಉದ್ದೇಶವೇ ಮೋತಿ ಲಾಲರಿಗಿಲ್ಲ. "ಇಷ್ಟು ಸಂಪಾದಿಸಿದವನು ಮುಂದೆ ಬೇಕಾದರೆ ಇದ ಕ್ಕಿಂತಲೂ ಹೆಚ್ಚಾಗಿ ಯಥೇಷ್ಟವಾಗಿ ಸಂಪಾದಿಸಲಾರೆನೇ ನಾನು?" ಎನ್ನುತ್ತ ಸಣ್ಣ ಮನಸ್ಸಿನ ಸಂಶಯ ಶಂಕೆಗಳನ್ನು ಅಲಕ್ಷ್ಯದಿಂದ ಕಾಣ ತಕ್ಕವರು. ಇಲಾಹಾಬಾದಿನ ವಕೀಲರಲ್ಲಿ ರಾಜಠೀವಿಯಿಂದ ಈ ರೀತಿಯಲ್ಲಿದ್ದ ಮೋತಿಲಾಲರ ಮನಸ್ಸಿನಲ್ಲಿ ಇಂಗ್ಲಿಷ್ ಜಾತಿಯವರ ದಕ್ಷತೆಯಲ್ಲಿ ಮೆಚ್ಚುಗೆಯಿತ್ತು; ಕಾಂಗ್ರೆಸ್ ಎಂದೂ ಕಾನ್ಫರೆನ್ಸ್ ಎಂದೂ ಸಭೆಸೇರಿ ಭಾಷಣಗಳನ್ನು ಕೊಟ್ಟು ವ್ಯರ್ಥ ಪ್ರಯತ್ನದಲ್ಲಿ ತೊಡಗಿದ್ದ ಒಡನಾಡಿಗಳನ್ನು ಕಂಡರೆ ತಾತ್ಸಾರವಿತ್ತು. ದೇಶಪ್ರೇಮ ವಿರಲಿಲ್ಲವೆಂದಲ್ಲ; ವ್ಯರ್ಥವಾದ ಉದ್ಯಮವನ್ನು ಕಂಡರೆ ತಿರಸ್ಕಾರ. ಪೌರುಷದಲ್ಲಿ ತನಗಿಂತಲೂ ಇತರರು ಕಡಿಮೆಯವರೆಂಬ ಪ್ರಜ್ಞೆಗಿಂತ ಅವರು ನಡೆಸುತ್ತಿದ್ದ ಪ್ರಯತ್ನಕ್ಕೆ ಉಚಿತವಾದ ಲಕ್ಷ್ಯವಿಲ್ಲವೆಂಬ

ಆಕ್ಷೇಪ ಮೋತಿಲಾಲರ ಮನಸ್ಸಿನಲ್ಲಿ ಬಲವಾಗಿತ್ತು. ರಾಜಕೀಯ ರಂಗದಲ್ಲಿ ಮೋತಿಲಾಲರು ಪ್ರವೇಶಿಸಿದುದು ನಿದಾನವಾದುದು ಈ ಕಾರಣದಿಂದ.

1907ನೆ ಇಸವಿ ಸಂಯುಕ್ತ ಪ್ರಾಂತದಲ್ಲಿ ಒಂದು ಸಮ್ಮೇಳನಕ್ಕೆ ಮೋತಿಲಾಲರನ್ನು ಅಧ್ಯಕ್ಷರನ್ನಾಗಿ ಆರಿಸಲಾಯಿತು. ಅದೇ ಕಾಲ ದಲ್ಲಿಯೇ ಮಿಂಟೊ ಮಾರ್ಲೆ ಸುಧಾರಣೆಗಳೆಂಬವು ಹೊರಬಿದ್ದವು. ಮೋತಿಲಾಲರು ಆ ಪ್ರಾಂತದ ಲೆಜಿಸ್ಲೆಟಿವ್ ಸಭೆಗೆ ಸದಸ್ಯರೂ ಆದರು. ನಿರ್ದಾಕ್ಷಿಣ್ಯ ರೀತಿಯ ಅಭಿಪ್ರಾಯಗಳನ್ನು ಕಡಾಖಂಡಿತವಾದ ಮಾತು ಗಳಿಂದ ವ್ಯಕ್ತಗೊಳಿಸುತ್ತಿದ್ದ ಕಾರಣದಿಂದ ಮೋತಿಲಾಲರು ಅತಿಸುಲಭ ವಾಗಿ ಮುಂದಾಳುಗಳಲ್ಲಿ ಗಣ್ಯರೇನೋ ಆದರು. ಬ್ರಿಟಿಷ್ ಜಾತಿ ಯುವರನ್ನೆದುರು ಹಾಕಿಕೊಳ್ಳುವ ಸಂದರ್ಭ ಹುಟ್ಟುವವರೆಗೆ ಈತನ ಪೌರುಷವೆಂಥದೆಂದು ತಿಳಿಯಲಿಲ್ಲ. 1917ರಲ್ಲಿ ಸಂದರ್ಭ ಬಂತು. ಸರ್ ಜೇಮ್ಸ್ ಮೆಸ್ಟನ್ (Sir James Meston) ಎಂಬಾತನು ಗವರ್ನರ್ ಪದವಿಯಲ್ಲಿದ್ದನು. ರೂರ್ಕಿ ಕಾಲೇಜಿಗೆ ಪ್ರಿನ್ಸಿಪಾಲನಾಗಿದ್ದ ವುಡ್ (Wood) ಎಂಬಾತನು ಭಾರತೀಯರನ್ನು ಅವಹೇಳನ ಮಾಡುವ ಕೆಟ್ಟ ಚೇಷ್ಟೆಯನ್ನು ಬಿಚ್ಚಿದ್ದನು. ಲೆಜಿಸ್ಲೆಟಿವ್ ಕೌನ್ಸಿಲ್ಲಿನಲ್ಲಿ ಅಧಿಕಾರಿವರ್ಗ ದವರು ಆ ಸಂದರ್ಭವನ್ನು ಮರೆಮಾಡುವ ತೆರದಲ್ಲಿ ವರ್ತಿಸಲು ತೊಡಗಿ ದರು. ಆಗ ಮೋತಿಲಾಲರಿಗೆ ರೋಷವೇರಿತ್ತು. ಆ ಪ್ರಸ್ತಾಪವನ್ನೆ ತ್ತಿಕೊಳ್ಳಲು ಅವಕಾಶವನ್ನು ಸಭಿಕರಿಗೆ ಕೊಡಬಾರದೆಂಬ ಸಂಚು ಬುದ್ಧಿಯಿಂದ ಗವರ್ನರ್ ಉಪಾಯವನ್ನು ಹಿಡಿದನು. ಮೋತಿ ಲಾಲರು ರೌದ್ರವನ್ನು ತಾಳಿ ಬಿರುಸಾದ ಮಾತುಗಳನ್ನು ಬೀರಿ ಅಧಿಕಾರಿವರ್ಗದವರನ್ನು ಭಂಜಿಸಿ ಸಭಾತ್ಯಾಗವನ್ನು ಮಾಡಿ ಹೊರಗೆ ನಡೆದು ಬಂದರು. ಸಮಾಧಾನಗೊಳಿಸಿ ಪುನಃ ಸಭೆಗೆ ಬರುವಂತೆ ನೆರವೇರಿಸಿಕೊಳ್ಳಲು ಗವರ್ನರ್ ಮೆಸ್ಟನ್ ಇತರ ಮಿತ್ರರನ್ನು ಸಹಾಯ ಕ್ಕಿಟ್ಟುಕೊಂಡು ಎಷ್ಟೋ ಉಪಾಯಮಾಡಬೇಕಾಯಿತು.

ಮಂದಪಕ್ಷದವರೆನಿಸಿಕೊಂಡ ಗುಂಪಿನಲ್ಲಿಯೇ ಮೋತಿಲಾಲರು ಗಣ್ಯರಾಗಿದ್ದುದು. ಗೋಖಲೆ, ಸರ್ ಸತ್ಯೇಂದ್ರಸಿಂಹ ಮುಂತಾದ

ವರನ್ನು ಮೆಚ್ಚುತ್ತ ತೀವ್ರಗಾಮಿಗಳೆನಿಸಿದ್ದ ತಿಲಕ್, ಬಿಪಿನಚಂದ್ರ ಪಾಲ ಮುಂತಾದವರನ್ನು ಖಂಡಿಸುತ್ತಿದ್ದರು. ಆದರೆ ಮೋತಿಲಾಲರ ಪ್ರಕೃತಿ ಪೌರುಷಪ್ರಧಾನವಾದುದು. ವೃತ್ತಿಯಲ್ಲಿ ನ್ಯಾಯವಾದಿ, ಅಸಾಧಾರಣ ಮೇಧಾವಿ, ಧನಕ್ಕೆ ಸ್ವಾಮಿಯಾದ ಈತನಿಗೆ ಪ್ರಾಚೀನ ಸಂಪ್ರದಾಯಗಳಲ್ಲಿ ಅಭಿಮಾನವಿರಲಿಲ್ಲ. ಮುಂದೆ ನಡೆಸತಕ್ಕ ಕರ್ತವ್ಯ ಸ್ಫುಟವೂ ನಿರ್ದಿಷ್ಟವೂ ಆಗಿ ತನ್ನ ವಿಚಾರಶಕ್ತಿಗೆ ಯೋಗ್ಯವಾಗಿಯೂ ತೋರಿದಾಗ ಈತನಿಗೆ ಉತ್ಸಾಹ ಹುಟ್ಟಬಹುದಾಗಿತ್ತು. ಸ್ವಭಾವ ದಲ್ಲಿದ್ದ ರೋಷವೆಲ್ಲ ಕೆಲಕಾಲ ತೀವ್ರಗಾಮಿಗಳ ತಿರಸ್ಕಾರದಲ್ಲಿ ಕಂಡು ದಕ್ಕೆ ಅಷ್ಟೇ ಕಾರಣ.

ಮಗ ಜವಾಹರಲಾಲ್ ಇಂಗ್ಲಂಡಿನಿಂದ ಹಿಂತಿರುಗಿ ಬಂದ ತರುವಾಯ ಮೋತಿಲಾಲರಲ್ಲಿ ವ್ಯತ್ಯಾಸಕ್ಕಾರಂಭವಾಯಿತು. ತಂದೆಯ ಪ್ರಭಾವ ಮಗನ ಮೇಲೆ ಎಂತೋ ಅಂತೆಯೇ ಮಗನ ಪ್ರಭಾವ ತಂದೆಯ ಮೇಲೆ. ಮಹಾತ್ಮಾಜಿಯವರು ರಾಜಕೀಯ ರಂಗದಲ್ಲಿ ನೇರವಾಗಿ ಪ್ರವೇಶಿಸಿದ ತರುವಾಯವೇ ಆ ಪ್ರಭಾವ ಪ್ರಬಲಿಸಿತು.

## 2. ಜವಾಹರಲಾಲರ ಬಾಲ್ಯ

1889ನೆ ಇಸವಿ ನವೆಂಬರ್ ತಿಂಗಳು 14ನೆ ತಾರೀಖು ಅಥವಾ ವಿಕ್ರಮ ಸಂವತ್ಸರ 1946ನೆ ಮಾರ್ಗಶೀರ್ಷ ಸಪ್ತಮಿ ಪ್ರಯಾಗದ ಮಿರ್‌ಗಂಜ್ ಮೊಹಲ್ಲದಲ್ಲಿ ಸ್ವರೂಪರಾಣಿ ಮೋತಿಲಾಲರಿಗೆ ಪುತ್ರೋ ತ್ಸವ. ವಿವಾಹವಾಗಿ ಹನ್ನೊಂದು ವರ್ಷಗಳು ಕಳೆದಿದ್ದವು. ಆ ಕಾರಣದಿಂದ ಜವಾಹರರಲ್ಲಿ ಮಾತಾಪಿತೃಗಳಿಬ್ಬರಿಗೂ ಅತಿಶಯ ಮಮತೆ. ದಂಪತಿಗಳಾದರೋ ಭಾಗ್ಯವಂತರಲ್ಲಿ ಅಗ್ರಗಣ್ಯರಾದವರು, ನೆಮ್ಮದಿಯ ಬಿಂಕತಾಳಿದವರು. ಮೋತಿಲಾಲರ ಮಗುವೆಂದರೆ ಇತರ ಮಕ್ಕಳಂತೆಯೇ? ಬಾಲ್ಯದಲ್ಲಿ ಮುದ್ದುಮಗನನ್ನು ನೋಡಿಕೊಳ್ಳಲು ಇಂಗ್ಲಿಷ್ ಜಾತಿಯ ಮಹಿಳೆಯರು ಗವರ್ನೆಸ್ಸುಗಳೆಂದು ಗೊತ್ತಾಗಿ ದ್ದರು. ಆರನೇ ವರ್ಷ ತುಂಬಿದ ಕೂಡಲೆ ಮನೆಯಲ್ಲಿಯೇ ಆಟ ಪಾಟಗಳು. ಓದುಬರಹಗಳು, ಆಟ ಓಟಗಳು, ಕುದುರೆ ಸವಾರಿಗಳ

ಲ್ಲದೆ ಮನೆ ತೋಟದಲ್ಲಿಯೇ ಈಜುವ ಕೊಳ. 1900ರಲ್ಲಿ ಮೋತಿಲಾಲರು ದೊಡ್ಡ ಬಂಗಲೆಯೊಂದನ್ನು ಕೊಂಡು ತಮ್ಮ ಇಷ್ಟಾನುಸಾರ ಕಟ್ಟಿಸಿ ಆನಂದಭವನ ಎಂಬ ಹೆಸರಿಟ್ಟು ಅಲ್ಲಿಯೇ ವಾಸಮಾಡಲು ಆರಂಭಿಸಿದರು. ಆ ಮನೆಯ ಉದ್ಯಾನವೇ ಒಂದು ದೊಡ್ಡ ಪಾರ್ಕ್ ಹಾಗೆ; ಅದರೊಳಗೆ ಈಜಾಡಲು ಒಂದು ಪುಷ್ಕರಿಣಿ. ಏಕಮಾತ್ರನಾದ ಜವಾಹರಲಾಲನನ್ನು ಈ ಭಾಗ್ಯಶಾಲಿಗಳು ಹೇಗೆ ಲಾಲನೆ ಪಾಲನೆ ಮಾಡಿದರೋ ಊಹಿಸಿಕೊಳ್ಳಬಹುದು.

ಹನ್ನೊಂದನೆ ವಯಸ್ಸು ತುಂಬುವವರೆಗೆ ಏನು ನಡೆಯಿತೆಂಬುದನ್ನು ಜವಾಹರರ ಬಾಯಿಂದಲೇ ಕೇಳುವುದೆಂದರೆ ಸ್ವಾರಸ್ಯ. ಸೆರೆಮನೆಯ ಬಲವಂತ ವಿರಾಮ ಕಳೆಯಲು ಸ್ವಕೀಯ ಚರಿತ್ರೆಯನ್ನು ಬರೆದಾಗ ತಮ್ಮ ಮನೋಧರ್ಮವನ್ನು ತಾವೇ ಸ್ಮರಿಸಿ ಮೃದು ಹಾಸ್ಯ ತುಂಬಿದ ರೀತಿಯಲ್ಲಿ ವರ್ಣಿಸಿರುತ್ತಾರೆ.

"ಸಾಯಂಕಾಲವಾದರೆ ತಂದೆಯವರಿಗೆ ವಿರಾಮಕಾಲ. ಅನೇಕ ಸ್ನೇಹಿತರು ಮನೆಗೆ ಬರಲು ಅದೇ ಸಮಯ. ಅವರೊಂದಿಗೆ ಮಾತುಕತೆಗಳನ್ನಾಡುತ್ತ ತಂದೆಯವರು ಆಗಾಗ್ಗೆ ಗಟ್ಟಿಯಾಗಿ ನಗುತ್ತಿದ್ದರು. ಈ ದೊಡ್ಡ ದೊಡ್ಡವರು ಒಟ್ಟಿಗೆ ಸೇರಿ ಏನುಮಾಡುತ್ತಾರೆಯೋ ಏನೇನು ಮಾತನಾಡುತ್ತಾರೆಯೋ ಎಂಬ ಕುತೂಹಲದಿಂದ ನಾನೊಂದೊಂದು ವೇಳೆ ಹಿಂದಿನಿಂದ ಇಣಿಕಿ ನೋಡುತ್ತಿದ್ದೆ. ಯಾರಾದರೂ ನನ್ನನ್ನಾಗ ಕಂಡರೆ ತಕ್ಷಣವೇ ಎತ್ತಿಕೊಂಡು ಹೋಗುತ್ತಿದ್ದರು; ತಂದೆಯ ತೊಡೆಮೇಲೆ ಕೂರಿಸಿಕೊಳ್ಳುತ್ತಿದ್ದರು. ಆಗ ನನಗೆ ಸ್ವಲ್ಪ ಅಂಜಿಕೆಯೆ ಆಗುತ್ತಿತ್ತು.

ತಂದೆಯವರ ಬಳಿಯಲ್ಲಿದ್ದ ಮುನಷಿ ಮುಬಾರಕ್ ಅಲಿಯವರಲ್ಲಿ ನನಗೆ ಅತಿ ವಿಶ್ವಾಸ. ಬಿಳಿಗಡ್ಡವನ್ನು ತಾಳಿದ ಆತನ ಮುಖದಲ್ಲಿ ಸದಾ ಕರುಣೆಯೇ ಕಾಣುತ್ತಿತ್ತು. ಅರಬ್ಬಿನೈಟ್ಸ್ ಕಥೆಗಳೆಷ್ಟನ್ನೋ ಆತ ನನಗೆ ಹೇಳುತ್ತಿದ್ದನು. 1857—8ರಲ್ಲಿ ನಡೆದ ಸಿಪಾಹಿ ದಂಗೆಯೆಂಬ ಘಟನೆಯಲ್ಲಿ ಆತನ ಹಿರಿಯರೇ ಸೇರಿದ್ದರು. ಆ ಘಟನಾವಳಿಗಳ ವಿವರವನ್ನೂ ಆಗಿಂದಾಗ್ಗೆ ಹೇಳುತ್ತಿದ್ದ ಆತನ ರೂಪ ನನ್ನ ಮನಸ್ಸಿನಲ್ಲಿ ಇಂದಿಗೂ ಸುಂದರವೆನ್ನಿಸುತ್ತದೆ.

ತಾಯಿಯವರು ಆಗಾಗ್ಗೆ ರಾಮಾಯಣ ಭಾರತ ಕಥೆಗಳನ್ನು ನನಗೆ ಹೇಳುತ್ತಿದ್ದರು. ಅಂತಹ ಪೌರಾಣಿಕ ಕಥೆಗಳನ್ನು ನಮ್ಮ ದೊಡ್ಡಮ್ಮ ಚನ್ನಾಗಿ ತಿಳಿದಿದ್ದರು; ಎಷ್ಟಾದರೂ ಯಾವುದಾದರೂ ಆಕೆಗೆ ಗೊತ್ತಿತ್ತು. ತಾಯಿಯವ

ರನ್ನು ಕಂಡಾಗ ನನಗೆ ಹೆದರಿಕೆಯೇ ಇರಲಿಲ್ಲ. ನಾನೇ ಅಲ್ಪಸ್ವಲ್ಪವಾಗಿ ಅವರನ್ನು ಹೆದರಿಸುತ್ತಿದ್ದೆ. ಆಕೆಯ ರೂಪವನ್ನು ನಾನು ಮೆಚ್ಚುತ್ತಲಿದ್ದೆ. ನಾನೇನು ತಪ್ಪುಮಾಡಿದರೂ ಆಕೆಯ ಲಾಲನೆ ನನಗೆ ಸಿದ್ಧವಾಗಿಯೇ ಇರುತ್ತಿತ್ತು. ತಂದೆಯುವರಲ್ಲಿ ಮಾತ್ರ ನನಗೆ ಹೆದರಿಕೆ. ಕೋಪ ಬಂದಾಗ ಅವರು ನಿಜವಾಗಿ ಉಗ್ರಮೂರ್ತಿ. ಕೋಪ ಬಂದ ಕಾಲದಲ್ಲಿ ನಮಗೆಲ್ಲ ಬಲು ಭಯವಾಗುತ್ತಿತ್ತು. ಕೋಪದಲ್ಲಿ ಅವರು ಯಾರನ್ನಾದರೂ ಸೇವಕರನ್ನು ದಂಡಿಸಿದಾಗ ನನಗೆ ಭಯವೂ ಸ್ವಲ್ಪ ಸ್ವಲ್ಪ ಆಗ್ರಹವೂ ಮನದಲ್ಲಿ ತೋರುತ್ತಿತ್ತು.

ಒಂದು ಸಲ ತಂದೆಯುವರು ನನ್ನ ಮೇಲೆ ಮುನಿದು ಬಲವಾಗಿ ಹೊಡೆದರು. ಮೇಜಿನ ಮೇಲೆ ಎರಡು ಫೌಂಟೆನ್ ಪೇನಾಗಳನ್ನಿಟ್ಟುಕೊಂಡಿದ್ದರು. ನಾನು ಅಲ್ಲಲ್ಲಿ ಆಡುತ್ತ ಆ ಎರಡು ಪೇನಾಗಳನ್ನು ಕಂಡು ಅವುಗಳಲ್ಲೊಂದನ್ನು ನಾನೇಕೆ ತೆಗೆದುಕೊಳ್ಳಬಾರದೆಂದುಕೊಂಡು ಸ್ವಸ್ಥವಾಗಿ ಎತ್ತಿಟ್ಟುಕೊಂಡಿದ್ದೆ. ಆಮೇಲೆ ತಂದೆಯುವರು ಹುಡುಕಿದರು; ಕಡೆಗೆ ನನ್ನಲ್ಲಿದ್ದುದು ಪತ್ತೆಯಾಯಿತು. ಜಗತ್ತಿಗೆಲ್ಲ ನನ್ನ ತಪ್ಪು ತಿಳಿದಂತಾಯಿತು. ತಂದೆಯುವರಿಗೆ ತುಂಬಾ ಕೋಪ ಬಂದು ನನ್ನನ್ನು ಹಿಡಿದು ಚನ್ನಾಗಿ ಹೊಡೆದರು. ಅಳುವನ್ನೂ ಅವಮಾನವನ್ನೂ ಸಹಿಸಲಾರದೆ ತಾಯಿಯುವರಲ್ಲಿ ಸೇರಿದೆ. ಆ ತರುವಾಯ ಎಷ್ಟೋ ದಿನಗಟ್ಟಲೆ ನನ್ನ ಮೈಗೆ ಮುಲಾಮುಗಳನ್ನು ಬಳೆಯುತ್ತಿದ್ದು ವಾಸಿಮಾಡಿದರು.

ಆದರೂ ತಂದೆಯುವರಲ್ಲಿ ನನಗೆ ಆಗ್ರಹವಿರಲಿಲ್ಲ. ಮಾಡಿದ ತಸ್ಕರಕ್ಕೆ ನ್ಯಾಯವಾದ ದಂಡನೆಯಾಯಿತೆಂದುಕೊಂಡೆ. ಆತನ ಧೈರ್ಯ, ಶೌರ್ಯ ಮತ್ತು ತೇಜಸ್ಸುಗಳನ್ನು ನಾನು ಬಹಳವಾಗಿ ಮೆಚ್ಚಿದ್ದು ನಾನೂ ಆತನಂತೆಯೆ ಆಗಬೇಕೆಂದುಕೊಳ್ಳುತ್ತಿದ್ದೆ. ಆದರೂ ತಂದೆಯುವರನ್ನಾಗ ಕಂಡಾಗ ಮನಸ್ಸಿನಲ್ಲಿ ಅಂಜಿಕೆಯಿದ್ದೇ ಇರುತ್ತಿತ್ತು.

ಹೆಂಗಸರು ಮನೆಯಲ್ಲಿ ವ್ರತಗಳನ್ನೋ ಪೂಜೆಗಳನ್ನೋ ಇಟ್ಟುಕೊಳ್ಳುತ್ತಿದ್ದರು; ಗಂಗಾಸ್ನಾನಕ್ಕೂ ದೇವಾಲಯಕ್ಕೂ ಹೊರಡುತ್ತಿದ್ದರು. ತಂದೆಯುವರೂ ಇತರ ಹಿರಿಯರೂ ಈ ಆಚರಣೆಗಳನ್ನು ಹೆಂಗಸರ ಆಚರಣೆಗಳೆನ್ನುತ್ತ ಸ್ವಲ್ಪ ತಾತ್ಸಾರವನ್ನೂ ಬೀರುತ್ತಿದ್ದರು. ನಾನು ಆ ಯಾತ್ರೆಗಳನ್ನೂ ಸ್ನಾನಗಳನ್ನೂ ಉಲ್ಲಾಸದಿಂದ ಅನುಭವಿಸುತ್ತಿದ್ದಾಗ್ಗೂ ಇತರ ಗಂಡಸರಂತೆ ನಾನೂ ಆಗಾಗ್ಗೆ ತಾತ್ಸಾರವನ್ನು ನಟಿಸಲು ಯತ್ನಿಸುತ್ತಿದ್ದೆ.

ಇತರ ಹಿಂದುಜನರಲ್ಲಿಲ್ಲದ ಹಬ್ಬಗಳು ಕಾಶ್ಮೀರಿಗಳಿಗುಂಟು. ಹೋಳಿ, ದೀಪಾವಳಿ, ಜನ್ಮಾಷ್ಟಮಿ, ನವರಾತ್ರಿ, ರಾಮಲೀಲೆಗಳಲ್ಲದೆ ಮುಹರಂ, ಇದ್, ನವರೋಜ್ ಆಚರಣೆಗಳನ್ನು ನಡೆಸುವುದೂ ಉಂಟು. ಎಲ್ಲ ಹಬ್ಬಗಳಿ

ಗಿಂತಲೂ ನನಗೆ ಮುಖ್ಯವಾಗಿದ್ದುದು ನನ್ನ ಹುಟ್ಟಿದ ಹಬ್ಬ. ಅವತ್ತು ನನಗೆ ಬಲು ಸಡಗರ. ಬೆಳಿಗ್ಗೆ ನನ್ನನ್ನು ತಕ್ಕಡಿಯಲ್ಲಿ ಧಾನ್ಯರಾಶಿಯೊಂದಿಗೆ ತೂಗಿ ಅದನ್ನು ಬಡಬಗ್ಗರಿಗೆ ದಾನಮಾಡುತ್ತಿದ್ದರು. ನನಗೆ ಹೊಸ ಬಟ್ಟೆಗಳನ್ನು ಕೊಟ್ಟು ಸಾಯಂಕಾಲ ಮಣೆಮೇಲೆ ಕೂರಿಸಿ ಆರತಿ-ಅಕ್ಷತೆ ನಡೆಸುತ್ತಿದ್ದರು. ನಾನೇ ಅದಕ್ಕೆ ನಾಯಕನಾಗಿ ಬಲು ಹಿಗ್ಗಿ ಹಾಸಪಡುತ್ತಿದ್ದೆ. ವರ್ಷಕ್ಕೊಂದೇ ಬಾರಿ ಬರುವುದಲ್ಲ ಈ ಉತ್ಸವವೆಂದು ನನಗೆ ಅಸಮಾಧಾನ. ಇನ್ನೂ ಬೇಗ ಬೇಗನೆ ಬರುವಂತೆ ನಾನೇನೋ ಚಳುವಳಿಯೆಬ್ಬಿಸುತ್ತಿದ್ದೆ. ಹುಟ್ಟಿದ ಹಬ್ಬವೆಂದರೆ ಮನುಷ್ಯನ ವೃದ್ಧಾಪ್ಯವೇರುತ್ತಿರುವ ಗುರುತೆಂಬುದನ್ನು ನಾನಾಗ ಕಾಣೆ.

ಬಂಧುವರ್ಗದಲ್ಲಿ ಮದುವೆ ಮುಂಜಿಗಳು ನಡೆದಾಗ ನಾವೆಲ್ಲರೂ ಒಟ್ಟಿಗೆ ಪ್ರಯಾಣ ಹೊರಡುತ್ತಿದ್ದೆವು. ಅಂತಹ ಸಮಯಗಳಲ್ಲಿ ಬಂಧುಬಳಗವೆಲ್ಲವೂ ಗುಂಪಾಗಿ ಸೇರುತ್ತಿದ್ದ ಕಾರಣದಿಂದ ನನಗೆ ಜೊತೆಗಾರರು ಸಿಕ್ಕುತ್ತಿದ್ದರು. ಎಷ್ಟೋ ವಿನೋದವಾಗಿ ಅಂತಹ ಸಮಯಗಳು ಕಳೆಯುತ್ತಿದ್ದವು. ಆ ಸಮಯಗಳನ್ನು ಬಿಟ್ಟರೆ ನಮ್ಮ ಮನೆಯಲ್ಲಿ ನಾನೊಬ್ಬನೇ ಸಣ್ಣವನು. ಜೊತೆಗಾರರಿರಲಿಲ್ಲ. ಜೊತೆಗಾರರಿಲ್ಲವೆಂಬುದು ನನ್ನ ಮುಖ್ಯ ಕೊರಗಾಗಿತ್ತು.

ನನಗೆ ಏಳನೆ ವರ್ಷವೋ ಎಂಟನೆ ವರ್ಷವೋ ನಡೆಯುತ್ತಿದ್ದಾಗ ಸಂಭವಿಸಿದ ಸಂಗತಿ ಸ್ಪಷ್ಟವಾಗಿ ನೆನಪಿನಲ್ಲಿದೆ. ನಿತ್ಯವೂ ನಾನು ಕುದುರೆಯೇರಿಕೊಂಡು ಒಬ್ಬ ಸವಾರನೊಡನೆ ಹೊರಗೆ ಹೊರಡುತ್ತಿದ್ದೆ. ಒಂದು ಸಂಜೆ ನಾನು ಕುದುರೆಯಿಂದ ಬಿದ್ದುಬಿಟ್ಟೆ. ಆ ಕುದುರೆ ಒಂಟಿಯಾಗಿಯೆ ಮನೆ ಸೇರಿತು. ಟೆನ್ನಿಸ್ ಗುಂಪನ್ನು ಕಟ್ಟಿಕೊಂಡು ಆಟವಾಡುತ್ತಿದ್ದ ತಂದೆಯವರಿಗೂ ಇತರರಿಗೂ ಗಾಬರಿಯಾಯಿತು. ವಿಧವಿಧವಾದ ವಾಹನಗಳನ್ನು ಆತುರದಿಂದ ಹವಣಿಸಿಕೊಂಡು ಎಲ್ಲರೂ ನನ್ನನ್ನು ಹುಡುಕಲು ಹೊರಟರು. ದಾರಿಯಲ್ಲಿಯೇ ನನ್ನನ್ನು ಕಂಡು ಎತ್ತಿಕೊಂಡು ಮೆರವಣಿಗೆ ಮಾಡುತ್ತ ಹಿಂತಿರುಗಿದರು. ಕುದುರೆಯಿಂದ ಜಾರಿ ಬಿದ್ದುದಕ್ಕೆ ಯಾವುದೋ ರಾಜ್ಯಗೆದ್ದು ಬಂದವನಿಗೆ ನಡೆಯತಕ್ಕ ಮರ್ಯಾದೆ ನನಗೆ ನಡೆದುಹೋಯಿತು.

ಆನಂದಭವನಕ್ಕೆ ನಾವೆಲ್ಲರೂ ಬದಲಾಯಿಸಿದಾಗ ನನಗೆ ಹತ್ತು ವರ್ಷ. ಆ ಮನೆ ಸುತ್ತಲೂ ದೊಡ್ಡ ಉದ್ಯಾನವಲ್ಲದೆ ರಮ್ಯವಾದ ಜಲಕುಂಡವೊಂದಿತ್ತು. ತಂದೆಯವರು ಹೊಸ ಹೊಸದಾಗಿ ಏನೇನನ್ನೋ ಕಟ್ಟಿಸುತ್ತಿದ್ದರು. ಎಲ್ಲೆಲ್ಲಿಯೂ ಹೊಸ ಹೊಸದನ್ನೇ ಕಾಣಲು ನನಗೆ ಪರಮಾನಂದ. ಆ ಪುಷ್ಕರಿಣಿಯಲ್ಲಿಯೇ ಎಷ್ಟೋ ಕಾಲ ಕಳೆಯುತ್ತಿದ್ದೆ. ಈಜುವುದೂ ಮುಳುಗುವುದೂ ನನಗೆ ಆಟವಾಯಿತು. ಸಾಯಂಕಾಲಗಳಲ್ಲಿ ತಂದೆಯವರು ತಮ್ಮ ಮಿತ್ರರನ್ನು ಕರೆದುಕೊಂಡು ಅಲ್ಲಿಗೆ ಬರುವುದು ವಾಡಿಕೆ. ಆ ಸಮಯದಲ್ಲಿ ಒಬ್ಬ

ರನ್ನು ತಳ್ಳುತ್ತ ಮತ್ತೊಬ್ಬರನ್ನು ಎಳೆಯುತ್ತ ನಾನೆಷ್ಟೋ ವಿನೋದಗೊಳ್ಳು ತ್ತಿದ್ದೆ. ತಂದೆಯವರಿಗೆ ಈಜುಬಾರದು; ಆದರೂ ಹಲ್ಲುಕಚ್ಚಿಕೊಂಡು ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಹೋಗುತ್ತಿದ್ದರು. ಅವರಿ ಗಿಂತ ಚಿಕ್ಕವರಾದ ತೇಜ್‌ಬಹಾದುರ್‌ಸಪ್ರು ಬರುತ್ತಿದ್ದರು; ಆದರೆ ಈಜುವು ದಕ್ಕೆ ಬಾರದು, ಕಲಿಯುವುದಕ್ಕೂ ಇಷ್ಟವಿಲ್ಲ. ಮೊದಲನೆ ಮೆಟ್ಟಿಲಲ್ಲಿ ಕಾಲುಗಳನ್ನು ಬಿಟ್ಟುಕೊಂಡು ಭದ್ರವಾಗಿ ಧಿಂರಂಗ ಎಂದು ಕುಳಿತೇ ಇರು ತ್ತಿದ್ದರು. ಯಾರಾದರೂ ಸ್ವಲ್ಪ ತಳ್ಳುವುದಕ್ಕೆ ಬಂದರೆ ಆರ್ಭಟಿಸಿಬಿಡುತ್ತಿದ್ದರು.

ತಂದೆಯವರು ಯೂರೋಪಿಗೆ ಪ್ರಯಾಣಮಾಡಿದ್ದ ಸಮಯದಲ್ಲಿ ನನ್ನ ತಂಗಿ (ವಿಜಯಲಕ್ಷ್ಮಿ) ಹುಟ್ಟಿದಳು. ಆಗ ನನಗೆ ಹನ್ನೊಂದು ವರ್ಷ. ತಮ್ಮ ನಾಗಲಿ ತಂಗಿಯಾಗಲಿ ಇರಲಿಲ್ಲವೆಂದು ನನ್ನ ಮನಸ್ಸಿನಲ್ಲಿ ಅದುವರೆಗೂ ಗೋಪ್ಯವಾದರೂ ಬಲವಾದ ಅಸಮಾಧಾನವಿತ್ತು. ತಮ್ಮನೋ ತಂಗಿಯೋ ಇಷ್ಟು ಕಡೆಗಾದರೂ ಹುಟ್ಟುವ ನಿರೀಕ್ಷೆಯಿಂದ ನಾನು ವರಾಂಡದಲ್ಲಿ ಬಲು ಆಸೆಯಿಂದ ಕಾದಿದ್ದೆ. ಒಳಗಿನಿಂದ ಡಾಕ್ಟರೊಬ್ಬಾತ ಬಂದು ಸಮಾಚಾರ ಕೊಟ್ಟು ವಿನೋದಕ್ಕಾಗಿ "ತಂಗಿ ಹುಟ್ಟಿದಳಯ್ಯ ನಿನಗೆ! ಆಸ್ತಿಯಲ್ಲಿ ಭಾಗ ತಕ್ಕೊಂಬ ತಮ್ಮನಲ್ಲವಾದ್ದರಿಂದ ಸಂತೋಷವಾಗಿರಬಹುದು" ಎಂದನು. ನನ್ನಲ್ಲಿ ಅಷ್ಟು ಸ್ವಾರ್ಥತೆಯನ್ನೂ ನೀಚತ್ವವನ್ನೂ ಆರೋಪಿಸಿದರೆಂದು ನನಗೆ ಕೆಂಡದಷ್ಟು ಕೋಪವೇರಿತ್ತು.

ನನ್ನ ಬಂಧುಗಳು ಮನೆಯಲ್ಲಿ ಸೇರಿ ಮಾತುಕಥೆ ಬೆಳೆಸಿದಾಗ ಪರಂಗಿ ಯವರ ಔದ್ಧತ್ಯದ ವೃತ್ತಾಂತಗಳನ್ನಾಗಾಗ್ಗೆ ವಿವರಿಸಿ ಹೇಳುತ್ತಿದ್ದರು. ಆ ಕಾಲದಲ್ಲಿ ರೈಲುಗಳಲ್ಲಿಯೂ ಪಾರ್ಕುಗಳಲ್ಲಿಯೂ ಕೆಂಪುಬಣ್ಣದವರಿಗೆ ವಿಶೇಷ ಸ್ಥಾನ ಮರ್ಯಾದೆಗಳು. ದೇಶೀಯರಿಗೆಷ್ಟೋ ಅನ್ಯಾಯ, ಅವಮಾನ. ಯಾರಾ ದರೂ ನಮ್ಮವರು ಯೂರೋಪಿಯನ್ನರಿಗೆದುರು ಬಿದ್ದು ಜಗಳಕಾದಿದ್ದರೆ ಎಲ್ಲರಿಗೂ ಸಂತೋಷ. ನನ್ನ ಬಂಧುಗಳಲ್ಲೊಬ್ಬನಿಗಂತೂ ಇಂತಹ ವ್ಯಾಜ್ಯ ಗಳಲ್ಲಿ ಆಸೆ. ಆಗಾಗ್ಗೆ ಆತನ ಜಗಳಗಳು ನಡೆಯುತ್ತಲೇ ಇದ್ದವು. ದೇಶೀ ಯರು ತಲೆಯೆತ್ತಿ ನಿಂತು ಪರಂಗಿಯವರನ್ನು ಪ್ರತಿಭಟಿಸಿದ್ದನ್ನು ಕೇಳಿದಾಗ ಲೆಲ್ಲ ನನಗೆ ಹೆಮ್ಮೆ ತೋರುತ್ತಿತ್ತು. ಆದರೂ ಇಂಗ್ಲಿಷ್ ಜಾತಿಯವರಲ್ಲಿ ನನಗೆ ದ್ವೇಷವಿರಲಿಲ್ಲ. ನನ್ನನ್ನು ನೋಡಿಕೊಳ್ಳುತ್ತ ಶಿಕ್ಷಿಸುತ್ತ ಇದ್ದವರು ಇಂಗ್ಲಿಷ್ ಜಾತಿಯ ಮಹಿಳೆಯರು; ತಂದೆಯವರ ಮಿತ್ರರಾದ ಅನೇಕರು ಇಂಗ್ಲಿಷ್ ಜಾತಿಯವರು ಮನೆಗೆ ಆಗಾಗ್ಗೆ ಬರುತ್ತಲೇ ಇದ್ದರು. ಎಷ್ಟೋ ಗೌರವದಿಂದ ವರ್ತಿಸುತ್ತಿದ್ದರು. ಇಂಗ್ಲಿಷ್ ಜಾತಿಯೆಂದರೆ ನನ್ನ ಅಂತರಂಗ ದಲ್ಲಿ ಮೆಚ್ಚುಗೆಯೇ ಇತ್ತು."

## 3. ಜವಾಹರಲಾಲರ ಶಿಕ್ಷಣ

ಮೋತಿಲಾಲರಿಗೆ ಇಂಗ್ಲಿಷ್ ಜಾತಿಯುವರಲ್ಲಿ ಅತಿಶಯುವಾದ ಮೆಚ್ಚುಗೆಯಿತ್ತು. ಇಂಗ್ಲಂಡಿಗೆ ಹೋಗಿಬರುವುದೆಂದರೆ ಇಷ್ಟ. ವಿಲಾಯತಿ ಪ್ರಯಾಣ ಮಾಡಿಬಂದ ಈ ಕಾಶ್ಮೀರೀ ಬ್ರಾಹ್ಮಣನು ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬ ಸೂಚನೆಯನ್ನು ಅಲಕ್ಷ್ಯದಿಂದ ತೂರಿಬಿಟ್ಟಿದ್ದನು. ತನ್ನ ಮುದ್ದು ಮಗನಿಗೆ ಇಂಗ್ಲಂಡಿನಲ್ಲಿಯೇ ಅತ್ಯುತ್ತಮವಾದ ಶಿಕ್ಷಣವನ್ನು ದೊರಕಿಸಿಕೊಡಬೇಕೆಂಬ ನಿಶ್ಚಯ ಆತನ ಮನಸ್ಸಿನಲ್ಲಿ ರೂಪಗೊಂಡಿತ್ತು. ಜವಾಹರಲಾಲರನ್ನು ಇಲಾಹಾಬಾದಿನ ಯಾವ ಶಾಲೆಗೂ ಕಳುಹಿಸಿಕೊಡಲಿಲ್ಲ. ಶ್ರೀಮಂತ ಪುತ್ರರಿಗೋ ರಾಜಕುಮಾರರಿಗೋ ನಡೆವಂತೆ ಮನೆಯಲ್ಲಿಯೇ ಶಿಕ್ಷಣ.

ಜವಾಹರಲಾಲರಿಗೆ ಹನ್ನೊಂದನೆ ವರ್ಷ. ಆಗ ಎಫ್. ಟಿ. ಬ್ರೂಕ್ಸ್ (F. T. Brooks) ಎಂಬಾತನೊಂದಿಗೆ ಅಲ್ಲಿಯ ಹೆಡ್‌ಮಾಸ್ಟರ್ ಗಾರ್ಡನ್ ಎಂಬಾತನೂ ಪಂಡಿತನೊಬ್ಬಾತನೂ ಮನೆಯಲ್ಲಿಯೇ ಪಾಠ ಹೇಳಲು ಗೊತ್ತಾದರು. ಹಿಂದೀ ಮತ್ತು ಸಂಸ್ಕೃತಗಳನ್ನು ಹೇಳಿಕೊಡುವುದು ಪಂಡಿತನ ಕೆಲಸ; ಅದೇಕೋ ಎಂತೋ ಆ ಪಂಡಿತನ ಕೆಲಸ ಸಮರ್ಪಕವಾಗಿ ನೆರವೇರಲೇ ಇಲ್ಲ. ಆ ಮೂವರು ಶಿಕ್ಷಕರಲ್ಲಿ ಬ್ರೂಕ್ಸ್ ಉತ್ತಮ ಪ್ರಭಾವವನ್ನು ಬೀರಿದನು. ಕಾಶಿಯಲ್ಲಿ ಸ್ಥಾಪಿತವಾಗಿದ್ದ ಬ್ರಹ್ಮಜ್ಞಾನ (Theosophy) ಸಮಾಜಕ್ಕೆ ಸೇರಿದ್ದು ಭಾರತೀಯ ಧರ್ಮದಲ್ಲಿ ವಿಶೇಷವಾದ ಶ್ರದ್ಧಾಭಕ್ತಿಗಳನ್ನು ಬ್ರೂಕ್ಸ್ ಪಡೆದಿದ್ದನು. ಜವಾಹರಲಾಲರಿಗೆ ಇಂಗ್ಲಿಷ್ ಸಾಹಿತ್ಯವನ್ನು ಮಾತ್ರವಲ್ಲದೆ ಶಾಸ್ತ್ರಾಗಾರದ ಉದ್ಯಮಗಳನ್ನೂ ಶಾಂತಿಪ್ರೇಮವನ್ನೂ ಸೌಶೀಲ್ಯವನ್ನೂ ಎರೆಯಲು ಪ್ರಯತ್ನಿಸಿದವನು. ದೃಷ್ಟಾಂತಕ್ಕೆ ಮಾಂಸ ತಿನ್ನುವುದು ಪಾಪಕರವೆಂದು ಬ್ರೂಕ್ಸ್ ಒಂದು ದಿನ ಹೇಳಿದನು. ತರುಣ ಜವಾಹರಲಾಲ ಆ ತರುವಾಯ ಊಟಕ್ಕೆ ಕುಳಿತಾಗ "ಮಾಂಸ ತಿನ್ನುವುದು ಪಾಪ. ನನಗೆ ಬೇಡ"ವೆಂದರು. ಅಂತೆಯೆ ನಾಟಕ ಮಂದಿರಗಳಿಗೆ ಹೋಗುವುದು ತಪ್ಪೆಂದು ಭಾವಿಸಿದರಂತೆ. ಆಗ ತಂದೆತಾಯಿಗಳು ಯೋಚನೆ ಮಾಡಿ ಆ ಬಗೆಯ ಪ್ರಭಾವ ತಪ್ಪುವಂತೆ ಎಸಗಿದರು.

ಬ್ರೂಕ್ಸ್ ಬೀರಿದ ಪ್ರಭಾವದಿಂದ ಜವಾಹರಲಾಲರಿಗೆ ಥಿಯಾಸಫಿಯಲ್ಲಿ ಮೆಚ್ಚುಗೆ ತೋರಿತು. ಇನ್ನೂ ಹದಿಮೂರನೆ ವರ್ಷ; ಆಗಲೆ ಆ ಬ್ರಹ್ಮಜ್ಞಾನ ಸಮಾಜಕ್ಕೆ ಸೇರಿಕೊಳ್ಳಲು ಇಷ್ಟಪಟ್ಟು ಸೇರಿದರು. ಸ್ವಯಂ ಆನಿಬೆಸೆಂಟ್ ಈ ಶ್ರೀಮಂತ ತರುಣನಿಗೆ ಆ ಸದಸ್ಯತ್ವದ ದೀಕ್ಷೆಯನ್ನು ಕೊಟ್ಟರು. ಬಳಿಕ ಕೆಲವುಕಾಲ ಥಿಯಾಸೊಫಿಸ್ಟರ ಗುಂಪಿನಲ್ಲಿದ್ದು ತಾವು ಉತ್ತಮರಲ್ಲೊಬ್ಬನೆಂಬ ಭಾವನೆಯಿಂದಿದ್ದರಂತೆ. ಇತರರಿಗಿಂತ ತಾವು ಮೇಲೆಂದು ಮೌನಬಿಂಕದಿಂದ ಮೆರೆವ ಈ ಚೇಷ್ಟೆ ಜವಾಹರರಿಗೆ ದೃಢವಾಗಿ ನಿಲ್ಲದಾಯಿತು. ಬ್ರೂಕ್ಸ್ ಪಾಠ ಹೇಳುತ್ತ ಗ್ರೀಕ ತತ್ತ್ವಜ್ಞರ ಸಿದ್ಧಾಂತಗಳನ್ನೂ ಸನಾತನ ಧರ್ಮತತ್ತ್ವಗಳೊಂದಿಗೆ ಉಪನಿಷತ್ತು ಭಗವದ್ಗೀತೆಯನ್ನೂ ಬೋಧಿಸಿದಾಗ ಈ ತರುಣನಿಗೆ ಮೇಲೆ ಮೇಲೆ ಅವೆಲ್ಲ ಅದ್ಭುತವಾಗಿಯೂ ಅಮೋಘವಾಗಿಯೂ ಕಂಡವು. ಆದರೆ ಅಂತರಂಗದಲ್ಲಿ ಅವ್ಯಕ್ತವಾಗಿ ಆಗಾಗ್ಗೆ ತೋರುತ್ತಿದ್ದ ಆಸೆಯೇ ಬೇರೆ. ಸೂಕ್ಷ್ಮಶರೀರಗಳನ್ನು ಮಾತ್ರ ಹೊತ್ತು ಅಂತರಿಕ್ಷದಲ್ಲಿ ಓಡಾಡುವ ಸಂಗತಿಯನ್ನು ಥಿಯಾಸಫಿ ವಿವರದಲ್ಲಿ ತಿಳಿದ ಬಳಿಕ ತಾನೂ ಆಕಾಶಪಥದ ಎತ್ತರದಲ್ಲಿ ಹಾರಾಡುತ್ತ ಕೆಳಗಿರುವ ದೇಶವನ್ನು ಮೇಲಿನಿಂದ ಕಂಡೇನೆಂಬ ಕನಸು.

1904ನೆ ಇಸವಿಯಲ್ಲಿ 'ಭಾರಿ ಭಲ್ಲೂಕ'ವೆನಿಸಿದ ಸಾಮ್ರಾಜ್ಯಬಲವನ್ನು ಕುಳ್ಳರಾದ ಜಪಾನೀಯರು ಸದೆಬಡಿದರು. ಜಪಾನೀ ಜಯದ ಸುದ್ದಿಗಳನ್ನು ತಿಳಿದುಕೊಳ್ಳಲು ಜವಾಹರಲಾಲರಿಗೆ ಆತುರ. ಜಪಾನ್ ಸಂಬಂಧವಾದ ಪುಸ್ತಕಗಳನ್ನು ಕೊಂಡು ಅವುಗಳನ್ನೋದಲು ಪ್ರಯತ್ನ. ಭಾರತೀಯ ಸ್ವಾತಂತ್ರ್ಯಸಾಧನೆಯೊಂದಿಗೆ ಏಷ್ಯಾಖಂಡದ ಬಿಡುಗಡೆಯ ಕನಸು. ಕೈಲಿ ಖಡ್ಗ ಹಿಡಿದು ಝಳಪಿಸುತ್ತ ತಾನು ಭಾರತದ ಬಿಡುಗಡೆಗಾಗಿ ಧೀರನಂತೆ ಹೋರಾಟ ನಡೆಸುವ ಸ್ವಪ್ನ. ಇಂತಹ ಮನೋವೃತ್ತಿಯಿದ್ದಾಗ ಮುಂದಿನ ಶಿಕ್ಷಣಕ್ಕಾಗಿ ಇಂಗ್ಲಂಡಿಗೆ ಹೊರಡುವ ನಿಷ್ಕರ್ಷೆಯಾಯಿತು. ಚುಷೀಮಾ (Tsushima) ಜಲಯುದ್ಧದ ಸಮಾಚಾರವನ್ನು ಜವಾಹರಲಾಲರು ಡೋವರಿನಿಂದ ಲಂಡನ್ನಿಗೆ ಹೋಗುತ್ತ ರೈಲಿನಲ್ಲಿಯೇ ತಿಳಿದರು. ಹದಿನೈದನೆ ವರ್ಷ ನಡೆಯು

ತ್ತಿತ್ತು. ಆಗ. ಮೋತಿಲಾಲರು ಇಂಗ್ಲಂಡಿನಲ್ಲಿಯೇ ಅತ್ಯುತ್ತಮವೆನಿಸಿದ ಶಾಲೆಯಲ್ಲಿ ಸೇರಿಸುವ ಉದ್ದೇಶದಿಂದ ಎಲ್ಲರನ್ನೂ ಕರೆದುಕೊಂಡು ಹೊರಟಿದ್ದರು.

ಇಂಗ್ಲಂಡಿನ ಶ್ರೀಮಂತ ವರ್ಗದವರಿಗೂ ನೆಮ್ಮದಿವಂತರಿಗೂ ತಮ್ಮ ಗಂಡುಮಕ್ಕಳ ವಿದ್ಯಾಭ್ಯಾಸಕ್ಕೆ ಅತಿ ಶ್ರೇಷ್ಠವೆನಿಸಿದ ಶಾಲೆಗಳು ಪಬ್ಲಿಕ್ ಸ್ಕೂಲುಗಳೆಂದು ಪ್ರಸಿದ್ಧ. ರಗ್ಬಿ, ಈಟನ್, ಹ್ಯಾರೋ,ವಿಂಚೆಸ್ಟರ್ ಮುಂತಾದ ಆ ಶಾಲೆಗಳಲ್ಲಿ ಶಿಕ್ಷಿತರಾದ ಬಳಿಕ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾಲಯುಗಳಿಗೆ ಹೊರಡುವುದು ಆ ಶ್ರೀಮಂತ ವರ್ಗದವರ ವಾಡಿಕೆ. ಇಂಗ್ಲಿಷ್ ಜಾತಿಯುವರೆಲ್ಲರಿಗೂ ಈ ಶಿಕ್ಷಣಾಲಯುಗಳ ವಿಚಾರದಲ್ಲಿ ಅಸಾಧಾರಣವಾದ ಹೆಮ್ಮೆಯುಂಟು. ಪ್ರಖ್ಯಾತಿ ಪಡೆದ ಇಂಗ್ಲಿಷ್ ಜಾತಿಯ ಕವಿಗಳು, ದೇಶಭಕ್ತರು, ರಾಷ್ಟ್ರಸೇವಾ ಧುರೀಣರು ಮುಂತಾದವರು ಆ ಶಾಲೆಗಳಲ್ಲಿ ತರ್ಬಿಯತ್ತಾದವರೇ. ಅಲ್ಲಿಯೇ ಮಗನನ್ನು ಸೇರಿಸಬೇಕೆಂದು ಹೊರಟಿದ್ದ ಮೋತಿಲಾಲರಿಗೆ ಹ್ಯಾರೋ (Harrow) ಶಾಲೆಯಲ್ಲಿ ಅವಕಾಶ ದೊರಕಿತು. ವೆಲ್ಲೆಸ್ಲಿ, ಹೇಸ್ಟಿಂಗ್ಸ್, ಡಾಲ್ಹೌಸೀ ಮುಂತಾದ ಗವರ್ನರ್ ಜನರಲ್ಲುಗಳೂ, ಪಾಮರ್ಸ್ಟನ್, ಪೀಲ್, ಬಾಲ್ಡ್ವಿನ್, ವಿನ್ಸ್‌ಟನ್‌ಚರ್ಚಿಲ್ ಮುಂತಾದ ಮಂತ್ರಿಶ್ರೇಷ್ಠರೂ ಷೆರಿಡನ್, ಬೈರನ್ ಮುಂತಾದ ಸಾಹಿತಿಗಳೂ ಹ್ಯಾರೋ ಶಾಲೆಯಲ್ಲಿದ್ದವರು. ಜವಾಹರಲಾಲರಿಗೆ ಆ ಶಾಲೆಯಲ್ಲಿಯೇ ಪ್ರವೇಶವಾಯಿತು.

ಆ ಶಾಲೆಯಲ್ಲಿ ಎರಡು ವರ್ಷಗಳ ಶಿಕ್ಷಣವಾಯಿತು. ಲ್ಯಾಟಿನ್ ಭಾಷೆಯೊಂದರಲ್ಲಿ ಮಾತ್ರ ಜವಾಹರಲಾಲ ಇತರರಿಗಿಂತ ಹಿಂದು; ಉಳಿದ ವಿಷಯುಗಳಲ್ಲಿ ಎಲ್ಲರಿಗಿಂತ ಮುಂದು. ಶಾಲೆಯಲ್ಲಿಯೇ ವಾಸ; ಆ ಶಾಲೆಯ ಶಿಷ್ಟಿಯ ಆಚರಣೆ. ಎಲ್ಲ ಆಟಪಾಟಗಳಲ್ಲಿಯೂ ಯೋಗ್ಯ ರೀತಿಯಲ್ಲಿ ಭಾಗ ವಹಿಸುತ್ತ ಇಂಗ್ಲಿಷ್ ಜಾತಿಯ ಸಹಪಾಠಿಗಳಲ್ಲಿ ಸಂಕೋಚವಿಲ್ಲದೆ ಬೆರೆಯುತ್ತಿದ್ದಾಗ್ಗೂ ಎಲ್ಲಿಯೋ ಅಂತರಂಗದ ಒಳಗಡೆ ಯಲ್ಲಿ ತಾನು ಅಲ್ಲಿಗೆ ದೂರದವನೆಂಬ ಭಾವನೆ ಮಿಡಿಯುತ್ತಿದ್ದಿತಂತೆ. ಕಳೆದ ಎರಡು ವರ್ಷಗಳಲ್ಲಿ ಬಂಗಾಳ ಪಂಜಾಬು ಮಹಾರಾಷ್ಟ್ರಗಳಲ್ಲಿ

ಆಂದೋಳನಗಳು ಸಂಭವಿಸುತ್ತಲಿದ್ದವು. ಅವುಗಳ ಸುದ್ದಿ ಸಿಕ್ಕಿದಷ್ಟನ್ನು ಜವಾಹರಲಾಲರು ಕಾತರತೆಯಿಂದ ಓದಿಕೊಂಡು ಸರದಾರ್ ಅಜಿತ ಸಿಂಗ್ ಮತ್ತು ಲಾಲಾಜಿಯವರ ಗಡೀಪಾರು, ತಿಲಕರ ಬಂಧನ, ಸ್ವದೇಶೀ ಚಳುವಳಿ, ಬಾಯ್ಕಾಟ್ ಪ್ರಚಾರ ಮುಂತಾಗಿ ವಂಗಭಂಗ ಸಂಬಂಧವಾಗಿ ನಡೆದ ಘಟನಾವಳಿಗಳನ್ನು ಮನಸ್ಸಿನಲ್ಲಿಯೆ ಚಿತ್ರಿಸಿ ಕೊಳ್ಳುತ್ತಿದ್ದರು. ಮನಸ್ಸು ಉತ್ತೇಜನಗೊಳ್ಳುತ್ತಿದ್ದಿತು. ಆದರೆ ಈ ಘಟನಾವಳಿಗಳನ್ನು ಕುರಿತು ಮತ್ತೊಬ್ಬರೊಡನೆ ಮಾತನಾಡಿ ಮನಸ್ಸಿನ ಉದ್ವೇಗವನ್ನು ಕಳೆದುಕೊಳ್ಳಲು ಅವಕಾಶವಿರಲಿಲ್ಲ. ಅದೇ ವೇಳೆಗೆ ಇಟಲಿಯ ದೇಶಭಕ್ತ ಸರದಾರ ಗಾರಿಬಾಲ್ಡಿಯ ವೃತ್ತಾಂತ ವನ್ನು ಓದುತ್ತ ಭಾರತದ ಸ್ವಾತಂತ್ರ್ಯಕ್ಕಾಗಿ ಸಮರಸಂಭವಿಸುವು ದೆಂತೋ ಧೀರೋದಾತ್ತರಾಗಿ ತಾವೂ ದೇಶಭಕ್ತರೊಡನೆ ಹೋರಾಡು ವುದೆಂತೋ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುತ್ತಿದ್ದರು.

ತರುವಾಯ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ಜವಾಹರ ಲಾಲರು 1907ರಲ್ಲಿ ಸೇರಿಕೊಂಡು ಸಿ.ಬಿ.ಜಿ. (ರಸಾಯನಶಾಸ್ತ್ರ, ವನ ಸ್ಪತಿಶಾಸ್ತ್ರ, ಭೂಗರ್ಭಶಾಸ್ತ್ರ) ಶಾಸ್ತ್ರಗಳನ್ನು ವ್ಯಾಸಂಗಕ್ಕಿಟ್ಟುಕೊಂಡು ಟ್ರಿನಿಟಿ ಕಾಲೇಜ್ ಸೇರಿದರು. ಹದಿನೆಂಟನೆ ವರ್ಷ ವಯಸ್ಕನಾಗಿ ದೊಡ್ಡವನಾದೆನೆಂಬ ಹೆಮ್ಮೆ. ಅಲ್ಲಿಯ ಸಹಪಾಠಿಗಳೊಂದಿಗೆ ಸೇರಿ ಆ ಕಾಲದಲ್ಲಿ ಹೊಸದೆನಿಸಿದ್ದ ತತ್ತ್ವಗಳನ್ನೂ ಆಚರಣೆಯ ವಿಮರ್ಶೆ ಗಳನ್ನೂ ಕುರಿತು ಹರಟುತ್ತಲಿದ್ದಾಗ ಸುಶಿಕ್ಷಿತ ವರ್ಗದವರ ಹಾವಭಾವ ಗಳನ್ನು ಅನುಕರಿಸುವ ಚೇಷ್ಟೆಗಳು ಅಂಟಿಕೊಂಡವು. ನಿರ್ಲಕ್ಷ್ಯವಾಗಿ ವೆಚ್ಚಮಾಡುವುದೇ ಮುಂತಾದ ಘನತಾಕಲ್ಪನೆಯ ಕೃತ್ರಿಮ ಲಕ್ಷಣ ಗಳೂ ತಕ್ಕಮಟ್ಟಿಗೆ ತೋರಿದವು. ಆದರೆ ಮೂಲತಃ ಜವಾಹರರ ಸ್ವಭಾವದಲ್ಲಿ ವಂಚನೆಯೆಂಬುದಕ್ಕವಕಾಶವಿಲ್ಲ. ಈ ಘನತೆಯ ವೇಷದ ಲಕ್ಷಣಗಳೆಲ್ಲ ಟೊಳ್ಳೆಂದು ಅಂತರಂಗದಲ್ಲಿ ಸ್ಪಷ್ಟವಾಗಿತ್ತು. ಸ್ವಭಾವ ವಾಗಿ ಒಂದು ಬಗೆಯ ಭೀರುತನವಿತ್ತು; ಹೇಡಿತನವಲ್ಲ, ಭೀರುತನ. ಎಲ್ಲರಿಗಿಂತ ಮುಂದಾಗಿ ನುಗ್ಗಿ ಗಟ್ಟಿಯಾಗಿ ಕೂಗುವ ಗಯ್ಯಾಳಿತನವಿರ ಲಿಲ್ಲ. ಮೌನವಾಗಿರುವುದೇ ಹೆಚ್ಚು. ಆದ್ದರಿಂದ ಕೇಂಬ್ರಿಡ್ಜ್‌ಕ್ಷೇತ್ರ

ದಲ್ಲಿ ಭಾರತೀಯರು ಕಟ್ಟಿಕೊಂಡಿದ್ದ ಮಜ್ಲಿಸ್ ಎಂಬ ಸಭೆಯಲ್ಲಿ ಸೇರಿದ್ದರೂ ಒಂದು ದಿನವಾದರೂ ಸಭೆಯಲ್ಲೆದ್ದು ನಿಂತು ಭಾಷಣಮಾಡಲಿಲ್ಲ. ಏನೋ ಒಂದು ಬಗೆಯ ನಾಚಿಕೆಯಡ್ಡಿಯಾಗುತ್ತಿತ್ತು. ಇತರ ಸದಸ್ಯರೋ! ಬಾಯಿತುಂಬ ಭಾಷಣಮಾಡಿ ಬಂಗಾಳದ ಕ್ರಾಂತಿಕಾರ ಕೃತ್ಯಗಳನ್ನು ಶ್ಲಾಘಿಸಿದವರೇ ತರುವಾಯ ಇಂಡಿಯನ್ ಸಿವಿಲ್ ಸರ್ವಿಸ್ ಹುದ್ದೆದಾರರಾದರು.

ಇವರು ಕೇಂಬ್ರಿಡ್ಜಿನಲ್ಲಿದ್ದಾಗ ಬಿಪಿನಚಂದ್ರಪಾಲ, ಲಾಲಾಜಿ ಮತ್ತು ಗೋಖಲೆಯವರುಗಳು ಅಲ್ಲಿಯ ಭಾರತೀಯ ಯುವಕರನ್ನು ಕಾಣಲು ಬಂದಿದ್ದರಂತೆ. ಹತ್ತು ಹನ್ನೆರಡು ಮಂದಿ ಮಾತ್ರ ಒಂದು ಕೊಟಡಿಯಲ್ಲಿ ಸೇರಿದ್ದಾಗ್ಗೂ ಬಿಪಿನಚಂದ್ರರು ಯಥಾಪ್ರಕಾರ ಸಾವಿರಾರು ಜನ ಸೇರಿದ ಸಭೆಯಲ್ಲಿ ಗರ್ಜಿಸುವಂತೆ ಗರ್ಜಿಸಿದರಂತೆ. ಲಾಲಾಜಿಯವರಾದರೆ ಸಮಾಧಾನ ರೀತಿಯಲ್ಲಿ ಮಾತನಾಡಿ ಜವಾಹರಲಾಲರ ಮನವನ್ನು ಮೆಚ್ಚಿಸಿದರಂತೆ, ಗೋಖಲೆಯವರು ಸಾರ್ವಜನಿಕ ಸಭೆಯಲ್ಲಿ ಭಾಷಣಕೊಟ್ಟರಂತೆ. ಆ ಕಾಲದಲ್ಲಿ ಜವಾಹರಲಾಲರ ಜೊತೆಗಾರರಲ್ಲಿ ಭಾರತೀಯರಾಗಿದ್ದು ಮುಂದಿನ ಜೀವನದಲ್ಲಿಯೂ ಜೊತೆಯನ್ನು ಸಾಧಿಸಿದವರು ಡಾ|| ಕಿಚ್ಲು, ಸಯ್ಯದ್ ಮಹಮ್ಮದ್, ತಸದ್ದುಕ್ ಅಹ್ಮದ್‌ಶೇರ್ವಾನಿಯೆಂಬ ಮುಸಲ್ಮಾನ ಯುವಕರು ಮೂವರೂ ದೇಶಭಕ್ತರ ಗುಂಪಿನಲ್ಲಿ ಅಗ್ರಗಾಮಿಗಳು.

ಕೇಂಬ್ರಿಡ್ಜಿನಲ್ಲಿದ್ದಾಗಲೇ ಮುಂದೇನು ಮಾಡಬೇಕೆಂಬ ಪ್ರಶ್ನೆ ಇತ್ಯರ್ಥವಾಯಿತು. ಸ್ವಲ್ಪಕಾಲಮಾತ್ರ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ಕುಳಿತುಕೊಳ್ಳುವ ಯೋಚನೆ ; ಆದರೆ ತಂದೆ ಮಕ್ಕಳಿಬ್ಬರಿಗೂ ಅದರಲ್ಲಿ ಹೆಚ್ಚು ಅಭಿಲಾಷೆಯಿರಲಿಲ್ಲ. ಅದನ್ನಾರಿಸಿಕೊಂಡು ಇನ್ನೂ ಮೂರುವರ್ಷ ಇಂಗ್ಲಂಡಿನಲ್ಲಿರಬೇಕೆನ್ನುವುದು ತಾಯಿತಂದೆಗಳಿಗೆ ಅನಿಷ್ಟವಾಗಿತ್ತು. ಆದ್ದರಿಂದ ಕೇಂಬ್ರಿಡ್ಜ್ ವಿದ್ಯಾಲಯದಲ್ಲಿ ಎಂ. ಎ. ಪ್ಯಾಸಾದ ಬಳಿಕ ವಕೀಲೀ ಪರೀಕ್ಷೆಯೆಂದು ಗೊತ್ತಾಗಿ ಜವಾಹರಲಾಲರು ಲಂಡನ್ನಿನಲ್ಲಿ ಇನ್ನರ್‌ಟೆಂಪಲ್ಲನ್ನು ಸೇರಿಕೊಂಡರು. ಅಲ್ಲಿಯ ಪರೀಕ್ಷೆಗಳನ್ನೂ ಪ್ಯಾಸುಮಾಡಿಕೊಂಡರು. ಆದರೆ ಲಂಡನ್ನಿನಲ್ಲಿ

ವಾಸ. ಇತರ ಶ್ರೀಮಂತ ಪುತ್ರರು ಆ ನಗರದಲ್ಲಿ ಹಣ ಚೆಲ್ಲುತ್ತ ಮೆರೆದಂತೆ ತಾವೂ ಇರುವುದು ಸಹಜವೆನ್ನಿಸಿತು. ತಂದೆಯವರು ಧಾರಾಳವಾಗಿ ಕಳುಹಿಸುತ್ತಿದ್ದ ಹಣಕ್ಕಿಂತ ಹೆಚ್ಚು ವೆಚ್ಚವನ್ನೂ ನಿರ್ಯೋಚನೆಯಾಗಿ ಒಂದು ವೇಳೆ ಮಾಡಿಬಿಟ್ಟಿದ್ದರಂತೆ. ಸಾಮಾನ್ಯರಿಗೆ ದುಂದುಗಾರಿಕೆಯೆಂದು ತೋರತಕ್ಕುದು ಈತನಿಗೆ ಆಗ ತೋರಲಿಲ್ಲ, ಈಗಲೂ ಪ್ರಾಯಶಃ ತೋರುವುದಿಲ್ಲ. "ಹಣವಿರುವುದು ವೆಚ್ಚಮಾಡುವುದಕ್ಕೆ" ಎಂದು ಹೇಳಿಕೊಳ್ಳುವ ಜನರಂತೆಯೆ. ಸ್ವಂತವಾಗಿ ಬರೆಯುತ್ತ "ತಂದೆಯವರಂತೆ ನಾನೂ ಜೂಜಾಡುವಂತಹ ಸ್ವಭಾವದವನು" ಎಂದು ಮುಚ್ಚುಮರೆಯಿಲ್ಲದೆ ಹೇಳಿಕೊಳ್ಳುತ್ತಾರೆ.

ಲಂಡನ್ನಿನಲ್ಲಿದ್ದ ವೇಳೆಯಲ್ಲಿ ವಿನೋದಕ್ಕಾಗಿ ಅಲ್ಲಲ್ಲಿಗೆ ಪ್ರಯಾಣಗಳನ್ನು ಇಟ್ಟುಕೊಳ್ಳುತ್ತ 1910ರಲ್ಲಿ ನಾರ್ವೆದೇಶಕ್ಕೆ ಇಂಗ್ಲಿಷ್ ಜಾತಿಯ ಮಿತ್ರನೊಬ್ಬನೊಂದಿಗೆ ಹೊರಟರು. ಅಲ್ಲಿಯ ಹಿಮಪರ್ವತಗಳನ್ನೂ ಕಣಿವೆಗಳನ್ನೂ ಕೊರಕಲುಗಳನ್ನೂ ನೋಡುತ್ತ ನಡೆದು ಆಯಾಸಗೊಂಡು ಇಬ್ಬರೂ ಕಡೆಗೆ ಒಂದು ಹೊಟೇಲಿಗೆ ಬಂದು ಸ್ನಾನ ಬೇಕೆಂದರು. ಅಲ್ಲಿಯವರಿಗೆ ಸ್ನಾನವೆಂಬುದು ಸ್ವಪ್ನದಲ್ಲಿಯೂ ಇಲ್ಲ. ಆದ್ದರಿಂದ ಇಬ್ಬರು ಗೆಳೆಯರೂ ಅಲ್ಲಿಯೇ ಪಕ್ಕದಲ್ಲಿ ಹರಿಯುತ್ತಿದ್ದ ಹಿಮನದಿಯಲ್ಲಿ ಮಿಂದು ಬರೋಣವೆಂದು ಹೊರಟರು. ಮೊದಲು ಜವಾಹರರೇ ನೀರಿನಲ್ಲಿಳಿದರು. ಆಳ ಹೆಚ್ಚಾಗಿಲ್ಲದಿದ್ದರೂ ನೀರು ಕೊರೆಯುತ್ತಿತ್ತು; ತಳವು ಬಲುಜಾರುವಂತಿತ್ತು. ಆಗ ಕಾಲುಜಾರಿತು, ನೀರಿನ ಕೊರೆತದಿಂದ ಕೈಕಾಲು ಸ್ತಬ್ಧವಾಗಿ ನೀರಿನ ಪ್ರವಾಹಕ್ಕೆ ಸಿಕ್ಕಿ ನಿಶ್ಚೇತನ ವಸ್ತುವಂತೆ ತೇಲಿಕೊಂಡು ಹೋಗುವ ಗತಿ ಪ್ರಾಪ್ತವಾಯಿತು. ಆಗಲಾ ಇಂಗ್ಲಿಷ್ ಗೆಳೆಯ ಬದಿಯಲ್ಲಿಯೇ ಓಡಿ ಸಮಯಕಂಡು ಜವಾಹರರ ಕಾಲೊಂದನ್ನು ಹಿಡಿದು ಗಡ್ಡೆಗೆಳೆದು ಹಾಕಿದನು. ಇನ್ನು ಇನ್ನೂರು ಮುನ್ನೂರು ಗಜಗಳಷ್ಟು ಮಾತ್ರ ತೇಲಿದ್ದರೆ ಅಲ್ಲಿ ಭಯಂಕರವಾದ ಜಲಪಾತ! ಈ ರೀತಿಯಲ್ಲಿ ಇಂಗ್ಲಿಷ್ ಗೆಳೆಯನೊಬ್ಬನಿಂದ ಜವಾಹರಲಾಲರ ಪ್ರಾಣವುಳಿಯಿತು.

ಜವಾಹರರು ಇಂಗ್ಲಂಡಿನಲ್ಲಿದ್ದಾಗ ಮೋತಿಲಾಲರು ಸಮೃದ್ಧವಾದ ಜೀವನವನ್ನು ಠೀವಿಯಿಂದ ನಡೆಸುತ್ತ ಗವರ್ನರ್ ದರ್ಜೆಯುವರನ್ನು ಸರಿಸಮಾನರೆಂದು ಕಾಣುತ್ತ ದರ್ಪಿಷ್ಠರಾಗಿ ಬಾಳುತ್ತಿದ್ದವರು. ಅವರ ದೇಶಭಕ್ತಿ ದೃಢವಾಗಿದ್ದಾಗ್ಗೂ ಕ್ರಾಂತಿಕಾರರನ್ನು ಕಂಡರೆ ತಿರಸ್ಕಾರ, ತೀವ್ರಗಾಮಿಗಳನ್ನು ಕಂಡರೆ ಅಲಕ್ಷ್ಯ. ಮಂದಪಕ್ಷದವರ ದೀರ್ಘಾಲೋಚನೆಗಳ ವಾದಸರಣಿಯನೊಪ್ಪಿ ಆ ಗುಂಪಿನಲ್ಲಿಯೇ ಎಣಿಕೆಯಾಗಿದ್ದವರು. ಯು. ಪಿ. ಪ್ರಾಂತದ ಕಾಂಗ್ರೆಸ್ ಕಮಿಟಿಗೆ ಅಧ್ಯಕ್ಷರೂ ಆಗಿದ್ದರು. ಸೂರತ್ತಿನಲ್ಲಿ ಎರಡು ಪಕ್ಷಗಳವರಿಗೂ ಹೊಡೆದಾಟವಾದಾಗ ಅಲ್ಲಿಯೇ ಇದ್ದರು. ಮಾಡರೇಟ್ ಪಕ್ಷದಲ್ಲಿ ಸೇರಿಕೊಳ್ಳತಕ್ಕ ಸ್ವಭಾವವಲ್ಲದಿದ್ದಾಗ್ಗೂ ಆ ಪಕ್ಷದಲ್ಲಿಯೆ ಸೇರಿ ಸಮಯ ಬಂದಂತೆ ಪ್ರತಿಪಕ್ಷದವರನ್ನು ನಿರ್ದಾಕ್ಷಿಣ್ಯದಿಂದ ಖಂಡಿಸುತ್ತಿದ್ದರು. ಬಂಗಾಳ ಮತ್ತು ಮಹಾರಾಷ್ಟ್ರಗಳ ಯುವಕರು ಕೆಲವರು ಮಂದ ಪಕ್ಷದವರಿಗೆ ಅವಿಧೇಯರಾಗಿ ತಮ್ಮದೇ ಪ್ರತ್ಯೇಕವಾದ ಮಾರ್ಗವನ್ನು ಸಿದ್ಧಮಾಡಿಕೊಂಡಾಗ ಅವರನ್ನು ಧ್ವಂಸಗೊಳಿಸಿ ಮೋತಿಲಾಲರು ಲೇಖನವೊಂದನ್ನು ಬರೆದಿದ್ದರು. ಅದನ್ನು ಲಂಡನ್ನಿನಲ್ಲಿದ್ದ ಜವಾಹರಲಾಲರು ನೋಡಿ ಬಹಳ ಅಸಮಾಧಾನಪಟ್ಟು ತಂದೆಯವರಿಗೆ ಕಾಗದ ಬರೆಯುತ್ತ "ನಿಮ್ಮ ರಾಜಕೀಯ ಕಾರ್ಯಕಲಾಪಗಳನ್ನು ಕಂಡು ಬ್ರಿಟಿಷ್ ಸರ್ಕಾರದವರಿಗೆ ತುಂಬಾ ಸಂತೋಷವಾಗಿರಬೇಕು" ಎಂದು ವ್ಯಂಗ್ಯವಾಗಿ ಟೀಕಿಸಿದರು. ಮೋತಿಲಾಲರಿಗೆ ಬಲು ಕೋಪಬಂದಿತು. ತಕ್ಷಣವೇ ಮಗನನ್ನು ಹಿಂತಿರುಗಿ ಕರೆಸಿಕೊಳ್ಳಬೇಕೆಂದು ಯೋಚನೆಯನ್ನು ಕೂಡ ನಡೆಸಿದ್ದರಂತೆ.

ಇದೇ ತಂದೆ ಮಕ್ಕಳಿಗೆ ತೋರಿಕೊಂಡ ವ್ಯತ್ಯಾಸಕ್ಕೆ ಮೊದಲನೆ ಸೂಚನೆ. ದೇಶಭಕ್ತರೆಲ್ಲರೂ ತರುಣ ಜವಾಹರಲಾಲರ ದೃಷ್ಟಿಯಲ್ಲಿ ವೀರರು, ಶ್ಲಾಘ್ಯರು. ಮೋತಿಲಾಲರಿಗಾದರೆ ಬೇರೆ ದೃಷ್ಟಿ. ಪರ್ಯಾಲೋಚನೆ ಮಾಡದೆ ದುಡುಕಿ ಮುಂದೆ ಧುಮ್ಮುಕುವವರು ಶುದ್ಧ ಅವಿವೇಕಿಗಳೆಂದು ಆತನ ಅಭಿಪ್ರಾಯ. ಬಹಾದೂರ್ ಪ್ರಕೃತಿಯುಳ್ಳಾತನಾದುದರಿಂದ ಅಂತಹ ಅವಿವೇಕಿಗಳನ್ನು ಗಾಳಿಗೆ ತೂರಿಬಿಡುವ ಚರ್ಯೆ.

ಇಂಗ್ಲಂಡಿನಿಂದ ಜವಾಹರಲಾಲರು ಹಿಂತಿರುಗಿ ಬಂದ ಬಳಿಕ ತಂದೆ ಮಕ್ಕಳ ಪ್ರಭಾವ ಅನ್ಯೋನ್ಯವಾಗಿ ಪ್ರಕಾಶವಾಗಬೇಕಾಯಿತು.

1904ರಿಂದ 1912ರ ವರೆಗೆ—ಸರಿಸುಮಾರು 8 ವರ್ಷಕಾಲ ಇಂಗ್ಲಂಡಿನಲ್ಲಿ ಕಳೆದಿತ್ತು. ಮಧ್ಯೆ ಎರಡುಬಾರಿ ಸ್ವದೇಶಕ್ಕೆ ಪ್ರಯಾಣ ವಲ್ಲದೆ ಯೂರೋಪಿನ ನಾನಾ ಸ್ಥಳಗಳಿಗೆ ರಜಾಕಾಲದ ಸರ್ಕೀಟುಗಳು ನಡೆದಿದ್ದವು. 1912ರಲ್ಲಿ ಬ್ಯಾರಿಸ್ಟರ್ ಪದವಿಕಟ್ಟಿಕೊಂಡು ಜವಾ ಹರರು ಹಿಂತಿರುಗಿದರು. "ತಮ್ಮ ಸ್ವಂತ ಚರ್ಯೆಯೇ ಅತ್ಯುತ್ತಮ ವೆಂದುಕೊಂಡು ತಮ್ಮಷ್ಟಕ್ಕೆ ತಾವೇ ಸೂಕ್ಷ್ಮ ಬಿಂಕದಿಂದಿರುವ ಯುವಕ ಬಿನ್ನಾಣಿಗರಲ್ಲಿ ನಾನೂ ಒಬ್ಬನಂತಿದ್ದೆ."

## 4. ಬ್ಯಾರಿಸ್ಟರ್ ಜವಾಹರಲಾಲ್

ಇಂಗ್ಲಂಡಿನಲ್ಲಿ ಶಿಕ್ಷಣ ಪಡೆದು ಹಿಂತಿರುಗಿದ ಜವಾಹರಲಾಲ್ ಹದಿನೈದಾಣೆ ಭಾಗದಷ್ಟು ಇಂಗ್ಲಿಷ್ ಜಾತಿಯವರಂತೆಯೇ ಹೊರಗಡೆಗೆ ಕಾಣುತ್ತಿದ್ದರೂ ಅಂತರಂಗದಲ್ಲಿ ಸೂಕ್ಷ್ಮತೆಯೂ ಕೋಮಲತೆಯೂ ತುಂಬಿದ್ದವು. 1912 ರಲ್ಲಿ ಭಾರತ ಭೂಮಿಗೆ ಹಿಂತಿರುಗಿ ಬಂದಾಗ ದೇಶದ ರಾಜಕೀಯ ಜಗತ್ತಿನಲ್ಲಿ ಸ್ವಾರಸ್ಯವಿರಲಿಲ್ಲ. ಸೂರತ್ ಕಾಂಗ್ರೆಸ್ ತರುವಾಯ ಮಂದಪಕ್ಷದವರೇ ಕಾಂಗ್ರೆಸ್ಸನ್ನು ನಡೆಸುತ್ತಿದ್ದರಷ್ಟೆ. ಮಿಂಟೊ-ಮಾರ್ಲೆ ಸುಧಾರಣೆಗಳನ್ನೊಪ್ಪಿಕೊಂಡು ಆ ಪಕ್ಷದ ನಾಯ ಕರು ಸಮಾಧಾನಚಿತ್ತರಾಗಿದ್ದರು. ಉಗ್ರಪಕ್ಷದವರು ದೇಶಾಂತರಗಳ ಲ್ಲಿಯೋ ಬಂದೀಖಾನೆಗಳಲ್ಲಿಯೋ ಅಡಗಿದ್ದರು.

ಬ್ಯಾರಿಸ್ಟರಾಗಿ ಬಂದಿದ್ದ ಜವಾಹರ್ ಇಲಾಹಾಬಾದಿನಲ್ಲಿಯೇ ವಕೀಲಿವೃತ್ತಿಯನ್ನಾರಂಭಿಸಿದರು. ಕೋರ್ಟುಗಳಲ್ಲಿಯೂ ಕ್ಲಬ್ಬು ಗಳಲ್ಲಿಯೂ ಕಾಲ ಕಳೆಯುವುದು; ಆಗಾಗ್ಗೆ ರಜಬಂದಾಗ ಷಿಕಾರಿಗೆ ಹೊರಡುವುದು. "ಕೋರ್ಟುಗಳಲ್ಲಿ ಜೊತೆಗಾರರಾಗಿದ್ದವರೇ ಕ್ಲಬ್ಬಿ ನಲ್ಲಿಯೂ ಜೊತೆಗಾರರು; ಮಾತುಕಥೆಗಳೆಲ್ಲ ಏಕರೀತಿ; ಬೇಜಾರಾಗು ವಂತಿತ್ತು." ಸರ್ಕಾರಿ ಹುದ್ದೆಗಾರರ ಗುಂಪಿನಲ್ಲಾದರೆ ಭಾಷಣ ಪ್ರತಿಭಾಷಣಗಳೆಲ್ಲ ಪ್ರಮೋಷನ್, ರಜಾನಿಯಮಗಳು, ವರ್ಗಾವರ್ಗಿ,

ತಪ್ಪಿದರೆ ಚಾಡಿ ಸುದ್ದಿಗಳೆಷ್ಟೋ ಅಷ್ಟೆ. ಸುಶಿಕ್ಷಣ ಪಡೆದು ಸರ್ಕಾರಿ ನೌಕರರಾಗಿಯೋ ವೈದ್ಯರು ವಕೀಲರುಗಳಾಗಿಯೋ ನೆಮ್ಮದಿ ಕಂಡ ವರಿಗೆ ಇಷ್ಟುಮಾತ್ರವೇ ಮೇಲ್ಪಜ್ಞೆ. ಜನಸಾಮಾನ್ಯರಿಗೂ ಈ ನೆಮ್ಮದಿವಂತರಿಗೂ ಅಜಗಜನ್ಯಾಯ; ಇಬ್ಬರ ಮಧ್ಯೆ ದೊಡ್ಡ ಅಂತರ. ಇಂತಹ ಪರಿಸ್ಥಿತಿಯಲ್ಲಿ ಜವಾಹರಲಾಲರನ್ನು ಆಕರ್ಷಿಸಿದ ನಾಯಕನಾಗಲಿ ಕಾರ್ಯಕ್ರಮವಾಗಲಿ ಕಾಣದಾಯಿತು. ಪರಮೋ ತ್ಸಾಹವನ್ನೂ ಅತಿಕೋಮಲತೆಯನ್ನೂ ಮನಸ್ಸಿನಲ್ಲಿ ತಾಳಿದ್ದಾತನಿಗೆ ಸಮಾಧಾನವಾಗಲಿಲ್ಲ.

1912ರಲ್ಲಿ ಬಂಕೀಪುರದಲ್ಲಿ ಕಾಂಗ್ರೆಸ್ ಸಭೆ ನಡೆಯಿತು. ಅಲ್ಲಿಗೆ ಹೊರಟಿದ್ದ ಜವಾಹರರಿಗೆ ಅದೊಂದು ವಿನೋದಕೂಟವಾಗಿ ಕಂಡಿತು. ಹೊಸ ಬಟ್ಟೆಗಳನ್ನು ಧರಿಸಿ ಇಂಗ್ಲಿಷ್ ರೀತಿಯಲ್ಲಿ ವರ್ತಿಸುತ್ತ ನೆಮ್ಮದಿ ವಂತರು ಕೆಲವರು ಎರಡು ಮೂರು ದಿನ ಉತ್ಸವ ವಿಹಾರ ನಡೆಸಿದಂತೆ ತೋರಿತು. ರಾಜಕೀಯ ಪ್ರಯತ್ನವೆಂಬುದೊಂದು ಉಗ್ರಸಾಧನೆ ಯೆಂದು ನಂಬಿದ್ದ ಜವಾಹರರಿಗೆ ಇದೆಲ್ಲ ಸಪ್ಪೆಸಪ್ಪೆಯೆನಿಸಿತು. ದೇಶದ ನಾಯಕರಲ್ಲಿ ಅನೇಕರನ್ನು ಅಲ್ಲಲ್ಲಿ ಕಂಡರು. ಗೋಖಲೆಯವರ ಸುವಿ ಚಾರಪೂರಿತ ಭಾಷಣಗಳನ್ನು ಕೇಳಿ ಮೆಚ್ಚಿದರು; ದೇಶೋದ್ಧಾರವನ್ನು ಆಜೀವವ್ರತವೆಂಬ ಭಾವನೆಯಿಂದ ಆತನು ಸ್ಥಾಪಿಸಿದ್ದ ಸರ್ವೆಂಟ್ಸ್ ಆಫ್ ಇಂಡಿಯ ಸಂಘವನ್ನು ಸೇರೋಣವೇ ಎನ್ನಿಸಿತು. ಆದರೆ ಬ್ಯಾರಿ ಸ್ಟರಿ ಬಿಟ್ಟುಕೊಡುವ ಉದ್ದೇಶವಿರಲೂ ಇಲ್ಲ; ಆ ಸಂಘದ ಕಾರ್ಯ ಕಲಾಪಗಳು ಜವಾಹರರಂತಹವರನ್ನು ಉದ್ರೇಕಿಸುವಂತೆ ಇರಲೂ ಇಲ್ಲ. ಪರಕೀಯರಿಂದ ಆಕ್ರಾಂತವಾದ ದೇಶವನ್ನುದ್ಧರಿಸಲು ಪರತಂತ್ರವನ್ನು ನಿರ್ಮೂಲಗೊಳಿಸುವುದೇ ಪ್ರಥಮಕರ್ತವ್ಯವೆಂದಿದ್ದ ಯುವಕನಿಗೆ ಮಂದ ಪಕ್ಷದವರ ನಿದಾನ ವಿಲಂಬಗಳು ಹೇಗೆ ಒಪ್ಪಬೇಕು? ಪಂಡಿತ ಮಾಲ ವೀಯರನ್ನು ಕಂಡರು; ಗೌರವಿಸಿದರು. ಸರ್ ರಾಸವಿಹಾರಿ ಘೋಷ ರನ್ನು ಕಂಡರು; ಆತನ ಕ್ಷಣಿಕ ಕೋಪವನ್ನು ಕಂಡು ವಿನೋದ ಗೊಂಡರು. ಶ್ರೀನಿವಾಸ ಶಾಸ್ತ್ರಿಗಳು ಇಲಾಹಾಬಾದಿನಲ್ಲಿ ವಿದ್ಯಾರ್ಥಿ ಗಳಿಗೆ ಕೊಟ್ಟ ಒಂದಾನೊಂದು ಉಪದೇಶವನ್ನು ಕೇಳಿ ಮನದಲ್ಲಿ

ನೊಂದರು ; ತರುವಾಯ ಶಾಸ್ತ್ರಿಗಳ ಉತ್ತೇಜಕ ಭಾಷಣಗಳನ್ನು ಮೆಚ್ಚಿದಾಗ್ಗೂ ಪರೀಕ್ಷಾಕಾಲದಲ್ಲಿ ಅವರು ಕಾರ್ಯಶೂನ್ಯರೆಂದುಕೊಂಡರು.

ಇಂಗ್ಲಂಡಿನಲ್ಲಿ ಶಿಕ್ಷಣವನ್ನು ಪಡೆದ ವೇಳೆಯಲ್ಲಿ ಆ ದೇಶದ ನಾಯಕರನ್ನೂ ಅವರ ಕರ್ತವ್ಯ ಕಲಾಪಗಳನ್ನೂ ಕಣ್ಣಾರೆ ಕಂಡಿದ್ದುದಲ್ಲದೆ ಪರಮ ಧೈರ್ಯೋತ್ಸಾಹಗಳನ್ನೂ ಸೂಕ್ಷ್ಮಬುದ್ಧಿ ತೇಜಸ್ಸುಗಳನ್ನೂ ಪಡೆದು ಐರೋಪ್ಯ ರಾಷ್ಟ್ರಗಳಲ್ಲಿ ಓಡಾಡಿ ಅವುಗಳ ಪರಿಸ್ಥಿತಿಯುನ್ನು ಚನ್ನಾಗಿ ತಿಳಿದಿದ್ದ ಜವಾಹರರಿಗೆ ಇವೆಲ್ಲ ಹೇಗೆ ಒಪ್ಪಬೇಕು! ದೇಶಭಕ್ತನ ಕರ್ತವ್ಯವನ್ನಿಟ್ಟುಕೊಂಡು ಸಾಧಿಸಲು ಬಲವತ್ತರವಾದ ಇಷ್ಟ. ಆದರೆ ಪರಿಸ್ಥಿತಿ ಸಪ್ಪೆಯಾಗಿತ್ತು. ಇಂಗ್ಲಿಷ್ ಜನರ ಮಧ್ಯೆ ಬೆಳೆದಿದ್ದಾತನಿಗೆ ಆ ಜಾತಿಯವರು ಎಲ್ಲರಂತೆಯೆ ಮನುಷ್ಯ ಮಾತ್ರರಾಗಿ ಕಂಡರು. ಇಂಗ್ಲಿಷ್ ಜಾತಿಯವರೆಂದರೆ ದೂರದಿಂದಲೇ ಮುಗ್ಧರಾಗುವ ಚಿತ್ತವೃತ್ತಿಯಿಲ್ಲ. ತನ್ನಲ್ಲಿಯೆ ದೊಡ್ಡತನವನ್ನು ಅಡಗಿಸಿಟ್ಟುಕೊಂಡಾತನು ಆ ಕಾಲದಲ್ಲಿ ನಾಯಕರೆನಿಸಿದ್ದ ಭಾರತೀಯರನ್ನು ಕಂಡಾಗ ತನ್ನ ಮನಸ್ಸಿನಲ್ಲಿಯೇ ತೂಕಮಾಡಿ ಅವರ ಕರ್ತವ್ಯಲೋಪಗಳನ್ನು ಕಂಡುಕೊಂಡುದೇನಾಶ್ಚರ್ಯ! ಇಲಾಹಾಬಾದಿನ ಬ್ಯಾರಿಸ್ಟರ್ ಆಗಿದ್ದಾತನಿಗೆ ಆ ಕಾಲದಲ್ಲಿ ಮನೆಯಲ್ಲಿ ಮಾತ್ರ ಮನಸ್ಸಿಗೆ ಸಮಾಧಾನವಾಗುತ್ತಿದ್ದಿತಂತೆ. ಹೊರಗಡೆಯ ಜೀವನದಲ್ಲಿ ಅತೃಪ್ತಿಯೇ ಹೆಚ್ಚು. ಹಿಮವತ್ಪರ್ವತದ ಶಿಖರವನ್ನೇರಲು ಆಸೆಪಟ್ಟವನಿಗೆ ಸಣ್ಣ ಬೋರೆಯೊಂದನ್ನು ತೋರಿಸಿ ಹತ್ತಿಸಿ ಕುಳಿತುಕೊಂಡುಸುಖಿಯಾಗೆಂದರೆ ಹೇಗೋ ಹಾಗೆ.

ಮೊದಲನೆ ಜರ್ಮನ್ ಯುದ್ಧ ನಡೆಯುತ್ತಿದ್ದ ಕಾಲ. ಎಲ್ಲೆಲ್ಲಿಯೂ ಯುದ್ಧ ಸಂಬಂಧ ಪ್ರಸ್ತಾಪಗಳೇ. ರಾಜಕೀಯ ಪ್ರಯತ್ನಗಳಿಗೆ ಗ್ರಹಣ ಹಿಡಿದಂತಾಗಿತ್ತು. ಡಿಫೆನ್ಸ್ ಆಫ್ ಇಂಡಿಯಾ ಕಾನೂನಿನ ಎದುರಿನಲ್ಲಿ ಎಲ್ಲರೂ ತಟಸ್ಥರಾಗಿಯೇ ಇರಬೇಕಾಗಿತ್ತು. ಗೋಪ್ಯವಾಗಿ ಕ್ರಾಂತಿ ಪ್ರಯತ್ನಗಳನ್ನಿಟ್ಟುಕೊಂಡ ಹಲ ಕೆಲವರು ಒಂದೆರಡು ಪಿತೂರಿಗಳನ್ನು ನಡೆಸಿ ಸುಲಭವಾಗಿ ಸಿಕ್ಕಿ ಕ್ರೂರ ಶಿಕ್ಷೆಗಳಿಗೊಳಗಾಗುತ್ತಿದ್ದರು. ಜವಾಹರರಿಗೆ ಅವು ನಿರಾಶಾಸ್ಥಿತಿಯ ಅವಿವೇಕವೆನ್ನಿಸಿತ್ತು. ಅಂತೂ ದೇಶಕ್ಕೆ ದೇಶವೇ ಸ್ತಬ್ಧಗೊಂಡಂತಿದ್ದ ಪರಿಸ್ಥಿತಿಯಲ್ಲಿ ಜವಾಹರಲಾಲರು

ಆಗಿಂದಾಗ್ಗೆ ಫ಼ಿಜೀದ್ವೀಪಸ್ಥ ಭಾರತೀಯರಿಗಾಗಿಯೋ ದಕ್ಷಿಣ ಆಫ್ರಿಕದ ಭಾರತೀಯರ ಸಂಬಂಧವಾಗಿಯೋ ಮಾಡಬೇಕಾದುದನ್ನು ಕಟ್ಟಿಕೊಂಡು ಸ್ಫೂರ್ತಿಯಿಂದ ತಾತ್ಕಾಲಿಕವಾದ ಕೆಲಸವನ್ನು ಮುಗಿಸುತ್ತಿದ್ದರು.

ಮೋತಿಲಾಲರೋ! ಅವರಿಗೂ ಮನಸ್ಸಿನಲ್ಲಿ ಅತೃಪ್ತಿ. ಆದರೆ ಯುವಕರ ಆತುರವನ್ನು ಕಂಡರೆ ಅಸಹನ. ಮಂದಪಕ್ಷದವರ ವಾದ ವಿವಾದಗಳು ಸುವಿಚಾರಪೂರಿತಗಳಾಗಿದ್ದರೂ ಗುರಿ ಮುಟ್ಟುವ ಕಾರ್ಯ ಸಾಧನೆಯಿಲ್ಲ; ಉತ್ಸಾಹದಾಯಕವಾಗಿಲ್ಲ. ಜವಾಹರಲಾಲರೊಡನೆಯೂ ಆತನ ಜೊತೆಗಾರರೊಡನೆಯೂ ಚರ್ಚೆಗಳಾದಾಗ ಮೋತಿಲಾಲರಿಗೆ ಆಗಾಗ್ಗೆ ಕೋಪ ಬಂದು ಗದರಿಸಿಕೊಂಡಂತೆ ಮಾತನಾಡಿ ಮಾತುಕಥೆಗಳನ್ನು ಮುಗಿಸುತ್ತಿದ್ದರಂತೆ. ವಾಸ್ತವವಾಗಿ ಆತನ ಮನಸ್ಸಿನಲ್ಲಿ ತಳಮುಳವಾಗಿತ್ತು; ಇತ್ಯರ್ಥಕ್ಕೆ ಬಾರದೆ ಆಲೋಚನೆಗಳಲ್ಲೊಂದನ್ನೊಂದು ಖಂಡಿಸುತ್ತ ಮಥನವಾಗುತ್ತಿತ್ತು. ಆನಿಬೆಸೆಂಟರ ಚಳುವಳಿ ಮೊದಲಾಗುವವರೆಗೆ ತಂದೆ ಮಕ್ಕಳಿಗೆ ರಾಜಕೀಯ ವಿಚಾರಗಳಲ್ಲಿ ಪರಸ್ಪರವಾದ ಭೇದವೇ ಅಂಕುರಿಸಿತ್ತು.

ಎಲ್ಲ ರೀತಿಯಲ್ಲಿಯೂ ಇಂಗ್ಲಿಷ್ ಜಾತಿಯವರಂತೆ ಕಾಣುತ್ತಿದ್ದ ಜವಾಹರಲಾಲರ ಅಂತರಂಗ ಭಾರತೀಯವೇ ಆಗಿದ್ದುದಕ್ಕೆ ಈ ಕಾಲದ ನಿದರ್ಶನವೊಂದು. ಷಿಕಾರಿಯೆಂದರೆ ಉತ್ಸಾಹದಿಂದಲೇ ಹೊರಡುತ್ತಿದ್ದ ಜವಾಹರಲಾಲರಿಗೆ ಮೃಗಗಳನ್ನು ಕೊಲ್ಲುವಾಗ ಮಾತ್ರ ಇಷ್ಟವಿಲ್ಲ. ಒಂದು ಸಲ ಮಾತ್ರ ಕಾಶ್ಮೀರದಲ್ಲಿ ಒಂದು ಕರಡಿಯನ್ನು ಮಾತ್ರ ಕೊಂದಿದ್ದರು. ತರುವಾಯ ಒಂದು ಜಿಂಕೆಯನ್ನು ಹೊಡೆದಾಗ ಗಾಯಗೊಂಡು ಸಾಯುತ್ತ ಆ ಬಡಪ್ರಾಣಿ ಪಾದದ ಬಳಿ ಬಿತ್ತು. "ಆ ನಿರಪರಾಧಿ ಪ್ರಾಣಿ ತನ್ನ ದೊಡ್ಡ ಕಣ್ಣು ತುಂಬ ಕಣ್ಣೀರು ಬಿಡುತ್ತ ತಲೆಯೆತ್ತಿ ನನ್ನನ್ನು ನೋಡಿತು. ಆ ಕಣ್ಣುಗಳ ನೋಟ ಇನ್ನೂ ನನ್ನ ಮೇಲೆಯೇ ಇದೆ; ಎಲ್ಲಿ ಹೋದರೂ ಎಷ್ಟು ಕಾಲವಾದರೂ ಆ ನೋಟ ನನ್ನ ಮೇಲೆ ನಟ್ಟೇ ಇದೆ" ಒಟ್ಟಿನಲ್ಲಿ ಹಿಂದು ಮತಸ್ಥರು ಜೀವರಾಶಿಯಲ್ಲಿ ಪರಮಾದರವುಳ್ಳವರು; ಇತರ ಮತಸ್ಥರಲ್ಲಿ ಆ ಲಕ್ಷಣ ಅಷ್ಟು ಸ್ಫುಟವಾಗಿ ಕಾಣುವು

ದಿಲ್ಲ. ಜವಾಹರಲಾಲರಲ್ಲಿ ಅಡಗಿರುವ ಹಿಂದುತ್ವ ಈ ಸಂಗತಿಯಲ್ಲಿ ಸ್ಪಷ್ಟ.

ಮೋತಿಲಾಲರು ಶಿಕಾರಿಗೆ ಹೊರಟಾಗ ನಡೆಯುತ್ತಿದ್ದ ರೀತಿಯನ್ನು ಅವರ ಬಾಯಿಂದಲೇ ಕೇಳಬಹುದು "ಎರಡು ಬಗೆಯ ಪಾಕ ಶಾಲೆಗಳು ನಮ್ಮ ಹಿಂದೆ ಸಿದ್ಧವಾಗಿರುತ್ತಿದ್ದವು. ಒಂದು ಇಂಗ್ಲಿಷ್, ಇನ್ನೊಂದು ದೇಶೀ. ಕ್ಯಾಂಪಿನಲ್ಲಿ ಘೋಟಾ ಹಸ್ತರಿಯಾದ ಕೂಡಲೇ ಬಂದೂಕು ತೋಟಾಗಳನ್ನು ಸಾಗಿಸಿಕೊಂಡು ಹೊರಡುತ್ತಿದ್ದೆವು. ಜೊತೆಗೆ ಕಾಡು ಜನರದೊಂದು ಸೈನ್ಯ. ಎದುರಿಗೆ ಯಾವುದಾದರೂ ಬಡಮೃಗ ಬಂದರೆ ಅದನ್ನು ಕೊಂದು ಮಧ್ಯಾಹ್ನವಾದರೆ ಇದ್ದಲ್ಲಿಯೇ ಉಪಾಹಾರವನ್ನು ಟೀಯೊಂದಿಗೆ ಯಥಾಕ್ರಮವಾಗಿ ಸೇವಿಸಿ ಭೋಜನಕ್ಕೆಂದು ಹಿಂತಿರುಗುತ್ತಿದ್ದೆವು. ಪುಷ್ಕಳವಾದ ಭೋಜನವನ್ನುಂಡು ಅತಿಪುಣ್ಯಶಾಲಿಗಳಂತೆ ಸುಖನಿದ್ರೆಗೈಯುತ್ತಲಿದ್ದೆವು. ಯಾವುದಾದರೂ ಬಡಮೃಗಕ್ಕಿಟ್ಟ ಗುರಿ ತಪ್ಪಿದ್ದರೆ ಅಷ್ಟುಮಾತ್ರವೇ ನಮ್ಮ ಆಶಾಪೂರ್ತಿಗೆ ಲೋಪ; ಆ ಬಡಪ್ರಾಣವುಳಿದುಕೊಂಡಿತೆಂಬ ಸ್ಮರಣೆಯಿಲ್ಲ; ಗುರಿ ತಪ್ಪಿತೆಂಬ ಅಸಮಾಧಾನ!" ಈ ವಿವರ ಬರೆದುದು ಗಾಂಧೀಜಿಯ ಪ್ರಭಾವ ತಮ್ಮ ಮೇಲೆ ತೋರಿದ ಬಳಿಕ; ತಮ್ಮ ಹಿಂದಿನ ಚರ್ಯೆ ನೆನಸಿಕೊಂಡು ತಾವೇ ಅಪಹಾಸ್ಯಮಾಡಿಕೊಂಡುದು.

**1916** ನೆ ಇಸವಿ ವಸಂತಋತುವಿನ ಆದಿಯಲ್ಲಿ ಪಂಡಿತ್ ಜವಾಹರಲಾಲ ಕೌಲರ ಪುತ್ರಿ ಕಮಲಾದೇವಿಯೊಡನೆ ಜವಾಹರಲಾಲರಿಗೆ ವಿವಾಹ ನಿಶ್ಚಯವಾಗಿ ದಿಲ್ಲಿಯಲ್ಲಿ ನಡೆಯಿತು. ಅತಿಶಯವಾದ ವೈಭವ ವಿಜೃಂಭಣೆಗಳೊಡನೆ ಮೋತಿಲಾಲರು ಆ ವಿವಾಹವನ್ನು ನಡೆಸಿದರೆಂದು ಹೇಳಬೇಕೇ! ಎಷ್ಟೋ ಮಂದಿ ಐರೋಪ್ಯರೂ ಆಂಗ್ಲೋ ಇಂಡಿಯನ್ನರೂ ಅತಿಥಿಗಳಾಗಿ ಬಂದಿದ್ದರು. ವಿವಾಹವಾದ ಬಳಿಕ ಮನೆಯವರೆಲ್ಲರೂ ಆ ಬೇಸಿಗೆಯನ್ನು ಕಾಶ್ಮೀರದಲ್ಲಿ ಕಳೆದರು. ಆ ಸಮಯದಲ್ಲಿ ಅಲ್ಲಿಯ ಪರ್ವತಶಿಖರಗಳನ್ನು ಏರುವುದಕ್ಕೂ ಹಿಮನದಿಗಳನ್ನು ದಾಟುವುದಕ್ಕೂ ಮಂಜಿನ ಮೈದಾನಗಳಲ್ಲಿ ಸುಳಿದಾಡುವುದಕ್ಕೂ ಅವಕಾಶ ದೊರಕಿತು. ಮನಸ್ತೃಪ್ತಿಯಾಗಿ ಜವಾಹರಲಾಲರು ಅಲ್ಲೆಲ್ಲ ಓಡಾಡಿದರು. ಅಲ್ಲಿಯೇ ಅಮರನಾಥ ಗುಹೆಯಿದೆಯೆಂದು ತಿಳಿದು ಅಲ್ಲಿಗೆ ಹೋಗಲುದ್ಯಮಿಸಿ

ದಾರಿಯಲ್ಲಿ ಮಂಜಿನ ಮೈದಾನ ದಾಟುವಾಗ ಭೂಮಿಯೇ ಬಿರುಕು ಬಿಟ್ಟು ನುಂಗಿಕೊಳ್ಳುವುದರಲ್ಲಿತ್ತು ; ಮೈಗೆ ಕಟ್ಟಿದ್ದ ಹಗ್ಗದಿಂದ ಹೊರಕ್ಕೆ ಳೆಯಲು ಸಾಧ್ಯವಾಗಿ ಪ್ರಾಣವುಳಿಯಿತು. ಸಾಹಸ ಮಾಡಲು ಅವಕಾಶದೊರೆತರೆ ಆ ಸಾಹಸವನ್ನೇ ಆರಿಸಿಕೊಂಬ ಚಿತ್ತವೃತ್ತಿ ಜವಾಹರರಿಗೆ. ಆ ಸಂಗತಿಯನ್ನು ವಿವರಿಸುತ್ತ ತಮ್ಮ ಆತ್ಮಕಥೆಯಲ್ಲಿ ತಮಗಾದ ಆಶಾಭಂಗವನ್ನು ಸೂಚಿಸಿ ಪುನಃ ಎಂದಾದರೂ ಕಾಶ್ಮೀರಕ್ಕೆ ಹೊರಟು ಅಮರನಾಥವನ್ನು ಕಂಡು ಆನಂದಪಡುವ ಆಸೆಯನ್ನು ವ್ಯಕ್ತಗೊಳಿಸಿದರು. ಒಂಟಿಯಾಗಿ ಆ ಹಿಮರಾಶಿಗಳಲ್ಲಿ ಓಡಾಡಿ ಉತ್ತುಂಗ ಶಿಖರಗಳ ಮೇಲೇರಿ ಸಾಹಸದ ಸೌಂದರ್ಯ ಬೀರಿ ಪ್ರಕೃತಿಸೌಂದರ್ಯವನ್ನು ಸವಿಯುವ ಉತ್ಸಾಹ ತುಂಬಿದ ಎದೆಗಾರ.

III

## 1. ಗಾಂಧೀ ಯುಗದ ಆರಂಭ

1916ರಲ್ಲಿಯೆ ಲಖನೌ ನಗರದಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಎರಡೂ ಸೇರಿ ಅನ್ಯೋನ್ಯತೆಯನ್ನು ಕಾಣಿಸಿದ್ದು. ಆ ವೇಳೆಗೆ ಲೋಕಮಾನ್ಯ ತಿಲಕರು ಸೆರೆಯಿಂದ ಮುಕ್ತರಾಗಿ ಆನಿಬೆಸೆಂಟರೊಡನೆ ಕೂಡಿ ಹೋಂರೂಲ್ ಲೀಗೆಂಬುದನ್ನು ಮೊದಲಿಟ್ಟರು. ಪರಿಸ್ಥಿತಿಯು ವ್ಯತ್ಯಾಸಗೊಂಡು ಯುವಕರಿಗೆ ಉತ್ಸಾಹದಾಯಕವಾಯಿತು. ಐರ್ಲಂಡಿನಲ್ಲಿಯೂ ಈಸ್ಟರ್ ದಂಗೆ(Easter Rebellion)ಯೆಂಬುದು ಘಟಿಸಿ ಐರಿಷ್ ದೇಶಭಕ್ತರು ತಮ್ಮ ಪ್ರಾಣಗಳನ್ನು ಬಲಿಗೊಟ್ಟರು. ಅವರ ಸಾಹಸವನ್ನು ಮೆಚ್ಚಿದ ಜವಾಹರರಿಗೆ ಆಗ ಸರೋಜಿನೀದೇವಿ ಕೊಡುತ್ತಿದ್ದ ಭಾಷಣಗಳನ್ನು ಕೇಳಿ ಉದ್ರೇಕವಾಗುತ್ತಿತ್ತು. ತಾವೂ ದೇಶ ಸೇವೆಯನ್ನೇ ಆರಿಸಿಕೊಂಡು ನಡೆಸುವ ಉದ್ವೇಗ ಹುಟ್ಟಿದ್ದರೂ ಹೇಗೋ ಎಂತೋ ತಿಳಿಯದಿತ್ತು.

ಯುದ್ಧ ಸಮಯದಲ್ಲಿ ದೇಶ ರಕ್ಷಣೆಗಾಗಿ ಸರ್ಕಾರದವರು ಭಾರತೀಯರಿಂದ ಕೂಡಿದ ದಳವೊಂದನ್ನು ಸ್ಥಾಪಿಸುವ ಯೋಚನೆಯಲ್ಲಿದ್ದರು. ಆದರೆ ಐರೋಪ್ಯಸೈನಿಕರಿಗೂ ಭಾರತೀಯಸೈನಿಕರಿಗೂ ಸಂಬಳ ಸಾರಿಗೆಗಳಲ್ಲಿ ಎಷ್ಟೋ ಭೇದವನ್ನು ಕಲ್ಪಿಸಿದ್ದುದು ಭಾರತೀಯರಿಗೆ ಅವಮಾನಕಾರಕ. ಯುಕ್ತಪ್ರಾಂತದಲ್ಲಿ ಹಲ ಕೆಲವರು ಸರ್ಕಾರದವರ ಪ್ರಯತ್ನದಲ್ಲಿ ಸಹಾಯ ಪಡುವ ಇಷ್ಟವನ್ನು ಸೂಚಿಸಿ ಆ ಭೇದಗಳನ್ನು ತೊಲಗಿಸಿದರೆ ತಾವು ಸಿದ್ಧರೆಂದರು. ಜವಾಹರರು ತಾವಾಗಿ ಅರ್ಜಿ ಬರೆದರು. ಇಲಾಹಾಬಾದಿನಲ್ಲಿ ಈ ಪ್ರಯತ್ನವನ್ನು ಮುಂದುವರಿಸಲು ಸಭೆ ಸೇರಬೇಕಾಗಿತ್ತು. ಅಷ್ಟರಲ್ಲಿ ಮದರಾಸಿನಲ್ಲಿ ಆನಿಬೆಸೆಂಟರ ಬಂಧನದ ಸುದ್ದಿ ಬಂತು. ಜವಾಹರರು ಆ ಸಭೆಯನ್ನು ಅಲ್ಲಿಗೆ ತ್ಯಾಗಮಾಡತಕ್ಕುದೆಂದು ಮೋತಿಲಾಲ, ತೇಜ್‌ಬಹಾದುರ್ ಮತ್ತು ಚಿಂತಾಮಣಿಗಳನ್ನು ಒಡಂಬಡಿಸಿದರು. ಪರಿಣಾಮದಲ್ಲಿ ಮೋತಿಲಾಲರು ಹೋಂರೂಲ್ ಲೀಗನ್ನು ಸೇರಿಕೊಂಡರು; ಇಲಾಹಾಬಾದ್ ಶಾಖೆಗೆ ಅಧ್ಯಕ್ಷರಾದರು.

ಇದೇ ಮೋತಿಲಾಲರು ಮುಂದಪಕ್ಷದವರ ಜೊತೆಯನ್ನು ಬಿಡಲು ಆರಂಭ. 1916ರಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಎರಡೂ ಸೇರಿ ಒಪ್ಪಂದಕ್ಕೆ ಬಂದ ಬಳಿಕ ಅಖಿಲ ಭಾರತ ಕಾಂಗ್ರೆಸ್ ಸಭೆ ಆನಂದಭವನದಲ್ಲಿಯೆ ಸೇರಿ ಆ ಒಪ್ಪಂದಕ್ಕೆ ರೂಪಕೊಟ್ಟಿತ್ತು. ಮೋತಿಲಾಲರು ಆ ನಿರ್ಣಯಕ್ಕೆ ತಕ್ಕಂತೆ ವರ್ತಿಸುವವರಾಗಿದ್ದರು. 1917ರಲ್ಲಿ ಪಾರ್ಲಿಮೆಂಟಿನಲ್ಲಿ ಬ್ರಿಟಿಷರ ಉದ್ದೇಶದ ಘೋಷಣೆಯೂ ಆ ಬಳಿಕ ಮಾಂಟೆಗ್ಯೂರವರ ಭಾರತ ಸಂಚಾರವೂ ಮಾಂಟೆಗ್ಯೂ ಚೆಲ್ಮ್ಸ್‌ಫರ್ಡ್ ವರದಿಯ ಪ್ರಕಟನೆಯೂ ಘಟಿಸಿದವು. ಆ ವರದಿಯನ್ನು ವಿಮರ್ಶಿಸಲು ಲಖನೌವಿನಲ್ಲಿ ಒಂದಾನೊಂದು ಸಭೆ ಮೋತಿಲಾಲರ ಅಧ್ಯಕ್ಷತೆಯಲ್ಲಿ ಸೇರಬೇಕಾಗಿತ್ತು. ಎಂಥದೋ ಬಲವಾದ ವಿರೋಧ ಆ ಸಭೆಯಲ್ಲಿ ನಡೆದೀತೆಂಬ ವಾಸನೆ ದೂರದಿಂದ ತಿಳಿದು ಮುಂದಪಕ್ಷದವರು ಸಭೆಗೆ ಬಾರದೆ ದೂರದಲ್ಲಿಯೇ ಇದ್ದುಬಿಟ್ಟರು. ಅಲ್ಲಿಂದ ಮುಂದಕ್ಕೆ ಮುಂದಪಕ್ಷದವರು ಕಾಂಗ್ರೆಸ್‌ಸಭೆಯಿಂದ ಬೇರೆಯಾಗಿಬಿಟ್ಟರು.

1916ರಲ್ಲಿಯೆ ಜವಾಹರಲಾಲರಿಗೆ ಗಾಂಧೀಜಿಯ ಪ್ರಥಮ ಸಂದರ್ಶನ. ದಕ್ಷಿಣ ಆಫ್ರಿಕದಲ್ಲಿ ನಡೆಸಿದ್ದ ಘನವಾದ ಕರ್ತವ್ಯ ಕಲಾಪಗಳಿಗಾಗಿ ಎಲ್ಲರೂ ಆತನನ್ನು ಮೆಚ್ಚುತ್ತಿದ್ದರು. ಯುವಕರೂ ಮೆಚ್ಚಿದ್ದರು; ಆದರೆ ರಾಜಕೀಯೋದ್ಯಮಗಳಿಗೂ ಆತನಿಗೂ ಬಲು ದೂರವೆಂದುಕೊಳ್ಳುವಂತಿತ್ತು. ಆ ಕಾಲದಲ್ಲಿ ಗಾಂಧೀಜಿ ಕೂಡ ರಾಜಕೀಯ ಕರ್ತವ್ಯಗಳಲ್ಲಿ ತೊಡಗದೆ ಇರುತ್ತಿದ್ದರು. ಚಂಪಾರಣ್ಯದಲ್ಲಿ ಸತ್ಯಾಗ್ರಹ ನಡೆದ ತರುವಾಯ ಯುವಕರಿಗೆ ಆತನಲ್ಲಿ ಆಸೆ ಹುಟ್ಟಿತು. ಆತನು ರಾಜಕೀಯ ರಂಗದಲ್ಲಿ ಪ್ರವೇಶಮಾಡಿದುದು ಮೊದಲನೆ ಘೋರಯುದ್ಧ ಮುಗಿದ ತರುವಾಯ.

ಯುದ್ಧ ಪ್ರಭಾವದಿಂದ ದೇಶದ ಪರಿಸ್ಥಿತಿಯೆಷ್ಟೋ ವ್ಯತ್ಯಾಸಗೊಂಡಿತ್ತು. ಭಾಗ್ಯವಂತರಲ್ಲಿಯೂ ಬಡವರಲ್ಲಿಯೂ ಗ್ರಾಮಸ್ಥರಲ್ಲಿಯೂ ಪಟ್ಟಣಿಗರಲ್ಲಿಯೂ ಯುದ್ಧ ಮುಕ್ತಾಯದಲ್ಲಿ ಕಷ್ಟಕಾಲ ಕಳೆದು ಎಲ್ಲ ಬಗೆಗಳಲ್ಲಿಯೂ ನೆಮ್ಮದಿಯಾದೀತೆಂಬ ನಿರೀಕ್ಷೆಯಿತ್ತು. ರಾಜಕೀಯ ಸ್ಥಿತಿ ಗತಿಗಳನ್ನು ಪರಿಶೀಲಿಸುತ್ತಲಿದ್ದವರಿಗೆ ಬ್ರಿಟಿಷರು

ಕೊಟ್ಟಿದ್ದ ವಾಗ್ದಾನಗಳೂ ತತ್ಸಂಬಂಧವಾದ ನಿರೀಕ್ಷೆಗಳೂ ಮನಸ್ಸಿನಲ್ಲಿ ಕುಣಿದಾಡುತ್ತಿದ್ದರೆ ಅವುಗಳ ಬದಿಯಲ್ಲಿಯೇ ಕಡೆಗೆ ಅಸಮಾಧಾನ ವಾದೀತೆಂಬ ಶಂಕೆ ಸಂದೇಹಗಳೂ ಹಾರಾಡುತ್ತಿದ್ದವು. ಸಾಮಾನ್ಯ ಜನಗಳ ಮನಸ್ಸುಗಳಲ್ಲಿ ಸಮಾಧಾನವೇ ಇಲ್ಲ. ಪಂಜಾಬ್ ಪ್ರಾಂತ ದಲ್ಲಂತೂ ಬಲವಂತಕ್ಕೊಳಗಾಗಿ ಯುದ್ಧದ ಸಾಲಕ್ಕೆ ಹಣತೆತ್ತು ಸೈನಿಕ ರನ್ನೊದಗಿಸಲು ನಾನಾ ಬಗೆಯ ಬನ್ನಗಳನ್ನು ಪಟ್ಟಿದ್ದ ಸಾಮಾನ್ಯ ಜನರಿಗೆ ಕೋಮಗತಮಾರು ಜಹಜಿನ ಸಂಬಂಧವಾಗಿ ನಡೆದ ಕ್ರೌರ್ಯದಿಂದ ಶಾಂತತೆ ಮಾಯವಾಗಿತ್ತು. ಯುದ್ಧ ಕಳೆದಬಳಿಕ ತಮ್ಮ ತಮ್ಮ ಊರುಗಳಿಗೆ ಹಿಂತಿರುಗಿ ಬಂದ ಸಿಪಾಹಿ ಜನರು ಹೊರ ಗಿನ ಜಗತ್ತನ್ನು ಕಂಡು ಅನೇಕಾಂಶಗಳನ್ನು ತಿಳಿದವರಾಗಿದ್ದುದರಿಂದ ತಮ್ಮ ಸ್ವಂತ ಜನರ ಕಷ್ಟ ನಷ್ಟಗಳನ್ನು ಕಂಡು ಕ್ಷುಭಿತರಾಗುತ್ತಿದ್ದರು. ಬ್ರಿಟಿಷರಲ್ಲಿ ಪ್ರಮುಖರಾಗಿದ್ದವರಾದರೋ ತಾವು ಮಾಡಿದ ವಾಗ್ದಾನ ಗಳಿಗನುಸಾರವಾದ ಕರ್ತವ್ಯಗಳನ್ನು ತಪ್ಪಿಸಿಕೊಳ್ಳಲು ಉಪಾಯ ಗಳನ್ನು ಹೆಣೆಯುತ್ತ ಕಾಲವನ್ನು ತಳ್ಳುತ್ತ ಇದ್ದರು.

ಬೊಕ್ಕೆ ಮೇಲೆ ಕುರು. ಮುಸಲ್ಮಾನರಾದವರು ಇನ್ನೂ ಅಸಮಾ ಧಾನಗೊಳ್ಳಲು ಬಲವಾದ ಕಾರಣ. ಯುದ್ಧದಲ್ಲಿ ಸೇರಿದ ತುರ್ಕಿ ಸುಲ್ತಾನ ಸಾಮ್ರಾಜ್ಯಗಳ ಗತಿಯೇನೆಂಬ ಚಿಂತೆ. ಅವುಗಳ ಪರವಾಗಿ ಬ್ರಿಟಿಷರು ಕೊಟ್ಟಿದ್ದ ವಚನಗಳನ್ನು ಪಾಲಿಸುವರೋ ಇಲ್ಲವೋ ಎಂಬ ಶಂಕೆ ಭಾರತೀಯ ಮುಸಲ್ಮಾನರಲ್ಲಿ ಪ್ರಬಲಗೊಳ್ಳುತ್ತಿತ್ತು.

ಇಂತಹ ಪರಿಸ್ಥಿತಿಯಲ್ಲಿ ರೌಲತ್ ಸಭೆಯವರ ವರದಿ ಹೊರಬಿದ್ದು ಸರ್ಕಾರದವರು ಹೊಸದಾಗಿ ಕಾನೂನು ಮಾಡಿಸಿಕೊಳ್ಳಲು ಆತುರ ರಾದರು. ದೇಶದ ಎಲ್ಲ ರಾಜಕೀಯ ಪಕ್ಷದವರೂ ಏಕಪ್ರಕಾರವಾಗಿ ಬೇಡ ಬೇಡವೆಂದು ಬೇಡಿಕೊಂಡಾಗ್ಯೂ ಸರ್ಕಾರದವರು ಆ ಶಾಸನ ರಚನೆಯ ಪ್ರಯತ್ನವನ್ನು ಬಿಡದಾದರು. ಕಾಹಿಲೆಯಿಂದ ನರಳುತ್ತ ಹಾಸಿಗೆ ಹಿಡಿದಿದ್ದ ಪೂಜ್ಯ ಗಾಂಧೀಜಿ ಅತಿವಿನಯವಾಗಿ ವೈಸರಾಯಿ ಯನ್ನು ಕೇಳಿಕೊಂಡರು. ಅಧಿಕಾರಿ ವರ್ಗದವರು ಅಲಕ್ಷ್ಯ ಮಾಡಿ ದರು. ಆಗ ಗಾಂಧೀಜಿ ಸತ್ಯಾಗ್ರಹ ಸಭೆಯನ್ನು ಕಟ್ಟಿ, ಆ ಕಾನೂನು

ರಚನೆಯಾದಲ್ಲಿ ಬುದ್ಧಿಪೂರ್ವಕವಾಗಿಯೆ ಅದನ್ನು ಮುರಿದು ತತ್ಸಂಬಂಧವಾದ ಕಷ್ಟನಷ್ಟಗಳನ್ನೂ ಶಿಕ್ಷೆಯನ್ನೂ ಅನುಭವಿಸುವುದೇ ಮಾಸವೆಂದು ಪ್ರಕಟಿಸಿದರು. ಅದೇ ಪ್ರಾರಂಭ; ಕ್ಷಣ ಕ್ಷಣಕ್ಕೂ ಜನರು ಜಾಗೃತರಾದರು. ದೇಶದಲ್ಲಿ ಅಪೂರ್ವಘಟನೆಗಳಿಗಾರಂಭವಾಯಿತು, ಪರಂಪರೆಯಾಗಿ ಸಂಭವಿಸಿದವು. ಚಂಡಮಾರುತವೆದ್ದು ಬೀಸಿದಂತಾಯಿತು.

ಉತ್ಸಾಹಶಾಲಿ ಜವಾಹರಲಾಲರಿಗೆ ಸತ್ಯಾಗ್ರಹ ಸಭೆಯ ಸುದ್ದಿ ಕೇಳಿ ಪರಮಾನಂದವಾಯಿತು. ಅದುವರೆಗೂ ರೋಗದಂತೆ ಹಿಡಿದಿದ್ದ ಶಂಕಾಸಂದೇಹಗಳು ದೇಶದಿಂದ ತೊಲಗಿ ಸುಸ್ಪಷ್ಟವಾದ ಕಾರ್ಯಕಲಾಪಗಳು ಎದುರಿನಲ್ಲಿ ಸಿದ್ಧವಾದಂತೆ ಕಂಡಿತು. ತಕ್ಷಣವೇ ತಾವೂ ಸತ್ಯಾಗ್ರಹಿಯಾಗಿ ಸೇರಿಕೊಳ್ಳಲು ತವಕಗೊಂಡು ಆ ನಿಶ್ಚಯವನ್ನು ಉತ್ಸಾಹಪೂರಿತ ಕಂಠದಿಂದ ಹೇಳಿದರು. ಆದರೆ ತಂದೆ ಮೋತಿಲಾಲರು ಈ ನಿಶ್ಚಯಕ್ಕೆ ಪರಮ ವಿರೋಧವನ್ನು ತೋರಿದರು. ಕ್ಷಣಿಕವಾದ ಉತ್ಸಾಹಕ್ಕೆ ಸ್ವಭಾವತಃ ಸೋಲದವರು; ಕೆಲವರು ಜೈಲಿಗೆ ಹೊರಟ ಪಕ್ಷಕ್ಕೆ ಅಷ್ಟರಿಂದ ಏನು ಸಾಧನೆಯಾದೀತೆಂದು ಕೇಳಿದರು; ಅಷ್ಟು ಮಾತ್ರಕ್ಕೆ ಬ್ರಿಟಿಷ್ ಸರ್ಕಾರದವರು ಬೆದರಿಯಾರೇ ಎಂದು ಆಕ್ಷೇಪಿಸಿದರು. ತಂದೆಯವರೊಡ್ಡಿದ ಆಕ್ಷೇಪಕ್ಕೆ ಸರಿಯಾದ ಸಮಾಧಾನ ಕೊಡುವುದು ಸುಲಭವಾಗಲೂ ಇಲ್ಲ, ತಂದೆಯವರ ಇಷ್ಟವನ್ನು ಅಸಡ್ಡೆ ಮಾಡುವಷ್ಟು ಪ್ರೀತಿರಾಹಿತ್ಯವನ್ನು ನಟಿಸಲು ಸಾಧ್ಯವಾಗಲೂ ಇಲ್ಲ. "ನನ್ನ ಏಕಮಾತ್ರ ಪುತ್ರ ಜೈಲಿಗೆ ಹೋಗುವುದೇ?" ಎಂಬ ಚಿಂತೆ ತಂದೆಯನ್ನು ರಾತ್ರಿ ಹಗಲು ಮುಳ್ಳಿನಂತೆ ಚುಚ್ಚುತ್ತಿತ್ತು. ತಂದೆಗೆ ವಿಧೇಯನಾಗಿ ವರ್ತಿಸುವ ಮನಸ್ಸಿದ್ದರೂ ಉಜ್ವಲ ದೇಶಪ್ರೇಮ ತುಂಬಿದ್ದ ಜವಾಹರಲಾಲರಿಗೆ ಅದೇ ಕರ್ತವ್ಯವೆನಿಸಿತ್ತು. ಧರ್ಮಸಂಕಟದಲ್ಲಿ ತಂದೆ ಮಕ್ಕಳಿಬ್ಬರೂ ಏಕ ಕಾಲದಲ್ಲಿ ಗಾಢ ಚಿಂತೆಯಲ್ಲಿ ತೆವಳಿ ಅತಿ ಪ್ರಯಾಸದಿಂದ ಕಾಲವನ್ನು ಕಳೆದರು. ರಾತ್ರಿ ನಿದ್ರೆ ಬಾರದೆ ಜವಾಹರಲಾಲರು ಮನೆಯ ವರಾಂಡಗಳಲ್ಲಿ ಶತಪಥ ತಿರುಗುತ್ತಿದ್ದರೆ ಮೋತಿಲಾಲರೂ ನಿದ್ದೆಯನ್ನು ಕಾಣದೆ ಚಿಂತೆಯ ಮಡುವಿನಲ್ಲಿ ಮುಳುಗಿದ್ದರು. ತನ್ನ ಮಗ ಜೈಲಿನಲ್ಲಿ ನೆಲದ ಮೇಲೆ ಮಲಗಬೇಕಾ

ದರೆ ಹೇಗೋ ಎಂತೋ ಎಂಬ ಕಳವಳವನ್ನು ಶಮನಗೊಳಿಸಲು ತಾವೇ ಒಂದೆರಡುದಿವಸ ಇತರರಿಗೆ ತಿಳಿಯದಂತೆ ಮಂಚಬಿಟ್ಟು ನೆಲದ ಮೇಲೆ ಮಲಗಿಕೊಂಡರು. ಒಬ್ಬರ ಸಂಕಟ ಮತ್ತೊಬ್ಬರಿಗೆ ಗೊತ್ತಿತ್ತು; ಇಬ್ಬರೂ ಸಹಜವಾದ ಗಾಂಭೀರ್ಯವನ್ನು ಪಡೆದವರಾದುದರಿಂದ ಎದುರು ಬದುರಾದಾಗ ತಮ್ಮ ಚಿಂತೆಯನ್ನು ಮರೆಮಾಡುವ ಚರ್ಯೆಯನ್ನು ಹಿಡಿದರು. ಕಡೆಗೆ ಮೋತಿಲಾಲರು ತಮ್ಮ ಉದ್ವೇಗವನ್ನು ತಾಳಲಾರದೆ ಗಾಂಧೀಜಿಗೆ ಪತ್ರ ಬರೆದರು. ಇಲಾಹಾಬಾದಿಗೆ ಕರೆಸಿಕೊಂಡು ದೀರ್ಘವಾದ ಚರ್ಚೆಗಳನ್ನು ನಡೆಸಿದರು. " ಸಿಂಹದ ಹೊಟ್ಟೆಯಲ್ಲಿ ಸಿಂಹದ ಮರಿಯೇ ಹುಟ್ಟತಕ್ಕದ್ದು " ಎನ್ನುತ್ತ ಗಾಂಧೀಜಿ ಜವಾಹರ ಲಾಲರನ್ನು ಪ್ರತ್ಯೇಕವಾಗಿ ಮಾತನಾಡಿಸಿ ಆತುರ ಪಡಬೇಡವೆಂದು ಹೇಳಿದರು. ತಂದೆಯ ಸಂಕಟವನ್ನು ಕಂಡು ಮನ ಕರಗಿದ ಕರುಣಾಳುವಿನ ಮಾತುಗಳು.

ಸ್ವಲ್ಪ ಕಾಲದಲ್ಲಿಯೇ ಪಂಜಾಬಿನಲ್ಲಿ ಅತ್ಯಾಚಾರಗಳು. ಹರತಾಲದ ಪ್ರಕಟನೆಯ ಹಿಂದೆಯೆ ದಿಲ್ಲಿ ಅಮೃತಸರಗಳಲ್ಲಿ ಗೋಲಿಬಾರ್ ಪ್ರಕರಣಗಳು, ಕಿಚಲುಸತ್ಯಪಾಲರ ದಸ್ತಗಿರಿ, ಪೂಜ್ಯ ಗಾಂಧೀಜಿಯ ದಸ್ತಗಿರಿಗಳು; ಅವುಗಳ ಪರಿಣಾಮವಾಗಿ ಅಹಮದಾಬಾದ್ ಅಮೃತ ಸರಗಳಲ್ಲಿ ಜನರ ಉನ್ಮತ್ತತೆ, ಜಾಲಿಯನ್‌ವಾಲಾ ಹತ್ಯೆ, ತರುವಾಯ ಪಂಜಾಬಿನಲ್ಲಿ ಕಾಳರಾತ್ರಿ ಕವಿದಂತೆ ದೀರ್ಘ ಕಾಲದ ಲಷ್ಕರೀ ದರ್ಬಾರ್. ಅಲ್ಲಿಯ ಸಮಾಚಾರವೇ ಇಲ್ಲ. ಹಾಗೂ ಹೀಗೂ ತಲೆ ತಪ್ಪಿಸಿಕೊಂಡು ಹೊರಗೋಡಿ ಬಂದವರು ದಿಗ್ಭ್ರಾಂತರು; ಭಯದಿಂದ ಬುದ್ಧಿಗೆಟ್ಟವರಂತೆ ಮಾತನಾಡುವವರು. ಸಿಕ್ಕಿದ ಚಿಲ್ಲರೆ ಸಮಾಚಾರ ಕೇಳಿದವರ ಮನಸ್ಸುಗಳಲ್ಲಿ ಹಾಲಾಹಲ ಸುರಿದಂತಾಯಿತು. ಅಲ್ಲಿಗೆ ಹೋಗಿ ಬರಲು ಸಿದ್ಧರಾದವರಿಗೆ ದಾರಿಯೇ ಇಲ್ಲ. ಪಂಜಾಬ್ ಎಂಬುದು ಹೆಪ್ಪುಗಟ್ಟಿದ ಹಿಂಸೆಯ ಗುಹೆಯಾಗಿ ಕಂಡಿತು.

ಸಂಚಾರಕ್ಕಿದ್ದ ಅಡ್ಡಿಯನ್ನು ಸರ್ಕಾರದವರು ತೆಗೆದ ಕೂಡಲೆ ನೊಂದು ನಷ್ಟಪಟ್ಟಿದ್ದವರ ಉಪಚರ್ಯೆಗೂ ನಡೆದುದೇನೆಂದು ವಿಚಾರಿಸುವುದಕ್ಕೂ ಕಾಂಗ್ರೆಸ್ಸಿನವರೆಷ್ಟೋ ಮಂದಿ ಸನ್ನದ್ಧರಾದರು. ಉಪ

ಚಾರ ಕರ್ತವ್ಯವನ್ನು ಪಂಡಿತ ಮಾಲವೀಯರೂ ಶ್ರದ್ಧಾನಂದ ಸ್ವಾಮಿಗಳೂ ವಹಿಸಿಕೊಂಡರು. ಘಟನೆಗಳ ವೃತ್ತಾಂತವನ್ನು ತಿಳಿಯಲು ಮೋತಿಲಾಲರೂ ಚಿತ್ತರಂಜನದಾಸರೂ ಗಾಂಧೀಜಿಯವರೂ ತೊಡಗಿದರು. ಕಾಂಗ್ರೆಸ್ಸಿನ ಪರವಾಗಿ ವಿಚಾರಣೆಯನ್ನು ನಡೆಸಿ ನಡೆದ ಸಂಗತಿಗಳನ್ನು ಸಂಗ್ರಹಿಸಲು ಉಪಸಭೆ ಗೊತ್ತಾಯಿತು. ದೇಶಬಂಧು ದಾಸರು ಅಮೃತಸರ ಜಿಲ್ಲೆಯಲ್ಲಿ ಆ ಕಾರ್ಯವನ್ನು ಉಪಕ್ರಮಿಸಿದಾಗ ಜವಾಹರರನ್ನು ತಮ್ಮ ಸಹಾಯಕ್ಕೆ ನಿಯೋಗಿಸಿಕೊಂಡರು. ಜಾಲಿಯಾನ್‌ವಾಲಾಬಾಗಿಗೆಷ್ಟೋ ಬಾರಿ ಹೋಗಿ ಸಂಗತಿಗಳ ಪರೀಕ್ಷೆ ಮಾಡುವುದರಲ್ಲಿಯೂ 'ತೆವಳುವಗಲ್ಲಿ'ಯ ಸಂಬಂಧವಾದ ವಿವರಗಳನ್ನು ಸಂಗ್ರಹಿಸುವುದರಲ್ಲಿಯೂ ಈ ಯುವಕನ ಕೋಮಲ ಹೃದಯಕ್ಕೆಷ್ಟು ಯಾತನೆಯಾಯಿತೋ, ಎಷ್ಟು ಆಗ್ರಹ ತೋರಿತೋ—ಅದಷ್ಟೂ ಹೃದಯದಲ್ಲಿ ಸ್ಥಿರವಾಗಿ ಊರಿತು.

ಅಮೃತಸರದ ಬಳಿಯಿಂದ ಇಲಾಹಾಬಾದಿಗೆ ಹೊರಡಲು ಜವಾಹರಲಾಲರು ರೈಲಿನಲ್ಲಿ ಪ್ರವೇಶಿಸಿ ಕೆಳಗೆ ಸ್ಥಳವಿಲ್ಲದೆ ಮೇಲಿನ ಮಂಚ ಹತ್ತಿ ಮಲಗಿಕೊಂಡರು ಒಂದು ಸಲ. ಕೆಳಗಡೆ ಇದ್ದವರೆಲ್ಲರೂ ಬ್ರಿಟಿಷ್ ಸೈನ್ಯಾಧಿಕಾರಿಗಳು. ಅವರಲ್ಲೊಬ್ಬಾತನು ತಾನು ನಡೆಸಿದುದನ್ನು ಹೆಮ್ಮೆಯಿಂದ ಜೊತೆಗಾರರಿಗೆ ವಿವರಿಸಿ ಹೇಳುತ್ತಿದ್ದನು. ಮೇಲಿದ್ದ ಜವಾಹರರಿಗೆ ಸ್ವಲ್ಪ ಕಾಲದಲ್ಲಿಯೇ ಯಾರು, ಏನು, ಎಂದು ತಿಳಿಯಿತು. ಹಂಟರ್ ವಿಚಾರಣೆ ಸಭೆಯಲ್ಲಿ ತನ್ನ ಹೇಳಿಕೆಯನ್ನಿತ್ತು ಹಿಂತಿರುಗುತ್ತಿದ್ದ ಜನರಲ್ ಡಯರ್ ತನ್ನ ಮಿತ್ರರಿಗೆ ಜಾಲಿಯಾನ್‌ವಾಲಾ ಹತ್ಯ ನಡೆಸಿದ ರೀತಿಯನ್ನು ಜಂಭದಿಂದ ಹೇಳುತ್ತಿದ್ದನು!

ಗಾಂಧೀಜಿಯವರನ್ನು ಆಗಾಗ್ಗೆ ಕಾಣುವ ಸಂದರ್ಭ. ಅವರ ಮಾತುಗಳನ್ನು ಪದೇ ಪದೇ ಕೇಳುವ ಅವಕಾಶ. ಇಂಗ್ಲಿಷ್ ವಿದ್ಯಾಭ್ಯಾಸಮಾಡಿ ಐರೋಪ್ಯ ರೀತಿಯ ಸ್ವಾತಂತ್ರ್ಯ ಸಾಧನೆಯ ಮಾರ್ಗಗಳನ್ನು ಮೆಚ್ಚಿದ್ದವರಿಗೆ ಅವರ ಮಾತುಕಥೆಗಳೇ ವಿಚಿತ್ರವೆಂದು ತೋರುತ್ತಿದ್ದವು. ಪ್ರಸ್ತಾಪ ಮುಗಿಯುವ ವೇಳೆಗೆ ಮಾತ್ರ ಆತನು ಹೇಳಿದುದೇ ಉಚಿತವೆಂದು ನಿರ್ಧರವಾಗುತ್ತಿತ್ತು. ಪಂಜಾಬ್ ಪ್ರಾಂತ

ದಲ್ಲಿ ಬ್ರಿಟಿಷ ಸರ್ಕಾರದ ಲೀಲೆಯನ್ನು ಕಣ್ಣಾರೆ ಕಂಡ ಬಳಿಕ ಮೋತಿ ಲಾಲರಿಗೂ ದೇಶಬಂಧು ದಾಸರಿಗೂ ಗಾಂಧೀ ಶಿಷ್ಯತ್ವ ಪ್ರಾಪ್ತಿಯಾಯಿತು. 1919 ರಲ್ಲಿ ಅಮೃತಸರದಲ್ಲಿಯೇ ಕಾಂಗ್ರೆಸ್ ಸಭೆ ನಡೆಯಿತು. ಮೋತಿಲಾಲರೇ ಅಧ್ಯಕ್ಷರು. ಆದರೇನು! ಅದೇ ಮೊದಲು ಗಾಂಧೀಜಿಯ ಪ್ರಭಾವಕ್ಕೆ. ಆತನುಸುರಿದುದೇ ಕಾಂಗ್ರೆಸ್ಸಿನ ಜೀವನವಾಗುತ್ತ ಬಂತು.

ಖಿಲಾಫತ್ ಆಂದೋಳನವೂ ತತ್ಕಾಲದಲ್ಲಿಯೇ ನಡೆಯಿತು. ಇಲಾಹಾಬಾದಿನಲ್ಲಿ ಆ ಸಂಬಂಧವಾಗಿ ಸಭೆ ನಡೆಯಿತು. ಗಾಂಧೀಜಿಯವರು ಸಭಿಕರನ್ನುದ್ದೇಶಿಸಿ ಖಚಿತವಾದ ಮಾತುಗಳನ್ನಾಡಿದರು. ಎಷ್ಟು ದೈನ್ಯವೋ ಅಷ್ಟು ಕಾಠಿನ್ಯ, ಎಷ್ಟು ಕೋಮಲವೋ ಅಷ್ಟು ದೃಢ ಆತನ ಮಾತುಗಳು. ಅಸಾಧಾರಣವಾದ ಶ್ರದ್ಧೆ ತುಂಬಿದ ಆತನ ಮಾತುಗಳನ್ನು ಕೇಳಿದವರು ರೋಮಾಂಚಗೊಂಡರೂ ದಿಗಿಲು ಬಿದ್ದರು. ಹಿಂತೆಗೆದರೆ ಅವಮಾನವಾದೀತೆಂಬ ಶಂಕೆಯಿಂದ ಕೂಡಿದವರಾಗಿಯೇ ಗಾಂಧೀಜಿಯವರಿಟ್ಟ ಕರ್ತವ್ಯಕ್ಕೆ ತಥಾಸ್ತು ಎನ್ನುವವರಾದರು. ಜವಾಹರರಿಗೆ ಈ ಸಭೆ ಗೊಡ್ಡುಸಾಧುಗಳ ಕೂಟದಂತೆ ತೋರಿತು. ಇಂತಹ ಧೈರ್ಯ ಹೀನರಾದ ಜನರಿಂದ ಕರ್ತವ್ಯಸಾಧನೆಯಾದೀತೇ ಎನ್ನಿಸಿತು.

ಆಗಸ್ಟ್ ಮೊದಲನೆ ದಿನ ಅಸಹಕಾರ ಪ್ರಕರಣ ಮೊದಲಾಗತಕ್ಕದೆಂದು ಗೊತ್ತಾಗಿತ್ತು. ಅದೇ ದಿನ ಮುಂಬಯಿಯಲ್ಲಿ ಲೋಕಮಾನ್ಯ ತಿಲಕರು ದೈವಾಧೀನರಾದರು. ಆ ವೇಳೆಗೆ ಸಿಂಧು ಪ್ರಾಂತದಲ್ಲಿ ಸಂಚಾರ ಮುಗಿಸಿಕೊಂಡು ಗಾಂಧೀಜಿ ಮುಂಬಯಿಗೆ ಹೊರಟಿದ್ದರು. ಜೊತೆಯಲ್ಲಿ ಜವಾಹರಲಾಲರೂ ಇದ್ದರು. ಇಬ್ಬರೂ ಸೇರಿ ತಿಲಕರ ಉತ್ತರಕ್ರಿಯೆಗಳ ಉತ್ಸವದಲ್ಲಿ ಸೇರಿಕೊಂಡರು. ಲೋಕಮಾನ್ಯರ ದೇಹವನ್ನು ಚೌಪಾತಿಗೆ ಮೆರೆವಣಿಗೆ ಹೊರಲು ಮುಂಬಯಿ ಮುಂಬಯಿಯೇ ಪಾದಚಾರಿಯಾಗಿ ಹೊರಟಿತ್ತು. ಅಭೂತಪೂರ್ವವಾಗಿ ಅಂತ್ಯಕ್ರಿಯೆ ನಡೆಯಿತು.

ಅಸಹಕಾರ ಕ್ರಮವನ್ನು ದೇಶೋವಿಶಾಲವಾಗಿ ನಡೆಸತಕ್ಕುದೇ ಬಾರದೇ ಎಂಬುದನ್ನು ನಿಶ್ಚಯಮಾಡಲು ಮುಂದಿನ ತಿಂಗಳು ಸೆಪ್ಟೆಂಬರಿನಲ್ಲಿ ಕಾಂಗ್ರೆಸ್ಸಿನ ವಿಶೇಷಾಧಿವೇಶನ ಕಲ್ಕತ್ತೆಯಲ್ಲಿ ನಡೆಯುವುದ

ರಲ್ಲಿತ್ತು. ಅಧ್ಯಕ್ಷಸ್ಥಾನಕ್ಕೆ ಗೊತ್ತಾದ ಲಾಲಾಲಜಪತರಾಯರಿಗೆ ಇದೇನೋ ಹೊಸದೆನ್ನಿಸಿತ್ತು; ಅಸಹಕಾರ ಮಾರ್ಗವು ಅಷ್ಟು ವಿಶ್ವಸನೀಯವಾಗಿ ಕಾಣಲಿಲ್ಲ. ದೇಶಬಂಧು ದಾಸರಿಗೂ ಉಚಿತೋಪಾಯವೆಂದು ತೋರಲಿಲ್ಲ. ಆದರೆ ಮೋತಿಲಾಲರು ಆ ವೇಳೆಗೆ ಅಸಹಕಾರೋಪಾಯವೇ ಯುಕ್ತವೆಂಬ ನಿಶ್ಚಯಕ್ಕೆ ಬಂದು ದೇಶಬಂಧುವಿನೆದುರಿಗೆ ವಾದಿಸಿದರು. ಈ ಇಬ್ಬರು ವಕೀಲಸರದಾರರ ಮನೋಧರ್ಮಗಳಲ್ಲಿ ಸಾಮಾನ್ಯವಾಗಿದ್ದ ಭಾಗವು ಭಿನ್ನವಾಗಿದ್ದುದಕ್ಕಿಂತ ಹೆಚ್ಚು. ಆದರೆ ಮೋತಿಲಾಲರು ಗಾಂಧೀಜಿಯ ಪರಿಚಯವನ್ನು ಪಡೆದು ಆತನೆಂತಹ ದಿವ್ಯ ವ್ಯಕ್ತಿಯೆಂದು ಮನಗಂಡಿದ್ದರು; ಜವಾಹರಲಾಲರ ಚಿತ್ತವೃತ್ತಿಯನ್ನು ಅನುಭವಿಸಿದ್ದರು. ಬುದ್ಧಿಪೂರ್ವಕವಾಗಿ ಗಾಂಧೀಜಿಯ ಪಕ್ಕದಲ್ಲಿ ನಿಂತುಕೊಂಡರು. ಹೊಸದಾಗಿ ರೂಪಗೊಳ್ಳಬೇಕಾದ ಶಾಸನ ಸಭೆಗಳಿಗೆ ಪ್ರವೇಶ ಮಾಡದೆ ದೂರದಲ್ಲಿಯೆ ಉಳಿದುಕೊಳ್ಳಬೇಕೆಂಬುದು ದಾಸರಿಗೆ ಹಿತವೆಂದು ತೋರದೆಹೋಗಿ ಆತನ ವಿರೋಧವಿನ್ನೂ ಸ್ವಲ್ಪಕಾಲ ನಡೆಯುವಂತೆಯೆ ಉಳಿಯಿತು. ನಾಗಪುರದ ಕಾಂಗ್ರೆಸ್ ವೇಳೆಗೆ ದಾಸರ ವಿರೋಧವೂ ಮಾಯವಾಗಿ ಕಾಂಗ್ರೆಸ್ ಜಗತ್ತೆಲ್ಲ ಗಾಂಧೀ ಜಗತ್ತಾಯಿತು. ನೆಲದಮೇಲೆ ಕುಳಿತುಕೊಳ್ಳುವುದು, ಖದ್ದರ್ ಧರಿಸುವುದು, ಇಂಗ್ಲಿಷ್ ಬಿಟ್ಟು ಹಿಂದುಸ್ತಾನಿ ಮಾತನಾಡುವುದು— ಎಲ್ಲ ಲಕ್ಷಣಗಳೂ ಈಗ ಅತಿ ಸಹಜವಾಗಿ ಕಂಡಾಗ್ಗೂ ಆ ಕಾಲಕ್ಕೆ ನೂತನವಾಗಿಯೂ ವಿಚಿತ್ರವಾಗಿಯೂ ಕಂಡವು.

ಕಲ್ಕತ್ತೆಯ ವಿಶೇಷ ಕಾಂಗ್ರೆಸ್ ಮುಗಿದಬಳಿಕ ಗಾಂಧೀಜಿಯವರು ಜವಾಹರಲಾಲರನ್ನು ಕರೆದುಕೊಂಡು ಮೋತಿಲಾಲ ಘೋಷರನ್ನು ಕಾಣಲು ಹೊರಟರು. ಅಮೃತಬಜಾರ್ ಪತ್ರಿಕೆಯನ್ನು ಸಾಹಸದಿಂದಲೂ ಚಾತುರ್ಯದಿಂದಲೂ ನಡೆಸಿದ್ದ ಆ ಘೋಷರು ಬಹಳ ಸಂತೋಷಗೊಂಡು ಗಾಂಧೀಜಿಯ ಉದ್ಯಮವನ್ನು ಹರಸಿದರು. ತಾವಾದರೋ ಬೇಗನೆ ಮತ್ತೊಂದು ಲೋಕಕ್ಕೆ ಹೊರಡತಕ್ಕವರೆಂದು ಹೇಳುತ್ತ "ಒಂದಂಶ ನನಗತಿ ಸಮಾಧಾನ. ಸತ್ತಮೇಲೆ ನಾನಿರುವೆಡೆಯಲ್ಲಿ

ಬ್ರಿಟಿಷ್ ಸಾಮ್ರಾಜ್ಯವಿರುವುದಿಲ್ಲ. ಆ ಸಾಮ್ರಾಜ್ಯವಿಲ್ಲದೆಡೆಗೆ ನನ್ನ ಪ್ರಯಾಣ!" ಎಂದರಂತೆ. ತರುವಾಯ ಇಬ್ಬರೂ ಶಾಂತಿನಿಕೇತನಕ್ಕೆ ಹೊರಟು ಅಲ್ಲಿ ರಬೀಂದ್ರರೊಡನೆಯೂ ಅವರಣ್ಣಂದಿರಾದ ದ್ವಿಜೇಂದ್ರ ರೊಡನೆಯೂ ಕೆಲವು ದಿನಗಳನ್ನು ಕಳೆದರು. ಅಲ್ಲಿದ್ದ ದೀನಬಂಧು ಆಂಡ್ರೂಸ್ ಜವಾಹರರನ್ನು ಅತಿ ವಿಶ್ವಾಸದಿಂದ ಕಂಡು ನೀಗ್ರೋ ಜನರಿಗೆ ನಡೆದಿದ್ದ ಅನ್ಯಾಯವನ್ನು ವಿವರಿಸಿ ಖಂಡಿಸಿದ್ದ ಕೆಲವು ಪುಸ್ತಕ ಗಳನ್ನು ಓದಲು ಕೊಟ್ಟರು. ಅವುಗಳನ್ನೋದಿದ ಜವಾಹರರಿಗೆ ಆ ಬಡ ಪಾಯಿಗಳ ವಿಚಾರದಲ್ಲಿ ಮನ ಕರಗಿತು.

## 2. ಕಿಸಾನ್ ಜಗತ್

ಪಟ್ಟಣಿಗರಿಗೆ ಸಾಮಾನ್ಯವಾಗಿ ಹಳ್ಳಿಯ ಪರಿಸ್ಥಿತಿಯೇನೆಂದು ತಿಳಿದಿರುವುದಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಜನಸಾಮಾನ್ಯರು ದಟ್ಟದರಿದ್ರರೆಂದೂ ಅಜ್ಞಾನಿಗಳೆಂದೂ ರೈತಾಪಿಜನರು ಕಡುಬಡತನದಲ್ಲಿ ನರಳುವರೆಂದೂ ಅಲ್ಪಸ್ವಲ್ಪ ಪರಿಚಯ ಪಡೆದವರಿಗೆ ತಿಳಿದಿರುತ್ತದೆ; ಪ್ರತ್ಯಕ್ಷಾನುಭವ ಕಡಿಮೆ. ಜವಾಹರರಿಗೂ ಹಾಗೆಯೆ ಇತ್ತು. ಚಂಪಾ ರಣ್ಯದಲ್ಲಿಯೂ ಕೈರಾ ಜಿಲ್ಲೆಯಲ್ಲಿಯೂ ಗಾಂಧೀಜಿಯವರು ನಡೆಸಿದ ಸತ್ಯಾಗ್ರಹ ಚಳುವಳಿಗಳ ವೃತ್ತಾಂತದಿಂದ ಪರಿಜ್ಞಾನ ಹೆಚ್ಚಿದಾಗ್ಯೂ 1920ರಲ್ಲಿ ರಾಜಕೀಯ ಆಂದೋಲನ ಚಿತ್ರಗಳೇ ಜವಾಹರಲಾಲರ ಮನಸ್ಸಿನಲ್ಲಿ ತುಂಬಿದ್ದವು. ಆಕಸ್ಮಿಕವಾಗಿ ರೈತಾಪಿಜನರ ಮಧ್ಯೆ ಹೊರಟು ಅವರ ಸುಖದುಃಖಗಳನ್ನು ಕಣ್ಣಾರೆ ಕಾಣುವಂತೆ ಸನ್ನಿವೇಶ ವೊದಗಿತು.

ತಾಯಿ ಸ್ವರೂಪರಾಣಿಯವರಿಗೂ ಪತ್ನಿ ಕಮಲಾದೇವಿಗೂ ಅಸ್ವಸ್ಥವಾಗಿತ್ತು. 1920ನೆ ಮೇ ತಿಂಗಳ ಸಮಯ. ಅವರಿಬ್ಬರನ್ನು ಮಸ್ಸೂರಿಗೆ ಕರೆದುಕೊಂಡು ಜವಾಹರಲಾಲರು ಹೊರಟು ಸವಾಯ್ ಹೊಟೇಲಿನಲ್ಲಿಳಿದರು. ಆಗತಾನೆ ಮುಗಿದಿದ್ದ ಅಫ್ಘಾನ್ ಯುದ್ಧದ ಸಂಬಂಧವಾಗಿ ಆ ದೇಶದ ದೂತರು ಬಂದಿದ್ದು ಆ ಹೊಟೇಲಿನಲ್ಲಿಯೇ ಇದ್ದರು. ಜವಾಹರಲಾಲರು ಅವರನ್ನು ಗಮನಿಸಲೇ ಇಲ್ಲ. ಆದರೂ

ಒಂದು ದಿನ ಪೋಲೀಸ್ ಅಧಿಕಾರಿ ಬಂದು ಜವಾಹರಲಾಲರನ್ನು ಕಂಡು ಸರ್ಕಾರದವರ ಒಂದು ಆಜ್ಞೆಯನ್ನು ಕಾಣಿಸಿ "ಅಫ್ಘನ್ ದೂತರೊಡನೆ ನೀವು ಯಾವ ಬಗೆಯ ಪರಿಚಯವನ್ನೂ ಮಾತುಕಥೆಗಳನ್ನೂ ಬೆಳೆಸುವುದಿಲ್ಲವೆಂದು ಪ್ರಮಾಣಕೊಡಬೇಕಾಗಿದೆ" ಎಂದನು. ಒಂದು ತಿಂಗಳಕಾಲ ಕಳೆದಿದ್ದಾಗ್ಯೂ ಆ ದೂತರೊಡನೆ ಜವಾಹರಲಾಲರು ಒಂದು ಮಾತನ್ನಾದರೂ ಆಡಿರಲಿಲ್ಲ; ದೂತರ ಹಿಂದೆಯೆ ಗೋಪ್ಯವಾಗಿ ಕಾವಲಿದ್ದ ಪೋಲೀಸ್ ಅಧಿಕಾರಿಗೆ ತಿಳಿದೇ ಇತ್ತು. ಆದಾಗ್ಯೂ ಈ ವಿಚಿತ್ರ! ಅಂತಹ ಪ್ರಮಾಣವನ್ನು ಕೊಡಲಾಗುವುದಿಲ್ಲವೆಂದು ಜವಾಹರಲಾಲರಂದರು. ಆಗಲಾ ಪೋಲೀಸ್ ಅಧಿಕಾರಿಯು "ಹಾಗಾದರೆ ಜಿಲ್ಲಾ ಮ್ಯಾಜಿಸ್ಟ್ರೇಟರನ್ನು ತಾವು ಕಂಡು ಮಾತನಾಡುವುದು ಮೇಲು" ಎನ್ನಲು ಜವಾಹರಲಾಲರು ಆ ದಂಡಧಾರಿಯನ್ನು ಕಂಡರು; ಅಂತಹ ಪ್ರಮಾಣ ಸಾಧ್ಯವಿಲ್ಲೆಂದರು. ಆಗಲಾ ಜಿಲ್ಲಾಧಿಕಾರಿ ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ ಡೇರಾಡೂನ್ ಜಿಲ್ಲೆಯನ್ನು ಜವಾಹರಲಾಲರು ಬಿಟ್ಟು ಹೊರಡತಕ್ಕುದೆಂದು ಆಜ್ಞೆ ಕೊಟ್ಟನು. ತಾಯಿಯನ್ನೂ ಹೆಂಡತಿಯನ್ನೂ ಬಿಟ್ಟು ಹೊರಡಲು ಇಷ್ಟವಿಲ್ಲ; ಆದರೆ ಆಜ್ಞಾಭಂಗವೆಂಬುದಿನ್ನೂ ದೇಶದಲ್ಲಿ ಆರಂಭವಾಗಿರಲಿಲ್ಲ. ಆದ್ದರಿಂದ ಜವಾಹರಲಾಲರು ಮಸ್ಸೂರಿಯಿಂದ ಹೊರಟರು. ಇಲಾಹಾಬಾದ್ ಸೇರಿದರು.

ಇದೇನೆಂದು ಮೋತಿಲಾಲರು ಯುಕ್ತಪ್ರಾಂತದ ಗವರ್ನರ್ ಸರ್ ಹಾರ್ಕೋರ್ಟ್ ಬಟ್ಲರಿಗೆ (Sir Harcourt Butler) ಸ್ನೇಹಪೂರ್ವಕವಾಗಿಯೆ ಬರೆದರು. "ಆಜ್ಞೆಯಲ್ಲಿ ಅವಮಾನಕಾರಕವಾದುದೇನೂ ಇರಲಿಲ್ಲ; ಜವಾಹರಲಾಲ್ ಅದಕ್ಕೊಪ್ಪಿಕೊಳ್ಳಬಹುದಾಗಿತ್ತು" ಎಂಬ ಜವಾಬಿಗೆ "ನಿಷ್ಕಾರಣವಾಗಿ ಹೊರಡಿಸಿದ ಅಂತಹ ಆಜ್ಞೆಗೊಪ್ಪುವುದಾಗುವುದಿಲ್ಲ. ಮಸ್ಸೂರಿಯಲ್ಲಿರುವ ನಮ್ಮವರು ನೆಮ್ಮದಿಗೊಳ್ಳದಿದ್ದರೆ ಪುನಃ ಜವಾಹರ್ ಅಲ್ಲಿಗೆ ಹೊರಡತಕ್ಕುದೇ ಖಂಡಿತ" ಎಂದುತ್ತರ ಬರೆದರು. ವಾಸ್ತವವಾಗಿ ಇಬ್ಬರೂ ಹೊರಟರು; ಹೊರಡುವುದರೊಳಗಾಗಿ ಆಜ್ಞೆಯನ್ನು ರದ್ದುಗೊಳಿಸಿರುವಂತೆ ತಂತಿ ಬಂತು. ಮಸ್ಸೂರಿ ತಲಪಿ ಹೊಟೇಲ್ ಸಮೀಪಿಸುವ ವೇಳೆಗೆ ಎದುರಿಗೆ ಕಂಡುದೇನು?

ಜವಾಹರಲಾಲರ ಮಗಳು ಇಂದಿರೆಯನ್ನು ಆಫ್ಘಾನನೊಬ್ಬನೆತ್ತಿಕೊಂಡು ಆಡಿಸುತ್ತಿದ್ದನು! ಜವಾಹರ್ ಹೊರಟುಬಿಟ್ಟ ತರುವಾಯ ಆಫ್ಘಾನರಿಗಾ ಸಮಾಚಾರ ತಿಳಿದು ಕುತೂಹಲ ಹುಟ್ಟಿ ಪರಿಚಯುವನ್ನು ಬಯಸಿದ್ದರು. ಮೋತಿಲಾಲರನ್ನು ಕಂಡು ಮಾತನಾಡಿಸಿ ತಮ್ಮ ದೇಶಕ್ಕೆ ಬರಬೇಕೆಂದು ಆಹ್ವಾನ ಕೊಟ್ಟರು.

ಸರ್ಕಾರದ ಅಧಿಕಾರಿವರ್ಗದವರು ಗಾಬರಿಗೊಳಗಾದರೆ ನಡೆಸ ಬಹುದಾದ ಅಚಾತುರ್ಯಕ್ಕೆ ಇದು ನಿದರ್ಶನವಾಯಿತು. ಜವಾಹರ ಲಾಲರಿಗೆ ಇದೇ ಮೊದಲ ಅನುಭವ. ಅಂತೂ ಈ ಸಂದರ್ಭದಲ್ಲಿ ಇಲಾಹಾಬಾದ್ ಬಳಿ ಜವಾಹರಲಾಲರು ಹತ್ತು ಹದಿನೈದು ದಿನಗಳನ್ನು ಆ ವೈಶಾಖದಲ್ಲಿ ಕಳೆಯಬೇಕಾಯಿತು. ಆಗಲೇ ರೈತಾಪಿ ಜನರ ಮಧ್ಯೆ ಸುಳಿದಾಡುವ ಪ್ರಾಪ್ತಿಯೊದಗಿತು.

ಜೂನ್ ತಿಂಗಳಲ್ಲೊಂದು ದಿವಸ ಇದ್ದಕ್ಕಿದ್ದಂತೆಯೇ ಸುಮಾರು ಇನ್ನೂರು ಮಂದಿ ರೈತರು ಪರ್ತಬ್‌ಘರ್ ಜಿಲ್ಲೆಯೊಳಗಿಂದ ಇಲಾಹಾ ಬಾದ್ ನಗರಕ್ಕೆ ಐವತ್ತು ಮೈಲಿ ನಡೆದುಬಂದು ಯಮುನಾ ನದಿಯ ದಡದಮೇಲೆ ಕುಳಿತುಬಿಟ್ಟರು. ರಾಮಚಂದ್ರನೆಂಬಾತನು ಅವರಿಗೆ ಮುಖಂಡನಾಗಿದ್ದನು. ಇದೇನು ಹೀಗೆ ರೈತರ ಗುಂಪು ಬಂದಿತೆಂದು ಕೊಂಡು ಹಲಕೆಲವರು ಮಿತ್ರರೊಂದಿಗೆ ಜವಾಹರಲಾಲರು ಅವರಬಳಿಗೆ ಹೋದರೆ "ತಾಲೂಕಾದಾರರ ಕ್ರೌರ್ಯವನ್ನೂ ಹಿಂಸೆಯನ್ನೂ ತಾಳ ಲಾರದೆ ಹೊರಟುಬಂದೆವು. ಹೇಗಾದರೂ ಮಾಡಿ ನಮ್ಮನ್ನು ನಿಮ್ಮ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಿ. ಹಾಗೆಯೇ ಹಿಂತಿರುಗಿದರೆ ನೀವೇಕೆ ಹೋದಿರೆಂದು ಸಿಟ್ಟುಗೊಂಡು ನಮಗೆ ಮತ್ತಷ್ಟು ನರಕ ಯಾತನೆ ಕೊಡುವರವರು. ನಮ್ಮ ಜೊತೆಯಲ್ಲಿಯೇ ನೀವೂ ಬಂದು ನಮ್ಮ ಹಿಂಸೆಯೆಷ್ಟೆಂದು ಸ್ವತಃ ನೋಡಬೇಕು" ಎಂದು ಅಂಗಲಾಚಿ ದರು. ಎರಡು ಮೂರು ದಿನ ಬಿಟ್ಟುಕೊಂಡು ಬರುತ್ತೇವೆಂದು ಜವಾ ಹರಲಾಲರು ಹೇಳಿದ ತರುವಾಯ ಆ ಗುಂಪು ಅಲ್ಲಿಂದ ಹೊರಟಿತು.

ಅವರ ನಾಯಕನಾಗಿದ್ದ ರಾಮಚಂದ್ರ ಮಹಾರಾಷ್ಟ್ರದಲ್ಲಿ ಹುಟ್ಟಿ ದಿನಕೂಲಿಯಂತಿದ್ದು ಕಡೆಗೆ ಫಿಜಿ ದ್ವೀಪಗಳಿಗೆ ಕಂಟ್ರಾಕ್ಟ್ ಕೂಲಿ

ಯಾಗಿ ಹೊರಟಿದ್ದವನು. ಅಲ್ಲಿಂದ ಹಿಂತಿರುಗಿ ಬಂದಮೇಲೆ ಆಯೋಧ್ಯೆ ಅಥವಾ ಅವಧ ಪ್ರಾಂತದ ಹಳ್ಳಿಗಳಲ್ಲಿ ತುಲಸೀದಾಸ ರಾಮಾಯಣ ವನ್ನು ಹೇಳುತ್ತ ರೈತಾಪಿ ಜನರ ಸುಖದುಃಖಗಳನ್ನು ವಿಚಾರಿಸುತ್ತ ಇದ್ದವನು. ತಮ್ಮ ಸುಖದುಃಖಗಳನ್ನು ಹೇಳಿಕೊಳ್ಳಲು ಗುಂಪು ಸೇರಿ ಸಭೆ ನಡೆಸುವುದನ್ನು ರೈತರಿಗೆ ಹೇಳಿಕೊಟ್ಟಿದ್ದನು. ಎಲ್ಲಿಯೋ ಸಭೆ ಸೇರಬೇಕೆಂದು ನಿಶ್ಚಯವಾದ ಕೂಡಲೆ ಹಳ್ಳಿಯಿಂದ ಹಳ್ಳಿಗೆ "ಸೀತಾ ರಾಮ್" ಎಂಬ ಕೂಗು ಹರಡುವುದು, ಆ ಕೂಗನ್ನು ಕೇಳಿದ ಕೂಡಲೆ ತಾವೂ ಅದನ್ನೇ ಕೂಗುತ್ತ ಗ್ರಾಮಸ್ಥರು ಗುಂಪನ್ನು ಸೇರಿಕೊಳ್ಳುವುದು, ಪ್ರವಾಹ ಕೊಚ್ಚಿಕೊಂಡುಬಂದಂತೆ ಎಂಟು ದಿಕ್ಕುಗಳಿಂದಲೂ ತಂಡ ತಂಡಗಳಾಗಿ ಸೀತಾರಾಮ್ ಎಂಬ ಧ್ವನಿಗೈಯುತ್ತ ಸಭಾಸ್ಥಾನಕ್ಕೆ ಬಂದು ಸೇರುವುದು—ಇಷ್ಟೂ ಸಾಮಾನ್ಯವಾಗಿ ಬರೈಲಿ, ಫೈಜಾಬಾದ್, ಪರ್ತಬ್‌ಘರ್ ಜಿಲ್ಲೆಗಳಲ್ಲಿ ವಾಡಿಕೆಯಾಗಿತ್ತು. ಹೋಂರೂಲು ಚಳುವಳಿ ಮತ್ತು ಗಾಂಧೀಜಿಯ ಸುದ್ದಿಯನ್ನು ಹಾಗೂ ಹೀಗೂ ರಾಮಚಂದ್ರನು ಹರಡಿದ್ದನು. ಗ್ರಾಮಾಂತರ ಪ್ರದೇಶದಲ್ಲಿ ಈ ರೀತಿ ಸಾವಿರಾರು ಜನರು ಸಭೆ ಸೇರುತ್ತಲಿದ್ದಾಗ್ಯೂ ಪಟ್ಟಣಗಳಲ್ಲಿ ಅವುಗಳ ವರ್ತಮಾನವೇ ಇಲ್ಲ. ವರ್ತಮಾನ ಪತ್ರಿಕೆಗಳಲ್ಲಿ ಕಂಡುದೆಲ್ಲವೂ ಪಟ್ಟಣಗಳ ಸಂಗತಿಯೇ. ಗ್ರಾಮಗಳಲ್ಲಿದ್ದ ಜನರ ಸುದ್ದಿಯೇ ಇಲ್ಲ. ವರ್ತಮಾನ ಪತ್ರಿಕೆಗಳ ರೀತಿಯೇ ಹಾಗಾಗಿದೆ.

ಅವಧ ಪ್ರಾಂತದಲ್ಲಿ ಭೂಸ್ಥಿತಿವಂತರಿಗೆ ತಾಲೂಕಾದಾರರೆಂದು ಹೆಸರು. ಹೆಚ್ಚುಕಡಿಮೆ ಬಂಗಾಳದ ಖಾಯಂ ಜಮೀನ್ದಾರಿಯಿದ್ದಂತೆ. ಆ ತಾಲೂಕಾದಾರರಲ್ಲಿ ನಿಜವಾಗಿ ಶ್ರೀಮಂತರಾದವರು ಅಲ್ಪಮಂದಿ ಯಾದರೂ ಅಲ್ಲಿಯ ಮುಖ್ಯಾಂಶ ನೇಗಿಲು ಹಿಡಿದು ದುಡಿಯುವ ರೈತನಿಗೆ ಸ್ವಂತ ಭೂಮಿಯಿಲ್ಲ. ಭೂಮಿಯನ್ನು ಜಮೀನ್ದಾರನಿಂದ ಕಂದಾಯಕ್ಕೆಂದು ಗೊತ್ತುಮಾಡಿಕೊಂಡಿರಬೇಕು. ಕಂದಾಯವಲ್ಲದೆ ಬೇರೆಯಾಗಿ ರೈತರು ಧಣಿಗಳಿಗೆ ತೆರಬೇಕಾದುದು ಸುಮಾರು ನಲವತ್ತು ಐವತ್ತು ಬಗೆಯ ಕಾಣಿಕೆಗಳು. ಈ ಕಾಣಿಕೆಗಳಿಗೆ ಬೆಂಬಲಕೊಟ್ಟ ಕಾನೂನೊಂದಾದರೂ ಇಲ್ಲದಿದ್ದಾಗ್ಯೂ ತೆರಾಣೆಯ ಹಿಂಸೆ ತಪ್ಪಿದ್ದಲ್ಲ.

ಧಣಿಯ ಮನೆಯಲ್ಲಿ ಮದುವೆಯಾದರೊಂದು, ಮಗನನ್ನು ದೂರ ದೇಶದಲ್ಲಿ ಓದಿಸುತ್ತಿದ್ದರೊಂದು, ಅಧಿಕಾರಿಗಳಿಗೌತಣ ಮಾಡಿಸಿದ ರೊಂದು, ಮೋಟಾರ್‌ಕಾರ್ ಸ್ವಂತಕ್ಕೆ ಕೊಂಡರೊಂದು — ಗೊತ್ತಿಲ್ಲ, ಮೇರೆಯಿಲ್ಲ. ಇವುಗಳಿಗಾಗಿ ಸಾಲ ಮಾಡಿದ ರೈತನು ಸಾಲಗಾರನ ಹಿಂಸೆಯನ್ನೂ ಕಟ್ಟಿಕೊಂಡನು. ಕೊಡದಿದ್ದರೆ ಧಣಿ ಭೂಮಿಯನ್ನೇ ಕಿತ್ತುಕೊಳ್ಳುವನು. ರೈತರಿಗೆ ಒಗ್ಗಟ್ಟಿಂಬುದಿಲ್ಲದೆ ಧಣಿಗಳು ನಡೆಸಿದ ಅನ್ಯಾಯಕ್ಕೂ ಕೊಟ್ಟ ಹಿಂಸೆಗೂ ಎಲ್ಲೆಯೇ ಇಲ್ಲದಂತಿತ್ತು. ರೈತರಿಗೆ ಒಗ್ಗಟ್ಟೊಂದು ಬಂದಬಳಿಕ ನೂರಾರು, ಸಾವಿರಾರು ರೈತರು ಒಟ್ಟು ಗೂಡಿ ತಮ್ಮ ಬಲವನ್ನು ತಾವು ತಿಳಿದವರಾದರು.

ಕೊಟ್ಟ ವಾಗ್ದಾನದಂತೆ ಜವಾಹರಲಾಲರು ಇಲಾಹಾಬಾದಿನಿಂದ ಹಳ್ಳಿಗಳ ಕಡೆಗೆ ಹೊರಟರು. ಮೊದಲು ಹೊರಟಾಗ ಹಗುರವಾದ ಮೋಟಾರ್‌ಕಾರಿನಲ್ಲಿ ಸಂಚಾರ ಮಾಡಿದರು; ಆ ಕಾರಿಗಾಗಿ ರೈತರು ರಸ್ತೆಯಿಲ್ಲದ ಕಡೆ ರಾತ್ರಿಯೆಲ್ಲ ಕಷ್ಟಪಟ್ಟು ರಸ್ತೆ ಕಟ್ಟಿದರು; ಹೂಳಿನಲ್ಲಿ ಹೂತುಕೊಂಡಾಗ ಹೆಗಲುಕೊಟ್ಟು ಅನಾಮತ್ತಾಗಿ ಎತ್ತಿಟ್ಟರು. ಕಡೆಗೆ ಕಾರನ್ನು ಬಿಟ್ಟು ಕಾಲ್ನಡಿಗೆಯಿಂದಲೇ ಮುಂದಕ್ಕೆ ಸಂಚಾರವಾಯಿತು. ಎಲ್ಲೆಲ್ಲಿ ಹೋದರೂ ಹಿಂದೆ ಪೋಲೀಸ್ ಪಡೆ, ಸಿ.ಐ.ಡಿ. ಗುಂಪುಗಳಲ್ಲದೆ ಒಬ್ಬ ಡೆಪ್ಯುಟಿ ಕಲೆಕ್ಟರ್ ಬೇರೆ. ಜವಾಹರಲಾಲರ ಹಿಂದೆ ಹೊರಟ ತ ಡೆಪ್ಯುಟಿ ಕಲೆಕ್ಟರ್ ಬಿನ್ನಣಿಗ ಆಗಾಗ್ಗೆ "ಇಷ್ಟು ಆವೇಶದಿಂದ ಕೆಲಸ ಮಾಡಿದರೆ ಸಹಿಸುವುದಕ್ಕಾದೀತೆ! ದಮ್ಮಯ್ಯ! ಸ್ವಲ್ಪ ನಿದಾ ನಿಸಿ" ಎಂದು ಕೇಳುತ್ತಿದ್ದು ಕಡೆಗೆ ಹಿಂದೆ ಬರುವುದನ್ನೇ ಬಿಟ್ಟನಂತೆ. ಗುಮಾನಿಯಿಂದ ಬಂದವರ ಪಾಡು!

"ಉರಿಬೇಸಗೆಯ ಕಾಲ. ಬಿಸಿಲು ಸುಡುತ್ತ ಕಣ್ಣು ಕುಕ್ಕುತ್ತಲಿತ್ತು. ಇಂಗ್ಲಂಡಿನಿಂದ ಹಿಂತಿರುಗಿ ಬಂದಾಗಿನಿಂದ ಬೇಸಗೆಯೆಂದರೆ ಬೆಟ್ಟಗಳ ಮೇಲಕ್ಕೋಡುತ್ತಿದ್ದವನು ನಾನು. ಹಾಗಿದ್ದರೂ ತಲೆಗೊಂದು ಸಣ್ಣ ಚೌಕ ವನ್ನು ಮಾತ್ರ ಸುತ್ತಿಕೊಂಡು ಹಗಲೆಲ್ಲ ಹೊರಗಡೆಯೇ ಅಲೆದಾಡಿದೆ. ಮನಸ್ಸಿನ ತುಂಬ ಬೇರೆ ಯೋಚನೆಗಳಿದ್ದ ಕಾರಣ ನನಗಾ ಉರಿಯ ನೆನಪೇ ಇಲ್ಲ. ಉರಿ ಬಿಸಲನ್ನೂ ಕೊರೆಯುವ ಚಳಿಯನ್ನೂ ಯಾರೊಂದಿಗಾದರೂ ನಾನೂ ತಡೆದೇನೆಂದು ತಿಳಿದು ಮನಸ್ಸಿನಲ್ಲಿ ಹೆಮ್ಮೆಗೊಂಡೆ.

ಗಂಗಾತೀರದಲ್ಲಿ ಜಾತ್ರೆಗಾಗಿ ಬಂದಿದ್ದ ಸಾವಿರಾರು ರೈತರ ಗುಂಪು ಗಳನ್ನು ನಾನು ಕಂಡಿದ್ದೆನಾದರೂ ಅವರು ದೇಶಕ್ಕೆಷ್ಟು ಮುಖ್ಯವೆಂಬುದನ್ನು ನಿಜವಾಗಿ ನಾನು ಅದುವರೆಗೂ ತಿಳಿದಿರಲಿಲ್ಲ. ಪರ್ತಬ್‌ಘರ್ ಜಿಲ್ಲೆಯೊಳಕ್ಕೆ ಪ್ರವೇಶಿಸಿ ಹಳ್ಳಿಯಿಂದ ಹಳ್ಳಿಗೆ ಸುಳಿದಾಡಿದಾಗ ಆ ಅಂಶ ಮನಸ್ಸಿಗೆ ಗೋಚರ ವಾಯಿತು. ಭಾರತ ಭೂಮಿಯು ರೈತರದೆಂದು ಮನಸ್ಸಿಗಂಟಿತು.

ಅದುವರೆಗೂ ನಾನು ಸಭೆಯಲ್ಲಿ ಮಾತನಾಡಿರಲಿಲ್ಲ. ಭಾಷಣಮಾಡುವು ದೆಂದರೆ ಬೆದರಿಕೆ. ಅದರಲ್ಲೂ ಹಿಂದುಸ್ತಾನಿ ಮಾತನಾಡುವುದೆಂದರೆ ದಿಙ್ಮೂಢ ನಾಗುತ್ತಿದ್ದೆ. ಆ ಭೀರುತೆಯನ್ನು ಈ ರೈತರು ಹೋಗಲಾಡಿಸಿದರು. ಎದುರು ಬದುರಾಗಿ ಸರಳತನದಿಂದ ಮಾತುಕಥೆಗಳನ್ನು ಬೆಳೆಸುವಂತೆ ನಾನೂ ಮಾತ ನಾಡಿದೆ. ನೂರು ಜನ ವಿದ್ದರೂ ಸಾವಿರ ಜನವಿದ್ದರೂ ಹತ್ತು ಸಾವಿರ ಜನ ಕೂಡಿದ್ದರೂ ನನ್ನ ಮನಸ್ಸಿನಲ್ಲಿದ್ದುದನ್ನು ಪೀಠಿಕಾ ವ್ಯಾಖ್ಯಾನಗಳ ಶೈಲಿ ಗಮನಿಸದೆ ನೇರವಾಗಿ ಹೇಳುತ್ತಿದ್ದೆ. ನಾನು ಹೇಳಿದುದು ಎಲ್ಲರಿಗೂ ಅರ್ಥ ವಾಯಿತೋ ಇಲ್ಲವೋ! ಬಹುಭಾಗದವರಿಗೆ ನನ್ನ ಕಂಠಧ್ವನಿಯೇ ಕೇಳಿಸಿರ ಲಾರದು. ಆದರೂ ಭಕ್ತಿಯಿಂದ ಕುಳಿತಿದ್ದರು."

ಈ ಆಂದೋಲನದ ಪರಿಣಾಮವಾಗಿ ರೈತರಿಗೆ ಧೈರ್ಯ ಹುಟ್ಟಿತು; ತಲೆಯೆತ್ತಿಕೊಂಡು ನಡೆಯಲಾರಂಭವಾಯಿತು. ಕಾಣಿಕೆ ಸಲ್ಲಿಸಲಿಲ್ಲ ವೆಂದೊಬ್ಬ ರೈತನನ್ನು ಭೂಮಿಯಿಂದೋಡಿಸಿದಾಗ ಆ ಭೂಮಿಗೆ ಮತ್ತಾವ ರೈತನೂ ಬಾರದಾದನು. ಧಣಿ ಯಾರಾದರೂ ಪುಂಡಾಟಕ್ಕೆ ತೊಡಗಿದ್ದರೆ ನಡೆದುದೇನೆಂದು ವಿಚಾರಣೆಯ ಪ್ರಯತ್ನಕ್ಕೆ ತಕ್ಷಣವೇ ಆರಂಭವಾಯಿತು. ಧಣಿಗಳಿಗೂ ಪೋಲೀಸಧಿಕಾರಿಗಳಿಗೂ ವಿಚಾರಣೆ ನಡೆದೀತೆಂಬ ಶಂಕೆ ಹುಟ್ಟಿ ಅಡ್ಡಿಯಾಯಿತು.

ತಮ್ಮ ಬಲವನ್ನು ತಿಳಿದ ರೈತರು ದೊಂಬಿ ಮಾಡಿ ಅಕೃತ್ಯಗಳನ್ನು ನಡೆಸಬಹುದಾಗಿತ್ತು. ಜಮಿನ್ದಾರರನ್ನೆತ್ತಿಕೊಂಡುಹೋಗಿ ಮುಯ್ಯಿ ತೀರಿಸಿಕೊಳ್ಳಬಹುದಾಗಿತ್ತು. ಇಂತಹುದೇನೂ ನಡೆಯಲಿಲ್ಲ. ರೈತರು ಸಹಜವಾಗಿ ಶಾಂತಿಪ್ರಿಯರು. ಜಮಿನ್ದಾರರ ಮೇಲೆ ಕೈಮಾಡಿದುದಕ್ಕೆ ಒಂದೇ ದೃಷ್ಟಾಂತ ನಡೆದುದು. ಮಿತ್ರರ ಮಧ್ಯೆ ಜಮಿನ್ದಾರನು ತನ್ನ ಮನೆ ಜಗುಲಿಯ ಮೇಲೆಯೇ ಕುಳಿತಿದ್ದಾಗ ರೈತನೊಬ್ಬನು ನೇರವಾಗಿ ಹೋಗಿ ಕಪಾಲಕ್ಕೆರಡೇಟು ಕೊಟ್ಟನಂತೆ! ಆ ಜಮಿನ್ದಾ ರನು ಕೈಹಿಡಿದ ಪತ್ನಿಯನ್ನು ನಿರ್ಲಕ್ಷ್ಯಮಾಡಿದ ತಪ್ಪಿಗಾಗಿ!

ಆದರೆ ಬೇರೆ ಬಗೆಯಾದ ಒರಟುತನವನ್ನು ರೈತರು ಕಾಣಿಸುವವರಾದರು. ಟಿಕೆಟ್ಟುಗಳಿಲ್ಲದೆ ನೂರಾರು ಹಳ್ಳಿಗರು ರೈಲುಗಳನ್ನೇರಿಕೊಂಡು ರೈಲುಸವಾರಿ ಮಾಡಲಾರಂಭಿಸಿದರು. ರೈಲಿನಧಿಕಾರಿಗಳು ಆಕ್ಷೇಪವನ್ನೊಡ್ಡಿದಾಗ "ಆ ಕಾಲವೆಲ್ಲ ಹೋಯಿತಯ್ಯ!" ಎನ್ನುವರು. ಇದನ್ನು ಅವರಿಗೆ ಯಾರು ಹೇಳಿಕೊಟ್ಟರೋ ಎಂತೋ! ಆದರೆ ಸ್ವಲ್ಪ ಕಾಲದಲ್ಲಿಯೆ ರೈಲುಗಳ ಅಧಿಕಾರಿಗಳು ಎಚ್ಚರವನ್ನು ವಹಿಸಿ ಇದನ್ನು ನಿಲ್ಲಿಸಬಲ್ಲವರಾದರು. 1920ರಲ್ಲಿಯೇ ಕೆಲವರು ಕಿಸಾನ್ ಮುಖಂಡರನ್ನು ಸರ್ಕಾರದವರು ದಸ್ತಗಿರಿ ಮಾಡಿ ಪರ್ತಬ್‌ಘರ್ ಪಟ್ಟಣದಲ್ಲಿ ವಿಚಾರಣೆಗೆ ನಿಲ್ಲಿಸಿದರು. ಕೋರ್ಟಿನ ಸುತ್ತಲೂ ಸಾವಿರಾರು ಮಂದಿ ರೈತರು ಗುಂಪುಗೂಡಿಬಿಟ್ಟರು. ಮ್ಯಾಜಿಸ್ಟ್ರೇಟನು ದಿಗಿಲುಬಿದ್ದು ವಿಚಾರಣೆಯನ್ನು ಮರುದಿನಕ್ಕಿಟ್ಟನು; ಮಾರನೆ ದಿನ ಎರಡರಷ್ಟಾಯಿತು ಗುಂಪು. ವಿಚಾರಣೆಯ ಕೊನೆಯಲ್ಲಿ ಆ ಮುಖಂಡರ ಬಿಡುಗಡೆಯಾಯಿತು. ತಮ್ಮ ಗುಂಪಿನ ಮುಂದೆ ಅಧಿಕಾರಿಗಳಿಗೆ ಬಲವಿಲ್ಲವೆಂದು ಈ ಅಜ್ಞಾನಿರೈತರು ಭಾವಿಸಿಕೊಂಡರು.

ಮುಂದಿನ ವರುಷ ನಾಗಪುರದ ಕಾಂಗ್ರೆಸ್‌ಸಭೆ ಮುಗಿಸಿಕೊಂಡು ಇಲಾಹಾಬಾದಿಗೆ ಜವಾಹರಲಾಲರು ಹಿಂತಿರುಗುತ್ತಿದ್ದಾಗ ರಾಯಬರೈಲಿಯಿಂದ ತಂತಿ ಬಂತು. ತಕ್ಷಣವೇ ಹೊರಟುಬರಬೇಕೆಂದು ಕೇಳಿತ್ತು. ಅಲ್ಲಿ ನಡೆದಿದ್ದುದೇನು? ಕಿಸಾನ್ ನಾಯಕರಾಗಿದ್ದ ಕೆಲವರನ್ನು ಸರ್ಕಾರದವರು ಹಿಡಿದು ಅಲ್ಲಿಯೆ ಜೈಲಿನಲ್ಲಿಟ್ಟಿದ್ದರು. ಹಿಂದೆ ತಾವು ಗೆದ್ದಿದ್ದುದನ್ನು ಸ್ಮರಿಸಿಕೊಂಡು ರೈತರು ಸಾವಿರಗಟ್ಟಲೆಯಾಗಿ ಗುಂಪುಗೂಡಿದರು. ಸರ್ಕಾರದವರೂ ಸನ್ನದ್ಧರಾಗಿ ಪೋಲೀಸ್ ಪಡೆಯನ್ನೂ ದಂಡನ್ನೂ ಅಣಿಮಾಡಿಟ್ಟಿದ್ದರು. ಆ ಊರಿನ ಹೊರಗಿದ್ದ ಸೇತುವೆ ಬಳಿ ಸೈನ್ಯವು ರೈತರ ಗುಂಪನ್ನು ಅಡ್ಡಿಮಾಡಿ ನಿಂತಿತ್ತು. ಜವಾಹರಲಾಲರು ರೈಲುಸ್ಟೇಷನ್ನಿನಲ್ಲಿಳಿದಕೂಡಲೆ ಈ ಸಮಾಚಾರ ಕೇಳಿ ನೇರವಾಗಿ ಅಲ್ಲಿಗೇ ಹೊರಟರು. ದಾರಿಯಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರಿಂದ ಚಿಟ್ಠೀ ಬಂತು; ಜವಾಹರಲಾಲರು ಆ ಸ್ಥಳ ಬಿಟ್ಟು ದೂರವಾಗಿ ಹೊರಡತಕ್ಕುದೆಂತಿತ್ತು. ಹೀಗೆ ಆಜ್ಞಾಪಿಸಲು ಕಾರಣವೇನೋ ಕಾನೂನೆಂತಹುದೋ

ತಿಳಿಯುವತನಕ ಮುಂದಕ್ಕೇ ಹೋಗತಕ್ಕುದೆಂದು ಜವಾಹರಲಾಲರು ಪ್ರತ್ಯುತ್ತರ ಕೊಟ್ಟು ಮುಂದೆ ಸ್ವಲ್ಪದೂರ ನಡೆಯುವಷ್ಟರಲ್ಲಿ ಬಂದೂಕುಗಳನ್ನು ಹಾರಿಸಿದ ಧ್ವನಿ ಕೇಳಬಂತು. ಸೇತುವಿನ ಬಳಿ ಸೈನ್ಯದವರು ಅಡ್ಡಗಟ್ಟಿ ಜವಾಹರರಿಗೆ ದಾರಿ ಬಿಡದಾದರು. ಅಲ್ಲಿಯೇ ನಿಲ್ಲಬೇಕಾಯಿತು. ಹಾಗೆ ನಿಂತಿದ್ದ ಜವಾಹರಲಾಲರ ಬಳಿಗೆ ಸಾವಿರಾರು ರೈತಾಪಿ ಜನರು—ಅಲ್ಲಲ್ಲಿ ಅಡಗಿಕೊಂಡಿದ್ದವರು—ಓಡಿಬಂದರು; ಅತಿ ಭಯಗ್ರಸ್ತರಾಗಿದ್ದರು. ಆಗ ಅಲ್ಲಿಯೇ ನದಿಯ ತಟದಲ್ಲಿ ಎರಡು ಮೂರು ಸಾವಿರ ರೈತರನ್ನು ಸಭೆ ಸೇರಿಸಿ ಅವರ ಗಾಬರಿಯನ್ನು ನೀಗಿಸಿ ಸಮಾಧಾನಕ್ಕೆ ತರಲು ಜವಾಹರಲಾಲರ ಪ್ರಯತ್ನ! ಪಕ್ಕದಲ್ಲಿದ್ದವರ ಮೇಲೆ ಗುಂಡುಗಳು ಬೀರುತ್ತಿದ್ದವು; ಇಲ್ಲಿ ಶಾಂತರಾಗಿ ವರ್ತಿಸುವಂತೆ ಹೇಳುವ ಉದ್ಯಮ. ಸಭೆಯೇನೋ ಸಮರ್ಪಕವಾಗಿಯೆ ನಡೆಯಿತು. ಆ ತರುವಾಯ ಜಿಲ್ಲಾ ಮ್ಯಾಜಿಸ್ಟ್ರೇಟನು ಉಪಾಯವಾಗಿ ಜವಾಹರಲಾಲರನ್ನು ತನ್ನೊಡನೆ ತನ್ನ ಮನೆಗೆ ಕರೆದುಕೊಂಡುಹೋಗಿ ಏನಾದರೊಂದು ನೆಪ ತೋರಿ ಅಲ್ಲಿಯೆ ಎರಡು ಗಂಟೆಕಾಲ ಇಟ್ಟುಕೊಂಡಿದ್ದನು. ಈತನನ್ನು ಹೊರಗೆ ಬಿಡುವುದಕ್ಕೆ ಆತನಿಗೆ ಧೈರ್ಯ ಬರಲಿಲ್ಲ.

ಆದುದೇನು ಕಡೆಗೆ? ಅನೇಕರ ಪ್ರಾಣಗಳು ಗುಂಡಿನೇಟಿನಿಂದ ಹಾರಿಹೋಗಿದ್ದವು. ರೈತರ ವಿಶ್ವಾಸಕ್ಕೆ ಪಾತ್ರರಾಗಿದ್ದವರು ಯಾರಾದರೂ ಅವರನ್ನು ತಡೆದು ಹಿಂತಿರುಗಿರೆಂದು ಹೇಳಿದ್ದರೆ ಅವರು ಶಾಂತತೆಯಿಂದ ಹೊರಟುಹೋಗುತ್ತಿದ್ದರು. ಯಾರೋ ಹೇಳಿದರಂತೆ ಜಿಲ್ಲಾಧಿಕಾರಿಗೆ "ಸ್ವಲ್ಪ ತಾಳಿರಿ. ಜವಾಹರಲಾಲರು ಬರುತ್ತಾರೆ; ಅವರು ಹೇಳಿದರೆ ಇವರೆಲ್ಲರೂ ಸ್ವಸ್ಥರಾಗಿ ಹೊರಟುಬಿಡುತ್ತಾರೆ" ಎಂದು. ಆದರೆ ಅಧಿಕಾರದರ್ಪವನ್ನು ಅಧಿಕಾರಿಗಳು ಬಿಟ್ಟುಕೊಡುವುದು ಸುಲಭವೇ? ಜಿಲ್ಲಾಧಿಕಾರಿಯಾದ ತನ್ನ ಮಾತು ನಡೆಯದಿದ್ದಾಗ ಯಾರೋ ಯಃಕಶ್ಚನ ಕಾಂಗ್ರೆಸ್ಸಿನವನ ಮಾತು ನಡೆಯುವಂತೆ ಅವಕಾಶಕೊಟ್ಟು ಸೋಲನ್ನು ಕಟ್ಟಿಕೊಳ್ಳುವುದೇ!

ಪುನಃ 1921ರಲ್ಲಿ ಫೈಜಾಬಾದ್ ಜಿಲ್ಲೆಯಲ್ಲಿ ದಬ್ಬಾಳಿಕೆ ರೇಗಿತ್ತು. ಅಲ್ಲಿ ಕೆಲವರು ರೈತರು ತಾಲೂಕಾದಾರನೊಬ್ಬನ ಮನೆಗೆ

ನುಗ್ಗಿ ಲೂಟಿ ಮಾಡಿಬಿಟ್ಟಿದ್ದರು. ಮತ್ತೊಬ್ಬ ತಾಲೂಕಾದಾರನ ಕಡೆಯುವರು ಉಪಾಯದಿಂದ ಈ ರೈತರನ್ನೆತ್ತಿಕಟ್ಟಿದ್ದರು. ಆ ಅಜ್ಞಾನಿ ರೈತರಿಗೆ "ಈಗ ನೀವು ಲೂಟಿ ಹೊಡೆಯುವುದು ಮಹಾತ್ಮಾ ಗಾಂಧಿಯವರ ಇಷ್ಟ"ವೆಂಬುದಾಗಿ ಯಾರೋ ಹೇಳಿದ್ದರು. ಮಹಾತ್ಮಾ ಗಾಂಧೀಕಿ ಜೈಯೆಂದು ಕೂಗುತ್ತ ಹೋಗಿ ಲೂಟಿ ಹೊಡೆದಿದ್ದರು. ಈ ಸಮಾಚಾರ ಕೇಳಿದ ಕೂಡಲೆ ಜವಾಹರಲಾಲರು ಹೊರಟರು. ಆ ದಿನವೇ ಸಭೆ ಕರೆದರು. ಐದಾರು ಸಾವಿರ ಮಂದಿ ಸೇರಿದರು. ಸಭೆ ಮೊದಲಾದ ಕೂಡಲೆ ಅತಿ ಕೋಪಕ್ಕೊಳಗಾಗಿದ್ದ ಜವಾಹರಲಾಲರು "ಇಂತಹ ಅಕೃತ್ಯಗಳನ್ನು ಮಾಡಿ ಏತಕ್ಕಿಷ್ಟು ಅವಮಾನ ಕಟ್ಟಿಕೊಂಡಿರಿ? ನಮ್ಮೆಲ್ಲರಿಗೂ ಅವಮಾನವನ್ನು ತಂದಿಟ್ಟಿರಿ?" ಮುಂತಾಗಿ ಕ್ರೂರವಾಗಿ ಮಾತನಾಡಿ "ಆ ಲೂಟಿಯಲ್ಲಿ ಯಾರು ಯಾರು ಸೇರಿಕೊಂಡಿದ್ದಿರೋ ಅವರು ಎಲ್ಲರೆದುರಿಗೆ ಒಪ್ಪಿಕೊಳ್ಳಿ, ಕೈಯೆತ್ತಿ!" ಎಂದಾಗ ಇಪ್ಪತ್ತು ಮೂವತ್ತು ಮಂದಿ ಕೈಗಳನ್ನೆತ್ತಿದರು. ಸಭೆ ಮುಗಿದ ತರುವಾಯ ಜವಾಹರಲಾಲರಿಗೆ ಅವರು ಮೋಸಹೋಗಿದ್ದುದು ತಿಳಿದು ಬಂತು. ಈ ಬಡಪಾಪಿಗಳನ್ನು ತಾವೇ ಹಿಡಿದುಕೊಟ್ಟಂತಾಯಿತಲ್ಲವೇ ಎನ್ನಿಸಿತು. ಕೈಗಳನ್ನೆತ್ತಿದ್ದಷ್ಟು ಮಾತ್ರರೇ ಅಲ್ಲ; ಸಾವಿರಕ್ಕೆ ಮೇಲ್ಪಟ್ಟ ದಸ್ತಗಿರಿಗಳಾಗಿಹೋದವು; ಜಿಲ್ಲಾ ಜೈಲ್‌ಖಾನೆ ಬಿರಿಯುವಂತೆ ಭರ್ತಿಯಾಯಿತು. ಅನೇಕರು ಜೈಲಿನಲ್ಲಿಯೇ ಅಸುಗಳನ್ನು ತೊರೆದರು, ಅನೇಕರು ದೀರ್ಘಕಾಲದ ಸಜಕ್ಕೆ ಗುರಿಯಾದರು. ವಿಚಾರಣೆಯೇ ಒಂದು ವರ್ಷಕಾಲ ನಡೆಯಿತು.

ಇದೆಲ್ಲ ನಡೆದುದು 1921ರಲ್ಲಿ ಅಥವಾ ಅದಕ್ಕೆ ಸ್ವಲ್ಪ ಮುಂಚೆ. ಕಾಂಗ್ರೆಸ್ ಕೆಲಸಗಾರರು ತಂಡತಂಡವಾಗಿ ಜೈಲುಗಳಿಗೆ ಹೊರಡುವ ಮುನ್ನ.

## 3. ಮೊದಲ ಬಂದೀಖಾನೆ

1920ರಲ್ಲಿ ಗಾಂಧೀಜಿಯವರ ಮಹಿಮೆಯು ಉದಯ ರಾಷ್ಟ್ರದಲ್ಲಿ. ಲೋಕಮಾನ್ಯರ ದೇಹಾಂತದ ತರುವಾಯ ಗಾಂಧೀಜಿಯವರ ಸಂಚಾರ ಬಿರುಗಾಳಿಯಂತೆ ನಡೆಯಿತು. ಬೆಜವಾಡ ಪ್ರೋಗ್ರಾಂ

ಎಂಬ ಕಾರ್ಯಕ್ರಮವನ್ನು ಅಭೂತಪೂರ್ವವಾಗಿ ಸಾಧಿಸಿದರು. ಅಸಹಕಾರದ ಕರ್ತವ್ಯವನ್ನು ಮೆಟ್ಟಲು ಮೆಟ್ಟಲಾಗಿ ನಿರೂಪಿಸಿ ಒಂದು ಕೈಯಿಂದ ವಿನಾಶಾತ್ಮಕ ಮತ್ತೊಂದುಕೈಯಿಂದ ನಿರ್ಮಾಣಾತ್ಮಕಗಳನ್ನು ಸಾಧಿಸುವ ಅಂಶಗಳು ನಿಶ್ಚಿತವಾಗಿದ್ದವು. ಬೂದಿ ಮುಚ್ಚಿದ್ದ ಅಗ್ನಿ ಪರ್ವತದೊಳಗೆ ಅಂತರಂಗವಾಗಿಯೆ ಹುಟ್ಟಿದ ಸ್ಫೋಟನ ಬಿರಿದಂತೆ ಆಯಿತು. ಎಲ್ಲೆಲ್ಲಿಯೂ ಗಾಂಧೀಜಿಯವರ ಭಾಷಣಗಳ ಸಾರಾಂಶವು ವೇದಮಂತ್ರ ರೂಪ ತಾಳಿ "ಸ್ವತಂತ್ರರಾಗಿ! ಇನ್ನು ಗುಲಾಮತನ ಬೇಡ" ಎಂದು ಪ್ರತಿ ಹೃದಯದಲ್ಲಿಯೂ ಮಿಡಿಯಿತು.

ಇಲಾಹಾಬಾದ್ ಪಟ್ಟಣದಲ್ಲಿ ಚುನಾವಣೆಗಳ ಬಹಿಷ್ಕಾರ. ಚುನಾವಣೆಗೆಂದು ಗೊತ್ತಾದ ದಿನ ವೋಟುಗಳ ಚಾವಡಿಗಳಲ್ಲಿ ವೋಟುದಾರನೊಬ್ಬನಾದರೂ ಇಲ್ಲ. ಆ ಬಹಿಷ್ಕಾರವನ್ನು ಕಂಡವರು ಆಶ್ಚರ್ಯದಿಂದ ಬೆರಗಾದರು. ಕಾಂಗ್ರೆಸ್ ಕೆಲಸಗಾರರಿಗೆ ಪರಮೋತ್ಸಾಹ! ಮುಚ್ಚುಮರೆಯಿಲ್ಲದೆ ಯಾವ ಅಂಜಿಕೆಯೂ ಇಲ್ಲದೆ ಪ್ರಕಟವಾಗಿ ಧೈರ್ಯದ ಮಾತುಗಳನ್ನಾಡುತ್ತ ಇಟ್ಟುಕೊಂಡ ಕರ್ತವ್ಯದಲ್ಲಿ ನಿರತರಾಗಿದ್ದರು. ಇಂಗ್ಲಿಷ್ ಅಧಿಕಾರಿಗಳಿಗೆ ಇದು ಅರ್ಥವಾಗಲಿಲ್ಲ. ಬಲಪ್ರಯೋಗವನ್ನೇ ಹುಟ್ಟಿದಂದಿನಿಂದಲೂ ನಂಬಿದ್ದ ಆ ಜನರಿಗೆ ಈ ಅಹಿಂಸೆಯೆಂಬುದೂ ಅಹಿಂಸಾತ್ಮಕವಾದ ಕಾರ್ಯಕಲಾಪಗಳೆಂಬುದೂ ತಿಳಿಯಲೇ ಇಲ್ಲ. ಹಿಂದುಸ್ತಾನವಾಗಲಿ ಚೀನವಾಗಲಿ ಕತ್ತಲೆ ಗುಹೆಗಳಿಂದ ತುಂಬಿವೆಯೆಂದೂ ಆ ಗುಹೆಗಳಲ್ಲಿ ದೇಶೀಯರು ಅಡಗಿದ್ದು ಪಿತೂರಿಗಳನ್ನು ಬನಾಯಿಸಿ ಎಂದಾದರೂ ತಮ್ಮ ಮೇಲೆ ಬೀಳುವರೆಂದೂ ನಂಬಿದ್ದ ಇಂಗ್ಲಿಷ್ ಜಾತಿಯವರ ಅಂತರಂಗದಲ್ಲಿ ದಿಗಿಲು. ಪಂಜಾಬಿನಲ್ಲಿ ಜಾಲಿಯನ್‌ವಾಲಾಬಾಗ್ ಮುಂತಾದ ರಾಕ್ಷಸ ಕೃತ್ಯಗಳನ್ನವರು ನಡೆಸಿದುದಕ್ಕೆ ಆ ಚಿತ್ತವೃತ್ತಿಯೇ ಪ್ರೇರಕ. ಕಾರಣ ಕಂಡೋ ಕಾಣದೆಯೋ ಇಂಗ್ಲಿಷ್ ಅಧಿಕಾರಿ ವರ್ಗದವರು ಮನಸ್ಸಿನಲ್ಲಿ ಗಾಬರಿಗೊಂಡು ಬಲ ಪ್ರಯೋಗದಿಂದ ಅತ್ಯಾಚಾರಗಳನ್ನು ನಡೆಸುವವರು.

ಜವಾಹರಲಾಲರ ತಂಗಿ ವಿಜಯಲಕ್ಷ್ಮಿ-ರಣಜಿತ್ ಪಂಡಿತರ ಮದುವೆ ಮೇ ತಿಂಗಳ ಹತ್ತನೆ ತಾರೀಖಿಗೆ ಗೊತ್ತಾಯಿತು. ಜ್ಯೋತಿಷ್ಕರು ಗಣನೆ ಮಾಡಿ ಶುಭ ದಿನವೆಂದು ನಿಶ್ಚಯ ಮಾಡಿದ್ದರು. ಪಂಡಿತ ಮೋತಿಲಾಲರು ಸಹಜವಾಗಿ ತಮ್ಮ ಆಪ್ತ ಮಿತ್ರರಾಗಿದ್ದ ಕಾಂಗ್ರೆಸ್ ಮುಖಂಡರನ್ನು ಕರೆದಿದ್ದರು. ರಾಷ್ಟ್ರನಾಯಕರು ಇಲಾಹಾಬಾದಿನಲ್ಲಿ ಸೇರುವ ಸಮಯವನ್ನು ಉಪಯೋಗಿಸಿಕೊಳ್ಳುವ ಇಚ್ಛೆಯಿಂದ ವರ್ಕಿಂಗ್ ಕಮಿಟಿಯ ಅಧಿವೇಶನವಲ್ಲದೆ ಜಿಲ್ಲಾ ಸಮ್ಮೇಳನವೂ ಏರ್ಪಾಟಾಯಿತು. ಸಾವಿರಾರು ಮಂದಿ ಕಾಂಗ್ರೆಸ್ ಕೆಲಸಗಾರರು ನಗರದಲ್ಲಿ ಓಡಾಡಲು ಮೊದಲಾಯಿತು. ಈ ಸಮಯದಲ್ಲಿ ಅಲ್ಲಿದ್ದ ಇಂಗ್ಲಿಷ್ ಜಾತಿಯವರು ಗಾಬರಿಗೊಂಡರು. ಮೇ ಹತ್ತನೇ ತಾರೀಖೇ ಹಿಂದೆ ಸಿಪಾಹಿ ದಂಗೆಯೆಂಬುದು ಮೊದಲಾಗಿದ್ದದ್ದು. ಅದನ್ನು ಸ್ಮರಿಸಿಕೊಂಡು ಇಂಗ್ಲಿಷ್ ಜಾತಿಯವರು ತಮ್ಮ ಸೇವಕರನ್ನು ದೂರವಾಗಿಡುತ್ತ ಕಿಸೆಯಲ್ಲಿ ಪಿಸ್ತೂಲುಗಳನ್ನು ಹೊತ್ತುಕೊಂಡು ಯಾವ ಕ್ಷಣದಲ್ಲಿ ಪ್ರಾಣಾಪಾಯವೋ ಎಂದುಕೊಂಡು ಅತಿ ಜಾಗ್ರತರಾಗಿದ್ದರು. ಇಲಾಹಾಬಾದ್ ಕೋಟೆಯೊಳಗೆ ಇಂಗ್ಲಿಷ್ ಜಾತಿಯವರು ಸುರಕ್ಷಿತವಾಗಿ ಸೇರಿಕೊಂಡಿರಲು ತಕ್ಕ ಸಿದ್ಧತೆಗಳೂ ನಡೆದಿದ್ದುವಂತೆ.

ಅಸಹಕಾರವನ್ನೊಪ್ಪಿದ ಕೂಡಲೆ ಜವಾಹರಲಾಲರು ತಮ್ಮ ವಕೀಲೀ ವೃತ್ತಿಯನ್ನು ಮಾತ್ರವೇ ಅಲ್ಲದೆ ಪೂರ್ವ ಸ್ನೇಹಿತರ ಗುಂಪುಗಳನ್ನೂ ವಿಹಾರ ವಿಲಾಸಗಳನ್ನೂ ತ್ಯಾಗಮಾಡಿ ಸದಾ ಕಾರ್ಯನಿರತರಾದರು. ಮನೆಯನ್ನೂ ಹೆಂಡತಿಯನ್ನೂ ಮಗಳನ್ನೂ ಬಿಟ್ಟಂತೆಯೆ ಇದ್ದುಕೊಂಡು ಕೆಲಸ ಕಾರ್ಯಗಳನ್ನು ನಡೆಸುತ್ತಿದ್ದರು. ಕಚೇರಿಗಳಲ್ಲಿ ವಾಸ, ಸಭೆಗಳಲ್ಲಿ ಕಾಲಹರಣ, ಸಾರ್ವಜನಿಕ ಸಭೆಗಳಲ್ಲಿ ಓಡಾಟ. ಸಹಜ ಕೋಮಲೆಯೂ ಗಂಭೀರೆಯೂ ಆಗಿದ್ದ ಕಮಲಾದೇವಿ ಈ ಕಾರ್ಯಕಲಾಪಗಳನ್ನು ಎಷ್ಟೋ ಸ್ಥೈರಣೆಯಿಂದ ಸಹಿಸಿರಬೇಕೆಂದು ಜವಾಹರಲಾಲರು ಕಾಲಾನಂತರದಲ್ಲಿ ನೆನಸಿಕೊಂಡರು. ತೆರಪಿಲ್ಲದೆ ಕಾರ್ಯದಲ್ಲಿ ಉತ್ಸಾಹದಿಂದ ನುಗ್ಗುವ ಸ್ವಭಾವ ಜವಾಹರಲಾಲರದು.

ಸಭೆಗಳ ಅನುಭವವೇನೋ ಆಯಿತು. ಕೋಪಗೊಂಡು ಆರ್ಭಟಿಸುವ ಪ್ರಚಂಡ ಸಭೆಯ ಮುಂದೆ ನಿಂತು ಆ ಸಭೆಯನ್ನು ಗೆಲ್ಲುವುದು ಹೇಗೆಂಬ ಮನೋವೃತ್ತಿ ಅಭ್ಯಾಸವಾಯಿತು. ಆದರೂ ಅಂತರಂಗದಲ್ಲಿ ಸೋಜಿಗ ಹೋಗಲಿಲ್ಲ. ತಾನಿರುವ ರೀತಿಗೂ ಸಭೆ ಸೇರುವ ಜನರಿಗೂ ಎಷ್ಟು ಅಂತರ! ಹೀಗಿದ್ದು ತನ್ನಲ್ಲಿ ಆ ಜನರಿಗೆಷ್ಟು ವಿಶ್ವಾಸ! ಆ ವಿಶ್ವಾಸ ತಮ್ಮ ಸ್ವಂತಕ್ಕಲ್ಲವೆಂದೂ ತಾವು ತೊಡಗಿರುವ ಕೆಲಸಕ್ಕೆಂದೂ ತಿಳಿದಿದ್ದಾಗ್ಗೂ ಸೋಜಿಗ ಕಡಿಮೆಯಾಗಲಿಲ್ಲ. ಸೋಜಿಗದೊಂದಿಗೆ ಮನಸ್ಸಿನಲ್ಲಿ ವಿನೋದಗೊಂಬ ಚಿತ್ತವೃತ್ತಿ ಬೇರೆ. ರಾಷ್ಟ್ರಕ್ಕೆ ನಾಯಕರೆನಿಸಿದ್ದವರು ಸಭಾವೇದಿಕೆಗಳ ಮೇಲೇರಿಕೊಳ್ಳುವಾಗಲೂ ಕುಳಿತಿರುವಾಗಲೂ ಸಾವಿರಾರು ಜನರು ತಮ್ಮನ್ನು ನಟ್ಟ ಕಣ್ಣುಗಳಿಂದ ಕಾಣುತ್ತಿರುವರೆಂಬುದನ್ನು ಮರೆತಿರುವುದು ಸುಲಭವಲ್ಲ. ಹಸೆ ಮೇಲೆ ಮದುವಣಿಗನು ಕುಳಿತಾಗ ಹೇಗೋ ಹಾಗೆಯೆ ವೇದಿಕೆಯನ್ನಲಂಕರಿಸಿ ಕುಳಿತವರಿಗೆ! ಅಂತಹ ಸಂದರ್ಭಗಳಲ್ಲಿ ಯಾರು ಯಾರು ಹೇಗೆ ವರ್ತಿಸುತ್ತಾರೆಂಬುದನ್ನು ಸೂಕ್ಷ್ಮಗ್ರಾಹಿತನದಿಂದ ಜವಾಹರಲಾಲರು ಕಂಡು ಮನಸ್ಸಿನಲ್ಲಿ ಮಂದಹಾಸವನ್ನೂ ಉಲ್ಲಾಸವನ್ನೂ ತಾಳುತ್ತಿದ್ದರು· ತಮ್ಮ ಚರ್ಯೆಯನ್ನೂ ಪರೀಕ್ಷಿಸಿಕೊಳ್ಳುತ್ತಿದ್ದರು. ಕೋಮಲ ಸೂಕ್ಷ್ಮತೆಗೆ ನಿದರ್ಶನ.

1921ರಲ್ಲಿ ಬ್ರಿಟಿಷ್ ಯುವರಾಜರ ಆಗಮನ ಗೊತ್ತಾಯಿತು. ಆ ವೇಳೆಯಲ್ಲಾಗುವ ಉತ್ಸವಗಳನ್ನು ಬಹಿಷ್ಕರಿಸತಕ್ಕುದೆಂಬ ನಿಶ್ಚಯ ಕಾಂಗ್ರೆಸ್ಸಿನವರದು. ಆ ಸಂದರ್ಭದಲ್ಲಿ ವಾಲಂಟಿಯರ್ ಗುಂಪು ಕಟ್ಟುವುದು ವಿಧಿ ವಿರುದ್ಧವೆಂದು ಸರ್ಕಾರದವರು ಮೊದಲಿಟ್ಟರು. ದೇಶಬಂಧು ದಾಸರು ಆ ಸಮಯದಲ್ಲಿ “ಈಗಾಗಲೆ ನನ್ನ ಹಸ್ತಗಳ ಮೇಲೆ ಬೇಡಿಗಳು ತಗಲಿಕೊಂಡಂತೆಯೆ ಇದೆ. ಕಬ್ಬಿಣದ ಸರಪಳಿಗಳನ್ನು ಶರೀರಕ್ಕೆ ಅಂಟಿಸಿದಂತೆಯೇ ಇದೆ. ದಾಸ್ಯದ ಸಂಕಟವೇ ಹೀಗೆ. ಭಾರತ ಭೂಮಿಯೇ ಒಂದು ವಿಶಾಲ ಬಂದೀಖಾನೆ. ಕಾಂಗ್ರೆಸ್ ಕೆಲಸ ಮುಂದೆ ಸಾಗಲೇಬೇಕು. ನನ್ನನ್ನು ಹಿಡಿದರೆಷ್ಟು ಬಿಟ್ಟರೆಷ್ಟು! ನಾನು ಬದುಕಿದ್ದರೆಷ್ಟು ಸತ್ತರೆಷ್ಟು!” ಎಂದುದು ಎಲ್ಲರಿಗೂ ಅನ್ವಯಿಸುವಂತಾ

ಯಿತು. ಯುಕ್ತಪ್ರಾಂತದಲ್ಲಿ ಕೂಡಲೆ ವಾಲಂಟಿಯರ್ ದಳಗಳನ್ನು ಕಟ್ಟಲು ಪ್ರಾರಂಭವಾಯಿತು. ಮೊದಲು ಪಂಡಿತ ಮೋತಿಲಾಲರು ತಮ್ಮ ಹೆಸರನ್ನು ಬರೆಸಿ ತಮ್ಮ ಸ್ವಹಸ್ತವನ್ನಿಟ್ಟರು.

ಕಾಂಗ್ರೆಸ್ ಕಚೇರಿಯಲ್ಲಿ ಜವಾಹರಲಾಲರು ಬಾಕಿಬಿದ್ದಿದ್ದ ಕೆಲಸವನ್ನು ಮುಗಿಸಿಬಿಡಲು ಹೊತ್ತಾದರೂ ಕುಳಿತಿದ್ದರು. ಗುಮಾಸ್ತೆಯೊಬ್ಬಾತನು ಬಳಿಗೆ ಬಂದು 'ಪೋಲೀಸರು ಜಪ್ತಿವಾರಂಟಿನೊಡನೆ ಬಂದು ಕಛೇರಿಯನ್ನು ಸುತ್ತಿಕೊಳ್ಳುತ್ತಿದ್ದಾರೆ' ಎಂದನು. ಇದೇ ಮೊದಲ ಅನುಭವ. "ನಿಮ್ಮ ಕೆಲಸಗಳನ್ನು ಯಥಾ ಪ್ರಕಾರ ಮಾಡುತ್ತಿರಿ. ಪೋಲೀಸಧಿಕಾರಿಯೊಡನೆ ಯಾರಾದರೊಬ್ಬರಿದ್ದು ಕೊಟಡಿಯಿಂದ ಕೊಟಡಿಗೆ ಕರೆದುಕೊಂಡು ಹೋಗಿ ನೋಡಿಕೊಳ್ಳಿ" ಎಂದು ಬಿಂಕದಿಂದ ಹೇಳಿದರು. ಪಟ್ಟಣದ ಇತರೆಡೆಗಳಲ್ಲಿಯೂ ದಸ್ತಗಿರಿಗಳಾಗುತ್ತಿದ್ದ ಸುದ್ದಿ ಬರುತ್ತಲೇ ಇತ್ತು. ಕಚೇರಿ ಕೆಲಸ ಮುಗಿಸಿಕೊಂಡು ಮನೆಗೆ ಹಿಂತಿರುಗಿದ ವೇಳೆಗೆ ಆನಂದಭವನವನ್ನು ಜಪ್ತಿಮಾಡುತ್ತಿದ್ದುದಲ್ಲದೆ ಪೋಲೀಸ್ ಪಡೆಯವರು ತಂದೆಯನ್ನೂ ಮಗನನ್ನೂ ದಸ್ತಗಿರಿಮಾಡಲು ಸಿದ್ಧರಾಗಿದ್ದರು. ದಸ್ತಗಿರಿಯೂ ಆಯಿತು; ಆರು ತಿಂಗಳ ಸೆರೆಯೂ ಗೊತ್ತಾಯಿತು.

ಮೋತಿಲಾಲರ ವಿಚಾರಣೆ ವಿಚಿತ್ರವಾಗಿ ನಡೆಯಿತು. ತಪ್ಪನ್ನು ಹೊರೆಸಲು ಅವರು ಕೊಟ್ಟಿದ್ದ ವಾಲಂಟಿಯರ್ ಅರ್ಜಿಯನ್ನು ದಾಖಲೆ ಮಾಡಿತ್ತು. ಅದರಲ್ಲಿ ಮೋತಿಲಾಲರ ರುಜು ಹಿಂದಿಯಲ್ಲಿತ್ತು. ಆ ಬರವಣಿಗೆ ಮೋತಿಲಾಲರದೇ ಎಂದು ಸ್ಥಾಪಿಸಿಕೊಡಲು ಅಧಿಕಾರಿ ಪಕ್ಷದವರು ಯಾರೋ ಗೆಳೆಯನನ್ನು ಹಿಡಿದು ತಂದಿದ್ದರು. ಆ ಗೆಳೆಯನಿಗೆ ಅಕ್ಷರಜ್ಞಾನವೇ ಇರಲಿಲ್ಲ. ಆ ಕಾಗದವನ್ನು ತಲೆಕೆಳಗಾಗಿ ಹಿಡಿದುಕೊಂಡು ನೋಡಿ ಪ್ರಮಾಣಮಾಡಿಬಿಟ್ಟನು. ಜವಾಹರಲಾಲರಿಗೆ ವಿನೋದವಾಗಿತ್ತು.

ದಸ್ತಗಿರಿಗಳು ಸಾಂಕ್ರಾಮಿಕ ಜಾಡ್ಯ ಹರಡಿದಂತೆ ರೇಗಿದವು. ಕಾಂಗ್ರೆಸ್ ಪ್ರಮುಖರೂ ಕೆಲಸಗಾರರೂ ಎಲ್ಲರೂ ದಸ್ತಗಿರಿಯಾದರು. ಉತ್ಸಾಹವೇ ಎಲ್ಲೆಲ್ಲಿಯೂ ಉಸಿರಾಗಿದ್ದುದರಿಂದ ಕಾಂಗ್ರೆಸ್ಸಿಗೆ ಅದುವರೆಗೂ ಸೇರಿಕೊಳ್ಳದೆಯೇ ಇದ್ದವರನೇಕರು ದಸ್ತಗಿರಿಗಾಗಿ ಆಸೆ

ಯನ್ನೂ ಆತುರವನ್ನೂ ಪಟ್ಟರು. ಸರ್ಕಾರೀ ಕಚೇರಿಗಳಿಂದ ಮನೆಗೆ ಹಿಂತಿರುಗುತ್ತಿದ್ದ ಗುಮಾಸ್ತೆಗಳು ಮನೆ ಸೇರಿಕೊಳ್ಳದೆ ಜೈಲ್ ಸೇರಿಕೊಂಡರು. ಯುವಕರೂ ಹುಡುಗರೂ ಪೋಲೀಸ್ ವ್ಯಾನನ್ನು ಕಂಡಕೂಡಲೆ ಒಳಗೆ ನುಗ್ಗಿ ಕುಳಿತುಕೊಂಡು ಬಿಟ್ಟು ಜೈಲಿಗೆಂದು ಹಟಮಾಡಿದರು. ಜೈಲಿನೊಳಗೆ ಆಗಲೆ ಸೇರಿದ್ದವರು ನೋಡುತ್ತಿದ್ದಂತೆಯೇ ಪ್ರತಿ ಸಂಜೆಯಲ್ಲಿಯೂ ಲಾರಿ ಹಿಂದೆ ಲಾರಿ ಬರುವುದು, ಕಾಂಗ್ರೆಸ್ ಕೀ ಜೈ—ಗಾಂಧೀಕಿ ಜೈ ಎಂದು ಕೂಗುತ್ತ ಗುಂಪುಗುಂಪಾಗಿ ಜನರು ಜೈಲಿನೊಳಗೆ ಪ್ರವೇಶಿಸುವುದು! ಇದೇನೋ ವಿಸ್ಮಯವಾಗಿಹೋಯಿತು. ಜೈಲಿನಧಿಕಾರಿಗಳಿಗೆ ದಿಕ್ಕುತೋಚದಂತಾಯಿತು. ಇಪ್ಪತ್ತು ಮಂದಿ ಬರುವರೆಂದು ನಿರೀಕ್ಷೆಯಲ್ಲಿದ್ದಾಗ ಮೂವತ್ತು ಜನ ಬಂದರೆ ಏನುಮಾಡತಕ್ಕುದೆಂಬುದನ್ನು ತಮ್ಮ ನಿಯಮಾವಳಿಯಲ್ಲಿ ಕಾಣದಾದರು. ಯಾವ ಹೆಸರು ಯಾರದೋ! ಎಲ್ಲವೂ ತಬ್ಬಿಬ್ಬಲಾಗಿ ಕಂಡಿತು.

ಹರತಾಲ ಸಂಬಂಧವಾದ ಹಸ್ತಪತ್ರಿಕೆಗಳನ್ನು ಹಂಚಿದ್ದು ಜವಾಹರಲಾಲರಮೇಲಿನ ಆಪಾದನೆ. ಮೂರು ತಿಂಗಳ ತರುವಾಯ ಯಾರೋ ಮೇಲಿನ ಅಧಿಕಾರಿಗಳು ಆ ಆಪಾದನೆಗೆ ವಿಧಿಯ ಬೆಂಬಲವಿಲ್ಲವೆಂದು ತೀರ್ಮಾನಿಸಿ ಬಿಡುಗಡೆಗೆ ಅಪ್ಪಣೆಮಾಡಿದರು. ತಂದೆಯವರನ್ನು ಜೈಲಿನಲ್ಲಿ ಬಿಟ್ಟು ಬರಲಿಷ್ಟವಿಲ್ಲದಿದ್ದರೂ ಜವಾಹರಲಾಲರೊಬ್ಬರೇ ಹೊರಕ್ಕೆ ಬರಬೇಕಾಯಿತು.

ಈ ಮೊದಲ ಮೂರುತಿಂಗಳ ಜೈಲುವಾಸದಲ್ಲಿದ್ದಾಗಲೇ ಗಾಂಧೀಜಿಯವರು ಚಾರಿಚೌರ ಅಕೃತ್ಯಗಳಿಗಾಗಿ ಪರಿತಪಿಸಿ ಹಿಮ್ಮೆಟ್ಟಿದ್ದ ಸಂಗತಿ ತಿಳಿಯಿತು. ಜೈಲಿನೊಳಗಿದ್ದವರಿಗೆ ತುಂಬಾ ಅಸಮಾಧಾನ. ಎಷ್ಟೋ ವಿಜೃಂಭಣೆಯಿಂದ ನಡೆಯುತ್ತಿದ್ದ ಉದ್ಯಮವನ್ನು ಯಾವುದೋ ದೂರದ ಕಾರಣಕ್ಕಾಗಿ ಮಹಾತ್ಮಾಜಿ ನಿಲ್ಲಿಸಿಬಿಟ್ಟರೇ ಎಂಬ ದುಃಖಸಂಕಟಗಳು ಜವಾಹರಲಾಲರನ್ನು ಬಾಧಿಸಿದವು. ಕೋಪವೂ ತೋರಿಕೊಂಡಿತು. ಆದರೇನು! ಅಸಹಕಾರ ಚಳುವಳಿಗೆ ಕಟ್ಟಿ ಕಟ್ಟಿದಂತಾಗಿ ಸರ್ಕಾರದವರು ಸಮಯ ನೋಡಿ ಗಾಂಧೀಜಿಯವರನ್ನು ದಸ್ತಗಿರಿ ಗೈದು ವಿಚಾರಣೆಗೆ ನಿಲ್ಲಿಸಿದ್ದರು.

ಬಿಡುಗಡೆಯಾದ ಜವಾಹರಲಾಲರು ತಕ್ಷಣವೇ ಅಹಮದಾಬಾದಿಗೆ ಪ್ರಯಾಣಮಾಡಿ ಗಾಂಧೀಜಿಯವರನ್ನು ಸಾಬರ್ಮತಿ ಸೆರೆಮನೆಯಲ್ಲಿ ಕಂಡರು. ಗಾಂಧೀಜಿಯ ವಿಚಾರಣೆ ನಡೆದಾಗ ಜವಾಹರಲಾಲರು ಕೋರ್ಟಿನಲ್ಲಿಯೇ ಇದ್ದರು. ಜಿಲ್ಲಾ ಜಡ್ಜ್ ಬ್ರೂಂಫೀಲ್ಡ್ ಎದುರಾಗಿ ಗಾಂಧೀಜಿಯ ವಿಚಾರಣೆ ನಡೆದ ಪರಿಯನ್ನು ಕೇಳ್ಕರ್ ಸರೋಜಿನಿದೇವಿ ಮುಂತಾದವರು ವರ್ಣಿಸಿದ್ದಾರೆ. ಅಷ್ಟು ಹೊತ್ತೂ ಜವಾಹರಲಾಲರು ಕೋರ್ಟಿನಲ್ಲಿದ್ದುಕೊಂಡು ಜಡ್ಜಿಯ ಗೌರವ ವರ್ತನೆಯನ್ನು ಮೆಚ್ಚಿ ಗಾಂಧೀಜಿಯ ಹೇಳಿಕೆಯನ್ನು ಕೇಳಿ ಮನಕರಗಿ ಪರವಶರಾಗಿದ್ದು ಹಿಂತಿರುಗಿದರು.

ಇಲಾಹಾಬಾದಿಗೆ ಹಿಂತಿರುಗಿ ಬಂದು ಕಾಂಗ್ರೆಸ್ ಕೆಲಸ ಸಮರ್ಪಕವಾಗಿ ನಡೆಯುವಂತೆ ಏರ್ಪಾಟಿನಲ್ಲಿ ತೊಡಗಿ ಪರದೇಶೀ ವಸ್ತ್ರ ಬಹಿಷ್ಕಾರ ಪ್ರಯತ್ನವನ್ನು ಸುವ್ಯವಸ್ಥೆಗೊಳಿಸುವುದರಲ್ಲಿ ಮಗ್ನರಾದರು. ಆ ಸಂಬಂಧದಲ್ಲಿ ವರ್ತಕರನ್ನು ಹೆದರಿಸಿದರೆಂದೂ ರಾಜದ್ರೋಹಪೂರಿತ ಭಾಷಣ ಮಾಡಿದರೆಂದೂ ವಿಚಿತ್ರವೆನಿಸುವ ಆಪಾದನೆಯಾಯಿತು. ದಸ್ತಗಿರಿ–ವಿಚಾರಣೆಗಳು ನಡೆದವು. ಒಟ್ಟು ಇಪ್ಪತ್ತೊಂದು ತಿಂಗಳ ಶಿಕ್ಷೆಗೊತ್ತಾಯಿತು. ಹೊರಗೆ ಬಂದು ಒಂದೂವರೆ ತಿಂಗಳಾಗಿತ್ತು; ಪುನಃ ಬಂದೀಖಾನೆ ಪ್ರವೇಶವಾಯಿತು.

ಮೊದಲನೆ ಸಲ ಜೈಲಿನಲ್ಲಿ ಸೇರಿದಾಗ ಮೋತಿಲಾಲ ಜವಾಹರಲಾಲರೊಡನೆ ಬೇರೆ ಹದಿನಾರು ಜನರನ್ನು ಸೇರಿಸಿ ಒಂದು ಗುಡಿಸಿಲಿನಲ್ಲಿಟ್ಟಿದ್ದರು. ನೆಹರು ಮನೆತನದ ನಾಲ್ವರಿದ್ದರು; ಅವರಿಗೆ ಹದಿನಾರಡಿ ಅಗಲ ಇಪ್ಪತ್ತಡಿ ಉದ್ದವಾಗಿದ್ದ ಗುಡಿಸಲನ್ನು ಕೊಟ್ಟಿದ್ದರು. ವರ್ತಮಾನ ಪತ್ರಿಕೆಗಳೂ ದೊರಕುತ್ತಿದ್ದವು, ಮಿತ್ರರೂ ಬಂದು ಕಾಣಬಹುದಾಗಿತ್ತು. ಜವಾಹರಲಾಲರು ಬೆಳಗ್ಗೆ ಗುಡಿಸಲನ್ನು ಚನ್ನಾಗಿ ಗುಡಿಸಿ ತೊಳೆದು ತಂದೆಯವರ ಬಟ್ಟೆಗಳನ್ನೂ ತಮ್ಮ ಬಟ್ಟೆಗಳನ್ನೂ ಒಗೆದಿಡುತ್ತಿದ್ದರು. ಉಳಿದ ಕಾಲದಲ್ಲಿ ನೂಲುತ್ತಿದ್ದರು. ಮಾತುಕತೆಗಳಲ್ಲಿಯೇ ಕಾಲ ಕಳೆಯುತ್ತಿತ್ತು. ಕೆಲವು ದಿನಗಳಾದ ಮೇಲೆ ಹಿಂದೀ ಉರ್ದು ಭಾಷೆಗಳನ್ನು ನಿರಕ್ಷರರಾಗಿದ್ದ ವಾಲಂಟೆಯರುಗಳಿಗೆ ಹೇಳಿ

ಕೊಡಲು ಅವಕಾಶ ದೊರಕಿತು. ಸಾಯಂಕಾಲ ವಾಲಿಬಾಲ್ ಆಡು ತ್ತಿದ್ದರು. ಇದಿಷ್ಟು ಅಷ್ಟು ಕಷ್ಟವೆಂದು ತೋರಲಿಲ್ಲ; ಆದರೂ ಜೈಲಿನ ಗೇಟನ್ನು ಮುಚ್ಚಿದಾಗ ಮನಸ್ಸಿನಲ್ಲಿ ಧಿಗ್ಗೆಂದಂತೆ ವಿಚಿತ್ರವೂ ಕ್ಷಣಿಕವೂ ಆದ ಪರಿಣಾಮ ತೋರುತ್ತಿತ್ತು.

ಎರಡನೆ ಬಾರಿ ಲಖನೌ ಜಿಲ್ಲಾ ಜೈಲಿನೊಳಕ್ಕೆ ಬಂದಾಗ ಪರಿ ಸ್ಥಿತಿ ಬದಲಾಗಿತ್ತು. ಮೋತಿಲಾಲರನ್ನು ನೈನಿಟಾಲ್ ಜೈಲಿಗೊಯ್ದಿ ದ್ದರು. ಹೊಸ ನಿಯಮಾವಳಿಗಳನ್ನು ಆಚರಣೆಯಲ್ಲಿ ತಂದಿದ್ದರು. ರಾಜಕೀಯ ಖೈದಿಗಳನ್ನು ಒಳಗಿನ ಜೈಲಿನಲ್ಲಿಟ್ಟಿದ್ದರು. ಹೊರಗಿನಿಂದ ಕಾಗದ ಪತ್ರಗಳು ತಿಂಗಳಿಗೊಮ್ಮೆ ಮಾತ್ರ, ಇಷ್ಟಮಿತ್ರರ ಸಂದ ರ್ಶನವೂ ತಿಂಗಳಿಗೊಮ್ಮೆ ಮಾತ್ರ. ಜವಾಹರಲಾಲರು ಈ ಬಾರಿ ಐವತ್ತು ಮಂದಿಯೊಂದಿಗಿರಬೇಕಾಯಿತು. ಅವರಲ್ಲನೇಕರು ಪರಿಚಿತ ರಾಗಿದ್ದರೂ ಹಗಲಿರುಳೂ ಎಲ್ಲರೂ ಒಟ್ಟಿಗೇ ಇರಬೇಕಾಗಿದ್ದುದು ಹಿಂಸೆ ಯಾಯಿತು. ಒಟ್ಟಿಗೆ ಊಟ, ಒಟ್ಟಿಗೆ ಸ್ನಾನ, ಒಟ್ಟಿಗೆ ವಸ್ತ್ರಮಾರ್ಜನ; ಏಕಾಂತವಾಗಿದ್ದು ವಿಶ್ರಾಂತರಾಗುವ ಆಸ್ಪದವೇ ಇಲ್ಲ. ಏಕಾಂತ ವಾಗಿರಲು ಹೊರಗಿನ ಅಂಗಳದಲ್ಲಿ ಮಳೆ ಬಿಸಿಲುಗಳೆನ್ನದೆ ಕುಳಿತಿದ್ದರೆ ಮಾತ್ರ ಉಂಟೆಂದು ಜವಾಹರಲಾಲರು ಕಂಡರು. ಸಾಧ್ಯವಾದಾಗಲೆಲ್ಲ ಅಲ್ಲಿ ಹೋಗಿ ಆಕಾಶಕ್ಕೆ ಮುಖಮಾಡಿಕೊಂಡಿದ್ದು ಮೋಡಗಳ ಗತಿ ಯನ್ನೂ ಕ್ಷಣಕ್ಷಣಕ್ಕೂ ತಿರುಗುವ ಆಕಾಶದ ಬಣ್ಣಗಳನ್ನೂ ನೋಡುತ್ತ ಯಾವುದೋ ಹೊಸದಾದ ಸುಖಮಯ ಜಗತ್ತನ್ನು ಅನುಭವಿಸಿದಷ್ಟು ಆನಂದಪಟ್ಟರು.

ಬರಬರುತ್ತ ನಿರ್ಬಂಧಗಳು ಹೆಚ್ಚಿದವು. ಅಸಹಕಾರ ಪ್ರಯತ್ನವು ದುರ್ಬಲಗೊಂಡಂತೆಲ್ಲ ಸರ್ಕಾರ ಪಕ್ಷದವರಿಗೆ ಬಲಬಂದಂತಾಗಿ ಬಂದಿ ಗಳನ್ನು ಹಿಂಸೆಗೊಳಿಸುವುದರಲ್ಲಿ ವ್ಯಕ್ತವಾಗುತ್ತಿತ್ತು. ಈ ನಿರ್ಬಂಧ ಗಳಲ್ಲಿ ತಮ್ಮ ಅಸಮಾಧಾನವನ್ನೂ ಆಕ್ಷೇಪವನ್ನೂ ಕಾಣಿಸಿಕೊಡಲು ಜವಾಹರಲಾಲ್ ಮುಂತಾದವರು ತಿಂಗಳಿಗೊಮ್ಮೆ ಲಭ್ಯವಾಗಿದ್ದ ಇಷ್ಟ ಮಿತ್ರ ಸಂದರ್ಶನವಿನ್ನುಮುಂದೆ ಬೇಡವೆಂದರು. ಅದಕ್ಕಾಗಿ ಏಳು ಜನ ಮುಖಂಡರೆಂದು ಭಾವಿಸಿ ಸೆರೆಮನೆಯಧಿಕಾರಿಗಳು ಜವಾಹರ

ಲಾಲರೊಡನೆ ಪುರುಷೋತ್ತಮದಾಸಟಂಡನ್, ಮಹಾದೇವಭಾಯಿ ದೇಸಾಯಿ, ಜಾರ್ಜ್‌ಜೋಸೆಫ್, ಬಾಲಕೃಷ್ಣಶರ್ಮ ಮತ್ತು ದೇವದಾಸ ಗಾಂಧಿಯವರನ್ನು ಇನ್ನೂ ಒಳಗಿನ ಜೈಲಿನ ಭಾಗಕ್ಕೆ ವರ್ಗಾಯಿಸಿದರು. ಗುಂಪು ಕಡಿಮೆಯೇನೋ ಆಯಿತು. ಓದಿಕೊಳ್ಳಲು ಕಾಲ ದೊರಕಿದ ಹಾಗೂ ಆಯಿತು. ಆದರೆ ಹೊರಜಗತ್ತಿನ ಸಂಬಂಧವೆಲ್ಲ ತಪ್ಪಿತು. ವರ್ತಮಾನ ಪತ್ರಿಕೆಗಳಂತೂ ಇಲ್ಲ. ಹಾಗೂ ಹೀಗೂ ತಿಳಿದ ಸಮಾಚಾರ ಸಂತೋಷದಾಯಕವಾಗಿಯೂ ಇರಲಿಲ್ಲ.

ಏಳು ಮಂದಿಯೂ ನಿತ್ಯಗಟ್ಟಲೆಯನ್ನು ಗೊತ್ತುಮಾಡಿಕೊಂಡರು. ವ್ಯಾಯಾಮಕ್ಕಾಗಿ ಆ ಅಂಗಳದ ಸುತ್ತ ಓಡುವುದು, ತಾವೇ ಎತ್ತುಗಳಂತೆ ಆಗಿ ನೊಗವನ್ನು ಹೆಗಲಿಗಿಟ್ಟು ನೀರೆಳೆಯುವುದು, ಹಾಗೆಳೆದ ನೀರಿನಿಂದ ಸಣ್ಣ ತರಕಾರಿ ತೋಟ ವ್ಯವಸಾಯ ಮಾಡುವುದು, ಆದಾಗಾದಾಗ ನೂಲುವುದು. ಜವಾಹರಲಾಲರೇ ಆ ಏಳು ಮಂದಿಯಲ್ಲಿ ಹೆಚ್ಚಾಗಿ ಓದಿಕೊಳ್ಳುತ್ತಿದ್ದುದು. ಜೈಲಿನ ಸೂಪರೆಂಟ್ ಯಾವಾಗ ಬಂದರೂ ಜವಾಹರಲಾಲರು ಓದುತ್ತಿದ್ದುದನ್ನೇ ಕಂಡು ಬೇಸರಗೊಂಡು "ಇದೇನ್ರೀ ಓದಾಟ? ಹನ್ನೆರಡನೇ ವಯಸ್ಸಿಗೇ ನಾನು ಓದುವುದನ್ನೆಲ್ಲ ಮುಗಿಸಿದೆ" ಎನ್ನುತ್ತಿದ್ದನಂತೆ. 'ಅದಕ್ಕೇ ಪ್ರಾಯಶಃ ಈ ಧೀರ ಇಂಗ್ಲಿಷ್ ಸೇನಾಪತಿಗೆ ತಲೆಯಲ್ಲಿ ತೊಂದರೆ ಕೊಡುವ ಯೋಚನೆಗಳೇ ಹುಟ್ಟಲಿಲ್ಲ; ಬಹುಶಃ ಆ ಬಲ್ಮೆಯಿಂದಲೇ ಯುಕ್ತಪ್ರಾಂತದ ಸೆರೆಮನೆಗಳಿಗೆ ಸರ್ವಾಧಿಕಾರಿ ಹುದ್ದೆಗೇರಿದುದು!'

ರಾತ್ರಿಯಾಗಿ ಕತ್ತಲಾದರೆ ಆ ಚಳಿಗಾಲದಲ್ಲಿ ನಿರ್ಮಲವಾದ ಆಕಾಶದಲ್ಲಿ ನಕ್ಷತ್ರಗಳನ್ನು ನೋಡುತ್ತ ಗುರುತಿಸುತ್ತ ಇದ್ದರು. ಪ್ರತಿ ರಾತ್ರಿಯೂ ಆದರದಿಂದ ನಿರೀಕ್ಷಿಸುತ್ತ "ಅಕೋ ಅಗ್ನಿ! ಅಲ್ಲಿ ಸಪ್ತರ್ಷಿ!" ಹೀಗೆನ್ನುತ್ತ ಹೊತ್ತು ಕಳೆದರು.

ಮಹಾದೇವಭಾಯಿ ದೇಸಾಯಿ ಜೈಲಿನಲ್ಲಿ ಜವಾಹರಲಾಲರ ಜೊತೆಯಲ್ಲಿದ್ದುದು ಈ ಕಾಲದಲ್ಲಿಯೇ. ಹತ್ತು ವರ್ಷ ಕಳೆದ ಬಳಿಕ ರಾಷ್ಟ್ರಪತಿಯೆನಿಸಿದ ಜವಾಹರಲಾಲರನ್ನು ವರ್ಣಿಸುತ್ತ ಜೈಲ್ ಸಹವಾಸವನ್ನು ಸ್ಮರಿಸಿಕೊಂಡರು. "1922ರಲ್ಲಿ ಲಖನೌ ಜೈಲಿನಲ್ಲಿ ನಾವು

ಉಲ್ಲಾಸದಿಂದ ಕಾಲವನ್ನು ಕಳೆದುದಕ್ಕೆ ಜವಾಹರಲಾಲರೇ ಕಾರಣರು. ದೀರ್ಘಾಲೋಚನೆ ವಿವೇಚನೆಗಳನ್ನು ಮನಸ್ಸಿನಲ್ಲಿ ನಡೆಸುವವರಾಗಿದ್ದರೂ ಜೀವನದ ಸಂತೋಷವೆಂಬುದು ಆತನಲ್ಲಿ ಮೂರ್ತಿಮತ್ತಾಗಿರುವುದು. ಬದುಕಿರುವುದೇ ಸಂತೋಷವೆಂಬುದನ್ನು ಎಲ್ಲರಿಗೂ ಕಾಣಿಸಿ ಕೊಡುವ ಮೂರ್ತಿ ಜವಾಹರಲಾಲ್. ಮುಖವನ್ನುದ್ದವಾಗಿ ಎಳೆದು ಕೊಂಡೋ ತಗ್ಗಿಸಿಕೊಂಡೋ ಯಾರಾದರೂ ಇದ್ದರೆ ಆತನು ಸಹಿಸಲಾರ. ಕಾಲುಗಳನ್ನೆಳೆಯುತ್ತ ನೂಕುತ್ತ ಹೆಜ್ಜೆಯಿಟ್ಟು ನಡೆಯುವುದನ್ನೂ ಸಹಿಸಲಾರ. 'ತಲೆಯೆತ್ತಿಕೊಂಡು ಗಂಡಸಿನಂತೆ ಹೆಜ್ಜೆಹಾಕಬೇಕು' ಎಂದೊಬ್ಬರಿಗೆ, 'ನಿನ್ನ ನಡಿಗೆಯಲ್ಲಿ ಚುರುಕುಕಾಣಬೇಕು' ಎಂದು ಮತ್ತೊಬ್ಬರಿಗೆ ಹೇಳುತ್ತ ಸುಶಿಕ್ಷಿತ ಸೈನಿಕನು ಯಾವ ಪರಿಯಲ್ಲಿ ಧೀರಪದಹತಿಗೆಯ್ಯಬೇಕೋ ಅದನ್ನು ತಾವೇ ತೋರಿಸಿಕೊಡುವರು. ಎಂತಹ ಕಷ್ಟವಾದರೂ ನಷ್ಟವಾದರೂ ಆತನು ಉತ್ಸಾಹದ ನಿಧಿ".

ಹೀಗೆಯೇ ದಿನಗಳೊಂದೊಂದಾಗಿ ಕಳೆಯುತ್ತ ವಾರಗಳು, ವಾರಗಳು ಕಳೆಯುತ್ತ ತಿಂಗಳುಗಳು ನಡೆದವು. ಯಾವುದೋ ಒಂದು ರೀತಿಯ ಜೀವನಕ್ರಮ ಅಭ್ಯಾಸವಾಯಿತು. ನಿಜವಾಗಿ ಕಷ್ಟಪಟ್ಟವರು ತಮ್ಮ ಹಿಂದೆ ಮನೆಗಳಲ್ಲುಳಿದ ತಾಯಂದಿರು, ಸತಿಯರು! ಪ್ರೀತಿಪಾತ್ರರಾದವರು ನಿರ್ಬಂಧದಲ್ಲಿ ಸಿಕ್ಕಿ ಕಷ್ಟಪಡುತ್ತಿರುವರೆಂದು ಕ್ಷಣಕ್ಷಣಕ್ಕೂ ಸ್ಮರಿಸಿ ಸಂಕಟಪಡುತ್ತ ಒಂದೊಂದು ದಿನವನ್ನೂ ಒಂದೊಂದು ವರ್ಷದಂತೆ ಕಳೆಯುತ್ತಿದ್ದವರು! ಜವಾಹರಲಾಲರು ಜೈಲಿನಲ್ಲಿದ್ದಾಗಲೆ ಪೋಲೀಸಧಿಕಾರಿಗಳು ಆನಂದಭವನಕ್ಕೆ ನುಗ್ಗಿ ಅಲ್ಲಿಯ ಸಾಮಾನುಗಳ ತನಿಖೆ ನಡೆಸಿ ಸರ್ಕಾರಕ್ಕೆ ಸಲ್ಲದಿದ್ದ ಜುಲ್ಮಾನೆ ಸಲುವಾಗಿ ಕೆಲವನ್ನು ಸಾಗಿಸಿಕೊಂಡು ಹೊರಟರು. ಆಗ ನಾಲ್ಕು ವರ್ಷದ ಇಂದಿರೆ ಪೋಲೀಸಧಿಕಾರಿಗಳ ವರ್ತನೆಯನ್ನು ಸಹಿಸಲಾರದೆ ಮಗುವಿಗೆ ಸಹಜವಾದ ರೀತಿಯಲ್ಲಿ ಆಕ್ಷೇಪಿಸಿದ್ದಳು.

ಜೈಲಿನೊಳಗಿರುವವರಿಗೆ ಬಾಳಿನ ಎಷ್ಟೋ ಭಾಗ ತಪ್ಪಿಹೋಗಿರುತ್ತದೆ. ಹೆಂಗಸರ ಕಂಠಧ್ವನಿ ಮತ್ತು ಮಕ್ಕಳ ನಗುವಿನ ಧ್ವನಿಗಳೇ ಆ ಲೋಪಗಳಲ್ಲೆಲ್ಲ ಘೋರ. ಜೈಲಿನೊಳಗಿನ ಶಬ್ದಗಳೆಲ್ಲ ಒರಟು,

ಅಶ್ಲೀಲ, ಕ್ರೂರ; ಮೃದುಧ್ವನಿಯೆಂಬುದಿಲ್ಲ. ಜವಾಹರಲಾಲರಿಗೆ ಲಖನೌ ಜೈಲಿನಲ್ಲಿರುತ್ತಿದ್ದಾಗಲೆ "ಏಳೆಂಟು ತಿಂಗಳಾಯಿತು ನಾಯಿ ಬೊಗಳಿದ್ದನ್ನು ಕೇಳಿ!" ಎನ್ನಿಸಿತ್ತು.

1923 ನೆ ಇಸವಿ ಕೊನೆ ದಿನ ಲಖನೌ ಜೈಲಿನ ರಾಜಕೀಯ ಬಂದಿಗಳಿಗೆ ಬಿಡುಗಡೆಯಾಯಿತು. ಜವಾಹರಲಾಲರು ಜೈಲು ಬಿಟ್ಟು ಹೊರಗೆ ಬಂದರು.

## 4. ಮಧ್ಯವಿರಾಮ

1923ರಲ್ಲಿ ಪರಿಸ್ಥಿತಿಯೆಲ್ಲ ಬೇರೆಯಾಗಿತ್ತು. ಗಾಂಧೀಜಿಯವರು ಯರವಾಡ ಜೈಲಿನಲ್ಲಿ. ಹೊರಗಡೆ ಉಳಿದವರಲ್ಲಿ ಎರಡು ಪಂಗಡಗಳು— ಅಸಹಕಾರಿಗಳದೊಂದು, ಸ್ವರಾಜ್ ಪಕ್ಷವೆಂಬುದೊಂದು. ನಿರ್ಮಾಣ ಸಂಬಂಧವಾದ ಕಾರ್ಯಕ್ರಮಗಳನ್ನೇ ನಡೆಸತಕ್ಕುದೆಂದು ರಾಜಾಜಿ ಯವರ ಗುಂಪು. ಚುನಾವಣೆಗಳಿಗೆ ನಿಂತು ಶಾಸನ ಸಭೆಗಳಲ್ಲಿ ಪ್ರವೇಶ ಮಾಡಿ ಹೆಜ್ಜೆ ಹೆಜ್ಜೆಗೂ ಸರ್ಕಾರವನ್ನು ವಿರೋಧಿಸತಕ್ಕುದೆಂದು ದೇಶ ಬಂಧು ದಾಸರ ಗುಂಪು. ಮೋತಿಲಾಲರಿಗೂ ದಾಸರಂತೆಯೆ ಅಭಿ ಪ್ರಾಯವಿದ್ದುದರಿಂದ ಆ ಇಬ್ಬರು ಘನ ವಕೀಲರೂ ಸ್ವರಾಜ್ ಪಕ್ಷ ವನ್ನು ಸ್ಥಾಪಿಸಿದ್ದರು. ಜವಾಹರಲಾಲರು ಜೈಲಿನಿಂದ ಮುಕ್ತರಾಗಿ ಹೊರಗೆ ಬಂದಾಗ ವಾತಾವರಣವೇ ಬೇರೆಯಾಗಿ ಕಂಡಿತು; ಉತ್ಸಾಹ ಗೊಳ್ಳುವಂತಿರಲಿಲ್ಲ. ಕಾಂಗ್ರೆಸ್ ಸಭಿಕರಲ್ಲಿ ಕಕ್ಷಿ ಪ್ರತಿಕಕ್ಷಿಗಳು ಹುಟ್ಟಿ ಕೊಂಡು ಪರಸ್ಪರವಾಗಿ ಕಿತ್ತಾಡುತ್ತ ಕಚ್ಚಾಡುತ್ತ ಕಾಲಹರಣವಾಗು ತ್ತಿತ್ತು. ಯುಕ್ತಪ್ರಾಂತದ ಕಾಂಗ್ರೆಸ್ಸಿಗೆ ಕಾರ್ಯದರ್ಶಿ ಸ್ಥಾನದಲ್ಲಿದ್ದ ಜವಾಹರಲಾಲರು ಉಭಯ ಕಕ್ಷಿಗಳನ್ನೂ ಸಮಾಧಾನಕ್ಕೆ ತರಲು ಪ್ರಯತ್ನ ಮಾಡಿದರು; ಕೈಗೂಡಲಿಲ್ಲ. ಕಾಂಗ್ರೆಸ್ ಸಭೆಗಳನ್ನೂ ಕಚೇರಿಗಳನ್ನೂ ಪುನರ್ವ್ಯವಸ್ಥೆಗೊಳಿಸಿದರು. ಆದರೆ ಮುಂದಿನ ಪ್ರಯತ್ನ ನಿರ್ದಿಷ್ಟವಾಗಿ ಕಾಣದಾಯಿತು.

ಇದ್ದಕ್ಕಿದ್ದಂತೆಯೆ ಅದೇ ವೇಳೆಯಲ್ಲಿ ಇಲಾಹಾಬಾದ್ ಮುನಿಸಿ ಪಾಲಿಟಿಗೆ ಜವಾಹರಲಾಲರನ್ನು ಅಧ್ಯಕ್ಷರನ್ನಾಗಿ ಆರಿಸಿಬಿಟ್ಟರು. ಅಖಿಲ

ಭಾರತ ಕಾಂಗ್ರೆಸ್ಸಿನ ಕಾರ್ಯದರ್ಶಿ ಗೌರವವಿದ್ದೇ ಇತ್ತು. ಕಾಂಗ್ರೆಸ್ ಕಚೇರಿಗಳ ಕೆಲಸಗಳನ್ನು ನಡೆಸುತ್ತಲಿದ್ದಂತೆಯೆ ಇಲಾಹಾಬಾದ್ ಮುನಿಸಿಪಾಲಿಟಿಯ ಕೆಲಸವನ್ನೂ ಕೈಕೊಂಡರು. ಆ ಸ್ಥಾನಮಾನಗಳು ಮೂರು ವರ್ಷಗಳಿಗೊಮ್ಮೆ ಚುನಾವಣೆಯಾಗತಕ್ಕವು. ಜವಾಹರ ಲಾಲರು ಕೆಲಸವನ್ನು ಕೈಕೊಂಡ ತರುವಾಯ ನಗರಶುದ್ಧಿಗಾಗಿ ಏನೇ ನನ್ನೋ ನಡೆಸಬೇಕೆಂಬ ಅಭಿಲಾಷೆಪಟ್ಟು ತಮ್ಮ ಚಾಟುಲ್ಯವನ್ನು ಆ ಮುನಿಸಿಪಲ್ ಕಚೇರಿಗಳಲ್ಲೂ ಬೀರಿದರು. ಆದರೆ ಸಮರ್ಪಕವಾಗಿ ಕೆಲಸಕಾರ್ಯಗಳನ್ನು ನಡೆಸಲು ಎಲ್ಲ ಮುನಿಸಿಪಾಲಿಟಿಗಳಿಗಿದ್ದಂತೆಯೆ ಅಲ್ಲಿಯೂ ಹಣದ ಅಭಾವ. ಆದನ್ನು ಹೋಗಲಾಡಿಸಿ ತಕ್ಕಮಟ್ಟಿಗೆ ಕೃತಕಾರ್ಯರಾಗಲು ಜವಾಹರರೊಂದು ಹೊಸ ಯೋಚನೆ ನಡೆಸಿದರು. ಎಲ್ಲ ನಗರಗಳಲ್ಲಿಯೂ ಇರುವಂತೆ ಅಲ್ಲಿಯೂ ಕಿಕ್ಕಿರಿದು ಸಂದುಗೊಂದಿ ಗಳಿಂದ ತುಂಬಿರುವ ಪೇಟೆಯೊಂದು ಭಾಗವಾದರೆ ವಿಸ್ತಾರವಾದ ರಸ್ತೆ ಗಳನ್ನು ಪಡೆದು ಸಣ್ಣ ಸಣ್ಣ ಉದ್ಯಾನವನಗಳಿಂದ ಶೋಭಿಸುವ ಬಂಗಲೆ ಗಳಿರುವ ಬಡಾವಣೆಯಿನ್ನೊಂದು ಭಾಗ. ಮುನಿಸಿಪಾಲಿಟಿಗಳಿಗೆ ಬಡಾವಣೆ ಭಾಗದಲ್ಲಿ ಆದಾಯ ಕಡಿಮೆ, ವೆಚ್ಚ ಹೆಚ್ಚು; ಹಳೆಪೇಟೆ ಯಲ್ಲಿ ಆದಾಯ ಹೆಚ್ಚು, ವೆಚ್ಚ ಕಡಿಮೆ. ಪೇಟೆಯಿಂದ ವಸೂಲಾದು ದನ್ನು ಬಡಾವಣೆಗಳಿಗಾಗಿ ವೆಚ್ಚ ಮಾಡುತ್ತಿರುತ್ತದೆ. ಬಡಾವಣೆಗಳಿಂದ ಹೆಚ್ಚು ವಸೂಲಾಗುವಂತೆ ಜವಾಹರಲಾಲರು ಯೋಚಿಸಿ ಕೊಟ್ಟ ಸಲಹೆ ಯನ್ನು ಮೇಲಿನ ಸರ್ಕಾರದವರು ನಿರಾಕರಿಸಿದರು. ಮುನಿಸಿಪಾಲಿಟಿ ಯವರು ಕೆಲಸಕಾರ್ಯ ನಡೆಸಿಕೊಳ್ಳಲು ಸಾಕಾದಷ್ಟು ಸ್ವಾತಂತ್ರ್ಯವೇ ಇರುವುದಿಲ್ಲ. ಒಳ್ಳೆ ಯೋಚನೆಯನ್ನು ಮಾಡಿ ಕಾರ್ಯರೂಪದಲ್ಲಿ ತರ ಬೇಕೆಂಬ ಪ್ರಯತ್ನಕ್ಕೆ ಸರ್ಕಾರದವರು ಅಡ್ಡಿ. ಜವಾಹರಲಾಲರಿಗೆ ಈ ಬಗೆಯ ಅಡ್ಡಿಯೇ ಎದುರಾಯಿತು. ಆ ಕಾಲದಲ್ಲಿ ಯುಕ್ತ ಪ್ರಾಂತದಲ್ಲಿ ಮುನಿಸಿಪಾಲಿಟಿಗಳು ಭಾರತೀಯನೆನಿಸಿದ ಮಂತ್ರಿ ಯೊಬ್ಬಾತನ ಸ್ವಾಧೀನದಲ್ಲಿದ್ದಿತೆಂದು ಹೆಸರು. ಆ "ಮಹಾನುಭಾವನಿಗೆ ಮುನಿಸಿಪಲ್ ವಿಚಾರಗಳ ಗಂಧವೇ ಇರಲಿಲ್ಲ. ಆತನ ಅಧಿಕಾರವೂ ನಡೆಯುತ್ತಿರಲಿಲ್ಲ. ಆತನ ಇಲಾಖೆಯ ನೌಕರರೇ ಆತನನ್ನು

ಅಲಕ್ಷ್ಯಮಾಡುತ್ತಿದ್ದರು. ಸಾಮಾನ್ಯವಾಗಿ ಅಧಿಕಾರಿ ವರ್ಗದವರಿಗೆ ಸರಕಾರದ ಕರ್ತವ್ಯವೆಂದರೆ ಪೋಲೀಸ್ ಶಿಬ್ಬಂದಿ ಬಂದೋಬಸ್ತುಗಳಿಷ್ಟೋ ಅಷ್ಟೇ ಅರ್ಥವಾಗಿತ್ತು." ಹೀಗಿದ್ದುದರಿಂದ ಜವಾಹರಲಾಲರು ತಮ್ಮ ಅಧ್ಯಕ್ಷತೆಯನ್ನು ಮೂರು ವರ್ಷಕಾಲವೂ ಉಳಿಸಿಕೊಳ್ಳದೆ ಒಂದು ವರ್ಷದ ಕೊನೆಯಲ್ಲಿಯೇ ಬಿಟ್ಟುಕೊಡಲು ತವಕಪಟ್ಟರು; ನಿರರ್ಥಕ ಪ್ರಯಾಸವೆನ್ನಿಸಿತ್ತು.

ತಂದೆ ಮೋತಿಲಾಲರೂ ದೇಶಬಂಧು ದಾಸರೂ ಸ್ವರಾಜ್ ಪಕ್ಷವನ್ನು ಕಟ್ಟಿ ಅದನ್ನು ಹುರುಪಿನಿಂದ ನಡೆಸುತ್ತಿದ್ದರು. ಜವಾಹರಲಾಲರಿಗೆ ಆ ಪಕ್ಷಕ್ಕೆ ಸೇರುವ ಇಷ್ಟವಿರಲಿಲ್ಲ. ಸೇರಬೇಕೆಂದು ತಂದೆಯವರು ಬಲವಂತವನ್ನೂ ಮಾಡಲಿಲ್ಲ. ದೇಶಬಂಧು ದಾಸರು ಮಾಡಿದ ಪ್ರಯತ್ನ ಫಲಿಸಲಿಲ್ಲ. ವಕೀಲಿ ವೃತ್ತಿಯನ್ನು ಪುನಃ ಪ್ರಾರಂಭಿಸಲು ಜವಾಹರಲಾಲರಿಗೆ ಇಷ್ಟವಿಲ್ಲ. ಆದರೆ ವರಮಾನ ಸಾಲದು. ಮನೆಯ ವೆಚ್ಚವನ್ನು ಅನೇಕ ಬಗೆಗಳಲ್ಲಿ ತಗ್ಗಿಸುವ ಯತ್ನ ನಡೆದಿತ್ತು. ಆಳುಗಳನ್ನು ಕಡಿಮೆಮಾಡಿದ್ದಲ್ಲದೆ ಕುದುರೆಗಳನ್ನೂ ಗಾಡಿಗಳನ್ನೂ ಮಾರಿತ್ತು. ಮನೆಸಾಮಾನುಗಳನ್ನೂ ಹಲ ಕೆಲವು ಕಾರಣಗಳಿಂದ ವಿಲೇವಾರಿ ಮಾಡಿತ್ತು. ಉದ್ಯಾನವನಕ್ಕೆ ಹೆಸರಾಗಿದ್ದ ಆನಂದಭವನದ ಆವರಣವು ಜಂಗಲ್ಲಾಗಿ ಹೋಗಿತ್ತು. ಮೋತಿಲಾಲರು ಈ ಸ್ಥಿತಿಯಲ್ಲಿ ಸ್ವಲ್ಪವಾಗಿ ವಕೀಲಿಯನ್ನಿಟ್ಟುಕೊಂಡರು. ಆದರೆ ಅವರಿಗೆ ಇತರ ಕೆಲಸಗಳ ಮಧ್ಯೆ ಹೊತ್ತು ಸಾಲದಾಗಿತ್ತು.

ವಕೀಲಿಯನ್ನು ಬಿಟ್ಟುಕೊಟ್ಟ ಬಳಿಕ ಜವಾಹರಲಾಲರಿಗೆ ವರಮಾನವಿಲ್ಲ. ಎಲ್ಲಿಯೋ ಕೆಲವು ಷೇರುಗಳ ಸಂಬಂಧವಾಗಿ ಡಿವಿಡೆಂಡುಗಳು ಬರಬಹುದಾಗಿತ್ತು. ಆಗ ದಂಪತಿಗಳಿಬ್ಬರೂ ಸೇರಿ ತಮ್ಮ ವೆಚ್ಚಗಳನ್ನು ತಗ್ಗಿಸಿದರು. ಖಾದಿ ಉಡುಗೆಯಿಂದ ವಸ್ತ್ರದ ವೆಚ್ಚ ತಗ್ಗಿತ್ತು. ಪ್ರಯಾಣಮಾಡಿದಾಗ ಮೂರನೆ ತರಗತಿಯಲ್ಲೇ ಹೊರಡುವ ಅಭ್ಯಾಸವಾಗಿತ್ತು. ಆದಾಗ್ಯೂ ತಾವೂ ತಮ್ಮ ಸಂಸಾರವೂ ತಂದೆಯವರಿಗೆ ಭಾರವಾದೇವೆಂಬ ಕೊರಗು ಬಲವಾಯಿತು. ಕಟ್ಟಿಕೊಂಡಿದ ಕಾಂಗ್ರೆಸ್ ಕಾರ್ಯದರ್ಶಿ ಕೆಲಸಕ್ಕೆ ಸಂಬಳವೇನಾದರೂ ಗೊತ್ತಾಗಿದ್ದ

ದ್ದರೆ ಅದನ್ನು ಸ್ವೀಕರಿಸಲು ಜವಾಹರಲಾಲರಿಗೆ ಆಕ್ಷೇಪವಿರಲಿಲ್ಲ. ಹಾಗೆ ಮಾಡತಕ್ಕದ್ದು ನ್ಯಾಯವೆಂದೇ ಅವರ ಮನಸ್ಸಿನಲ್ಲಿ. ಆದರೆ ತಂದೆಯವರಿಗೆ ಅದು ಬಿಲ್ಕುಲ್ ಆಗದು. ಸಂಪಾದನೆ ಕೊಡುವ ಕೆಲಸವಾವುದನ್ನಾದರೂ ಇಟ್ಟುಕೊಳ್ಳಬೇಕೆಂದು ಕಡೆಗೆ ಮನಮಾಡಿ ಜವಾಹರಲಾಲರು ಸಂಕೋಚ ಬಿಟ್ಟು ತಂದೆಯ ಬಳಿಯಲ್ಲಿ ಪ್ರಸ್ತಾಪವೆತ್ತಿದರು. ಆಗ ಮೋತಿಲಾಲರು "ನೀನೊಂದು ವರ್ಷದಲ್ಲಿ ಸಂಪಾದನೆ ಮಾಡಬಹುದಾದುದನ್ನು ನಾನೊಂದು ತಿಂಗಳಲ್ಲಿ ಸಂಪಾದಿಸಬಹುದಾಗಿರುವಾಗ ಸಂಪಾದನೆ ಚಿಂತೆಯನ್ನು ನೀನು ಬಿಟ್ಟುಬಿಡು. ಈ ವ್ಯಥೆಯನ್ನು ಬೆಳೆಸಿ ನನಗೆ ಅಸಮಾಧಾನ ಕೊಡಬೇಡ" ಎಂದರು.

ಹೀಗಿದ್ದ ಕಾಲದಲ್ಲಿಯೇ ವಿಚಿತ್ರವಾಗಿ ತೋರಿದ ರಾಯಭಾರವೊಂದು ನಡೆಯಿತು. ಸರ್ ಗ್ರಿಮ್ವುಡ್ ಮಿಯರ್ಸ್ (Sir Grimwood Mears) ಎಂಬಾತನು ಇಲಾಹಾಬಾದಿನ ಹೈಕೋರ್ಟಿಗೆ ಅಧ್ಯಕ್ಷನಾಗಿದ್ದವನು. ಜೈಲುವಾಸದಿಂದ ಹಿಂತಿರುಗಿ ಬಂದ ತರುವಾಯ ಮುನಿಸಿಪಲ್ ಅಧ್ಯಕ್ಷಸ್ಥಾನದಲ್ಲಿದ್ದ ಜವಾಹರಲಾಲರ ಬಳಿಗೆ ಏನಾದರೊಂದು ನೆಪ ಮಾಡಿಕೊಂಡು ಬಂದು ಆತನು ಮಾತುಕತೆ ಬೆಳೆಸಲು ಆರಂಭಿಸಿದನು. ವಕೀಲಿ ಮಾಡುತ್ತಿದ್ದಾಗ ಒಂದೇ ಬಾರಿ ಆತನೆದುರಿನಲ್ಲಿ ಜವಾಹರಲಾಲರು ವಾದ ನಡೆಸಿದ್ದುದು. ಆದರೆ ತಂದೆಯವರಿಗೆ ಮಿತ್ರ. ವಿನಯದಿಂದ ಮೈತ್ರಿಯನ್ನು ಬೆಳೆಸುತ್ತಿದ್ದಂತೆ ಕಂಡಿತು. ಮುನಿಸಿಪಲ್ ಪ್ರಸ್ತಾಪದಿಂದ ಪ್ರಾರಂಭಿಸಿದಾತನು ಬೇರೆ ವಿಚಾರಗಳನ್ನೆತ್ತಿಕೊಳ್ಳುತ್ತಿದ್ದು ಒಂದು ದಿನ ಲಿಬರಲ್ ಪಕ್ಷದವರನ್ನು ತಿರಸ್ಕರಿಸುತ್ತ ಮಾತು ಬೆಳೆಸಿದನು. ಮತ್ತೊಂದು ದಿನ ದೇಶದಲ್ಲಿ ಶಿಕ್ಷಣ ಕೆಲಸ ಕಾರ್ಯಗಳು ಎಷ್ಟು ಅವಶ್ಯವೆಂಬುದನ್ನು ವಿವರಿಸಿ ಉಪಾಯವಾಗಿ 'ಯೋಗ್ಯನಾದಾತನು ಶಿಕ್ಷಣದ ಮಂತ್ರಿಯಾಗಲೊಪ್ಪಿದ್ದೇ ಆದರೆ ಎಷ್ಟು ಚೆನ್ನ' ಎನ್ನುತ್ತ "ಒಂದು ವೇಳೆ ನೀವೇ ಆ ಮಂತ್ರಿಯಾಗಲೊಪ್ಪಿದರೆ ಗವರ್ನರ್ ನಿಮಗಡ್ಡಿ ಬಾರದಿರುವರಂತೆ; ಅವರೇ ಸಂದರ್ಭವಶಾತ್ ನನ್ನೆದುರಿಗೆ ಹೇಳಿದರು" ಎಂದುಬಿಟ್ಟನು. ತಕ್ಷಣವೇ ಹೇಳಬಾರದಾಗಿತ್ತೆಂದು ಭಾವಿಸಿ ಬೇರೆ ಮಾತನ್ನೆತ್ತಿಕೊಂಡನು.

ಜವಾಹರಲಾಲರಿಗೆ ಈ ರೀತಿಯಲ್ಲಿ ತನ್ನನ್ನು ಹಿಡಿಯಲು ನಡೆದ ಉಪಾಯ ವಿನೋದವಾಗಿ ತೋರಿತು.

ಮಾಂಟ್ಫರ್ಡ್ ಸುಧಾರಣೆಗಳು ಆಚರಣೆಯಲ್ಲಿದ್ದ ಆ ಕಾಲದಲ್ಲಿ ಮೊದಲು ಲಿಬರಲ್ ಪಕ್ಷದವರು ಮಂತ್ರಿಗಳಾಗಿದ್ದರು. ಸರ್ಕಾರದವರು ಕಾಂಗ್ರೆಸ್ಸನ್ನು ಅಡಗಿಸಲು ಪ್ರಯತ್ನ ಮಾಡುತ್ತಿದ್ದಷ್ಟು ಕಾಲವೂ ಆ ಪಕ್ಷದವರ ಸಹಾಯವನ್ನು ಆಶಿಸಿ ಪಡೆದರು. ಅಸಹಕಾರದ ಆಂದೋಳನ ನಿಂತ ತರುವಾಯ ಸರ್ಕಾರದ ಅಧಿಕಾರಿಗಳೇ ಲಿಬರಲ್ ಪಕ್ಷದವರನ್ನು ಅಲ್ಲಗಳೆಯಲು ಸಿದ್ಧರಾದರು. ಅಭಿಮಾನಶಾಲಿಗಳಾದವರು ಆ ಪರಿಸ್ಥಿತಿಯಲ್ಲಿ ಮಂತ್ರಿಗಳಾಗಿರಲೊಪ್ಪಿಕೊಳ್ಳಲಾಗಲಿಲ್ಲ. ಯುಕ್ತಪ್ರಾಂತದಲ್ಲಿ ಈ ಸಂಬಂಧವಾಗಿ ಒಂದು ಕತೆಯುಂಟು. ಯಾರೋ ಒಬ್ಬರನ್ನು ಮಂತ್ರಿಯಾಗಿರೆಂದು ಆಹ್ವಾನಿಸಿದರಂತೆ. ಆತನು ಪ್ರತಿಯಾಗಿ “ ನಾನೇನು ಅಷ್ಟು ಬುದ್ಧಿವಂತನಲ್ಲ. ಸಾಮಾನ್ಯನೆಂದು ಕೊಂಡಿದ್ದೇನೆ; ಎನ್ನಿಸಿಕೊಂಡಿದ್ದೇನೆ. ಈಗ ಮಂತ್ರಿಯಾಗಲೊಪ್ಪಿ ಅವಿವೇಕಿಯೆನಿಸಿಕೊಳ್ಳಲೇನು ? ” ಎಂದು ಬರೆದನಂತೆ.

1923ರಲ್ಲಿ ದಿಲ್ಲಿಯಲ್ಲಿ ಕಾಂಗ್ರೆಸ್ ಸಭೆ ಸೇರಿತ್ತು. ಆ ಸಭೆ ಮುಕ್ತಾಯವಾಗುವ ವೇಳೆಗೆ ನಾಭ ಸಂಸ್ಥಾನದಲ್ಲಿ ಜೈತೊ ಎಂಬಲ್ಲಿ ಅಕಾಲೀ ಸಿಕ್ಖರ ಜಾಥ ಹೊರಡುತ್ತ ಅಹಿಂಸಾಮಾರ್ಗ ಸಾಧನೆಗೈಯುತ್ತಲಿತ್ತು. ಅದನ್ನು ಸ್ವಯಂ ನೋಡಬೇಕೆಂದು ಜವಾಹರಲಾಲರನ್ನು ಅಕಾಲೀ ಮಿತ್ರರು ಕೆಲವರು ಕರೆದರು. ಆಗಲೆಂದು ಕುತೂಹಲದಿಂದೊಪ್ಪಿಕೊಂಡು ಹೊರಟದ್ದು ಒಂದು ದುರಂತ ಪ್ರಕರಣವಾಗಿ ಪರಿಣಮಿಸಿತು. ಜವಾಹರಲಾಲರಿಗೆ ದೇಶೀಯ ಸಂಸ್ಥಾನಗಳ ಸ್ಥಿತಿಗತಿಗಳ ಅನುಭವ ಪ್ರಾರಂಭವಾಯಿತು.

## 5. ನಾಭಗುಹೆ

ಗಾಂಧೀಜಿಯವರು ಉಪದೇಶ ಮಾಡಿದ ಅಹಿಂಸಾ–ಅಸಹಕಾರ ಮಾರ್ಗವು ಪಂಜಾಬಿನ ಸಿಕ್ಖ ಜನರಿಗೂ ಒಪ್ಪಿತ್ತು. ಸಿಕ್ಖರಲ್ಲಿ ಅಕಾಲೀಗಳೆಂಬುವರು ಗುರುಗೋವಿಂದಸಿಂಗನ ಸ್ವಂತ ಅನುಯಾಯಿಗಳು. ಮರಣವಿಲ್ಲದವರೆಂದು ಅವರ ಹೆಮ್ಮೆ ; ಪಾಂಚ್ಕ ಎಂಬ

ವ್ರತಗಳನ್ನಲ್ಲದೆ ಕಪ್ಪು ಬಟ್ಟೆಯನ್ನು ಧರಿಸಿ ಆಜೀವವಾಗಿ ವೀರವ್ರತಗಳನ್ನು ಸಾಧಿಸತಕ್ಕವರು. 'ಸತ್ ಶ್ರೀ ಅಕಾಲ್!' ಎಂದು ಘೋಷಿಸುತ್ತಲಿರುವ ಆ ಗುಂಪಿನವರು 1920ರಲ್ಲಿ ತಮ್ಮ ಗುರುಪೀಠಗಳನ್ನು ಶುದ್ಧಿಗೊಳಿಸಿಕೊಳ್ಳುವ ಉದ್ದೇಶದಿಂದ 'ಶಿರೋಮಣಿ ಗುರುದ್ವಾರ ಪ್ರಬಂಧಕ ಕಮಿಟಿ'ಯೆಂಬುದನ್ನು ಸ್ಥಾಪಿಸಿ ಅಹಿಂಸಾಮಾರ್ಗದಿಂದ ಸಾಧನೆಗೆ ತೊಡಗಿದ್ದರು. ಗುರೂಕಾಬಾಗ್ ಎಂಬ ಪ್ರಕರಣದಲ್ಲಿ ಗೆದ್ದಿದ್ದರು. 1923ರಲ್ಲಿ ಜವಾಹರಲಾಲರು ನೋಡಲು ಹೊರಟದ್ದು ಜೈತೊಜಾಥ. ನಾಭ ಮತ್ತು ಪಟಿಯಾಲ ಎಂಬ ನೆರೆಹೊರೆಯ ಸಿಕ್ಖ ಸಂಸ್ಥಾನಿಕರಿಗೆ ಮನಸ್ತಾಪ ಬೆಳೆದು ನಾಭ ಸಂಸ್ಥಾನದ ಮಹಾರಾಜರನ್ನು ಬ್ರಿಟಿಷ್ ಸರ್ಕಾರದವರು ಗದ್ದುಗೆಯಿಂದ ತಪ್ಪಿಸಿ ದೂರವಾಗಿ ನಿರ್ಬಂಧದಲ್ಲಿಟ್ಟರು. ಸಂಸ್ಥಾನದ ಆಡಳಿತವನ್ನು ಬ್ರಿಟಿಷ್ ಅಧಿಕಾರಿಯು ಸ್ವಾಧೀನ ಮಾಡಿದ್ದರು. ಸಿಕ್ಖರಿಗೆ ಇದು ಹಿತವಾಗಲಿಲ್ಲ. ಆ ಅಧಿಕಾರಿ ಜೈತೋ ಎಂಬ ಪವಿತ್ರ ಸ್ಥಾನದಲ್ಲಿ ನಡೆಯುತ್ತಿದ್ದ ಉತ್ಸವವನ್ನು ನಿಷೇಧಿಸಿದ್ದನು. ಆ ಆಜ್ಞೆಯನ್ನು ಮುರಿಯಲು ಸಿಕ್ಖರು ಸಿದ್ಧರಾಗಿ ಜೈತೊಮಂದಿರಕ್ಕೆ ತಂಡ ತಂಡಗಳಾಗಿ ಯಾತ್ರೆ ಹೊರಡುವ ಏರ್ಪಾಟು ಮಾಡಿದರು. ಸಂಸ್ಥಾನದ ಎಲ್ಲೆಯ ಬಳಿ ಬರುತ್ತಲೆ ಈ ಯಾತ್ರಾರ್ಥಿಗಳನ್ನು ಅಲ್ಲಿಯ ಪೋಲೀಸ್ ಅಧಿಕಾರಿಗಳು ತಡೆದು-ಹೊಡೆದು-ಹಿಡಿದು ಎಲ್ಲಿಯೋ ನಟ್ಟಡವಿಗೆ ಸಾಗಿಸಿಬಿಡುತ್ತಿದ್ದರು; ಮಾನವಸಿಂಹಗಳಂತಿರುವ ಸಿಕ್ಖರು ಪ್ರತಿಯಾಗಿ ಒಂದು ಬೆರಳನ್ನಾದರೂ ಎತ್ತದೆ ಅಹಿಂಸಾವ್ರತವನ್ನು ಪಾಲಿಸುತ್ತಲಿದ್ದರು.

ಜವಾಹರಲಾಲರು ಗಿದ್ವಾನಿ ಮತ್ತು ಸಂತಾನಂ ಎಂಬಿಬ್ಬರುಗೆಳೆಯರೊಡನೆ ದಿಲ್ಲಿಯಿಂದ ಹೊರಟು ಸಂಸ್ಥಾನದ ಮೇರೆಯ ಬಳಿ ಯಾತ್ರಿಕರ ತಂಡದ ಹಿಂದೆಯೇ ಬಂದರು. ಪೋಲೀಸ್ ಅಧಿಕಾರಿಗಳು ಯಾತ್ರಿಕರನ್ನು ತಡೆದುದಲ್ಲದೆ ನಾಭ ಸಂಸ್ಥಾನದೊಳಕ್ಕೆ ಕಾಲಿಡಲಾಗದೆಂದೂ ಕಾಲಿಟ್ಟದ್ದರೆ ತಕ್ಷಣವೇ ಹೊರಗೆ ಹೊರಡತಕ್ಕುದೆಂದೂ ಆಜ್ಞೆಯನ್ನು ಜವಾಹರಲಾಲರ ಕೈಗೆ ಕೊಟ್ಟರು. ತಾವು ಯಾತ್ರಿಕರಲ್ಲವೆಂದೂ ನಾಭ ಸಂಸ್ಥಾನದ ಕಾನೂನನ್ನು ಭಂಗಗೊಳಿಸುವ ಉದ್ದೇಶತಮಗಿಲ್ಲವೆಂದೂ ಆವೇಳೆಗಾಗಲೆ ಸಂಸ್ಥಾನದೊಳಕ್ಕೆ ಬಂದಿದ್ದುದರಿಂದ

ತಕ್ಷಣವೇ ಆಕಾಶಕ್ಕೆ ಹಾರಿ ಅಂತರ್ಧಾನವಾಗುವಂತಿಲ್ಲವೆಂದೂ ಮುಂದಿನ ರೈಲು ಹೊರಡುವವರೆಗಾದರೂ ಅಲ್ಲಿಯೇ ಇರಬೇಕಾಗು ವುದೆಂದೂ ಜವಾಹರಲಾಲರು ಹೇಳಿದರು. ಆ ಅಧಿಕಾರಿಗಳು ತಕ್ಷಣವೇ ಮೂವರನ್ನೂ ದಸ್ತಗಿರಿಮಾಡಿ ಲಾಕಪ್ಪಿಗೆ ಕರೆದೊಯ್ದರು.

ಹಗಲೆಲ್ಲ ಲಾಕಪ್ಪಿನಲ್ಲಿಟ್ಟಿದ್ದು ಸಂಜೆಯಲ್ಲಿ ಸ್ಟೇಷನ್ನಿಗೆ ಕರೆದು ಕೊಂಡು ಹೊರಟರು. ಜವಾಹರಲಾಲರ ಬಲಗೈಯನ್ನೂ ಸಂತಾನಮ್ಮನ ಎಡಗೈಯನ್ನೂ ಒಟ್ಟಿಗೆ ಸೇರಿಸಿ ಸಂಕೋಲೆ ಬಿಗಿಸಿ ಆ ಸಂಕೋಲೆಗಿದ್ದ ಸರಪಳಿಯನ್ನೊಬ್ಬ ಪೋಲಿಸಿನವನು ಹಿಡಿದು ಕರೆದುಕೊಂಡು ಬೀದಿ ಯಲ್ಲಿ ನಡೆಸುತ್ತ ಹೊರಟನು; ಹಿಂದೆ ಬಂದ ಗಿದ್ವಾನಿಗೂ ಹಾಗೆಯೇ ಅಲಂಕಾರ. ಜೈತೊಬೀದಿಗಳಲ್ಲಿ ಹೀಗೆ ಹೊರಡುತ್ತಿದ್ದಾಗ ಸರಪಳಿ ತಗುಲಿಸಿ ನಾಯಿಯನ್ನು ಕರೆದುಕೊಂಡು ಹೊರಟಂತಿದೆಯೆಂದು ಮನಸ್ಸಿ ನಲ್ಲಿ ಸ್ಫುರಿಸಿತ್ತು; ಕ್ಷಣಕಾಲ ಮಾತ್ರ ಹಿಂಸೆ ತೋರಿ ಉತ್ತರಕ್ಷಣದಲ್ಲಿಯೆ ಜವಾಹರಲಾಲರಿಗೆ "ಇದೂ ಒಂದು ವಿನೋದ"ವೆನ್ನಿಸಿತು. ಆ ಮೆರ ವಣಿಗೆ ಮುಗಿದ ಕೂಡಲೆ ಯಾವುದೋ ರೈಲಿನಲ್ಲಿ ಮೂರನೆ ತರಗತಿಯ ಡಬ್ಬಿಯಲ್ಲಿ ಎಷ್ಟೋ ಜನರ ಮಧ್ಯೆ ಇರುಕಿನಲ್ಲಿರಬೇಕಾಯಿತು. ರೈಲೋ ಅತಿ ನಿದಾನ, ಅತಿ ಸೋಮಾರಿ. ಮಧ್ಯರಾತ್ರಿಗೆ ನಾಭ ತಲಪಿ ಅಲ್ಲಿಯು ಒಂದು ಲಾಕಪ್ಪಿನಲ್ಲಿ ಮರುದಿನ ಮಧ್ಯಾಹ್ನದವರೆಗೂ ಕಳೆಯಬೇಕಾ ಯಿತು. ಅಷ್ಟುಕಾಲವೂ ಇಬ್ಬರ ಕೈಗಳಿಗೂ ಬೇಡಿಗಳು! ಒಬ್ಬಾತನು ಸ್ವಲ್ಪ ಚಲಿಸಬೇಕಾದರೂ ಮತ್ತೊಬ್ಬನು ಸಹಕರಿಸಿದರೆ ಮಾತ್ರ ಸಾಧ್ಯ. ಮಧ್ಯಾಹ್ನದ ವೇಳೆಗೆ ಪುನಃ ಇವರನ್ನು ಕರೆದೊಯ್ದು ಅಲ್ಲಿಯ ಜೈಲ್ಖಾನೆ ಯಲ್ಲಿ ಒಂದು ಗೊಗ್ಗಯ್ಯನ ಗುಹೆಯಲ್ಲಿ ದೂಡಿದರು. ಚಿಕ್ಕದಾಗಿದ್ದು ದಲ್ಲದೆ ಒದ್ದೆಯಾದ ನೆಲ; ಕೈಗೆ ನಿಲುಕುವ ಚಾವಣಿ. ಆ ನೆಲದ ಮೇಲೆ ಮಲಗಿ ಪ್ರಯಾಸದಿಂದ ನಿದ್ದೆ ಬರಮಾಡಿಕೊಳ್ಳುವ ವೇಳೆಗೆ ಏನೋ ಮೈಮೇಲೆ ಓಡಾಡಿದಂತಾಗಿ ಜಗ್ಗನೆ ಎಚ್ಚರ. ಏನೆಂದು ಕಂಡರೆ ಮುಖದ ಮೇಲೆ ಇಲಿಗಳ ಓಡಾಟ!

ಎರಡು ಮೂರು ದಿನಗಳು ಹೀಗೆಯೆ ಆ ಗುಹೆಯಲ್ಲಿ ಕಳೆದವು. ತರುವಾಯ ವಿಚಾರಣೆಗೆಂದು ನ್ಯಾಯಸ್ಥಾನಕ್ಕೊಯ್ದರು. ಆ ನ್ಯಾಯಾಧಿ

ಕಾರಿಯೋ! ಆತನಿಗೆ ಇಂಗ್ಲಿಷ್ ಬಾರದುದು ಸಹಜ; ಸಂಸ್ಥಾನದ ಭಾಷೆ ಉರ್ದುವೂ ಬರುತ್ತಿದ್ದಂತೆ ಕಾಣಲಿಲ್ಲ. ಏಳೆಂಟು ದಿನಗಳು ಹೊಂಚಿನೋಡಿದಾಗ್ಯೂ ಆತನೊಂದಕ್ಷರವನ್ನಾದರೂ ಬರೆಯಲಿಲ್ಲ. ಏನಾದರೂ ಬರೆಯಬೇಕಾಗಿದ್ದಾಗ ಅಲ್ಲಿಯ ಗುಮಾಸ್ತೆಗೆ ಹೇಳುತ್ತಿದ್ದನು. ಜವಾಹರಲಾಲರೂ ಗೆಳೆಯರೂ ಕೆಲವು ಸಣ್ಣ ಅರ್ಜಿಗಳನ್ನು ದಾಖಲೆ ಮಾಡಿದರು. ಅವುಗಳನ್ನು ತೆಗೆದುಕೊಂಡ ಆ ಅಧಿಕಾರಿ ಯಾವ ಆಜ್ಞೆಯನ್ನೂ ಕೊಡದೆ ಅವುಗಳನ್ನು ಎತ್ತಿಟ್ಟುಕೊಂಡು ಮರುದಿನ ಹೊರಕ್ಕೆ ತೆಗೆಯುತ್ತಿದ್ದನು; ಅವುಗಳ ಮೇಲೆ ಮತ್ತಾರದೋ ಬರಹ. ಈ ಗೆಳೆಯರು ತಮ್ಮ ಪರವಾಗಿ ವಾದವನ್ನೇ ಮಾಡಲಿಲ್ಲ. ಸತ್ಯಾಗ್ರಹಿಗಳಾಗಿದ್ದುದರಿಂದ ತಮ್ಮ ಪರವಾಗಿ ಏನನ್ನೂ ವಾದಿಸದಿರುವುದು ಮಾನಕ್ಕೆ ಸರಿಯಾದುದೆನಿಸಿತ್ತು. ಜವಾಹರಲಾಲರು ಒಂದು ಹೇಳಿಕೆಯನ್ನು ಮಾತ್ರ ಕೊಟ್ಟರು.

ಏಳೆಂಟು ದಿನಗಳಾದಮೇಲೆ ಆಕಸ್ಮಿಕ ರೀತಿಯ ಸಂಭವ. ಸಾಯಂಕಾಲವಾಗಿ ಆ ನ್ಯಾಯಾಧಿಕಾರಿ ತನ್ನ ಚಾವಡಿಯಿಂದ ಹೊರಟಿದ್ದನು. ಆಗ ಈ ಮಿತ್ರರನ್ನು ಮತ್ತೊಂದು ಕೊಟಡಿಗೊಯ್ದರು. ಅಲ್ಲಿ ಯಾರೋ ಮತ್ತೊಬ್ಬ ಅಧಿಕಾರಿ ಕುಳಿತಿದ್ದನು; ಪಕ್ಕದಲ್ಲಿ ನಿಂತಿದ್ದ ಪೋಲೀಸ್ ಅಧಿಕಾರಿ ದೀರ್ಘವಾಗಿ ಪ್ರಾರಂಭಿಸಿದನು. ಇದೇನೆಂದು ಕೇಳಿದರೆ "ಇದು ನ್ಯಾಯಸ್ಥಾನ! ಪಿತೂರಿ ಕಟ್ಟಿದ ಆಪಾದನೆಗಾಗಿ ನಿಮ್ಮ ವಿಚಾರಣೆಯಾಗುತ್ತದೆ" ಎಂದರು. ಇದೇನೋ ವಿಚಿತ್ರವಾಯಿತೆಂದು ಸುತ್ತ ನೋಡುವಲ್ಲಿ ಈ ಮೂವರು ಮಿತ್ರರ ಹಿಂದೆ ಒಬ್ಬ ಸಿಕ್ಖನನ್ನು ಹಿಡಿದು ನಿಲ್ಲಿಸಿದ್ದುದು ಕಂಡಿತು. ಜೈತೊ ದಾರಿಯಲ್ಲಿ ಜವಾಹರಲಾಲರ ಕಣ್ಣಿಗೆ ಬಿದ್ದಿದ್ದನು ಆ ಸಿಕ್ಖನು. "ಪ್ರವೇಶ ಮಾಡಲಾಗದೆಂಬಾಜ್ಞೆಯನ್ನು ಮುರಿದುದಕ್ಕಾದರೆ ಆರೇ ತಿಂಗಳ ಶಿಕ್ಷೆ, ಪಿತೂರಿಯ ಆಪಾದನೆಯಾದರೆ ಎರಡು ಮೂರು ವರ್ಷಗಳಾದರೂ ಎಳೆಯಬಹುದು" ಎಂದು ಯೋಚಿಸಿ ಈ ಹೊಸ ಆಪಾದನೆಯನ್ನೆತ್ತಿದಹಾಗಿತ್ತು. ಅದನ್ನು ಅನುಮಾನಿಸಿದ ಜವಾಹರಲಾಲರು ವಕೀಲರಾಗಿದ್ದುಕೊಂಡು ಸುಮ್ಮನಿರುವುದು ಸರಿಯಲ್ಲವೆಂದುಕೊಂಡು "ಪಿತೂರಿ ನಡೆಸಿದೆವೆಂಬ ಆಪಾದನೆ

ಯನ್ನು ವಿಚಾರಿಸುವುದಾದರೆ ಆಪಾದಿತರಿಗೆ ಕೊಡಬೇಕಾದ ಎಚ್ಚರಿಕೆಯನ್ನೇ ಕೊಟ್ಟಿಲ್ಲ; ಅವಧಿಯನ್ನು ಸೂಚಿಸಲಿಲ್ಲ. ಆಪಾದಿತರಾದವರು ತಮ್ಮ ಪರವಾಗಿ ವಕೀಲರನ್ನು ಏರ್ಪಡಿಸಬೇಡವೆ?" ಎಂದು ಕೇಳಿದರು. "ಇದು ನಾಭ ಸಂಸ್ಥಾನ! ವಕೀಲರು ಬೇಕಾದರೆ ನಾಭದಲ್ಲಿಯೆ ಯಾರನ್ನಾದರೂ ಕರೆಸಿಕೊಳ್ಳಬಹುದು" ಎಂಬ ಪ್ರತ್ಯುತ್ತರವಾಯಿತು. "ಹೊರಗಿನವರೇ ನಮಗೆ ಬೇಕಾದರೆ?" ಎಂಬ ಪ್ರಶ್ನೆಗೆ "ಹೊರಗಿನ ವಕೀಲರಿಗೆ ಈ ಸಂಸ್ಥಾನದಲ್ಲಿ ಆಸ್ಪದವಿಲ್ಲ"ವೆಂಬ ಉತ್ತರ. ಜವಾಹರಲಾಲರಿಗೆ ಜುಗುಪ್ಸೆಯಾಯಿತು; "ನೀವು ಬೇಕಾದಂತೆ ವರ್ತಿಸಬಹುದು; ನಾವಿದರಲ್ಲಿ ಸೇರಲಾರೆವು" ಎಂದು ಬಿಟ್ಟರು. ಆದರೂ ಅಲ್ಲಿ ಪೋಲೀಸ್ ಅಧಿಕಾರಿಗಳೂ ಇತರರೂ ಹೇಳುತ್ತಿದ್ದ ಅಬದ್ಧಗಳನ್ನು ಕೇಳುತ್ತ ಮೂಕರಂತೆ ಸುಮ್ಮನಿರುವುದು ಹೇಗೆ? ನಡೆದ ಸಂಗತಿಗಳನ್ನು ವಿವರಿಸಿ ಒಂದು ಹೇಳಿಕೆಯನ್ನು ಕೊಟ್ಟರು. ಈ ಎರಡನೆ ನ್ಯಾಯಾಧಿಕಾರಿ ವಿದ್ಯಾವಂತನಂತೆ ಕಂಡನು.

ಎರಡು ವಿಚಾರಣೆಗಳೂ ಮುಂದುವರಿದವು. ನಿತ್ಯವೂ ಆ ಗೊಗ್ಗ್ಯನ ಗುಹೆಯಿಂದ ಹೊರಕ್ಕೆ ಬರಲು ಆ ಎರಡು ನ್ಯಾಯಸ್ಥಾನಗಳಿಗೆ ಬಂದು ಹೋಗುವಷ್ಟು ಕಾಲವಾದರೂ ಅವಕಾಶ. ಹೀಗಿರಲು ಜೈಲಿನ ಮುಖ್ಯಾಧಿಕಾರಿಯೊಂದುದಿನ ಆ ಬ್ರಿಟಿಷ್ ಅಧಿಕಾರಿಯ ಪರವಾಗಿ "ಮಾಡಿದ ತಪ್ಪಿಗೆ ವ್ಯಸನವೆಂದು ಹೇಳಿ ಸಂಸ್ಥಾನವನ್ನು ಬಿಟ್ಟು ಹೊರಡುವುದಾಗಿ ನೀವು ವಾಗ್ದಾನ ಕೊಡುವುದಾದರೆ ಈ ಮೊಕದ್ದಮೆಗಳನ್ನು ಇಲ್ಲಿಗೆ ನಿಲ್ಲಿಸಲಾಗುವುದು" ಎಂಬ ರಾಯಭಾರವನ್ನು ಹೊತ್ತು ತಂದನು. "ಯಾವ ತಪ್ಪಿಗಾಗಿ ನಾವು ವ್ಯಸನ ಸೂಚನೆಮಾಡಬೇಕು? ನಾವು ಮಾಡಿದ ತಪ್ಪು ಯಾವುದೂ ಇಲ್ಲ. ನ್ಯಾಯವಾಗಿ ನೋಡಿದರೆ ಸಂಸ್ಥಾನದವರೇ ನಮ್ಮ ಕ್ಷಮೆ ಬೇಡಬೇಕು. ನಾವೆಂತಹ ವಾಗ್ದಾನವನ್ನೂ ಕೊಡಲು ಸಿದ್ಧರಾಗಿಲ್ಲ" ಎಂದರು ಜವಾಹರಲಾಲರೂ ಮಿತ್ರರೂ.

ಹದಿನೈದು ದಿನಗಳು ಕಳೆಯುವ ವೇಳೆಗೆ ಈ ವಿಚಾರಣೆಗಳು ಮುಕ್ತಾಯಗೊಂಡವು. ಅಷ್ಟುಕಾಲವೂ ಪ್ರಾಸಿಕ್ಯೂಷನ್ನಿಗೇ ಆಯಿತು; ಡಿಫೆನ್ಸ್ ಎಂಬುದೇ ಇಲ್ಲ. ಮೊದಲನೆ ವಿಚಾರಣೆಯನ್ನು ನಡೆಸುತ್ತಿದ್ದ

ಆ ಮಹಾನುಭಾವ ಜವಾಹರಲಾಲರ ಹೇಳಿಕೆಯನ್ನು ಕೈಗೆ ತೆಗೆದು ಕೊಂಡು ಎದ್ದುಹೋಗಿ ಸ್ವಲ್ಪಕಾಲದಲ್ಲಿಯೇ ದೊಡ್ಡ ಕಡತವನ್ನೆತ್ತಿ ಕೊಂಡು ಬಂದು ಅದೇ ತೀರ್ಪಿನ ಕಡತವೆಂದನು. ಮೊದಲೇ ಬರೆ ದಿಟ್ಟಿತ್ತು ಆ ಕಡತವೆಲ್ಲ. ಅದನ್ನಾತ ಓದಲಿಲ್ಲ. ಬಾಯಿಂದ ಅದರ ಮುಖ್ಯಾಂಶವನ್ನು ಹೇಳಿಬಿಟ್ಟನು. ಸಂಸ್ಥಾನವನ್ನು ಬಿಟ್ಟು ಹೋಗದಿದ್ದ ತಪ್ಪಿಗೆ ಆರು ತಿಂಗಳ ಸೆರೆ ಗೊತ್ತಾಗಿದೆಯೆಂದನು. ಅದೇ ದಿನವೇ ಮತ್ತೊಬ್ಬ ನ್ಯಾಯಾಧಿಕಾರಿ ಪಿತೂರಿಯ ಆಪಾದನೆಗಾಗಿ ಹದಿನೆಂಟು ತಿಂಗಳೋ ಎರಡು ವರ್ಷಗಳೋ ಸಜಾ ಎಂದನು. ಎರಡೂ ಒಟ್ಟು ಸೇರಿ ಎರಡು ವರ್ಷವೋ ಎರಡೂವರೆ ವರ್ಷವೋ ಆಯಿತು.

ವಿಚಾರಣೆಯೆಲ್ಲ ಆದ್ಯಂತ ವಿಚಿತ್ರವಾಗಿತ್ತು. ಕೋರ್ಟಿನೊಳಗೆ ಸುದ್ದಿಗಾರನೊಬ್ಬನಾದರೂ ಇಲ್ಲ; ಹೊರಗಿನವನೇ ಇಲ್ಲ. ಪೋಲೀಸ್ ಅಧಿಕಾರಿಗಳು ತಮಗಿಷ್ಟಬಂದಂತೆ ವರ್ತಿಸುತ್ತಿದ್ದರು; ಮ್ಯಾಜಿಸ್ಟ್ರೇಟನ್ನು ಲಕ್ಷ್ಯಮಾಡುತ್ತಿರಲಿಲ್ಲ. ಕೆಲವೇಳೆ ಆತ ಹೇಳಿದುದಕ್ಕೆ ಅವಿಧೇಯ ರಾಗಿಯೇ ನಡೆದುಕೊಳ್ಳುತ್ತಿದ್ದರು. ಮ್ಯಾಜಿಸ್ಟ್ರೇಟನು ನಮ್ರನಾಗಿರು ತ್ತಿದ್ದನು. ಜವಾಹರಲಾಲರೂ ಗೆಳೆಯರೂ ಹಾಗೇತಕ್ಕಿರಬೇಕು? ಪೋಲೀಸಧಿಕಾರಿಗಳು ವಿಧೇಯರಾಗಿ ವರ್ತಿಸಬೇಕೆಂದು ಆಗಾಗ್ಗೆ ತಾವೇ ಹೇಳಿ ಕೋರ್ಟಿನ ಗಾಂಭೀರ್ಯವನ್ನು ರಕ್ಷಿಸಿಕೊಡಬೇಕಾಗಿ ಬಂತು. ಮ್ಯಾಜಿಸ್ಟ್ರೇಟ್ ಕಯ್ಯಲಿದ್ದ ಕಾಗದ ಪತ್ರಗಳನ್ನು ಇದ್ದಕ್ಕಿದ್ದಂತೆಯೆ ತಟಕ್ಕನೆ ಪೋಲೀಸಧಿಕಾರಿಗಳು ಹೇಳದೆ ಕೇಳದೆ ಕಿತ್ತುಕೊಂಡುಬಿಡು ತ್ತಿದ್ದರು. ನಿರ್ಭಾಗ್ಯ ಮ್ಯಾಜಿಸ್ಟ್ರೇಟನಿಗೆ ಪೋಲೀಸರನ್ನು ಕಂಡರೆ ಅಂಜಿಕೆ; ಜವಾಹರಲಾಲರನ್ನು ಕಂಡರೂ ಅಂಜಿಕೆ.

ಜವಾಹರಲಾಲರ ದಸ್ತಗಿರಿಯ ಸುದ್ದಿ ತಿಳಿದ ಕೂಡಲೆ ಪಂಡಿತ ಮೋತಿಲಾಲರು ಪರಿತಪಿಸಿದರು. ಬೇರೆ ಸುದ್ದಿಯೊಂದಾದರೂ ತಿಳಿ ಯದೆ ವೈಸರಾಯ್ ಬಳಿಗೆ ತಂತಿ ಕಳುಹಿದರು. ನಾಭಕ್ಕೆ ಹೊರಟು ಮಗನನ್ನು ನೋಡೋಣವೆಂಬ ಪ್ರಯತ್ನಕ್ಕೆ ಅಡ್ಡಿಗಳು ತೋರಿದವು. ಕಡೆಗೆ ಸೆರೆಮನೆಯಲ್ಲಿ ಮಗನನ್ನು ನೋಡಿದರು. ಡಿಫೆನ್ಸ್ ಎಂಬು ದನ್ನೇ ನಡೆಸಿರಲಿಲ್ಲವಾದುದರಿಂದ ಏನನ್ನೂ ಮಾಡುವುದಕ್ಕಿಲ್ಲ. ವೃಥಾ

ಪರಿತಾಪವೇಕೆಂದೂ ಸ್ವಸ್ಥಚಿತ್ತರಾಗಿ ಇಲಾಹಾಬಾದಿಗೆ ಹಿಂತಿರುಗ ಬೇಕೆಂದೂ ಜವಾಹರಲಾಲರು ಬೇಡಿದರು. ಮೋತಿಲಾಲರು ಕಪಿಲ ದೇವ ಮಾಲವೀಯನೆಂಬ ವಕೀಲನನ್ನು ಅಲ್ಲಿಟ್ಟು ಹಿಂತಿರುಗಿದರು.

ಇದಿಷ್ಟು ನಾಭ ಸಂಸ್ಥಾನದಲ್ಲಿ ನಡೆದಾಗ ಅಧಿಕಾರ ನಡೆಸುತ್ತಿದ್ದಾತನು ಬ್ರಿಟಿಷರವನು; ಐ. ಸಿ. ಎಸ್. ಗುಂಪಿಗೆ ಸೇರಿದ್ದವನು. ನಿರಂಕುಶಾಧಿಕಾರ ಭದ್ರಗೊಂಡು ದಯಾ ದಾಕ್ಷಿಣ್ಯಗಳು ಮಾಯ ಗೊಂಡಿದ್ದವು. ತೀರ್ಮಾನವೇನೆಂದು ಸಮಗ್ರವಾಗಿ ತಿಳಿಯಲಿಲ್ಲ; ದೀರ್ಘಕಾಲದ ಸಜಾ ಎಂಬ ಮಟ್ಟಿಗೆ ಸ್ಪಷ್ಟವಾಯಿತು. ಆ ತೀರ್ಪಿನ ಪ್ರತಿ ಕೇಳಿದರೆ ಅದಕ್ಕೊಂದು ಅರ್ಜಿ ಹಾಕಿಕೊಳ್ಳಬೇಕೆಂದರು. ಅಂತೂ ಸೆರೆಮನೆಗೆ ಹೊರಟದ್ದಾಯಿತು.

ಅಲ್ಲಿಗೆ ಸೇರಿದ ಸಾಯಂಕಾಲವೇ ಆ ಜೈಲಿನ ಮುಖ್ಯಾಧಿಕಾರಿ ಸಂಸ್ಥಾನಾಧಿಕಾರಿಯಿಂದ ಬಂದಿದ್ದ ಹುಕುಮನ್ನು ತೆಗೆದುಕೊಂಡು ಬಂದನು. ಆ ಹುಕುಮಿನಲ್ಲಿ ಈ ತೀರ್ಪನ್ನು "ಸಸ್ಪೆಂಡ್" ಮಾಡಿತ್ತು. ತರುವಾಯ ಮತ್ತೊಂದು ಹುಕುಂ ತೆಗೆದು ತೋರಿದನು. ಜವಾಹರಲಾಲರು ತಕ್ಷಣವೇ ಸಂಸ್ಥಾನವನ್ನು ಬಿಟ್ಟು ಹೊರಡಬೇಕೆಂದೂ ಪುನಃ ಅನುಮತಿಯಿಲ್ಲದೆ ಬರಲಾಗದೆಂದೂ ಅದರಲ್ಲಿತ್ತು. ಹುಕುಂಗಳ ಪ್ರತಿಗಳನ್ನು ಕೇಳಿದರೂ ಕೊಡಲಿಲ್ಲ. ಆ ರಾತ್ರಿಯೇ ಅಲ್ಲಿಂದ ರೈಲು ಸ್ಟೇಷನ್ನಿಗೊಯ್ದು ಬಿಡುಗಡೆಮಾಡಿದರು. ಸ್ವಲ್ಪ ಹೊತ್ತಾದಮೇಲೆ ಅಂಬಾಲದ ಕಡೆ ಹೊರಡುವ ರೈಲು ಬಂತು. ಅದನ್ನೇರಿ ಜವಾಹರ ಲಾಲರು ಅಂಬಾಲಕ್ಕೂ ಅಲ್ಲಿಂದ ದಿಲ್ಲಿಗೂ ಪ್ರಯಾಣಮಾಡಿ ಮುಂದೆ ಇಲಾಹಾಬಾದ್ ಸೇರಿದರು.

ಊರು ಸೇರಿದಕೂಡಲೇ ಕಾಹಿಲೆಯಾಗಿ ಮಲಗಿದರು. ನಾಭ ಸಂಸ್ಥಾನದ ಜೈಲಿನ ಗೊಗ್ಗಯ್ಯನ ಗುಹೆಯಲ್ಲಿದ್ದು ಸಂತಾನಂ, ಗಿದ್ವಾನಿ ಮತ್ತು ಜವಾಹರಲಾಲರು ಮೂವರೂ ಟೈಫಾಯಿಡ್ ಕ್ರಿಮಿಗಳನ್ನು ತಮ್ಮ ರಕ್ತದಲ್ಲಿ ಸಂಪಾದಿಸಿಕೊಂಡಿದ್ದರು. ಮೂರು ನಾಲ್ಕು ವಾರಗಳ ಕಾಲ ಜವಾಹರಲಾಲರು ಹಾಸಿಗೆ ಹಿಡಿದಿರಬೇಕಾಯಿತು.

"ಕಾಹಿಲೆಯಾಗಿ ಹಾಸಿಗೆ ಹಿಡಿಯುವುದೊಂದು ಹೊಸ ಅನುಭವ ವಾಯಿತು. ಶಾರೀರಿಕವಾದ ಆಲಸ್ಯಕ್ಕಾಗಿ ಎಂದೂ ಹಾಸಿಗೆ ಹಿಡಿದವನಲ್ಲ.

ದೃಢಾರೋಗ್ಯವನ್ನು ಪಾಲಿಸಿಕೊಳ್ಳುತ್ತಿದ್ದುದರಿಂದ ಕಾಹಿಲೆ ಬೀಳುವುದೆಂದರೆ ಸ್ವಲ್ಪ ತಿರಸ್ಕಾರವಿತ್ತು.

ಈಗ ಕಾಹಿಲೆ ಮಲಗುವ ಅನುಭವವಾಯಿತು. ಟೈಫಾಯಿಡ್ ಜ್ವರದ ತಾಪ ತಗ್ಗಿ ಗುಣಮುಖವಾಗಿ ಹಾಸಿಗೆಯಲ್ಲಿಯೇ ಕಾಲಕಳೆಯುತ್ತಿದ್ದಾಗ ಮನಸ್ಸಿನಲ್ಲಿ ಅಪೂರ್ವ ಪರಿಣಾಮ ತೋರಿಕೊಂಡಿತು. ನಾನು ಮಾಡಿದ್ದುದನ್ನೂ ಮಾಡುತ್ತಿದ್ದುದನ್ನೂ ಎಲ್ಲಿಯೋ ಅತಿ ದೂರದಿಂದ ಸಮಾಧಾನವಾಗಿ ನೋಡಬಲ್ಲವನಾದೆ. ಮನಸ್ಸಿನಲ್ಲಿ ಶಾಂತಿ ತುಂಬಿದಂತಿತ್ತು. ಲೌಕಿಕ ಕರ್ತವ್ಯ ಕಲಾಪಗಳನ್ನು ನಿರ್ಲಿಪ್ತರೀತಿಯಲ್ಲಿ ಕಾಣಬಹುದಾಗಿದ್ದ ಆ ಚಿತ್ತದಶೆಯು ಪರಿಣಾಮಕಾರಕವಾಗಿ ಮುಂದಿನ ಎರಡುಮೂರು ವರ್ಷಗಳಕಾಲ ನನ್ನಲ್ಲಿ ನೆಲೆಸಿತ್ತು".

## 5. ಷಷ್ಠ್ಯಾಷ್ಟಕ

ಟೈಫಾಯಿಡ್ ಕಾಹಿಲೆಯಿಂದ ಪೂರ್ತಿಯಾಗಿ ಚೇತರಿಸಿಕೊಳ್ಳುವ ಮೊದಲೆ ಯುಕ್ತ ಪ್ರಾಂತದ ಸಮ್ಮೇಳನ ಗೊತ್ತಾಗಿ ಜವಾಹರಲಾಲರೇ ಅಧ್ಯಕ್ಷರೆಂದು ನಿಶ್ಚಯಿಸಿತ್ತು. ಹಾಸಿಗೆ ಹಿಡಿದಂತಿದ್ದರೂ ಅಧ್ಯಕ್ಷ ಭಾಷಣವನ್ನು ಸಿದ್ಧಗೊಳಿಸಿ ಕೊಟ್ಟು ಕಳುಹಿಸಿದರು; ಅಧ್ಯಕ್ಷರ ಗೈರ್ ಹಾಜರಿಯಲ್ಲಿ ಮತ್ತೊಬ್ಬರು ಆ ಭಾಷಣವನ್ನೋದಿದರು; ಸಮ್ಮೇಳನ ಸಭೆಯು ಸಮರ್ಪಕವಾಗಿಯೆ ನಡೆಯಿತು.

1923ನೆ ವರ್ಷಾಂತದಲ್ಲಿ ಕಾಂಗ್ರೆಸ್ ಸಭೆ ನೆರೆದುದು ಕಾಕಿನಾಡದಲ್ಲಿ. ಮೌಲಾನಾ ಮುಹಮ್ಮದಾಲಿ ಅಧ್ಯಕ್ಷರು. ಅತಿ ದೀರ್ಘವಾದ ಅಧ್ಯಕ್ಷಭಾಷಣವೆಂದರೆ ಆತನದೇ. ಜವಾಹರಲಾಲರಲ್ಲಿ ಆತನಿಗೆ ಬಲುವಿಶ್ವಾಸ. ಅಖಿಲಭಾರತ ಕಾಂಗ್ರೆಸ್ ಸಂಸ್ಥೆಗೆ ಜವಾಹರಲಾಲರನ್ನು ಕಾರ್ಯದರ್ಶಿಯಾಗಿರುವಂತೆ ಒಪ್ಪಿಸಿದರು. ಕಾರ್ಯಕ್ರಮವೇನೆಂಬುದು ಹಿತರೀತಿಯಲ್ಲಿ ನಿರ್ಧರವಾಗದಿರುವಾಗ ಉದ್ಯೋಗಸ್ಥನಾಗುವುದು ಹೇಗೆಂಬ ಶಂಕೆ ಮನಸ್ಸಿನಲ್ಲಿದ್ದಾಗ್ಗೂ ಜವಾಹರಲಾಲರು ಮೌಲಾನಾ ಮುಹಮ್ಮದಾಲಿಯ ವಿಶ್ವಾಸಕ್ಕೆ ಸೋತು ಒಪ್ಪಿದರು. ಮತವಿಚಾರಗಳಲ್ಲಿ ಆತನಿಗೆ ಅತಿ ತೀವ್ರಾಸಕ್ತಿ, ಉಗ್ರ ಶ್ರದ್ಧೆ; ಈತನಿಗಿಲ್ಲ. ಆದರೂ ಪರಸ್ಪರ ವಿಶ್ವಾಸಕ್ಕೆ ಚ್ಯುತಿಯಿಲ್ಲದೆ ಅಧ್ಯಕ್ಷ ಕಾರ್ಯದರ್ಶಿಗಳಾದವರು ಮುಂದಿನ ವರ್ಷ ಅನ್ಯೋನ್ಯತೆಯಿಂದಲೇ ವರ್ತಿಸಬಲ್ಲವ

ರಾದರು. ಒಂದಂಶದಲ್ಲಿ ಜವಾಹರಲಾಲರ ಇಷ್ಟ ನೆರವೇರಲಿಲ್ಲ. ಯಾರದಾದರೂ ಹೆಸರು ಹೇಳುವ ಮುನ್ನ ಮೌಲಾನಾ, ಪಂಡಿತ್, ಷೇಖ್, ಸಯ್ಯದ್, ಮುನ್ಷಿ, ಮೌಲ್ವಿ, ಶ್ರೀ, ಶ್ರೀಯುತ್, ಮಿಸ್ಟರ್, ಎಸ್ಕ್ವಯರ್ ಎಂಬವುಗಳನ್ನಂಟಿಸಿ ಸುರಿಮಳೆ ಸುರಿಯುವುದು ಅನವಶ್ಯ ವಾದುದರಿಂದ ಬರಿಯ ಹೆಸರು ಮಾತ್ರ ಸಾಕೆಂದೊಮ್ಮೆ ಜವಾಹರ ಲಾಲರು ಕಚೇರಿಯಲ್ಲಿ ಸೂಚಿಸಿದರು. ಅದನ್ನು ಕೇಳಿದ ಕೂಡಲೆ ಮುಹಮ್ಮದಾಲಿ ಗಾಬರಿಗೊಂಡು ತಂತಿಮೂಲಕ "ಹಳೆ ಪದ್ಧತಿಯನ್ನೇ ಅನುಸರಿಸಬೇಕು" ಎಂದರು.

ಕಾಕಿನಾಡ ಕಾಂಗ್ರೆಸ್ ಸಭೆ ನಡೆದಾಗಲೆ ಹಿಂದುಸ್ತಾನಿ ಸೇವಾದಳ ವೆಂಬುದು ಮೊದಲಾಯಿತು. ಗುಂಪುಗೂಡಿ ಕೆಲಸ ನಡೆಸಬೇಕಾದಾಗ ದೇಶಸೇವಕರನ್ನು ವಾಲಂಟಿಯರುಗಳೆಂದು ಕರೆದು ಹಿಂದಿನಿಂದಲೂ ಆಗಿಂದಾಗ್ಗೆ ಕಟ್ಟಲಾಗಿತ್ತು. ಆದರೂ ಶಿಸ್ತಿಯಿರಲಿಲ್ಲ; ಸಂಘ ರೂಪ ದಲ್ಲಿರಲಿಲ್ಲ. ಡಾ|| ಹರ್ಡೀಕರರು ಇಂತಹ ಸಂಘವನ್ನು ಕಾಂಗ್ರೆಸ್ಸಿನ ಆಶ್ರಯದಲ್ಲಿ ಕಟ್ಟುವ ಸಂಕಲ್ಪಮಾಡಿ ಜವಾಹರಲಾಲರ ಸಹಕಾರವನ್ನು ಬಯಸಿದರು. ಜವಾಹರಲಾಲರು ಸಂತೋಷದಿಂದೊಪ್ಪಿದರು. ಹಿಂದು ಸ್ತಾನಿ ಸೇವಾದಳ ಆಗಲೆ ರೂಪಗೊಂಡು ಡಾ|| ಹರ್ಡೀಕರರ ಪ್ರಯತ್ನ ದಿಂದ ಮುಂದಕ್ಕೆ ದೃಢವಾಯಿತು.

ಕಾಕಿನಾಡದಿಂದ ಇಲಾಹಾಬಾದಿಗೆ ಹಿಂತಿರುಗಿದ ವೇಳೆಗೆ ಅಲ್ಲಿ ಕುಂಭ ಮೇಳ. ಅದೇ ತ್ರಿವೇಣೀ ಸಂಗಮವೆಂಬ ಪ್ರಯಾಗ; ಗಂಗಾ ಯಮುನಾ ಸರಸ್ವತಿಗಳು ಸೇರುವ ಸ್ಥಳ. ಆ ಸ್ಥಳದಲ್ಲಿ ನದಿಯ ಅಗಲ ಸುಮಾರು ಒಂದು ಮೈಲಿಯುಷ್ಟಿರಬಹುದಾದರೂ ಚಳಿಗಾಲದಲ್ಲಿ ನೀರು ಕಡಿಮೆಯಾಗಿ ಎರಡು ಪಕ್ಕಗಳಲ್ಲಿ ಮರಳೇ ವಿಶಾಲವಾಗಿ ಹರಡಿರು ವುದು. ಸ್ನಾನಕ್ಕೆಂದು ಬರುವ ಯಾತ್ರಾರ್ಥಿಗಳಿಗೆ ಅಲ್ಲಿಯೇ ಇರಲು ಅನುಕೂಲ. ಆದರೆ ನದಿಯ ಪ್ರವಾಹ ಆಕಸ್ಮಿಕವಾಗಿ ನುಗ್ಗಿ ಬಂದು ಗತಿಯನ್ನು ಬದಲಾಯಿಸುವಂತಿತ್ತು; ಆ ಮರಳಿನಲ್ಲಿ ಯಾತ್ರಾ ರ್ಥಿಗಳು ತಂಗಿರುವುದು ಅಪಾಯಕಾರಕವಾಗಿತ್ತು. ಆ ಕಾರಣದಿಂದ ಗುಂಪನ್ನು ಕಡಿಮೆಮಾಡುವುದು ಯುಕ್ತವಾಗಿಯೇನೋ ಇತ್ತು;

ಆದರೆ ಸರ್ಕಾರದವರು ಯಥಾಪ್ರಕಾರ ಜನರನ್ನು ರೇಗಿಸುವ ರೀತಿಯಲ್ಲಿಯೇ ಆ ಕರ್ತವ್ಯವನ್ನು ಸಾಧಿಸಲೆಳಸಿದರು.

ತ್ರಿವೇಣೀ ಸಂಗಮದಲ್ಲಿ ಯಾರೂ ಸ್ನಾನ ಮಾಡಲಾಗದೆಂದು ಅಧಿಕಾರಿಗಳು ಆಜ್ಞೆ ಹೊರಡಿಸಿದರು. ಅದಕ್ಕೆ ಪಂಡಿತ ಮಾಲವೀಯರು ಆಕ್ಷೇಪವನ್ನೊಡ್ಡಿ ಮಾಡುವ ಸ್ನಾನವನ್ನು ಅಲ್ಲಿಯೇ ಮಾಡತಕ್ಕದೆಂದರು. ವೃತ್ತಪತ್ರಿಕೆಗಳ ತುಂಬ ಇದರ ವಿಚಾರವೇ. ತ್ರಿವೇಣೀ ಸಂಗಮ ಸ್ನಾನದಿಂದ ಪುಣ್ಯಲಾಭವಾಗುವುದೆಂಬ ಮೌಢ್ಯಕ್ಕೂ ಜವಾಹರಲಾಲರಿಗೂ ಬಲು ದೂರ. ಆದಾಗ್ಯೂ ಜನರಲ್ಲಿ ವಿಶ್ವಾಸದಿಂದ ಜವಾಹರಲಾಲರು ನದಿಯ ತೀರಕ್ಕೆ ಆ ಬೆಳಗ್ಗೆ ಹೊರಟರು. ಆ ವೇಳೆಗಾಗಲೆ ಮಾಲವೀಯರು ಸ್ನಾನಾರ್ಥಿಗಳ ನಾಯಕರಾಗಿ ಅಲ್ಲಿಗೆ ಬಂದು ತಮ್ಮ ಸ್ನಾನಕ್ಕವಕಾಶವಾಗಬೇಕೆಂದು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಹೇಳಿ ಕಳುಹಿಸಿದ್ದೂ ಆಗಿತ್ತು; ಆ ಅಧಿಕಾರಿಯು "ಆಗಲಾರದು" ಎಂದುತ್ತರವಿತ್ತದ್ದೂ ಆಗಿತ್ತು. ಮಾಲವೀಯರು ಆಕ್ರೋಶಗೊಂಡರು. ಇನ್ನೂರು ಮಂದಿ ಸ್ನಾನಾರ್ಥಿಗಳೊಡನೆ ಸತ್ಯಾಗ್ರಹ ಮಾಡಬೇಕೆಂದಂದುಕೊಂಡು ಸಂಗಮದ ಬಳಿಗೆ ಹೊರಡುತ್ತಿದ್ದರು. ಬಂದ ವೇಳೆಗೆ ಇದನ್ನು ಕಂಡು ಉತ್ಸೇಕಗೊಂಡು ಜವಾಹರಲಾಲರೂ ಮಾಲವೀಯರ ಗುಂಪಿನಲ್ಲಿ ಸೇರಿದರು.

ಸಂಗಮ ಸ್ಥಾನಕ್ಕೆ ಇಳಿಯುವ ದಾರಿಯಲ್ಲಿ ಎತ್ತರವಾದ ತಡಿಕೆಯನ್ನು ಅಡ್ಡಿಯಾಗಿ ಕಟ್ಟಿತ್ತು. ತಡಿಕೆಯನ್ನು ಯಾತ್ರಾರ್ಥಿ ಗುಂಪು ಸಮೀಪಿಸಿದ ಕೂಡಲೆ ಪೋಲೀಸ್ ಅಧಿಕಾರಿಗಳು ಅಡ್ಡಿಮಾಡಿ ಯಾರೋ ಒಬ್ಬಿಬ್ಬರು ಹೊತ್ತು ತಂದಿದ್ದ ಏಣಿಯನ್ನು ಕಿತ್ತುಕೊಂಡರು. ಆಗ ಆ ತಡಿಕೆಯ ಎದುರಿನಲ್ಲಿ ಸತ್ಯಾಗ್ರಹಿಗಳೆಲ್ಲರೂ ಅಹಿಂಸಾರೀತಿಯಲ್ಲಿ ಕುಳಿತರು. ಪ್ರಾತಃಕಾಲ ಕಳೆದು ಹೊತ್ತೇರುತ್ತ ಬಂತು. ಬಿಸಿಲಿನ ಬೇಗೆ ಹೆಚ್ಚಿದಂತೆ ಮರಳಿನ ಕಾವು ಹೆಚ್ಚಿತು; ಜಠರಾಗ್ನಿಯೂ ಜ್ವಲಿಸಿತು. ಎರಡು ಕಡೆಗಳಲ್ಲೂ ಪದಾತಿ ಪೋಲೀಸ್ ಜೊತೆಗೆ ನಿಂತಿದ್ದ ಪೋಲೀಸ್ ಸವಾರರ ಪಡೆಯಲ್ಲಿ ಯಾವುದೋ ಆಜ್ಞೆ ಹೊರಡುವಂತೆ ಕಂಡಿತು. ಹಿಂದಟ್ಟಿಸಿಕೊಂಡು ಬರುವ ಸವಾರರ ಮುಂದುಗಡೆಯಲ್ಲಿ ಪಲಾಯನ

ಮಾಡುವುದು ಜವಾಹರಲಾಲರಿಗೆ ರುಚಿಕರವಾಗಿ ತೋರಲಿಲ್ಲ. ಕಾದು ಕುಳಿತು ಬೇಸರ ಬೇರೆ. ಪಕ್ಕದಲ್ಲಿದ್ದವರನ್ನು "ಹೇಗಿದ್ದರೂ ಬಂದು ದಾಯಿತು, ಕಾದುದೂ ಆಯಿತು. ಆ ತಡಿಕೆ ಹಿಡಿದು ಹತ್ತಿ ಬಿಡೋಣ ಬನ್ನಿರಿ" ಎಂದು ಕರೆದು ಮುಂದಾಗಿ ತಾವೇ ಹೊರಟು ಆ ತಡಿಕೆ ಮೇಲೇರಿದರು. ಕೂಡಲೆ ಅನೇಕರೂ ಹಾಗೆಯೇ ಏರಿಕೊಂಡರು. ಕೆಲ ವರು ತಡಿಕೆಯ ನಡುವಣ ಗೂಟಗಳನ್ನು ಕಿತ್ತು ದಾರಿ ಬಿಡಿಸಿದರು. ಯಾರೋ ಒಬ್ಬರು ರಾಷ್ಟ್ರಧ್ವಜವೊಂದನ್ನು ಜವಾಹರಲಾಲರ ಕೈಗೆತ್ತಿ ಕೊಟ್ಟರು. ತಡಿಕೆಯ ಮೇಲ್ಭಾಗದಲ್ಲಿ ಕುಳಿತಿದ್ದಂತೆಯೆ ಜವಾಹರರು ಆ ಧ್ವಜವನ್ನಲ್ಲಿ ನೆಟ್ಟರು. ಉತ್ಸಾಹದ ಆನಂದದಿಂದ ಕೂಡಿ ಜವಾ ಹರರು ಯಾತ್ರಾರ್ಥಿಗಳು ತಡಿಕೆಯನ್ನೇರುತ್ತಿದ್ದುದನ್ನೂ ಸವಾರರು ಅವರನ್ನು ತಳ್ಳುವ ಅಥವಾ ತಡೆಯುವ ಯತ್ನ ಮಾಡುತ್ತಿದ್ದುದನ್ನೂ ಕಂಡು ಶಾಲೆಯ ಹುಡುಗರು ಮ್ಯಾಚಿನ ಸಂದರ್ಭದಲ್ಲಿ ಉತ್ಸಾಹದಿಂದ ಹೇಗಿರಬಹುದೋ ಹಾಗೆಯೇ ವಿನೋದಗೊಂಡು ತಡಿಕೆ ಸವಾರಿ ಮಾಡುತ್ತಿದ್ದರು. ಸವಾರರೂ ಕೂಡ ಜನರಿಗೆ ಗಾಯವಾಗದಂತೆ ಉಪಾಯವಾಗಿಯೆ ವರ್ತಿಸುತ್ತಿದ್ದರು. ಕಡೆಗೆ ಜವಾಹರಲಾಲರು ಬಿಸಿಲಿನಲ್ಲಷ್ಟು ಹೊತ್ತು ಬೆಂದುದಕ್ಕೆ ನದಿಯ ನೀರು ತಂಪಾಗಿರುವು ದೆಂದು ನೀರಿಗಿಳಿದು ಸುಖವಾಗಿ ಮುಳುಗು ಹಾಕಿದರು.

ಮುಳುಗಿದ ಬಳಿಕ ಹಿಂತಿರುಗಿ ಬಂದು ನೋಡಿದರೆ ಮಾಲವೀ ಯರೂ ಇತರರೂ ಹಾಗೆಯೇ ಕುಳಿತಿದ್ದರು; ಸವಾರರೂ ಪದಾತಿಗಳೂ ಹೆಗಲಿಗೆ ಹೆಗಲಿಟ್ಟು ಪಕ್ಕ ಪಕ್ಕದಲ್ಲಿ ನಿಂತು ತಡಿಕೆಗೆ ಅಡ್ಡವಾಗಿ ಅವ ರೆದುರಿನಲ್ಲಿ ನಿಂತಿದ್ದರು. ಜವಾಹರಲಾಲರು ಬೇರೆ ಬಳಸು ದಾರಿ ಮಾಡಿಕೊಂಡು ಬಂದು ಮಾಲವೀಯರ ಹತ್ತಿರ ಪುನಃ ಕುಳಿತರು. ಇನ್ನೂ ಹೊತ್ತು ಕಳೆಯಿತು. ಮಾಲವೀಯರು ಯಾವುದೋ ಉದ್ರೇಕ ಭರದಿಂದ ಕಂಪಿಸುತ್ತಿದ್ದಂತೆ ಕಂಡಿತು. ಹಟಾತ್ತಾಗಿ ಯಾರಿಗೂ ಪತ್ತೆ ಕೊಡದೆ ಮಾಲವೀಯರೆದ್ದು ವೇಗವಾಗಿ ಕುದುರೆಗಳ ಮಧ್ಯೆ ಮುಳುಗಿಕೊಂಡು ನುಗ್ಗಿ ಹೊರಟೇ ಬಿಟ್ಟರು. ನಿರ್ಬಲರೂ ವೃದ್ಧರೂ ಆದ ಮಾಲವೀಯರು ಆ ರೀತಿ ಅಷ್ಟು ವೇಗದಿಂದ ಹೊರ

ಟುದು ಆಶ್ಚರ್ಯವಾಯಿತು. ಅವರ ಹಿಂದೆಯೇ ಉಳಿದವರೆಲ್ಲರೂ ಹೊರಟರು. ಸ್ವಲ್ಪ ಕಾಲ ಮಾತ್ರ ಅಡ್ಡಿಪಡಿಸುವ ಪ್ರಯತ್ನ ಮಾಡಿ ಪೋಲೀಸ್ ಪಡೆಯವರು ತೆಪ್ಪನಾಗಿದ್ದು ತರುವಾಯ ಅಲ್ಲಿಂದ ಹೊರಟು ಹೋದರು.

ಯಾರನ್ನಾದರೂ ಹಿಡಿದು ಮೊಕದ್ದಮೆಯನ್ನು ಸರ್ಕಾರದವರು ನಡೆಸಬಹುದೆಂಬ ನಿರೀಕ್ಷೆಯಿತ್ತು. ಮಾಲವೀಯರಂತಹವರ ಮೇಲೆ ಕೇಸ್ ಮಾಡಲು ಇಷ್ಟವಿರಲಿಲ್ಲವೋ ಎಂತೋ! ಅಂತೂ ಅವರ ಹಿಂದೆ ಇತರರೂ ತಪ್ಪಿಸಿಕೊಂಡರು.

1924ನೆ ವರ್ಷದ ಜನವರಿ ತಿಂಗಳಲ್ಲಿಯೆ ಸೆರೆಮನೆಯಲ್ಲಿ ಮಹಾತ್ಮಾಜಿ ಅಸ್ವಸ್ಥತೆಗೊಂಡುದು. ಸರ್ಕಾರದವರು ಅವರನ್ನು ಸಸ್ಸೂನ್ ಆಸ್ಪತ್ರೆಯಲ್ಲಿಟ್ಟರು. ಅಪೆಂಡಿಸೈಟಿಸ್ ಎಂದು ತಿಳಿದು ಶಸ್ತ್ರ ಚಿಕಿತ್ಸೆಯಾಯಿತು. ಆ ಸಂದರ್ಭದಲ್ಲಿ ಅವರನ್ನು ಕಾಣಲು ಮಿತ್ರರಿಗಾಸ್ಪದವಿತ್ತು. ಮೋತಿಲಾಲರೂ ಜವಾಹರಲಾಲರೂ ಇಬ್ಬರೂ ಆಸ್ಪತ್ರೆಯಲ್ಲಿಯೇ ಗಾಂಧೀಜಿಯನ್ನು ಕಂಡು ಸಮಾಧಾನಗೊಂಡರು. ಆ ಸಂದರ್ಭದಲ್ಲಿಯೆ ಜವಾಹರಲಾಲರು ದೇವದಾಸ ಗಾಂಧಿಗೆ ಪತ್ರ ಬರೆಯುತ್ತ "ನಾವು ಬಂದು ಕಾಣುವುದರಿಂದ ತೊಂದರೆಯೇ ಪ್ರಾಯಶಃ. ಆದುದರಿಂದ ಎಲ್ಲರಿಗಿಂತ ಕಡೆಯವನಾಗಿ ನಾನು ಬರುತ್ತೇನೆ" ಎಂದಿದ್ದರು.

ಆ ಸಮಯದಲ್ಲಿಯೆ ಸರ್ಕಾರದವರು ಗಾಂಧೀಜಿಯನ್ನು ಬಿಡುಗಡೆ ಮಾಡಿದರು. ಕಾಹಿಲೆಯಿಂದ ಗುಣಮುಖವಾಗಲು ಜುಹುತೀರದಲ್ಲಿರಬೇಕೆಂದು ಗೊತ್ತಾಗಿತ್ತು. ನೆಹರು ಮನೆಯವರೂ ಅಲ್ಲಿಗೇ ಹೊರಟು ಸಣ್ಣ ಮನೆ ಗೊತ್ತುಮಾಡಿಕೊಂಡರು. ಸ್ವರಾಜ್ ಪಕ್ಷದವರ ಸ್ಥಾನಮಾನಗಳ ವಿಚಾರವನ್ನು ಪ್ರಸ್ತಾಪಿಸಬೇಕೆಂಬುದು ಮೋತಿಲಾಲರ ಉದ್ದೇಶ. ಘನವಾದ ಉದ್ದೇಶಕ್ಕಾಗಿ ಹೋಗಿದ್ದರೂ ಜವಾಹರಲಾಲರಿಗೆ ಜುಹುತೀರದಲ್ಲಿ ಕಳೆದ ಕಾಲ ಆನಂದದಾಯಕವಾಗಿತ್ತು. ಓಡುವುದು, ಈಜುವುದು, ಕುದುರೆ ಸವಾರಿ ಮಾಡುವುದೂ ಇಷ್ಟಪೂರ್ತಿ ನಡೆಯಿತು.

ಗಾಂಧೀಜಿಗೆ ಆರೋಗ್ಯಲಾಭವಾದ ಬಳಿಕ ಅಹಮ್ಮದಾಬಾದಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಅಧಿವೇಶನ ನಡೆಯಿತು. ಕಾಂಗ್ರೆಸ್ ಸಭಿಕರೆಲ್ಲರೂ ನೂಲತಕ್ಕುದೆಂಬ ಹೊಸ ನಿಯಮದ ಚರ್ಚೆಯಲ್ಲದೆ ಸ್ವರಾಜ್ ಪಕ್ಷದವರೊಂದಿಗೆ ನಡೆದ ವಾದ ಪ್ರತಿವಾದಗಳು. ಗೋಪಿನಾಥ ಸಹಾ ಎಂಬ ಬಂಗಾಲಿ ತರುಣನು ನಡೆಸಿದ್ದ ಹತ್ಯದ ಸಂಬಂಧವಾಗಿ ಚರ್ಚೆ ನಡೆದ ವೇಳೆಗೆ ಗಾಂಧೀಜಿಯವರು ಅತಿ ಖಿನ್ನರಾದರು. ಆ ಸಭೆಯು ನಡೆದಾಗ ಜವಾಹರಲಾಲರು ಅಲ್ಲಿಯೆ ಇದ್ದರು.

ತರುವಾಯ ಗಾಂಧೀಜಿಯವರು ದಿಲ್ಲಿಯಲ್ಲಿ ನಡೆಸಿದ ಇಪ್ಪತ್ತೊಂದು ದಿನಗಳ ಉಪವಾಸ. ಹಿಂದು ಮುಸ್ಲಿಂ ಸೌಹಾರ್ದ ಸಾಧನೆಗಾಗಿ ನಡೆಸಿದ ಆ ಘೋರೋಪವಾಸವನ್ನೂ ಆ ಸಂದರ್ಭದಲ್ಲಿ ನಡೆದ ಐಕ್ಯತಾ ಸಮ್ಮೇಳನವನ್ನೂ ಜವಾಹರಲಾಲರು ಕಣ್ಣಾರೆ ನೋಡಿದರು, ಇತರರಂತೆ ತಾವೂ ನೊಂದರು. ಆದರೆ ಆ ಸಮ್ಮೇಳನದ ಸಂಕಲ್ಪಗಳು ಸ್ಥಿರಗೊಳ್ಳಲಿಲ್ಲ. ದಿಲ್ಲಿಯ ಸಮ್ಮೇಳನವಿನ್ನೂ ಮುಗಿಯುವುದರೊಳಗಾಗಿ ಇಲಾಹಾಬಾದಿನಲ್ಲಿಯೇ ಹಿಂದು ಮುಸ್ಲಿಂ ಗಲಭೆಗಳು ರೇಗಿದವು. ಜವಾಹರಲಾಲರು ಆತುರಾತುರವಾಗಿ ಸ್ವಂತ ಪಟ್ಟಣಕ್ಕೆ ಹಿಂದಿರುಗಿದ ವೇಳೆಗೆ ಗಲಭೆಗಳು ನಿಂತಂತಿದ್ದವು. ಆದಾಗ್ಯೂ ಪರಸ್ಪರ ಮನಸ್ತಾಪಗಳಿದ್ದೇ ಇದ್ದವು. ಪರಿಸ್ಥಿತಿ ಹೀಗಿರುವಲ್ಲಿ ರಾಮಲೀಲೋತ್ಸವ ನಿಂತೇ ಹೋಯಿತು.

> "ಎಂಟು ವರ್ಷಗಳಿಂದ ಪ್ರಯಾಗದಲ್ಲಿ ಆ ಉತ್ಸವ ನಡೆದಿಲ್ಲ. ಹಿಂದೆ ನಡೆಯುತ್ತಿದ್ದುದನ್ನು ಸ್ಮರಿಸಿಕೊಂಡು ಮಾತ್ರ ಮನಸ್ಸಿನಲ್ಲಿ ಖಿನ್ನರಾಗಬೇಕು. ಚಿಕ್ಕಂದಿನಲ್ಲಿ ರಾಮಲೀಲೋತ್ಸವ ಬಂದಿತೆಂದರೆ ನನಗೆಷ್ಟು ಸಂತೋಷ, ಎಷ್ಟು ಸಂಭ್ರಮ! ಜಿಲ್ಲೆಯ ನಾನಾ ಊರುಗಳಿಂದ ಜನರು ಬಂದು ನೆರೆದು ಆನಂದಿಸುತ್ತಿದ್ದರು. ಹಿಂದು ಜನರ ಉತ್ಸವವಾದರೂ ಎಷ್ಟೋ ಮುಸಲ್ಮಾನರೂ ಸೇರಿಕೊಂಡು ಉಲ್ಲಾಸಪಡುತ್ತಿದ್ದರು. ಎಲ್ಲ ಜನರೂ ಮುಖಗಳಲ್ಲಿ ಸಂತೋಷ ಬೀರುತ್ತಿದ್ದರು. ವ್ಯಾಪಾರಿಗಳಿಗೂ ಒಳ್ಳೆ ಸಮಯವಾಗಿತ್ತು. ದೊಡ್ಡವನಾದ ಮೇಲೂ ಆ ಉತ್ಸವಕ್ಕೆ ಹೋಗುತ್ತಿದ್ದೆ; ಹಿಂದಿನಷ್ಟು ಉಲ್ಲಾಸ ಉತ್ಸಾಹಗಳು ತೋರಲಿಲ್ಲ. ಅಲ್ಲಿಯ ವಿನೋದಗಳು ಅತಿ

ಸಾಮಾನ್ಯವೆನಿಸಿದ್ದವು. ನನಗೆ ಬೇಸರವಾದಾಗ್ಯೂ ಅಲ್ಲಿ ನೆರೆದಿದ್ದ ಸಾವಿರಾರು ಜನರು ಸಂತೋಷಪಡುತ್ತಿದ್ದುದನ್ನು ಗುರುತಿಸಿದೆ. ಎಲ್ಲರಿಗೂ ಹಬ್ಬವಾಗಿತ್ತು. ಕಳೆದ ಎಂಟು ಹತ್ತು ವರ್ಷಗಳಿಂದೀಚಿಗೋ! ಈ ಉತ್ಸವವನ್ನು ನೋಡಲು ಮಕ್ಕಳಿಗೆ ಆಸ್ಪದವಿಲ್ಲ. ನಿತ್ಯವೂ ದುಡಿದು ಬದುಕನ್ನು ಹೊರುವ ವಯಸ್ಕರಿಗೆ ಸಂತಸಗೊಳ್ಳಲಿದ್ದ ಒಂದು ದಿನವೂ ಇಲ್ಲವಾಯಿತು. ಇಷ್ಟಕ್ಕೂ ಕಾರಣ ಸಣ್ಣ ವಿಷಯಕ್ಕಾಗಿ ರೇಗಿದ ಜಗಳಗಳು, ರಾಜಕೀಯ ಕಾಷ್ಠಾವ್ಯಸನಗಳು! ಮತಭಕ್ತಿಯೆಂಬುದು ಈ ಸಂತೋಷನಾಶಕ್ಕೆ ಕಾರಣವಾಗುವುದಾದರೆ ಆ ಭಕ್ತಿಯಿಂದೇನು ಫಲ!"

1924ನೆ ವರ್ಷದ ಕೊನೆಯಲ್ಲಿ ಬೆಳಗಾಂವಿಯಲ್ಲಿ ಕಾಂಗ್ರೆಸ್ ಸಭೆ ನಡೆಯಿತು. ಗಾಂಧೀಜಿಯವರೇ ಅಧ್ಯಕ್ಷರು. ಅವರೇ ಅಧ್ಯಕ್ಷರಾಗುವುದು ವಿಚಿತ್ರವೆನಿಸಿತ್ತು; ಏಕೆಂದರೆ ಎಲ್ಲ ಅಧ್ಯಕ್ಷರಿಗೂ ಮೇಲ್ಪಟ್ಟ ಸ್ಥಾನ ಅವರದಾಗಿಯೇ ಇತ್ತು. ಜವಾಹರಲಾಲರನ್ನು ಪುನಃ ಅಖಿಲ ಭಾರತ ಕಾಂಗ್ರೆಸ್ ಸಭೆಗೆ ಕಾರ್ಯದರ್ಶಿಗಳನ್ನಾಗಿ ಗೊತ್ತು ಮಾಡಿದರು. ಆ ಉದ್ಯೋಗವು ಜವಾಹರಲಾಲರಿಗೆ ಶಾಶ್ವತವಾಗಿ ಅಂಟಿಕೊಳ್ಳುವಂತೆಯೆ ತೋರಿತು.

1925ನೆ ವರ್ಷ ಪ್ರಾರಂಭವಾಯಿತು. ಬೇಸಿಗೆ ಮುಂದುವರಿದಂತೆ ಮೋತಿಲಾಲರಿಗೆ ಉಬ್ಬಸ ವ್ಯಾಧಿಯು ತೊಂದರೆ ಹೆಚ್ಚಿತು. ಆದಕ್ಕಾಗಿ ಹಿಮವತ್ಪ್ರಾಂತದಲ್ಲಿ ಡಾಲ್ಹೌಸಿಗೆ ಹೊರಟರು. ಅಲ್ಲಿಂದ ತಂದೆ ಮಕ್ಕಳಿಬ್ಬರೂ ಚಂಬಾ ಕ್ಷೇತ್ರವನ್ನು ನೋಡಿದರು. ಅಲ್ಲಿರುವಾಗಲೇ ದೇಶಬಂಧು ಚಿತ್ತರಂಜನದಾಸರು ದೈವಾಧೀನರಾದರೆಂಬ ತಂತಿ ಬಂತು. ಸಮಾಚಾರ ತಿಳಿದ ಕೂಡಲೆ ಮೋತಿಲಾಲರು ಬಹುಕಾಲ ದುಃಖಪರವಶರಾಗಿ ಸ್ತಬ್ಧರಾಗಿ ಕುಳಿತುಬಿಟ್ಟರು. ಕೂಡಲೆ ಡಾಲ್ಹೌಸಿಗೂ ಅಲ್ಲಿಂದ ಪ್ರಯಾಗ ಕಲ್ಕತ್ತೆಗಳಿಗೂ ಪ್ರಯಾಣಮಾಡಿದರು. ಕಲ್ಕತ್ತೆಯಲ್ಲಿ ಕರ್ತವ್ಯವನ್ನು ನೆರವೇರಿಸಿದ ಬಳಿಕ ಜವಾಹರಲಾಲರಿಗೆ ಸ್ವಂತ ಜೀವನದಲ್ಲಿ ತೊಡಕು ತೋರಿತು.

ಹೊತ್ತುಗೊತ್ತಿಲ್ಲದ ಪ್ರಯಾಣಗಳು! ದಿನಕ್ಕೆ ಹದಿನೈದು ಹದಿನಾರು ಗಂಟೆಗಳ ಅವಿಶ್ರಾಂತ ಕರ್ತವ್ಯ! 1920ರಲ್ಲಿ ಅಸಹಕಾರ ಧರ್ಮವನ್ನು ಸ್ವೀಕರಿಸಿದಂದಿನಿಂದಾದ ದಸ್ತಗಿರಿಗಳೇನು, ಬಂದೀಖಾನೆ

ಯೇನು! ಆಗ ಪತಿಯನ್ನಗಲಿದ್ದುದಲ್ಲದೆ ಆ ತರುವಾಯವೂ ಎಷ್ಟನ್ನೋ ಧೀರೆಯಾಗಿ ಸಹಿಸಿಕೊಂಡಿದ್ದ ಕಮಲಾದೇವಿ ಅಸ್ವಸ್ಥೆಯಾದಳು. ಲಖನೌ ಆಸ್ಪತ್ರೆಯಲ್ಲಿ ರೋಗಿಯಾಗಿದ್ದಳು. 1925ನೆ ವರ್ಷದ ಉತ್ತರಾರ್ಧವೆಲ್ಲ ಜವಾಹರಲಾಲರಿಗೆ ನಿರಂತರ ಪ್ರಯಾಣವೇ ಆಯಿತು. ಕಾಂಗ್ರೆಸ್ಸಿಗೆ ಜನರಲ್ ಸೆಕ್ರೆಟರಿಯಾಗಿದ್ದುದರಿಂದ ಆಗಾಗ್ಗೆ ಕಾನ್ಪುರಕ್ಕೆ ಹೋಗಿ ಬರಬೇಕಾಗಿತ್ತು; ಆ ವರ್ಷದ ಕಾಂಗ್ರೆಸ್ ಕಾನ್ಪುರದಲ್ಲಿ ಸೇರಬೇಕಾಗಿತ್ತು. ಶ್ರೀಮತಿ ಸರೋಜಿನಿದೇವಿಯ ಅಧ್ಯಕ್ಷತೆ. ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಕಾರ್ಯಭಾರವನ್ನೂ ಹೊತ್ತು ವಾರ್ಷಿಕ ಸಭೆಗೆ ಸನ್ನಾಹವನ್ನೂ ನಡೆಸುತ್ತ ಪ್ರಯಾಗದಿಂದ ಕಾನ್ಪುರಕ್ಕೆ ಓಡಾಡುವ ಮಧ್ಯೆ ಕಮಲಾದೇವಿಯನ್ನು ಕಾಣಲು ಲಖನೌಗೆ ಪ್ರಯಾಣಗಳು. ಕಾನ್ಪುರದ ಕಾಂಗ್ರೆಸ್ ಮುಗಿದ ಬಳಿಕವೂ ಕಮಲಾದೇವಿಗೆ ದೃಢಾರೋಗ್ಯ ಲಭಿಸದಾಯಿತು. ಕೆಲಕಾಲವಾದರೂ ಸ್ವಿಡ್ಜರ್ಲಂಡಿನಲ್ಲಿ ಶಾಂತಿಯಿಂದಿದ್ದರೆ ಮೇಲೆಂಬ ಸೂಚನೆ ಹೊರಟಿತು.

ಜವಾಹರಲಾಲರಿಗೂ ಆ ಸೂಚನೆ ಹಿತವೆನ್ನಿಸಿತು. ಮನಸ್ಸಿಗೆ ಯಾವುದೋ ಮಂಕು ಹಿಡಿದಂತಿತ್ತು. ಸ್ವದೇಶದಿಂದ ದೂರವಾಗಿ ಸ್ವಲ್ಪಕಾಲವನ್ನಾದರೂ ಕಳೆದಲ್ಲಿ ಆ ದೂರ ದೃಷ್ಟಿಗೆ ಅನೇಕ ಸಮಸ್ಯೆಗಳೂ ಚಿಂತೆಗಳೂ ತೊಲಗಿಯಾವೆನ್ನಿಸಿತು. ಯೂರೋಪನ್ನು ಕಂಡು ಹದಿನಾಲ್ಕು ವರ್ಷ ಕಾಲ ಕಳೆದಿತ್ತು. ಆದುದರಿಂದ ಯೂರೋಪಿಗೆ ಪ್ರಯಾಣ ನಿಶ್ಚಯ ಮಾಡಿಕೊಂಡರು.

1926ನೆ ಮೇ ತಿಂಗಳಲ್ಲಿ ಮುಂಬಯಿಯಿಂದ ಜವಾಹರಲಾಲರು ಕಮಲಾದೇವಿಯೊಡನೆ ವೆನಿಸ್ಸಿಗೆ ಹೊರಟರು. ಅವರ ಜೊತೆಯಲ್ಲಿಯೇ ತಂಗಿ ವಿಜಯಲಕ್ಷ್ಮಿಯೂ ಭಾವ ರಣಜಿತ್ ಸೀತಾರಾಂ ಪಂಡಿತರೂ ಹೊರಟರು.

## 7. ಯೂರೋಪಿನಲ್ಲಿ

1912ರಲ್ಲಿ ಯೂರೋಪನ್ನು ಬಿಟ್ಟು ಹೊರಟಿದ್ದ ಜವಾಹರಲಾಲರು ಹದಿನಾಲ್ಕು ವರ್ಷಗಳನಂತರ ಪುನಃ ಯೂರೋಪಿನಲ್ಲಿ ಕಾಲಿಟ್ಟರು. ಇಂಗ್ಲಂಡಿನಲ್ಲಿ ವಿದ್ಯಾಭ್ಯಾಸಕ್ಕಾಗಿದ್ದಾಗಲೆ ಫ್ರಾನ್ಸ್

ಜರ್ಮನಿ ಮುಂತಾದ ದೇಶಗಳಲ್ಲಿ ಸಂಚರಿಸಿದ್ದು ಆ ಭಾಷೆಗಳನ್ನು ಕಲಿತಿದ್ದವರು; ಆದುದರಿಂದ ಐರೋಪ್ಯದೇಶಗಳಲ್ಲಿ ಆ ದೇಶೀಯರಂತೆಯೆ ಇರಬಲ್ಲವರು. ಆಗ್ಗೂ ಈಗ್ಗೂ ಯೂರೋಪಿನ ದೇಶಗಳು ಎಷ್ಟೋ ವ್ಯತ್ಯಾಸಗೊಂಡಿದ್ದವು. 1918ರಲ್ಲಿ ಮುಕ್ತಾಯಗೊಂಡಿತೆಂದು ಸಾಮಾನ್ಯವಾಗಿ ಭಾವಿಸುವ ಯುದ್ಧದಿಂದಲೂ ಆ ತರುವಾಯ ಸಂಭವಿಸಿದ ನಾನಾ ರೀತಿಯ ವಿಪ್ಲವಗಳಿಂದಲೂ ಭಾರಿ ಬದಲಾವಣೆಗಳು ನಡೆದಿದ್ದವು. ಈ ಹೊಸ ಯೂರೋಪಿನ ಸ್ಥಿತಿಗತಿಗಳನ್ನು ಪ್ರತ್ಯಕ್ಷವಾಗಿ ಕಂಡು ತಿಳಿಯಲು ಜವಾಹರರಿಗೆ ಒಳ್ಳೆಯ ಅವಕಾಶವಾಯಿತು.

ಕಮಲಾದೇವಿಯ ಆರೋಗ್ಯಲಾಭಕ್ಕಾಗಿ ಸ್ವಿಡ್ಸರ್ಲಂಡ್ ದೇಶದ ಜಿನೀವ ಬಳಿಯಲ್ಲಿಯೇ ಮೊದಲು ನೆಲೆಸಿದರು. ಆ ಸ್ವಿಡ್ಸರ್ಲಂಡ್ ದೇಶ ಅತಿ ಸಣ್ಣದಾದರೂ ಇತರ ದೇಶಗಳ ಮಧ್ಯೆ ಇರುಕಿಕೊಂಡಿದ್ದರೂ ಬಹುಕಾಲದಿಂದ ಯುದ್ಧವನ್ನೇ ಕಾಣದ ದೇಶ. ಮೊದಲನೆ ಐರೋಪ್ಯ ಸಂಗ್ರಾಮ ಮುಗಿದ ಬಳಿಕ ಕಟ್ಟಿದ್ದ ಸರ್ವರಾಷ್ಟ್ರ ಸಂಘ (League of Nations) ವೆಂಬುದಕ್ಕೆ ಜಿನೀವ ಪಟ್ಟಣವೇ ನೆಲೆ. ರಾಜ್ಯಭ್ರಷ್ಟರಾದವರಿಗೂ ಇತರರಿಗೂ ಅಲ್ಲಿಯೇ ಆಶ್ರಯ. ಸ್ವದೇಶಕ್ಕೆ ಬರಲಾಗದ ಭಾರತೀಯರನೇಕರನ್ನು ಜವಾಹರಲಾಲರು ಪ್ರತ್ಯಕ್ಷವಾಗಿ ಅಲ್ಲಿ ಕಂಡರು. ಶ್ಯಾಮಜಿ ಕೃಷ್ಣವರ್ಮ, ರಾಜಾ ಮಹೇನ್ದ್ರ ಪ್ರತಾಪ್, ಮೌಲ್ವಿ ಉಬಾಯದುಲ್ಲಾ ಮುಂತಾದವರನ್ನು ಕಂಡು ಮಾತನಾಡಿದರು. ಪ್ಯಾರಿಸ್‌ನಗರದಲ್ಲಿದ್ದುಕೊಂಡು ವೃದ್ಧೆಯಾಗಿದ್ದ ಮ್ಯಾಡಂ ಕಾಮಾ ಎಂಬಾಕೆಯನ್ನು ಕಂಡರು. ಇವರೆಲ್ಲರ ಚಿತ್ರವನ್ನು ತಮ್ಮ ಸ್ವವೃತ್ತಾಂತದಲ್ಲಿ ಮನೋಹರವಾಗಿ ಜವಾಹರಲಾಲರು ವರ್ಣಿಸಿರುತ್ತಾರೆ.

ಕಮಲಾದೇವಿಗೆ ಗುಣಮುಖವಾಗುತ್ತಿದ್ದಂತೆ ಜವಾಹರಲಾಲರು ಸಮೀಪ ಸ್ಥಳಗಳಿಗೆ ಹೋಗಿಬರುತ್ತಿದ್ದರು. ಸ್ವಿಡ್ಸರ್ಲಂಡ್‌ದೇಶ ಬೆಟ್ಟಗಳನ್ನು ಹತ್ತುವವರಿಗೂ ಸ್ಕೇಟಿಂಗ್ (Skating) ಅಥವಾ ಮಂಜಿನ ಮೇಲೆ ನಿಂತು ಜಾರುವವರಿಗೂ ಷಿಯಿಂಗ್ (Skiing) ಅಥವಾ ಆರಡಿ ಉದ್ದದ ಮರದೆಕ್ಕಡಗಳನ್ನು ತಗಲಿಸಿಕೊಂಡು ಹಾರುತ್ತ ಮಂಜಿನ

ಮೇಲೆ ಜಾರುವವರಿಗೂ ಒಳ್ಳೆಯ ಕ್ರೀಡಾಕ್ಷೇತ್ರ. ಬೆಟ್ಟವನ್ನೇರುವುದೂ ಸ್ಕೇಟ್‌ಮಾಡುವುದೂ ಜವಾಹರರಿಗೆ ಅಭ್ಯಾಸವಾಗಿತ್ತು; ಷಿಯಿಂಗ್ ಎಂಬುದನ್ನು ಹೊಸದಾಗಿ ಕಲಿತರು. ಮೊದಲು ಕಷ್ಟವಾಗಿ ತೋರಿದರೂ ದೃಢ ಸಂಕಲ್ಪಗೂಡಿ ಅಭ್ಯಾಸಮಾಡಿ ಕಡೆಗೆ ಅದರ ಆನಂದವನ್ನು ಅನುಭವಿಸಿದರು. ಆಟಗಳಿಗೆ ಮಾತ್ರವೇ ಅಲ್ಲ; ಇತರ ಉದ್ದೇಶಗಳಿಗಾಗಿಯೂ ಸಣ್ಣ ಪ್ರಯಾಣಗಳನ್ನು ನಡೆಸಿದರು. ಜರ್ಮನಿಯ ಮುಖ್ಯಪಟ್ಟಣ ಬರ್ಲಿನ್ನಿನಲ್ಲಿದ್ದ ಭಾರತೀಯರ ಗುಂಪನ್ನು ಕಂಡರು. 1914-18ರಲ್ಲಿ ನಡೆದ ಯುದ್ಧಕಾಲದಲ್ಲಿ ಕೆಲವರು ಭಾರತೀಯರು ಜರ್ಮನ್ನರ ಆಪ್ತತೆ ಸಂಪಾದಿಸಿದ್ದರು. ಅಂತಹ ಭಾರತೀಯರೆಲ್ಲರೂ ಪರದೇಶಗಳಲ್ಲಿಯೇ ಇದ್ದರು. ಎಲ್ಲೆಲ್ಲಿಯೂ ಗೋಪ್ಯ ಪೋಲೀಸ್ ಪಡೆಯುವರು ಕಾಣಿಸಿಕೊಳ್ಳುತ್ತಲೇ ಇದ್ದುದರಿಂದ ಎಲ್ಲಿಯೂ ಅಂತಹವರಿಗೆ ನಿರುಪಾಧಿಕವಾಗಿರಲಿಲ್ಲ.

ರುಮ್ಯೆ ರೊಲಾ(Romain Rolland)ರವರ ಪರಿಚಯು ಜವಾಹರರಿಗೆ ಸುಲಭವಾಗಲು ಗಾಂಧೀಜಿಯುವರೊಂದು ಪತ್ರ ಬರೆದು ಕೊಟ್ಟಿದ್ದರು. ಜಿನೀವದಿಂದ ಜವಾಹರಲಾಲರು ಅನೇಕಬಾರಿ ವಿಲ್ಲೆನ್ಯೂವ್ (Villeneuve) ಎಂಬಲ್ಲಿಗೆ ಯಾತ್ರಾರ್ಥಿಯಂತೆ ಹೊರಟು ಆತನೊಡನೆ ಮಾತುಕಥೆ ನಡೆಸಿದರು. ಸಮಸ್ತ ಯೂರೋಪಿಗೆ ಋಷಿಸ್ಥಾನದಲ್ಲಿದ್ದಾತನು ಆ ರುಮ್ಯೆರೊಲಾ. ಶ್ರೀರಾಮಕೃಷ್ಣ ಪರಮಹಂಸ, ವಿವೇಕಾನಂದರುಗಳ ವೃತ್ತಾಂತವನ್ನೂ ಗಾಂಧೀಜಿಯ ವೃತ್ತಾಂತವನ್ನೂ ಐರೋಪ್ಯರಿಗೆ ವಿಶದಗೊಳಿಸಿ ಪುಸ್ತಕ ಬರೆದ ಆತ ಫ್ರೆಂಚ್ ತತ್ತ್ವಜ್ಞ. ಹಾಗೆಯೆ ಎರ್ನಸ್ಟ್ ಟೋಲರ್(Ernst Toller), ರಾಜರ್ ಬಾಲ್ಡ್ವಿನ್ (Roger Baldwin), ಧನಗೋಪಾಲ ಮುಖರ್ಜಿ ಮುಂತಾದ ಪ್ರಸಿದ್ಧ ವ್ಯಕ್ತಿಗಳ ಪರಿಚಯುವೂ ಜವಾಹರರಿಗೆ ಉಂಟಾಯಿತು.

ಇಂಗ್ಲಂಡಿನಲ್ಲಿ ಆ ವೇಳೆಗೆ ಜನರಲ್ ಸ್ಟ್ರೈಕ್ ಮುಗಿದಿತ್ತು. ಗಣಿಗಳವರು ಮಾತ್ರ ಇನ್ನೂ ಕಷ್ಟಗಳನ್ನು ಅನುಭವಿಸುತ್ತಲಿದ್ದರು. ಅತಿ ಸಂಕಟಕ್ಕೊಳಗಾಗಿದ್ದ ಆ ಗುಂಪಿನವರು ಭಯದಿಂದ ಚಿತ್ತಶೂನ್ಯರಾಗಿದ್ದ ಹಲಕೆಲವು ದೃಶ್ಯಗಳನ್ನೂ ಜವಾಹರರು ಕಣ್ಣಾರೆ ಕಂಡರು.

ಆ ಗಣಿ ಕೂಲಿಗಾರರ ಸಂಘವೆಂಬುದು ಬಲಾಢ್ಯವಾಗಿದ್ದರೂ ಕಡು ಬಡವರು ಅನ್ಯಾಯವನ್ನು ಸಾಧ್ಯವಾದಷ್ಟು ಎದುರಿಸಿ ಕಡೆಗೂ ಕ್ರೌರ್ಯ ವನ್ನೇ ಮುಕ್ಕುವಾಗ ಎಷ್ಟು ಭಯಭ್ರಾಂತರಾಗುವರೆಂಬುದನ್ನು ಕಂಡ ಹಾಗಾಯಿತು. ಹೀಗೆ ಇಂಗ್ಲಂಡ್, ಫ್ರಾನ್ಸ್, ಜರ್ಮನಿ ಮುಂತಾದ ರಾಷ್ಟ್ರಗಳ ಪರಿಸ್ಥಿತಿಯನ್ನು ಕಾಣುತ್ತ ಬರ್ಲಿನ್ ನಗರದಲ್ಲಿದ್ದಾಗ ದಳಿತ ರಾಷ್ಟ್ರನಿವಾಸಿಗಳೆಲ್ಲರ ಪರವಾಗಿ ಬ್ರಸ್ಸೆಲ್ಸ್ ಪಟ್ಟಣದಲ್ಲಿ ಸಮ್ಮೇಳನ ನಡೆಯುವುದೆಂದು ಸಮಾಚಾರ ತಿಳಿಯಿತು. ಆ ಸಂಗತಿಯನ್ನು ಅಖಿಲ ಭಾರತ ಕಾಂಗ್ರೆಸ್ಸಿಗೆ ತಿಳಿಸಿದ ಕೂಡಲೆ ಕಾಂಗ್ರೆಸ್ಸಿನವರು ಜವಾಹರ ಲಾಲರನ್ನು ಆ ಸಮ್ಮೇಳನದಲ್ಲಿ ತಮ್ಮ ಪ್ರತಿನಿಧಿಯಾಗಿ ನಿಯಮಿಸಿದರು.

1927ನೆ ಫೆಬ್ರುವರಿಯಲ್ಲಿ ಸೇರಿದ ಆ ಸಮ್ಮೇಳನಕ್ಕೆ ಪೃಥ್ವಿಯ ನಾನಾ ಭಾಗಗಳಿಂದ ಪ್ರತಿನಿಧಿಗಳು ಬಂದಿದ್ದರು. ಸಾಮ್ರಾಜ್ಯಗಳನ್ನು ಬೆಳೆಸಿ ಕಟ್ಟಿಕೊಂಡಿದ್ದ ಇಂಗ್ಲಂಡ್, ಫ್ರಾನ್ಸ್ ಮತ್ತು ಇಟಲಿ ರಾಷ್ಟ್ರ ನಾಯಕರುಗಳಿಗೆ ಆ ಸಮ್ಮೇಳನ ಹಿತವೆನಿಸಲಿಲ್ಲ. ಸಾಮ್ರಾಜ್ಯ ಕಳೆದು ಕೊಂಡಿದ್ದ ಜರ್ಮನಿಯವರು ಮಾತ್ರ ಆ ಸಮ್ಮೇಳನವನ್ನು ಅಡ್ಡಿಮಾಡ ದಾದರು. ಮತ್ತೊಂದು ರಾಷ್ಟ್ರಕ್ಕೆ ಅಧೀನವಾಗಿ ಬಾಳುವ ರಾಷ್ಟ್ರ ಗಳೆಷ್ಟೋ ಜಗತ್ತಿನಲ್ಲಿ! ಅಂತಹ ಪರಾಕ್ರಾಂತ ರಾಷ್ಟ್ರಗಳು ಒಟ್ಟುಗೂಡಿ ಸ್ವತಂತ್ರರಾಗುವ ಗುರಿಯನ್ನೇಕೆ ಸಾಧಿಸಬಾರದೆಂಬ ಯೋಚನೆ ಆ ಸಮ್ಮೇಳನಕ್ಕೆ ಮೂಲ. ಸಮ್ಮೇಳನ ಪ್ರಯತ್ನದಲ್ಲಿ ಸರ್ವ ಸಮತಾ ವಾದಿಗಳೂ ಸೇರಿಕೊಂಡರು. ಚೀನದ ಕುಓಮಿಂಟಾಂಗ್ ಪಕ್ಷದವ ರಲ್ಲದೆ ಮೆಕ್ಸಿಕೊ ಮತ್ತು ಮಧ್ಯ ಅಮೆರಿಕ ದಕ್ಷಿಣ ಅಮೆರಿಕ ರಾಷ್ಟ್ರಗಳ ವರೂ ಪ್ರತಿನಿಧಿಗಳನ್ನು ಕಳುಹಿದರು. ಜವ, ಅನಾಂ, ಪಲಸ್ಟೈನ್, ಸಿರಿಯ, ಈಜಿಪ್ಟ್ ದೇಶಗಳ ಪರವಾಗಿಯೂ ಪ್ರತಿನಿಧಿಗಳು ಬಂದರು. ಜಗದ್ವಿ ಖ್ಯಾತರಾದ ಆಲ್ಬರ್ಟ್ ಐನ್‌ಸ್ಟೀನ್ (Albert Einstein), ಸತಿ ಸುನ್ಯಾತ್ಸೇನ್ ಮತ್ತು ರುಮೈರೊಲಾನ್ ಸಮ್ಮೇಳನವನ್ನು ಪ್ರೋತ್ಸಾ ಹಿಸಿದರು.

ಇಂಗ್ಲಂಡಿನ ಕಾರ್ಮಿಕ ಪಕ್ಷದ ನಾಯಕರಲ್ಲೊಬ್ಬಾತನಾದ ಜಾರ್ಜ್ ಲ್ಯಾನ್ಸ್‌ಬೆರಿ (George Lansbury)ಯನ್ನು ಸಮ್ಮೇಳನಕ್ಕೆ

ಅಧ್ಯಕ್ಷನನ್ನಾಗಿ ಆರಿಸಲಾಗಿತ್ತು. ಭಾರತದ ಪರವಾಗಿ ಜವಾಹರಲಾಲರು ಆ ಸಭೆಯಲ್ಲಿ ಮಾಡಿದ ಭಾಷಣವನ್ನು ಇಂದಿಗೂ ಮೆಚ್ಚಬಹುದಾಗಿದೆ. ಭಾಷಣಕ್ಕಿಂತಲೂ ಹೆಚ್ಚಿನದು ಪ್ರಾಯಶಃ ಜವಾಹರಲಾಲರು ಚೀನೀಯರೊಡನೆ ಕಟ್ಟಿದ ಮೈತ್ರಿ. ಸಮ್ಮೇಳನವೇನೋ ತೊಂದರೆಯಿಲ್ಲದೆ ಮುಕ್ತಾಯವಾಯಿತು. ಆದರೆ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಗೋಪ್ಯ ಪೋಲೀಸ್ ನಿಯೋಗಿಗಳು ಅಥವಾ ಮಾರೀಚ ದಳದವರಿದ್ದೇ ಇದ್ದರು.

ಸಮ್ಮೇಳನ ಮುಗಿದ ಬಳಿಕ ಅಮೆರಿಕನ್ ಮಿತ್ರನೊಡನೆ ಜವಾಹರಲಾಲರು ಪ್ಯಾರಿಸ್ಸಿನಲ್ಲಿದ್ದಾಗ ಆ ಮಿತ್ರನನ್ನು ಕಾಣಲು ಒಬ್ಬ ಫ್ರೆಂಚರವನು ಬಂದು ಕುಶಲ ಪ್ರಶ್ನೆಗಳನ್ನು ಬೆಳೆಸಿ ಮಾತನಾಡುತ್ತಲೇ ಇದ್ದು ಕಡೆಗೆ “ ಹಿಂದೆ ನನ್ನನ್ನು ನೋಡಿದುದು ನೆನಪಿಲ್ಲವೇ ನಿಮಗೆ ?” ಎಂದು ಕೇಳಿದನು. ಎಷ್ಟು ಪ್ರಯತ್ನಿಸಿದರೂ ಅಂತಹ ನೆನಪಾಗಲಿಲ್ಲ ಆ ಅಮೆರಿಕನ್ನನಿಗೆ. “ ಬ್ರಸ್ಸೆಲ್ಸ್ ಸಮ್ಮೇಳನದಲ್ಲಿ ನನ್ನನ್ನು ನೀವು ಕಂಡಿದ್ದಿರಿ. ನಾನು ನೀಗ್ರೋ ಆಗಿ ಬಂದಿದ್ದೆ ” ಎಂದನಂತೆ ಆ ಮಾರೀಚ. ಮುಖಕ್ಕೂ ಕೈಗೂ ಕಪ್ಪು ಬಳಿದುಕೊಂಡು ಆ ಸಮ್ಮೇಳನದಲ್ಲಿ ಭಾಗಿಯಾಗಿದ್ದನು !

ಅನಿರೀಕ್ಷಿತವಾದ ಸಂದರ್ಭವೊಂದೊದಗಿ ಜವಾಹರಲಾಲರು ಅಲ್ಲಿಯೂ ಪೋಲೀಸ್ ಅಧಿಕಾರಿಗಳ ಬಂದೋಬಸ್ತಿನಲ್ಲಿ ಸ್ಟೇಷನ್ನಿಗೆ ಹೊರಡಬೇಕಾಯಿತು. ಸಮ್ಮೇಳನ ಸಂಬಂಧವಾದ ಉಪಸಭೆಗಾಗಿ ಕೋಲೋಯ್ನ್ (Cologne) ಪಟ್ಟಣಕ್ಕೆ ಹೋಗಿದ್ದವರು ಅಲ್ಲಿಂದ ಡುಸ್ಸೆಲ್‌ಡಾರ್ಫ್ ಎಂಬೆಡೆಗೆ ಹೋದದಿನವೇ ಹಿಂತಿರುಗುವವರಾಗಿದ್ದರು. ಅಲ್ಲಿಂದ ಹಿಂತಿರುಗಿ ಬರುವಾಗ ಪೋಲೀಸಧಿಕಾರಿಗಳು ರಹದಾರಿಗಳನ್ನು ಕೇಳಿದರು. ತಮ್ಮ ರಹದಾರಿಯನ್ನು ಕೋಲೋಯ್ನ್ ಹೊಟೇಲಿನಲ್ಲಿ ಮರೆತು ಬಂದಿದ್ದರು ಜವಾಹರಲಾಲರು. ಕೂಡಲೆ ಪೋಲೀಸ್ ಸ್ಟೇಷನ್ನಿಗೊಯ್ದರು. ಆದರೆ ಅದೇ ಅವಸ್ಥೆಯಲ್ಲಿಯೇ ಸಿಕ್ಕಿದ ಇಂಗ್ಲಿಷ್ ದಂಪತಿಗಳ ಜೊತೆಯಿತ್ತು. ಸ್ಟೇಷನ್ನಿನಿಂದ ಅಧಿಕಾರಿಗಳು ಕೊಲೋಯ್ನ್ ಹೊಟೇಲಿನವರೊಂದಿಗೆ ಟೆಲಿಫೋನ್ ಆಡಿಸಿ ಸಂಗತಿಗಳನ್ನು ದೃಢಪಡಿಸಿಕೊಂಡು ಒಂದು ಗಂಟೆ ಕಳೆಯುವುದರೊಳಗಾಗಿ ಬೀಳ್ಕೊಟ್ಟರು.

1927ನೆ ಇಸವಿಯ ಪೂರ್ವಾರ್ಧದಲ್ಲಿಯೆ ಮೋತಿಲಾಲರೂ ಯೂರೋಪಿಗೆ ಹೊರಟರು. ವೆನಿಸ್ ಪಟ್ಟಣದಲ್ಲಿ ಎಲ್ಲರೂ ಸೇರಿಕೊಂಡರು. ಮೋತಿಲಾಲರು, ಜವಾಹರಲಾಲರು, ಕಮಲಾದೇವಿ ಮತ್ತು ಕೃಷ್ಣಾ ನೆಹರು (ತಂಗಿ) ಒಟ್ಟಿಗೆ ಹಲವು ತಿಂಗಳುಗಳನ್ನು ಕಳೆದರು. ಹಾಗಿದ್ದಾಗಲೆ ರಷ್ಯಾ ರಾಷ್ಟ್ರದ ರಾಜಧಾನಿ ಮಾಸ್ಕೋವಿನಲ್ಲಿ ಮಹೋತ್ಸವ ಸಮಯ. ರಷ್ಯದ ಮಹಾ ಪಲ್ಲಟವಾಗಿ ಹತ್ತು ವರ್ಷಗಳು ಕಳೆದಿದ್ದವು. ರಷ್ಯಾ ನೋಡಲು ಅದೇ ಸಮಯವೆಂದು ತಂದೆ ಮಕ್ಕಳಿಬ್ಬರೂ ಮಾಸ್ಕೋ ಪ್ರಯಾಣ ಮಾಡಿ ಅಲ್ಲಿ ಮೂರು ನಾಲ್ಕು ದಿನಗಳನ್ನು ಕಳೆದರು. ಅಲ್ಲಿದ್ದಾಗಲೆ ಸೈಮನ್ ವಿಚಾರಣಾ ಸಭೆ ಗೊತ್ತಾದ ಸಮಾಚಾರ ತಿಳಿಯಿತು.

ಮೋತಿಲಾಲರಿಗೆ ಲಂಡನ್ನಿನಲ್ಲಿ ಪ್ರೀವಿಕೌನ್ಸಿಲ್ ನ್ಯಾಯಸ್ಥಾನದಲ್ಲಿ ಒಂದು ಕೇಸಿನ ವಾದವಿತ್ತು. ಯಾವುದೋ ಹಳೆಯ ಜಮಿನ್ದಾರಿ ಕೇಸು. ವಾದದಲ್ಲಿ ಮೋತಿಲಾಲರಿಗೆ ಸರ್ ಜಾನ್ ಸೈಮನ್ನನೇ ಜೊತೆ! ಅದಕ್ಕಾಗಿ ಲಂಡನ್ನಿಗೆ ಹೊರಟರು. ಲಂಡನ್ನಿನಲ್ಲಿದ್ದಾಗ ಒಂದುಸಲ ಜವಾಹರಲಾಲರು ತಂದೆಯೊಂದಿಗೆ ಸರ್ ಜಾನ್ ಸೈಮನ್ನನ ಕಚೇರಿಗೆ ಆ ಕೇಸಿನ ಸಂಬಂಧದ ಪ್ರಸ್ತಾಪಕ್ಕಾಗಿ ಹೋಗಿದ್ದರು. ಮೋತಿಲಾಲರು ಆ ಕೆಲಸ ಮುಗಿಯುವತನಕ ಹಿಂತಿರುಗುವ ಯೋಚನೆ ಮಾಡಲಾರದವರು. ಜವಾಹರಲಾಲರಿಗೆ ಇನ್ನೂ ಹೆಚ್ಚು ಕಾಲವನ್ನು ಯೂರೋಪಿನಲ್ಲಿ ಕಳೆಯಲು ಇಷ್ಟವಾಗಲಿಲ್ಲ. ಬಾಲ್ಕನ್ ದೇಶಗಳನ್ನೂ ತುರ್ಕಿ ಈಜಿಪ್ಟ್ ದೇಶಗಳನ್ನೂ ನೋಡುವ ಅಭಿಲಾಷೆಯಿದ್ದರೂ ಡಿಸೆಂಬರ್ ತಿಂಗಳಲ್ಲಿ ಕಾಂಗ್ರೆಸ್ ಸಭೆ ಮದರಾಸಿನಲ್ಲಿ ಸೇರುವ ವೇಳೆಗಾದರೂ ಸ್ವದೇಶಕ್ಕೆ ಹಿಂತಿರುಗುವ ಆತುರ. ಕಮಲಾದೇವಿಗೆ ದೌರ್ಬಲ್ಯವಿದ್ದಾಗ್ಗೂ ಅಸ್ವಸ್ಥತೆ ಕಳೆದಿತ್ತು. ಆದ್ದರಿಂದ ಕಮಲಾದೇವಿ ಕೃಷ್ಣೆಯರೊಡನೆ ಮಾರ್ಸೈಯ್ ಬಂದರಿನಲ್ಲಿ ಜಹಜನ್ನೇರಿಕೊಂಡು ಕೊಲಂಬೋ ಬಂದರಿನಲ್ಲಿಳಿದು ಅಲ್ಲಿಂದ ಮದರಾಸಿಗೆ ಹೊರಟರು.

## 8. ಲಕ್ಷ್ಯ ನಿರ್ದೇಶ

ಸ್ವದೇಶವನ್ನು ಬಿಟ್ಟು 21 ತಿಂಗಳುಗಳು ಕಳೆದಿದ್ದವು. ಹೊರಟಾಗ ಜವಾಹರಲಾಲರ ಮನಸ್ಸು ಸ್ಥಿಮಿತವಾಗಿ ನಿಲ್ಲದೆ ಅಸಮಾಧಾನ ತುಂಬಿದ್ದ ಹಾಗಿತ್ತು. ಯೂರೋಪಿನಲ್ಲಿ ಕಳೆದ ಕಾಲವೆಲ್ಲವನ್ನೂ ಆಲೋಚನೆಯಲ್ಲಿ ಕಳೆದು ಜಗತ್ತಿನ ಪರಿಸ್ಥಿತಿಯಲ್ಲಿ ಭಾರತವರ್ಷದ ಭವಿಷ್ಯ ಹೇಗಾದರೆ ಲೇಸೆಂದು ಯೋಚಿಸಿ ಮನಸ್ಸಿನಲ್ಲಿಯೇ ನಿರ್ಧರಕ್ಕೆ ಬಂದಿದ್ದರು. ದೇಶಕ್ಕೆ ಬೇಕಾದುದು ರಾಜಕೀಯ ಸ್ವಾತಂತ್ರ್ಯ ಮತ್ತು ಸಾಮಾಜಿಕ ನ್ಯಾಯಸ್ಥಾಪನೆ; ಎರಡೂ ಅತ್ಯವಶ್ಯವಾಗಿದ್ದರೂ ಮೊದಲು ಸಾಧಿಸತಕ್ಕದು ರಾಜಕೀಯ ಸ್ವಾತಂತ್ರ್ಯ. ಇಷ್ಟು ನಿರ್ಣಯವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಬ ವೇಳೆಗೆ ವಿಶ್ರಾಂತಿಪಡೆದು ಹೊಸ ಚೈತನ್ಯ ತುಂಬಿಕೊಂಡವರಂತಿದ್ದರು.

ಕೊಲಂಬೊಯಿಂದ ನೇರವಾಗಿ ಮದರಾಸಿಗೆ ಪ್ರಯಾಣ. ಅಲ್ಲಿ ಕಾಂಗ್ರೆಸ್ಸಿನ ವಾರ್ಷಿಕ ಸಭೆ ನಡೆಯಲಿತ್ತು. ಡಾ|| ಅನ್ಸಾರಿಯವರು ಅಧ್ಯಕ್ಷರು. ಮಹಾತ್ಮಾಜಿಯವರು ಮದರಾಸ್ ಕಾಂಗ್ರೆಸ್ಸಿಗೆಂದು ಬಂದಿದ್ದಾಗ್ಗೂ ರಾಜಕೀಯ ವಿಷಯಗಳ ಚರ್ಚೆಯಲ್ಲಿ ಪ್ರವೇಶಿಸದೆ ಇದ್ದುಬಿಟ್ಟರು. ಜವಾಹರಲಾಲರು ಬಂದಕೂಡಲೆ ಸರ್ವಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಲಕ್ಷ್ಯವೆಂಬುದಕ್ಕೂ ದಳಿತ ರಾಷ್ಟ್ರಗಳ ಸಮ್ಮೇಳನದಲ್ಲಿ ಕಾಂಗ್ರೆಸ್ ಸೇರಿಕೊಳ್ಳುವುದಕ್ಕೂ ತಕ್ಕಂತೆ ನಿಶ್ಚಯಗಳನ್ನು ಮಾಡಬೇಕೆಂದು ಸೂಚಿಸಿದರು. ಬರೆದುಕೊಟ್ಟಂತೆಯೆ ಸಭೆಯಲ್ಲಿ ಅಂಗೀಕೃತವಾದುದನ್ನು ಕಂಡು ಜವಾಹರಲಾಲರಿಗೆ "ಇವುಗಳ ಪೂರ್ಣವಾದ ಅರ್ಥವೇನೆಂದು ಇತರರು ಗ್ರಹಿಸಿದಂತಿಲ್ಲ"ವೆನ್ನಿಸಿತು. ಮುಂದಿನ ಹೆಜ್ಜೆಯಲ್ಲಿಯೇ ವ್ಯಕ್ತವೂ ಆಯಿತು. ಸೈಮರ್ನ ಕಮಿಷನ್ನನ್ನು ಎಲ್ಲೆಲ್ಲಿಯೂ ಬಹಿಷ್ಕರಿಸಬೇಕೆಂದು ನಿಶ್ಚಯಿಸಿದ ಕೂಡಲೆ ಡುಮಿನಿಯನ್ ಪದವಿಯನ್ನು ಗುರಿಯಲ್ಲಿಟ್ಟುಕೊಂಡು ದೇಶಕ್ಕೆ ರಾಷ್ಟ್ರರೂಪರಚನೆಯನ್ನು ಹೊಂದಿಸಿಡಲು ಸರ್ವಪಕ್ಷಗಳ ಸಮ್ಮೇಳನ ನಡೆಯತಕ್ಕುದೆಂಬ ತೀರ್ಮಾನವಾಯಿತು. ಸೈಮರ್ನ ಕಮಿಷನ್ನಿನಲ್ಲಿ ಭಾರತೀಯನೊಬ್ಬನಾದರೂ ಸಭಿಕನಾಗಿಲ್ಲದಿದ್ದುದರಿಂದ ಎಲ್ಲ ಪಕ್ಷದವರಿಗೂ ಆಕ್ರೋಶ. ಆಗಲೇ

ಎಲ್ಲ ಪಕ್ಷದವರಲ್ಲಿಯೂ ಐಕ್ಯತೆ ತೋರುವಂತಿತ್ತು. ರಾಷ್ಟ್ರರೂಪದ ಸುಧಾರಣೆಗಳು ಡುಮಿನಿಯನ್ ಪದವಿಗೆ ಸಮನಾಗಿರುವಂತೆ ಏಕಕಂಠವಾಗಿ ಘೋಷಿಸುವ ನಿರ್ದೇಶಕ್ಕೂ ಜವಾಹರಲಾಲರು ಮನಸ್ಸಿನಲ್ಲಿ ನಿರ್ಧರಮಾಡಿಕೊಂಡಿದ್ದುದಕ್ಕೂ ಎಷ್ಟೋ ಅಂತರವಿತ್ತು.

ಸ್ವರಾಜ್ ಪಕ್ಷದವರು ಕಾಂಗ್ರೆಸ್ ಸಭಿಕರಲ್ಲಿ ಪ್ರಬಲಗೊಂಡು ಚುನಾವಣೆಗಳಲ್ಲಿ ಜಯಶೀಲರಾಗಿ ಶಾಸನ ಸಭೆಗಳಲ್ಲಿ ಪ್ರವೇಶಿಸಿ ಅಧಿಕಾರಿ ಪಕ್ಷದವರನ್ನು ಖಂಡಿಸಲು ಮೊದಲಿಟ್ಟಾಗಿನಿಂದ ಗಾಂಧೀಜಿಯವರು ರಾಜಕೀಯ ಪ್ರಯತ್ನಗಳಿಂದ ದೂರವಾಗಿದ್ದುಬಿಟ್ಟರು. ಅಖಿಲಭಾರತ ಚರಖಾ ಸಂಘವನ್ನು ಸ್ಥಾಪಿಸಿ ಖಾದಿ ಪ್ರಚಾರೋತ್ಪತ್ತಿಗಳಿಗಾಗಿಯೆ ಸರ್ವಚೈತನ್ಯವನ್ನು ವಿನಿಯೋಗಿಸುತ್ತಿದ್ದರು. ಜವಾಹರಲಾಲರ ಆಲೋಚನೆಗಳಿಗೆ ಗಾಂಧೀಜಿ ಬೆಂಬಲಕೊಡುವಂತಿರಲಿಲ್ಲ; ಗಾಂಧೀಜಿಯಿಲ್ಲದೆ ಪ್ರಯತ್ನಮಾಡುವುದು ಮುಟ್ಠಾಳತನವೆಂಬುದು ಜವಾಹರಲಾಲರಿಗೆ ಚನ್ನಾಗಿ ಗೊತ್ತಿತ್ತು.

ಮದರಾಸ್ ಕಾಂಗ್ರೆಸ್ ಮುಗಿಯುವುದರೊಳಗಾಗಿ ಜವಾಹರಲಾಲರು ಪುನಃ ಕಾರ್ಯದರ್ಶಿ ಹುದ್ದೆಯನ್ನೊಪ್ಪಿಕೊಳ್ಳಬೇಕಾಯಿತು. ಡಾಕ್ಟರ್ ಅನ್ಸಾರಿಯವರು ಒಪ್ಪಿಸಿದರು. ಆ ಸಮಯದಲ್ಲಿಯೆ ದಿಲ್ಲಿಯಲ್ಲಿ ಹಕೀಮ್ ಅಜಮಾಲ್ ಖಾನರು ತೀರಿಕೊಂಡರು. ಮೋತಿಲಾಲರಿಗೂ ಹಕೀಮ್ ಸಾಹಬರಿಗೂ ಆಪ್ತಸ್ನೇಹವಿದ್ದು ಪರಸ್ಪರವಾಗಿ ಭಾಯಿಸಾಹಬ್ ಎಂದು ಕರೆದುಕೊಳ್ಳುತ್ತಿದ್ದರು. ಆಪ್ತಮಿತ್ರರಾಗಿದ್ದವರು ತೀರಿಕೊಂಡುದಲ್ಲದೆ ಮುಸ್ಲಿಂ ಗುಂಪಿನ ಕಾಂಗ್ರೆಸ್ ಭಕ್ತರಲ್ಲಿ ಅಗ್ರಗಣ್ಯರೂ ವಿಶ್ವಾಸಪಾತ್ರರೂ ಆಗಿದ್ದ ನಾಯಕರು ಇಲ್ಲದಂತಾಯಿತು.

ಜನರಲ್ ಸೆಕ್ರೆಟರಿಯಾದ ಬಳಿಕ ಜವಾಹರಲಾಲರು ಸರ್ವಪಕ್ಷ ಸಮ್ಮೇಳನದಲ್ಲಿ ಸಭಿಕರಾಗದಿದ್ದರೂ ಕರ್ತವ್ಯನಿರ್ವಾಹ ಮಾಡಬೇಕಾಗಿತ್ತು. ಲಖನೌ ನಗರದಲ್ಲಿ ಆ ಸಭೆ ಸೇರಿದಾಗ ಜವಾಹರಲಾಲರು ಅಲ್ಲಿರಬೇಕಾಯಿತು. ಆ ಸಭೆಯ ನಿರ್ಣಯಗಳು ಮನಸ್ಸಿಗೆ ಒಪ್ಪಲಿಲ್ಲ. ಹಾಗೂ ಹೀಗೂ ಅಧಿವೇಶನಗಳು ನಡೆಯುತ್ತಿದ್ದು ಕಡೆಗೆ ಮೋತಿಲಾಲರು ಹಿಂದಿರುಗಿ ಬಂದು ಅಧ್ಯಕ್ಷತೆ ವಹಿಸಿದ ಬಳಿಕ ಕ್ಷಿಪ್ರತೆಯಿಂದ

ಕೆಲಸ ನಡೆದು ನೆಹರು ವರದಿಯೆಂಬುದು ಸಿದ್ಧವಾಯಿತು. 1928ನೆ ಇಸವಿ ಡಿಸೆಂಬರ್ ತಿಂಗಳಲ್ಲಿ ಕಲ್ಕತ್ತೆಯ ಕಾಂಗ್ರೆಸ್ ಸೇರುವ ವೇಳೆಗೆ ಮೋತಿಲಾಲರು ಆ ವರದಿಯನ್ನು ಸಾಧಿಸಿದ್ದರು.

ಬರ್ದೋಲಿ ಸತ್ಯಾಗ್ರಹವೆಂಬುದು ನಡೆದುದು ಅದೇ ವರ್ಷದಲ್ಲಿ. ಗುಜರಾಥದಲ್ಲಿ ಆ ತಾಲ್ಲೂಕಿನ ರೈತರು ಅದ್ಭುತರೀತಿಯಲ್ಲಿ ವರ್ತಿಸಿದರು. ಸರ್ದಾರ್ ವಲಭ್ಭಾಯಿ ಪಟೇಲರು ಆ ಸತ್ಯಾಗ್ರಹವನ್ನು ನಡೆಸಿದ ರೀತಿಯು ಎಲ್ಲರಿಗೂ ಆದರ್ಶವನ್ನು ಬೀರಿತು. ಅವಧ ಪ್ರಾಂತದಲ್ಲಿಯ ರೈತಾಪಿ ಜನರಿಗೆ ಹಿಂದಿನ ಆಂದೋಳನದ ಪರಿಣಾಮವಾಗಿ ಆಜೀವವಾಗಿ ಮಾತ್ರ ಭೂಮಿಗಳನ್ನು ವ್ಯವಸಾಯ ಮಾಡುವ ಹಕ್ಕು ದೊರೆತಿದ್ದರೂ ಅಸಮಾಧಾನಕ್ಕೆ ಯಥೇಷ್ಟವಾದ ಕಾರಣಗಳಿದ್ದವು. ಗುಜರಾಥ ರೈತರಿಗೂ ಇವರಿಗೂ ದೊಡ್ಡ ವ್ಯತ್ಯಾಸವಿತ್ತು. ಅವಧ ಪ್ರಾಂತದಲ್ಲಿ ತಾಲೂಕಾದಾರರೇ ಕಂದಾಯ ಕವಳಿಗೆಗಳನ್ನೆತ್ತತಕ್ಕವರು; ಗುಜರಾಥದಲ್ಲಾದರೆ ಸರ್ಕಾರದವರೇ ನೇರವಾಗಿ ವಸೂಲ್ಮಾಡತಕ್ಕವರು. ತಾಲೂಕಾದಾರರೋ ಜಮೀನ್ದಾರರೋ ಜಹಗೀರ್‌ದಾರರೋ ಭೂಸ್ವಾಮ್ಯ ಪಡೆದು ಅನ್ಯರ ದುಡಿತದ ಫಲವನ್ನುಣ್ಣತಕ್ಕವರಾದುದರಿಂದ ಪರಾನ್ನಹಾರಿಗಳೆಂದೇ ಜವಾಹರಲಾಲರ ನಿರ್ಣಯ. ಅಂತಹ ವರ್ಗದವರಿರಬಾರದೆಂದೇ ಅಭಿಪ್ರಾಯ. ಕಷ್ಟಪಟ್ಟು ಉಳುಮೆ ಬಿತ್ತನೆಮಾಡತಕ್ಕವರಿಗೆ ಮಾತ್ರವೇ ಭೂಸ್ವಾಮ್ಯವಿರಬೇಕೆಂಬ ನ್ಯಾಯವನ್ನೊಪ್ಪಿದವರು. ಗ್ರಾಮಾಂತರ ಪ್ರದೇಶಗಳಲ್ಲಿ ರೈತರು ಹೇಗೋ ಪಟ್ಟಣಗಳಲ್ಲಿ ಕಾರ್ಮಿಕ ಅಥವಾ ಕಾಮಗಾರ ವರ್ಗದವರಿಗೆ ಸ್ವಾತಂತ್ರ್ಯ ಸಲ್ಲಬೇಕೆಂಬುದೂ ಹಾಗೆಯೇ. ಯೂರೋಪಿನಿಂದ ಹಿಂತಿರುಗಿ ಬಂದ ಕೂಡಲೆ ಜವಾಹರಲಾಲರು ಕಾಮಗಾರ ಸಂಘಗಳ ಕಾರ್ಯಕಲಾಪಗಳಲ್ಲಿ ಆದರವನ್ನು ವಹಿಸಲು ಅದೇ ಕಾರಣ.

1928ನೆ ವರ್ಷ ಪ್ರಾರಂಭದಲ್ಲಿಯೆ ಸೈಮನ್‌ಕಮಿಷನ್ ಮುಂಬಯಿಯಲ್ಲಿ ಹಾಜರಾಯಿತು. ಆ ನಗರದಲ್ಲಿ ಪ್ರಚಂಡವಾಗಿಯೆ ನಡೆಯಿತು ಬಾಯ್ಕಾಟ್. ಅಲ್ಲಿ ನಿಲ್ಲದೆ ದಿಲ್ಲಿಗೆ ಹೋದರೆ ಅಲ್ಲಿಯೂ ಅದೇ. ಸಾವಿರಾರು ಜನ ಗುಂಪುಗೂಡಿ ಕಪ್ಪುಬಾವುಟಗಳನ್ನು ಹಿಡಿದು ಮೆರವಣಿಗೆ

ಹೊರಟು 'ಸೈಮನ್ ಗೋ ಬ್ಯಾಕ್' ಎಂಬ ಕೂಗನ್ನು ನಿರಂತರವಾಗಿ ಗಗನದಲ್ಲಿ ತುಂಬಿಸಿದರು. ರೈಲ್ ಪ್ರಯಾಣ ಮಾಡುತ್ತಿರುವಾಗ ಸ್ಟೇಷನ್ ಸ್ಟೇಷನ್ನಿಗೂ ಅದೇ ದೃಶ್ಯ, ಅದೇ ಕೂಗು! ನೂತನ ದಿಲ್ಲಿಯಲ್ಲಿ ಜನ ಸಂದಣಿಗೆ ದೂರವಾದ ಹೊಟೇಲಿನಲ್ಲಿ ತಂಗಿದ್ದಾಗ ರಾತ್ರಿವೇಳೆಯಲ್ಲಿಯೂ ಆಕಾಶದಲ್ಲಿ ಅದೇ ಕೂಗು ಕೇಳುತ್ತಿತ್ತಂತೆ. ಪೋಲೀಸ್ ಅಧಿಕಾರಿಗಳು ಈ ಬಾಯ್ಕಾಟ್ ಚಳುವಳಿಯನ್ನು ಅಡಗಿಸಲು ಸನ್ನದ್ಧರಾದಾಗ ಅಲ್ಲಲ್ಲಿ ಜನರಿಗೂ ಪೋಲೀಸಧಿಕಾರಿಗಳಿಗೂ ಸಣ್ಣದಾಗಿಯೋ ದೊಡ್ಡದಾಗಿಯೋ ಘರ್ಷಣೆಗಳು ಹುಟ್ಟಿಕೊಂಡುದರಲ್ಲಿ ಆಶ್ಚರ್ಯವೇನು! ಲಾಹೋರಿಗೆ ಆ ಸಪ್ತಸಭಿಕರು ಹೊರಟಾಗ ಆ ಘರ್ಷಣೆ ಕ್ರೂರರೂಪವನ್ನು ತಾಳಿತು. ಅನ್ಯಾಯದ ಅವಮಾನವಾಯಿತೆಂದು ಎಲ್ಲ ಪಕ್ಷದವರೂ ರೋಷದಿಂದ ವಿರೋಧಿಸುತ್ತಲಿದ್ದಾಗ್ಯೂ ಆ ಸಭಿಕರನ್ನು ದೇಶದಲ್ಲಿ ಓಡಾಡಿಸುವ ಹಟವನ್ನು ಸರ್ಕಾರದವರು ಬಿಡಲಿಲ್ಲ.

ಲಾಹೋರ್ ನಗರದಲ್ಲಿ ಸೈಮನ್ ಸಭಿಕರು ಕಾಣಿಸಿಕೊಳ್ಳುವ ಸಮಯದಲ್ಲಿ ಸಹಸ್ರಾರು ಜನರು ಬೀದಿಗಳಲ್ಲಿ ಗುಂಪುಗೂಡಿದರು. ಪಂಜಾಬ್ ಕೇಸರಿಯೆನ್ನಿಸಿಕೊಂಡ ಲಾಲಾ ಲಜಪತರಾಯರು ಜನರ ಮುಂಭಾಗದಲ್ಲಿ ನಿಂತುಕೊಂಡಿದ್ದರು. ಗುಂಪುಗೂಡಿದ್ದ ಜನರು ಕರಿ ಬಾವುಟಗಳನ್ನು ವಿನಾ ಮತ್ತಾವ ಆಯುಧಗಳನ್ನೂ ತಂದಿರಲಿಲ್ಲ. ಗುಂಪನ್ನು ಚದರಿಸಿ ಬಿಡಬೇಕೆಂಬ ಉದ್ದೇಶದಿಂದಲೂ ಅಧಿಕಾರ ದರ್ಪದಿಂದಲೂ ಪೋಲೀಸ್ ಅಧಿಕಾರಿಗಳು ಸಿದ್ಧರಾಗಿದ್ದರು. ಸೋಟಾಗಳನ್ನು ಹಿಡಿದು ಉಪಯೋಗಿಸಲು ಪ್ರಾರಂಭವಾಯಿತು. ಇಂಗ್ಲಿಷ್ ಜಾತಿಯ ಪೋಲೀಸ್ ಅಧಿಕಾರಿಯೊಬ್ಬನು ನೇರವಾಗಿ ಲಾಲಾಜಿ ಬಳಿಗೆ ನುಗ್ಗಿ ಬಲವಾಗಿ ಬೀಸಿ ಎದೆಮೇಲೆ ಹೊಡೆದನು. ಪ್ರತಿಯಾಗಿ ಯಾವ ಬಗೆಯ ಆಗ್ರಹವನ್ನೂ ಕಾಣಿಸದೆ ಲಾಲಾಜಿಯವರು ಹಾಗೆಯೇ ನಿಂತಿದ್ದರು; ಪಕ್ಕದಲ್ಲಿದ್ದ ಜನರ ಮೇಲೆ ಇತರ ಪೋಲೀಸ್ ಪಡೆಯವರು ಬಿದ್ದು ಯದ್ವಾತದ್ವಾ ಬಡಿದಿದ್ದರು. ಕೈಕಾಲುಗಳು ಮುರಿದುದಲ್ಲದೆ ಬುರುಡೆಗಳಿಗೂ ಏಟು ಬಿದ್ದು ಜನರು ಅಸಹಾಯರಾಗಿ ನೆಲಕ್ಕೊರಗುವಂತಾ

ಯಿತು. ಲಾಠಿ ಪ್ರಯೋಗದ ಚರಿತ್ರೆಯಲ್ಲಿ ಇದೇ ಪ್ರಾಯಶಃ ಮೊದಲನೆ ಅಧ್ಯಾಯ. ಜನರಿಗೆ ಆ ಅನುಭವ ಹೊಸದಾಗಿತ್ತು. ಇಂತಹದು ದೇನಾದರೂ ಸಂಭವಿಸೀತೆಂದು ಲಾಲಾಜಿಯವರೊಂದುವೇಳೆ ಬಗೆ ದಿದ್ದಾಗ್ಗೂ ತಮ್ಮನ್ನೇ ಮೊದಲು ಪ್ರಹರಿಸುವರೆಂದುಕೊಂಡಿರಲಾರರು. ಅಂತೂ ಈ ಘಟನೆ ನಡೆದು ದೇಶದಲ್ಲೆಲ್ಲಿಯೂ ಸುದ್ದಿ ಹರಡಿತು. ಪೋಲೀಸ್ ಪಡೆಯವರು ಸೋಟಾಗಳನ್ನು ಬೀಸಿ ನಿರಪರಾಧಿ ಜನರನ್ನು ಹೊಡೆದುದು ಮಾತ್ರವಲ್ಲ. "ಲಾಲಾಜಿಯಂತಹ ಗೌರವ ಪಾತ್ರರನ್ನೇ ಗುರಿಯಿಟ್ಟು ಮೃಗಗಳಂತೆ ಹೊಡೆಯುವುದಂದರೇನು?" ಎನ್ನುತ್ತ ಎಲ್ಲೆಲ್ಲಿಯೂ ಜನರಿಗೆ ರೋಷವೇರಿತು.

ಲಾಲಾಜಿಯವರಿಗೆ ಹೃದಯ ವ್ಯಾಧಿಯಿತ್ತು. ಬಿದ್ದ ಏಟಿನಿಂದ ಆ ವ್ಯಾಧಿ ಪ್ರಬಲಗೊಳ್ಳಲು ಅನುಕೂಲವಾಯಿತು. ಡಾಕ್ಟರುಗಳ ಅಭಿಪ್ರಾಯವೂ ಕೂಡ ಆ ಏಟಿನಿಂದಲೇ ಸಾವಿಗೆ ಅನುಕೂಲವಾಯಿತೆಂಬುದಾಗಿ ಪ್ರಕಟವಾಯಿತು. "ಪೂಜ್ಯ ಲಾಲಾಜಿಯನ್ನು ರಕ್ಷಿಸಿಕೊಳ್ಳಲಾರದೆ ಹೋದೆವೇ!" ಎನ್ನುವ ಹಾಹಾಕಾರ ಜನರಲ್ಲಿ ತುಂಬಿತು. ತಮಗೇಟು ಬಿದ್ದುದಕ್ಕೆ ಚಿಂತೆಯಿಲ್ಲವೆಂದರೂ ತಮ್ಮನ್ನೇ ಹೊಡೆಸಲು ಹಿಂತೆಗೆಯದ ಸರ್ಕಾರೀ ಅಧಿಕಾರಿಗಳು ದೇಶೀಯರಲ್ಲಿ ಎಷ್ಟು ತಿರಸ್ಕಾರ ಬುದ್ಧಿಯನ್ನು ಕಾಣಿಸಿ ಎಂತಹ ಅವಮಾನ ಮಾಡಲು ಹವಣಿಸಿದರೆಂದು ಕೊಂಡು ಲಾಲಾಜಿ ಮನದಲ್ಲಿ ಅತಿಯಾಗಿ ನೊಂದರು. ಗಾಯಗಳಿನ್ನೂ ವಾಸಿಯಾಗಿರಲಿಲ್ಲ; ಆದರೂ ಲಾಲಾಜಿಯವರು ತಮ್ಮ ಕರ್ತವ್ಯ ಬಿಡಲಾರದೆ ದಿಲ್ಲಿಯಲ್ಲಿ ಸೇರಲಿದ್ದ ಅಖಿಲಭಾರತ ಕಾಂಗ್ರೆಸ್ ಸಭೆಗೆ ಬಂದರು. ಆಗ ಜವಾಹರಲಾಲರೂ ಅಲ್ಲಿದ್ದು ನೆರೆದ ಸಭೆಯಲ್ಲಿ ಭಾಷಣ ಕೊಟ್ಟು "ಸುಧಾರಣೆಯಲ್ಲ, ಪಲ್ಲಟವೇ ಬೇಕಾದುದು" ಎಂಬ ತಮ್ಮ ಮನೋಗತವನ್ನು ಸ್ಪಷ್ಟಗೊಳಿಸಿದರು. ಆ ಭಾಷಣ ಅಷ್ಟೇನೂ ಮುಖ್ಯವಾಗಿರಲಿಲ್ಲ. ಆದಾಗ್ಗೂ ಲಾಲಾಜಿಯವರು ಅದರಲ್ಲಿನ ಅಂಶಗಳನ್ನು ಹಿಡಿದು ಚರ್ಚಿಸಿದರು. ಲಾಹೋರಿಗೆ ಹಿಂತಿರುಗಿದಮೇಲೂ ತಮ್ಮ ವಾರಪತ್ರಿಕೆಯಲ್ಲಿ ಟೀಕೆಯನ್ನು ಪ್ರಾರಂಭಿಸಿದರು. ಟೀಕೆಯನ್ನು ಮುಂದರಿಸುವುದರೊಳಗಾಗಿ ತೀರಿಕೊಂಡರು.

ಲಾಲಾಜಿ ತೀರಿಕೊಂಡುದರ ಪ್ರಭಾವ ಸ್ವೈರ್ಮಸಭಿಕರೆಲ್ಲಿ ಹೋದರೆ ಅಲ್ಲಿ ಪ್ರಬಲವಾಗಿ ವ್ಯಕ್ತವಾಯಿತು. ಲಖನೌ ನಗರಕ್ಕೆ ಅವರ ಪ್ರಯಾಣವೆಂದು ತಿಳಿದಕೂಡಲೆ ಆ ಪಟ್ಟಣದ ಕಾಂಗ್ರೆಸ್ ಸಭಿಕರು ಮೆರವಣಿಗೆಗಳನ್ನು ನಡೆಸುವುದಕ್ಕೂ ಕರಿ ಬಾವುಟಗಳನ್ನು ಹಾರಿಸುವುದಕ್ಕೂ ತಕ್ಕ ಸನ್ನಾಹದಲ್ಲಿ ತೊಡಗಿದರು. ಜವಾಹರಲಾಲರೂ ಅಲ್ಲಿಗೆ ಹೊರಟರು. ನಿತ್ಯಸನ್ನಾಹ ನಡೆಯಿತು. ಜನರು ಗುಂಪು ಸೇರುವುದರಲ್ಲಿಯೂ ಮೆರವಣಿಗೆ ಹೊರಡುವುದರಲ್ಲಿಯೂ ಕೂಗುವುದರಲ್ಲಿಯೂ ಸುಶಿಕ್ಷಿತರಾದರು. ಅಧಿಕಾರಿಗಳಿಗೆ ಸಹಿಸದಾಯಿತು; ಅಡ್ಡಿಪಡಿಸುವ ಉಪಾಯಗಳೇನೆಂದು ಹುಡುಕುತ್ತ ಮನಸ್ಸಿಗೆ ಬಂದಂತೆ ಆಜ್ಞೆಗಳನ್ನು ಸಾರಲಾರಂಭಿಸಿದರು. "ಪಟ್ಟಣದ ಬೀದಿಗಳಲ್ಲಿ ಗುಂಪುಗಳು ಮೆರವಣಿಗೆ ಹೊರಡಕೂಡದು" ಎಂಬ ಅಪ್ಪಣೆ ಮಾಡಿದರು. ಸಾಮಾನ್ಯವಾಗಿ ಜನರೋಡಾಟಕ್ಕೆ ತೊಂದರೆಯಾಗುವುದೆಂದು ಆ ಅಪ್ಪಣೆಗೆ ನೆಪ.

"ಹದಿನಾರು ಹದಿನಾರು ಮಂದಿ ಮಾತ್ರ ಬೇರೆಬೇರೆಯಾಗಿ ಸೇರಿ ಸಭಾಸ್ಥಾನಕ್ಕೆ ಹೊರಟೆವು. ಬಾವುಟ ಹಿಡಿದು ಹದಿನಾರು ಜನ ಹೊರಡುವುದನ್ನು ಮೆರವಣಿಗೆಯೆಂದರೂ ಎನ್ನಬಹುದಾಗಿತ್ತು. ಆದರೆ ಜನಸಂದಣಿಯಿಲ್ಲದ ಬೀದಿಗಳಲ್ಲಿಯೇ ನಡೆದುಕೊಂಡು ಹೊರಟೆವು. ನಾನು ಹದಿನಾರು ಮಂದಿಯನ್ನು ನಡೆಸಿಕೊಂಡು ಹೊರಟೆ. ನನ್ನ ಹಿಂದೆ ದೂರದಲ್ಲಿ ಬೇರೆ ಹದಿನಾರು ಮಂದಿಯನ್ನು ಕರೆದುಕೊಂಡು ಗೋವಿಂದವಲ್ಲಭ ಪಂತರು ಬರುತ್ತಿದ್ದರು. ರಸ್ತೆಯಲ್ಲಿ ಬೇರೆ ಜನರಾರೂ ಇರಲಿಲ್ಲ. ನಾನು ನನ್ನ ಗುಂಪಿನೊಡನೆ ಒಂದು ಫರ್ಲಾಂಗ್ ದೂರವನ್ನು ಕಳೆಯುವಷ್ಟರಲ್ಲಿ ಹಿಂದೆ ಕುದುರೆಗಳ ಖುರಪುಟ ಧ್ವನಿ ಕೇಳಿಸಿತು. ಸುಮಾರು ಮೂವತ್ತು ಮಂದಿ ಪೋಲೀಸ್ ಸವಾರರು ವೇಗವೇಗವಾಗಿ ನಮ್ಮ ಮೇಲೆ ದೌಡಾಯಿಸಿಕೊಂಡು ಬರುತ್ತಿದ್ದರು. ನೇರವಾಗಿ ನಮ್ಮ ಮೇಲೆ ಬಂದೇ ಬಂದರು. ಕುದುರೆಗಳು ನುಗ್ಗಿದ ರಭಸದಲ್ಲಿ ನಮ್ಮ ಗುಂಪು ಚದರಿತು. ಕೂಡಲೆ ಉದ್ದವಾದ ಸೋಟಾಗಳನ್ನೆತ್ತಿ ಸವಾರರು ಈ ದೇಶಸೇವಕರನ್ನು ಅಟ್ಟಿಸಿಕೊಂಡು ಹೊಡೆಯಲು ತೊಡಗಿದರು. ತಪ್ಪಿಸಿಕೊಳ್ಳಲು ಪ್ರಯತ್ನಿಸಿದವರು ಬೀದಿಯ ಪಕ್ಕದಲ್ಲಿದ್ದ ಅಂಗಡಿಗಳಿಗೂ ಕಾಲ್ದಾರಿಗಳಿಗೂ ಹೊರಟರೆ ಅಲ್ಲಿಗೂ ಸವಾರರು ನುಗ್ಗಿ ಹೊಡೆದರು. ಕುದುರೆಗಳು ನೆಗೆಯುತ್ತ ನಮ್ಮ ಮೇಲೆ ಬೀಳುವಂತಿದ್ದ ಕ್ಷಣದಲ್ಲಿ ಪಕ್ಕಕ್ಕೆ ಸುಳಿದು ತಪ್ಪಿಸಿಕೊಳ್ಳುವ ಯೋಚನೆ ನನಗೂ ಹುಟ್ಟಿತು; ಉತ್ತರಕ್ಷಣದಲ್ಲಿಯೆ ಆ ಯೋಚನೆ ಮಾಯವಾಯಿತು.

ಮೊದಲ ನುಗ್ಗಾಟದಲ್ಲಿ ನನ್ನ ಹಿಂದಿದ್ದವರು ಎದುರಿಗೇ ಸಿಕ್ಕಿದರು. ನಾನೊಬ್ಬನೇ ಬೀದಿಯ ಮಧ್ಯದಲ್ಲಿ ನಿಂತವನಾದೆ; ನನ್ನ ಸುತ್ತಲೂ ಸವಾರರು ನನ್ನ ಗೆಳೆಯರನ್ನು ಬಡಿಯುತ್ತಿದ್ದರು. ಆ ಕ್ಷಣದಲ್ಲಿ ನಾನು ಪಕ್ಕಕ್ಕೆ ಸರಿದುಕೊಳ್ಳುವುದು ಹೇಡಿತನವೆಂದಂದುಕೊಂಡೆ; ನನ್ನನ್ನು ಗುರಿಮಾಡಿಕೊಂಡು ಹೊಸ ಸೋಟವನ್ನು ತೋರುತ್ತ ಸವಾರನೊಬ್ಬನು ಹತ್ತಿರಕ್ಕೆ ನುಗ್ಗಿದನು. 'ನಿನ್ನಿಷ್ಟದಂತೆ ಮಾಡು' ಎನ್ನುತ್ತ ನಾನು ಮುಖವನ್ನು ವಾರೆ ಮಾಡಿದೆ. ಆಗಲಾ ಸವಾರನು ತನ್ನ ದೊಣ್ಣೆ ಬೀಸಿ ಬಲವಾಗಿ ಎರಡು ಪೆಟ್ಟನ್ನು ನನ್ನ ಬೆನ್ನಿನಮೇಲೆ ಬಾರಿಸಿದನು. ನಾನು ಸ್ತಬ್ಧನಾದಂತೆ ತಿಳಿದೆ; ಶರೀರವೇನೋ ನಡುಗುತ್ತಿತ್ತು. ಆದರೂ ನಿಂತಿದ್ದ ಸ್ಥಳದಲ್ಲಿಯೆ ನಿಂತಿದ್ದುದನ್ನು ಕಂಡುಕೊಂಡೆ. ಬುರುಡೆಗಳ ಮೇಲೆಯೂ ಭುಜಗಳ ಮೇಲೆಯೂ ಏಟು ತಿಂದ ನನ್ನ ಜೊತೆಗಾರರು ರಕ್ತ ಸುರಿಸುತ್ತ ಹಾಗೂ ಹೀಗೂ ಪುನಃ ನನ್ನೊಡನೆ ಸೇರಿದರು. ಪೋಲೀಸ್ ಪಡೆಯವರು ನಮ್ಮ ಮುಂದೆ ರಸ್ತೆಗೆ ಅಡ್ಡವಾದ ಗೋಡೆಯಂತೆ ಸಾಲಾಗಿ ನಿಂತರು. ಆ ವೇಳೆಗೆ ಗೋವಿಂದವಲ್ಲಭ ಪಂತರ ಗುಂಪು ಬಂದು ಸೇರಿತು. ಅವರೂ ಏಟು ತಿಂದು ಗಾಯಗೊಂಡಿದ್ದರು. ಪೋಲೀಸ್‌ಪಡೆಯೆದುರಿನಲ್ಲಿ ನಾವೆಲ್ಲರೂ ಅಲ್ಲಿಯೆ ನೆಲದಮೇಲೆ ಕುಳಿತೆವು. ಒಂದು ಗಂಟೆ ಕಾಲ ಹಾಗೆಯೆ ಕಳೆದು ಕತ್ತಲಾಗುತ್ತ ಬಂತು. ಆ ವೇಳೆಗೆ ಇತರ ಅಧಿಕಾರಿಗಳೂ ಬಂದರು; ಸಮಾಚಾರ ಹರಡಿ ಜನರು ಗುಂಪುಗುಂಪುಗಳಾಗಿ ಬಂದರು. ಕೊನೆಗೆ ನಮ್ಮ ದಾರಿಯನ್ನು ನಮಗೆ ಬಿಟ್ಟುಕೊಡುವುದಾಗಿ ಪೋಲೀಸ್ ಅಧಿಕಾರಿಗಳು ಹೇಳಿ ತಾವು ಮುಂದೆ ಮುಂದೆ ಹೊರಟರು."

ಈ ಸಂಗತಿ ನಡೆದುದು ಸಂಜೆ. ಅಭ್ಯಾಸಕ್ಕಾಗಿ ನಡೆದುದು ಮಾತ್ರ. ಸೈಮನ್ ಸಭಿಕರು ಬರಬೇಕಾಗಿದ್ದುದು ಮಾರನೆ ದಿನ ಬೆಳಗ್ಗೆ. ಆದರೆ ಆ ರಾತ್ರಿಯೇ ಸಮಾಚಾರ ದೇಶದಲ್ಲೆಲ್ಲ ಹರಡಿತು. ಮೋತಿಲಾಲರಿಗೆ ತಿಳಿದಕೂಡಲೆ ಅವರೆಷ್ಟು ತಪಿಸಿಯಾರೋ ಏನೋ ಎಂದುಕೊಂಡು ಜವಾಹರಲಾಲರು ತಾವೇ ಟೆಲಿಫೋನ್ ಮೂಲಕ ನಡೆದುದನ್ನು ತಿಳಿಸಿ ಗಾಬರಿಗೊಳ್ಳಬಾರದೆಂದು ಧೈರ್ಯಕೊಟ್ಟರು. ಆದರೆ ಮೋತಿಲಾಲರಿಗೆ ಸುಮ್ಮನಿರಲಾಗಲಿಲ್ಲ. ನಿದ್ರೆಮಾಡಲಾಗದೆ ನಡುರಾತ್ರಿಯಲ್ಲಿಯೇ ಕಾರ್‌ಪ್ರಯಾಣ ಮಾಡಿ ಹೊರಟು ಬೆಳಗಾಗುವ ವೇಳೆಗೆ ನೂರೈವತ್ತು ಮೈಲಿ ಕಳೆದು ಲಖನೌ ನಗರವನ್ನು ಸೇರಿದರು.

ಆ ಹೊತ್ತು ಬೆಳಗಾಗುವುದರೊಳಗಾಗಿ ನಗರದ ನಾನಾ ಭಾಗಗಳಿಂದ ಜನರು ತಾವಾಗಿಯೆ ಹೊರಟರು ಸ್ಟೇಷನ್ ಕಡೆಗೆ. ರಾತ್ರಿ

ಯೆಲ್ಲೆಲ್ಲಿಯೂ ಜವಾಹರಲಾಲರಿಗೆ ಏಟು ಬಿದ್ದ ಸಂಗತಿ ಹಬ್ಬಿಕೊಂಡಿದ್ದುದರ ಪ್ರಭಾವ! ಕಾಂಗ್ರೆಸ್ ಕಚೇರಿಯಿಂದ ಜವಾಹರಲಾಲರೊಡನೆ ಮುಖ್ಯ ಗುಂಪು ಹೊರಟಿತು. ಏಳೆಂಟುಸಾವಿರ ಮಂದಿ ನಾಲ್ವರು ನಾಲ್ವರಾಗಿ ಕ್ರಮದಿಂದ ಹೊರಟರು. ಸ್ಟೇಷನ್ ಮುಂದೆ ದೊಡ್ಡ ಮೈದಾನವಿತ್ತು. ಮೆರವಣಿಗೆ ಬಂದವರು ಆ ಮೈದಾನವನ್ನು ಸೇರಿದ ಕೂಡಲೆ ಒಂದು ಪಕ್ಕಕ್ಕೆ ಸಾಲಾಗಿ ನಿಂತರು. ಬೇರೆಯಾಗಿ ಸಾವಿರಗಟ್ಟಲೆ ಬಂದಿದ್ದ ಜನರು ಆ ಮೈದಾನದಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ನಿಂತರು.

ಆ ವೇಳೆಗೆ ದೂರದಲ್ಲಿ ಯಾವುದೋ ವ್ಯೂಹ ಬರುತ್ತಿದ್ದುದು ತಿಳಿಯಿತು. ಕುದುರೆ ಸವಾರರ ಪಡೆ ದೌಡಾಯಿಸಿಕೊಂಡು ಬಂತು; ನೋಡಲು ಸೊಗಸಾದ ದೃಶ್ಯ; ಅನಾಹುತಗಳು ಮಾತ್ರ ನಡೆಯದಿದ್ದರೆ! ನುಗ್ಗಿಕೊಂಡು ಬಂದವರು ಮೈದಾನದಲ್ಲಿ ಸಿಕ್ಕಿದವರನ್ನು ಕುದುರೆಗಳಿಂದ ತುಳಿಸುತ್ತ ಎಲ್ಲ ದಿಕ್ಕುಗಳಿಗೂ ನುಗ್ಗಿದರು. ಕುದುರೆ ಕಾಲ ಕೆಳಗೆ ಸಿಕ್ಕಿದವರೆಷ್ಟೋ ಮಂದಿ, ತಲೆಮೇಲೂ ಬೆನ್ನಮೇಲೂ ಪೆಟ್ಟು ತಿಂದವರೆಷ್ಟೋ ಮಂದಿ. ಸವಾರರ ಹಿಂದೆ ಜನರು ನೆಲದ ಮೇಲೆಯೇ ಒದ್ದಾಡುತ್ತ ನೋವಿನಿಂದ ನರಳುತ್ತ ಇದ್ದರು. ಮೈದಾನವೆಲ್ಲ ರಣಭೂಮಿಯಂತಾಗಿ ಹೋಯಿತು. ಪರಕ್ಷಣದಲ್ಲಿಯೇ ಸವಾರರು ಪಕ್ಕದಲ್ಲಿ ನಿಂತಿದ್ದ ಕಾಂಗ್ರೆಸ್ ಗುಂಪಿನ ಕಡೆ ತಿರುಗಿ ಕುದುರೆಗಳನ್ನೋಡಿಸಿದರು. ಧುಮುಕುತ್ತ ಬಂದ ಕುದುರೆಗಳೆದುರಿನಲ್ಲಿ ಆ ಗುಂಪಿನವರು ಸ್ಥಳಬಿಡದೆ ಧೈರ್ಯಮಾಡಿ ನಿಂತೇ ಇರಲು ಕುದುರೆಗಳು ಎತ್ತಿದ ಮುಂಗಾಲುಗಳನ್ನು ನೆಲದಮೇಲಿಡಲಾರದೆ ಅರೆಕ್ಷಣ ನಿಂತಿದ್ದವರ ತಲೆಗಳ ಮೇಲುಗಡೆ ಆಕಾಶದಲ್ಲಿ ಆಡಿಸಿದವು. ಕೂಡಲೆ ಹೊಡೆಯಲಾರಂಭವಾಯಿತು. ಲಾಠಿಗಳನ್ನೂ ಸೋಟಾಗಳನ್ನೂ ಹಿಡಿದಿದ್ದ ಪದಾತಿ ಪೋಲೀಸರೂ ಸವಾರ ಪೋಲೀಸರೂ ಸುರಿಮಳೆ ಸುರಿಸಿದಂತೆ ಏಟುಗಳನ್ನು ಬೀರಿದರು. ಎಲ್ಲೆಂದರಲ್ಲಿ ಬಾರಿಸಿದರು. ಆ ಸಮಯದಲ್ಲಿ ಜವಾಹರಲಾಲರಿಗೂ ಪೂರಾ ಏಟು ಬಿತ್ತು.

"ನಿನ್ನೆ ಸಂಜೆ ಕಾಣುತ್ತಿದ್ದಂತೆ ಕಣ್ಣು ಕಾಣದಾಯಿತು; ದೃಷ್ಟಿ ಮಂಜುಮಂಜಾಯಿತು. ಇದ್ದೆಡೆಯಲ್ಲಿಯೆ ಇರಬೇಕೆಂಬ ಜ್ಞಾನಮಾತ್ರ ಮನಸ್ಸಿನಲ್ಲಿ

ಭದ್ರವಾಗಿತ್ತು. ಅರ್ಧ ಕುರುಡಾಗಿದ್ದುದರಿಂದ ಒಳಗೊಳಗೆ ಕ್ರೋಧವೂ ಸ್ವಲ್ಪವಾಗಿ ತೋರಿತು. ಪ್ರತಿಯಾಗಿ ಎರಡೇಟು ಹೊಡೆಯೋಣವೇ ಎಂಬ ಯೋಚನೆ ಹುಟ್ಟಿದಂತೆಯೆ ಅಡಗಿತು. ಎದುರಿಗೆ ಕುದುರೆ ಮೇಲಿದ್ದವನನ್ನು ಕೆಳಕ್ಕೆಳೆದುಹಾಕಿ ಆ ಕುದುರೆಯನ್ನೇ ಏರಿಕೊಳ್ಳುವುದು ಅತಿ ಸುಲಭಸಾಧ್ಯ ವಾಗಿತ್ತು. ಆದರೆ ದೀರ್ಘಕಾಲ ಶಿಕ್ಷಿತನಾಗಿದ್ದೆನಾದುದರಿಂದ ಒಂದು ಕೈಯ ನ್ನಾದರೂ ಎತ್ತಲಿಲ್ಲ. ಒಂದುವೇಳೆ ನಾವೇನಾದರೂ ಅಂತಹ ಚಿಹ್ನೆಯನ್ನು ತೋರಿದ್ದರೆ ಆ ಕ್ಷಣವೇ ಬಂದೂಕುಗಳಿಂದ ಗುಂಡುಗಳು ಹಾರಿ ಸಾವಿರಾರು ಜನರು ಹತರಾಗುತ್ತಿದ್ದ ಸಂಭವ ನನಗೆ ಸ್ಪಷ್ಟವಾಗಿತ್ತು."

ಹೀಗೆಯೇ ಕಾಲಕಳೆದು ಕಾಂಗ್ರೆಸ್ ಗುಂಪಿನವರು ತಮ್ಮ ಸಾಲ ನ್ನೊಡೆಯಲು ಬಿಡದೆ ಒಂದೊಂದು ಹೆಜ್ಜೆಯಾಗಿ ಸ್ವಲ್ಪ ಹಿಮ್ಮೆಟ್ಟಿದರು. ಜವಾಹರಲಾಲರೊಬ್ಬರೇ ಆದರು. ಎಲ್ಲ ಕಡೆಗಳಿಂದಲೂ ಏಟುಗಳು ಬೀಳಲಾರಂಭವಾಯಿತು. ಆಗ ಕೆಲವರು ಗೆಳೆಯರು "ಇವರನ್ನು ಹೀಗೆಯೆ ಸಾಯಿಸಿಬಿಡುವರು" ಎಂದುಕೊಂಡು ಮುಂದೆನುಗ್ಗಿ ಜವಾಹರ ಲಾಲರಿಗೆ ತಿಳಿಯದಂತೆ ಅವರನ್ನೆತ್ತಿಕೊಂಡು ಹೊರಟರು. ಯಾರೋ ಬಲವಂತದಿಂದ ತಮ್ಮನ್ನು ಎತ್ತಿಕೊಂಡು ಹೊರಟ ಅನಿಷ್ಟ ಸಂಗತಿ ಯೊಂದೇ ಆ ಕ್ಷಣದಲ್ಲಿ ಜವಾಹರಲಾಲರಿಗೆ ಅರಿಕೆಯಾದುದು.

ಮೊದಲು ನಿಂತಿದ್ದ ಸ್ಥಳಕ್ಕೆ ನೂರಡಿ ಹಿಂದೆ ಕಾಂಗ್ರೆಸ್ಸಿನವರು ಸಾಲುಕಟ್ಟಿ ಪುನಃ ನಿಂತರು. ಪೋಲೀಸ್ ಪಡೆಯವರೂ ಐವತ್ತಡಿ ದೂರದಲ್ಲಿ ಸಾಲಾಗಿ ನಿಂತರು. ಎದುರುಬದುರಾಗಿ ಹೀಗಿರುವಾಗ್ಗೆ ಅತ್ತ ಅರ್ಧಮೈಲಿ ದೂರದಲ್ಲಿ ಸೈಮನ್ ಸಭಿಕರು ಗೋಪ್ಯವಾಗಿಯೂ ನೆಮ್ಮದಿಯಾಗಿಯೂ ಸ್ಟೇಷನ್ನಿನಿಂದ ಹೊರಟಿದ್ದರು. ಆದರೂ ಕರಿ ಬಾವುಟಗಳ ಪ್ರದರ್ಶನವನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ಆ ಬಳಿಕ ಎಲ್ಲರೂ ಮೆರವಣಿಗೆ ಮಾಡಿಕೊಂಡು ಹಿಂತಿರುಗಿ ಕಾಂಗ್ರೆಸ್ ಕಚೇರಿ ಯನ್ನು ತಲಪಿದರು. ಕಾತರರಾಗಿದ್ದ ತಂದೆಯ ಬಳಿಗೆ ಜವಾಹರಲಾಲರು ಹೊರಟರು.

ಈ ಸಂಗತಿಯನ್ನು ವರ್ಣಿಸುತ್ತ ಕೊನೆಯಲ್ಲಿ ಜವಾಹರಲಾಲರು ಹೇಳುವ ವಾಕ್ಯಗಳು ಅತಿ ಸ್ವಾರಸ್ಯವಾಗಿವೆ.

"ದೇಹವೆಲ್ಲ ನೋಯುತ್ತಿತ್ತು; ಎಲ್ಲೆಲ್ಲಿಯೂ ಗಾಯಗಳು ಬಾವುಗಳು. ಆದರೆ ಅಪಾಯಕಾರಕವಾಗಿರಲಿಲ್ಲ. ನನ್ನ ಜೊತೆಗಾರರಿಗಷ್ಟು ಅದೃಷ್ಟವಿಲ್ಲದೆ ಹೋಯಿತು. ನನ್ನ ಪಕ್ಕದಲ್ಲಿಯೆ ನಿಂತಿದ್ದ ಗೋವಿಂದ ವಲ್ಲಭಪಂತ್ ನನಗಿಂತ ಎತ್ತರವಾದ ಆಳು; ಪೋಲೀಸರ ಏಟುಗಳಿಗೆ ವಿಶಾಲವೂ ಸುಲಭವೂ ಆದ ಗುರಿ. ಆತನಿಗೆ ಬಿದ್ದ ಏಟುಗಳಿಂದ ವ್ಯಾಧಿಯುಂಟಾಗಿ ಬಹುಕಾಲ ಆತನಿಗೆ ಬೆನ್ನೆತ್ತುವುದಕ್ಕೂ ಚಟುವಟಿಕೆಯಿಂದಿರುವುದಕ್ಕೂ ಆಗದೆಹೋಯಿತು. ದೃಢಕಾಯನೆಂದೂ ಸಹಿಸಿಕೊಳ್ಳಬಲ್ಲವನೆಂದೂ ನನ್ನಲ್ಲಿದ್ದ ಹೆಮ್ಮೆ ಏರಿತು. ಆದರೆ ನನ್ನ ಸ್ಮರಣೆಯಲ್ಲಿ ಸ್ಥಿರವಾಗಿ ಉಳಿದುಕೊಂಡುದು ಆ ಪೋಲೀಸ್ ಅಧಿಕಾರಿಗಳ ಕ್ರುದ್ಧ ಮುಖಗಳ ಅಸಹ್ಯ ಚಿತ್ರ. ಹೊಡೆದಾಟದಲ್ಲಿ ಮುಂದಾಳುಗಳಾಗಿದ್ದು ದಯಾದಾಕ್ಷಿಣ್ಯಗಳಿಲ್ಲದೆ ವರ್ತಿಸಿದ್ದವರು ಬಹುತರವಾಗಿ ಐರೋಪ್ಯ ಜಾತಿಯ ಸಾರ್ಜೆಂಟರು. ಅವರ ಮುಖಗಳಲ್ಲೆಷ್ಟು ದ್ವೇಷ, ಎಷ್ಟು ರಕ್ತಪಿಪಾಸೆ, ಎಷ್ಟು ಉನ್ಮಾದ! ಆ ವೇಳೆಯಲ್ಲಿ ನಮ್ಮ ಮುಖಗಳೂ ಸೌಂದರ್ಯವನ್ನು ಬೀರುವಂತಿರಲಿಲ್ಲ. ಎರಡು ಕಡೆಯೂ ಎಷ್ಟು ಅಸಹ್ಯ! ಇಷ್ಟಾಗಿ ಆ ವ್ಯಕ್ತಿಗಳಲ್ಲಿ ನಮಗೆ ವೈರವಿಲ್ಲ, ಅವರಿಗೆ ನಮ್ಮಲ್ಲಿ ವೈರವಿಲ್ಲ. ಪರಸ್ಪರ ವಿರುದ್ಧಗಳಾದ ಆಶೋತ್ತರಗಳನ್ನು ಹೊತ್ತಿದ್ದು ಅಂಧರಂತೆ ಒದ್ದಾಡಿದೆವು. ಆ ಉದ್ರೇಕದ ವೇಳೆಯಲ್ಲಿ ಮತ್ತೇನನ್ನೂ ಕಾಣದಾದೆವು."

ಮೂರನೆ ದಿನವೇ ಗಾಂಧೀಜಿಯವರಿಗೆ ಕಾಗದ ಬರೆಯುತ್ತ ಅದರಲ್ಲಿ ಮತ್ತೊಂದು ಸಂಗತಿಯನ್ನು ಜವಾಹರಲಾಲರು ತಿಳಿಸಿದರು. "ಸ್ಟೇಷನ್ ಬಳಿ ಪೋಲೀಸ್ ಪಡೆಯವರು ನಮ್ಮನ್ನು ತರುಬಿದ ಬಳಿಕ ನನ್ನ ಬಳಿಗೆ ವಿದ್ಯಾರ್ಥಿಯಂತೆ ಕಂಡ ತರುಣನೊಬ್ಬಾತನು ಬಂದು 'ಬೇಕಾಗಿದ್ದಲ್ಲಿ ತಕ್ಷಣವೇ ಎರಡು ರಿವಾಲ್ವರುಗಳನ್ನು ತಂದುಕೊಡಬಲ್ಲೆ' ಎಂದನು. 'ಅವಿವೇಕಿಯಾಗಬೇಡ'ವೆಂದು ನಾನು ಪ್ರತ್ಯುತ್ತರ ಕೊಟ್ಟೆ. ತರುವಾಯ ಆತನು ಸಿ.ಐ.ಡಿ. ಗುಂಪಿನವನೆಂಬುದು ನನಗೆ ತಿಳಿಯಿತು."

ಹೋದೆಡೆಯಲ್ಲೆಲ್ಲ ಸೈಮನ್ ಕಮಿಷನ್ನಿಗೆ ಇದೇ ರೀತಿಯ ಮರ್ಯಾದೆಯನ್ನು — ಅಂದರೆ ಬಹಿಷ್ಕಾರವನ್ನು — ಕಾಂಗ್ರೆಸ್ ಪಕ್ಷದವರು ನಡೆಸಿದಾಗ ಇತರ ಪಕ್ಷಗಳವರೂ ಸಹಕರಿಸಿದರು. ಈಜಿಪ್ಟ್ ಚರಿತ್ರೆಯಲ್ಲಿ ಮಿಲ್ನರ್ ಕಮಿಷನ್ನಿಗಾದ ಗತಿಯೇ ಇಲ್ಲಿಯೂ ನಡೆಯಿತು. ಆದರೆ ವ್ಯಕ್ತಿಶಃ ದ್ವೇಷವೆಂಬುದಿಲ್ಲ; ಹಿಂದಿನ ವರ್ಷವೇ

ಸರ್ ಜಾರ್ಜ್ ಸ್ಟೈಮನ್ ಮೋತಿಲಾಲರಿಬ್ಬರೂ ಜೋಡಿಯಾಗಿ ವಕಾಲತ್ ಹಿಡಿದಿರಲಿಲ್ಲವೇ !

ಆದರೆ ಲಾಲಾಜಿಯವರನ್ನು ಆಕ್ರೋಶದಿಂದ ಹೊಡೆದುದೇ ಮೊದಲಾದ ಅಚಾತುರ್ಯಗಳಿಂದ ಸತ್ಯಾಗ್ರಹಿಗಳಲ್ಲಿ ದುರಾಗ್ರಹ ಮೂಡದಿದ್ದರೂ ಆತುರಗಾರರಾದ ದೇಶಭಕ್ತರು ಕೆಲವರಲ್ಲಿ ದುರಾಕ್ರೋಶವೇರಿತ್ತು.

ಟ್ರೇಡ್ ಯೂನಿಯನ್ ಕಾಂಗ್ರೆಸ್ (ಅಥವಾ ಪಟ್ಟಣಗಳಲ್ಲಿನ ಕಾರ್ಮಿಕರ ಸಮುದಾಯ ಸಮ್ಮೇಳನ) ಇದಕ್ಕೆ ಮೊದಲೆ ಸ್ಥಾಪಿತವಾಗಿತ್ತು. ಆ ಸಮುದಾಯದ ಅಂಗ ಸಂಸ್ಥೆಗಳಲ್ಲಿ ಬಲಿಷ್ಠವೆನ್ನಬಹುದಾಗಿದ್ದುದು .ಎರಡೇ ; ಗಿರಣಿ ಕಾಮಗಾರ್ ಯೂನಿಯನ್ ಮತ್ತು ಜಿ. ಐ. ಪಿ. .ರೈಲ್ವೆಯೂನಿಯನ್. ಗಿರಣಿಗಳಲ್ಲಿಯೂ ರೈಲುಗಳಲ್ಲಿಯೂ ಚಾಕರರಾಗಿದ್ದವರು ಒಗ್ಗಟ್ಟಿನಿಂದ ಇರುತ್ತಿದ್ದರು ; ಮುಷ್ಕರಗಳನ್ನು ನಡೆಸಿ ನೆಮ್ಮದಿಯನ್ನು ಸಾಧಿಸಿಕೊಳ್ಳುವ ಉಪಾಯವು ಅಭ್ಯಾಸವಾಗಿತ್ತು. ಆದರೆ ಆ ಸಮುದಾಯದಲ್ಲಿಯೂ ಬೇರೆ ಬೇರೆ ಗುಂಪುಗಳಿದ್ದವು. ಹಳೆಯ ಗುಂಪಿನವರಿಗೆ ರಾಜಕೀಯಾಂಶಗಳ ಸಂಬಂಧವಷ್ಟಾಗಿಬೇಕಿರಲಿಲ್ಲ; ಶ್ರಮಜೀವಿಗಳ ನೆಮ್ಮದಿಯನ್ನು ಸಾಧಿಸುವುದು ಮಾತ್ರ ಗುರಿ. ಆ ಗುಂಪಿಗೆ ನಾಯಕರಾಗಿದ್ದ ಶ್ರೀ ಎನ್. ಎಂ. ಜೋಷಿ ಬಹುಕಾಲದಿಂದ ಶ್ರಮಿಸಿ ಜನರ ವಿಶ್ವಾಸವನ್ನು ಗಳಿಸಿದ್ದರು. ಇತರರಿಗೆ ಮಾರ್ಕ್ಸ್ ಹೇಳಿಕೊಟ್ಟ ಮಾರ್ಗವು ಆಕರ್ಷಕವಾಗಿತ್ತು. ಕಮ್ಯೂನಿಸ್ಟ್—ಸರ್ವಸಮತಾವಾದವನ್ನೊಪ್ಪಿದ್ದವರಿಗೆ ಇತರ ದೇಶಗಳಲ್ಲಿಯ ಕಾರ್ಮಿಕ ಗುಂಪುಗಳೊಡನೆ ಸೇರಿಕೊಳ್ಳುವುದಲ್ಲದೆ ರಾಜಕೀಯ ಸಾಮಾಜಿಕ ವ್ಯವಸ್ಥೆಯನ್ನೇ ಪಲ್ಲಟಗೊಳಿಸುವ ಉದ್ದೇಶ ಹಿಡಿದಿತ್ತು. ಸುಧಾರಕ ಗುಂಪೊಂದು, ಪಲ್ಲಟಕಾರಿ ಗುಂಪಿನ್ನೊಂದು. ಮುಖ್ಯ ವಿಭಾಗಗಳು ಹೀಗಿದ್ದರೂ ಒಳಗೊಳಗೆ ಇನ್ನೂ ತಿಸ್ರುಗಳಿದ್ದೇ ಇದ್ದವು. ಯೂರೋಪಿನಿಂದ ಹಿಂತಿರುಗಿ ಬಂದಿದ್ದ ಜವಾಹರರಿಗಾದರೆ ಸಮತಾವಾದವೊಪ್ಪಿತ್ತು; ಪಲ್ಲಟದ ಅವಶ್ಯ ತಿಳಿದಿತ್ತು; ಆದರೆ ಬಲ ಪ್ರಯೋಗದ ಮಾರ್ಗಗಳೊಪ್ಪಿರಲಿಲ್ಲ. ಮಾತಿನ ಶೌರ್ಯವಂತೂ ಸಹಿಸದು.

ಕೃಷಿಜೀವಿಗಳ ಪಾಡನ್ನು ಹಿಂದೆಯೇ ಕಂಡಿದ್ದು ಅನುಭವಶಾಲಿಗಳಾಗಿದ್ದುದರಿಂದ ರೈತರ ವಿಷಯದಲ್ಲಿಯೂ ನಿರ್ದಿಷ್ಟವಾದ ಗುರಿಯನ್ನು ಮನಸ್ಸಿನಲ್ಲಿ ಭಾವಿಸಿಕೊಂಡಿದ್ದರು. ಪಟ್ಟಣಿಗರಾದ ಶ್ರಮಜೀವಿಗಳ ಸಂಸ್ಥೆಗಳಲ್ಲಿಯೂ ಆದರವಿತ್ತು. 1929ರಲ್ಲಿ ಝರಿಯ (ಕಲ್ಲಿದ್ದಲ ಗಣಿಗಳಿಗೆ ಕೇಂದ್ರ) ಎಂಬಲ್ಲಿ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸೇರಿದಾಗ ಜವಾಹರಲಾಲರಿಗೆ ಅವಕಾಶ ತೋರಿತು. ಸಮ್ಮೇಳನ ನಡೆದ ಮೊದಲೆರಡು ದಿನ ಮಾತ್ರ ಅಲ್ಲಿಗೆ ಬಂದಿದ್ದರು. ಸಮ್ಮೇಳನದಲ್ಲಿ ಸುಧಾರಕರಿಗೂ ಪಲ್ಲಟಕಾರಿಗಳಿಗೂ ಕಿತ್ತಾಟ ತೋರಿತು. ಮುಂದಿನ ವರ್ಷಕ್ಕೆ ತಮ್ಮ ಅಧಿಕಾರಿಗಳನ್ನು ಚುನಾಯಿಸಿಕೊಳ್ಳುವ ಸಂದರ್ಭ ಬಂತು. ಆಗ ಸುಧಾರಕ ಪಕ್ಷದವರು ಅಧ್ಯಕ್ಷ ಸ್ಥಾನಕ್ಕೆ ಜವಾಹರಲಾಲರ ಹೆಸರನ್ನು ಸೂಚಿಸಿ ಗೆದ್ದರು. ಆಗ ಜವಾಹರಲಾಲರಲ್ಲಿರಲೇ ಇಲ್ಲ. ಆ ಸಮುದಾಯಕ್ಕೆ ತೀರಾ ಹೊಸಬರು. ಅವರ ಅನುಮತಿಯನ್ನು ಕೇಳಿಯೂ ಇರಲಿಲ್ಲ. ಆದರೆ ಪಲ್ಲಟಕಾರಿ ಪಕ್ಷದವರು ಮತ್ತಾರನ್ನೋ ಎತ್ತಿಟ್ಟು ಮುಂದಕ್ಕೆ ತೊಂದರೆಯನ್ನು ತಂದಿಡಬಹುದೆಂಬ ಶಂಕೆಯಿಂದ ಸುಧಾರಕ ಪಕ್ಷದವರು ಜವಾಹರಲಾಲರಿಗೆ ವಿರೋಧಿಗಳಿಲ್ಲವೆಂದೂಹಿಸಿ ಆತನೇ ಅಧ್ಯಕ್ಷನಾಗುವಂತೆ ನೆರವೇರಿಸಿಕೊಂಡರು. "ಹೊಸಬನೂ ಕಾರ್ಮಿಕನಲ್ಲದವನೂ ಆದ ನನ್ನನ್ನು ಈ ರೀತಿಯಲ್ಲಿ ಎತ್ತಿಟ್ಟುದು ಉಚಿತವಾಗಿ ತೋರಲಿಲ್ಲ. ಆ ವೇಳೆಯಲ್ಲಿ ನಾನಲ್ಲಿ ಇದ್ದಿದ್ದರೆ ಬೇಡವೆಂದು ಹೇಳುತ್ತಿದ್ದೆ. ಇದರಿಂದ ಸ್ಪಷ್ಟವಾದುದು ಕಾರ್ಮಿಕ ಸಮುದಾಯದ ದೌರ್ಬಲ್ಯ, ಶೈಶವಾವಸ್ಥೆ".

1928ರಲ್ಲಿಯೂ 1929ರಲ್ಲಿಯೂ ಎಷ್ಟೋ ಮುಷ್ಕರಗಳು ನಡೆಯುತ್ತಲೇ ಇದ್ದವು. ಮುಂಬಯಿ ಗಿರಣಿ ಕಾಮಗಾರರು ಅಗ್ರಗಾಮಿಗಳಾದರು. ಬಂಗಾಳದ ಸೆಣಬಿನ ಗಿರಣಿಗಳಲ್ಲಿಯೂ ಜಮ್ಷೆದ್ಪುರದ ಕಬ್ಬಿಣದ ಕಾರ್ಖಾನೆಯಲ್ಲಿಯೂ ಮುಷ್ಕರಗಳು ನಡೆದವು. ಜಮ್ಷೆದ್ಪುರದ ಬಳಿ ಗೋಲ್ಮುರಿಯಲ್ಲಿ ನಡೆದ ಮುಷ್ಕರವನ್ನು ಆದ್ಯಂತವಾಗಿ ವಿಚಾರಿಸಿ ವರದಿಯೊಪ್ಪಿಸುವ ಕರ್ತವ್ಯವನ್ನು ಕಾಂಗ್ರೆಸ್ಸಿನವರೇ ಜವಾಹರಲಾಲರಿಗೊಪ್ಪಿಸಿದ್ದರು. ಬಂಡವಾಲಗಾರರಿಗೂ ಕಾರ್ಮಿಕರಿಗೂ ಘರ್ಷಣೆ

ಗಳು ನಡೆಯುತ್ತಲೆ ಇದ್ದವು. ಕಾರ್ಮಿಕ ವರ್ಗದಲ್ಲಿ ಪಲ್ಲಟಭಕ್ತರು ಹೆಚ್ಚುತ್ತಿದ್ದರು. ಹೀಗಿರಲು 1929ನೆ ಮಾರ್ಚ್ ತಿಂಗಳಲ್ಲಿ ಸರ್ಕಾರ ದವರು ಕಾರ್ಮಿಕ ಗುಂಪಿನ ನಾಯಕರನ್ನು ಹಿಡಿದು ಮೀರತ್ ಪಿತೂರಿ ವಿಚಾರಣೆಯೆಂಬುದನ್ನು ಮೊದಲಿಟ್ಟರು. ಆ ವಿಚಾರಣೆ ನಾಲ್ಕುವರೆ ವರ್ಷಕಾಲ ಹಿಡಿಯಿತು. ಡಿಫೆನ್ಸ್ ನಡೆಸುವುದಕ್ಕಾಗಿ ಗೊತ್ತಾದ ಸಭೆಯಲ್ಲಿ ಜವಾಹರಲಾಲರೂ ಒಬ್ಬರು.

ಮೀರತ್ ವಿಚಾರಣೆಗೆ ಮೊದಲೇ 1928ನೆ ಡಿಸೆಂಬರ್ ತಿಂಗಳಲ್ಲಿ ಕಾಂಗ್ರೆಸ್ಸಿನ ವಾರ್ಷಿಕ ಸಮ್ಮೇಳನ ಕಲ್ಕತ್ತೆಯಲ್ಲಿ ನಡೆಯಿತು. ಆ ವೇಳೆಗೆ ಸೈಮನ್ ಕಮಿಷನ್ನಿನ ಬಹಿಷ್ಕಾರವೆಲ್ಲೆಲ್ಲಿಯೂ ಪ್ರಚಂಡವಾಗಿ ನಡೆದಿತ್ತು; ಸರ್ವಪಕ್ಷಗಳ ಪರವಾಗಿ ನೆಹರು ವರದಿಯೆಂಬುದೂ ಸಿದ್ಧ ವಾಗಿತ್ತು. ಆ ವರದಿಯನ್ನು ಸಾಧಿಸಿದ್ದ ಮೋತಿಲಾಲರೇ ಆ ಸಮ್ಮೇಳ ನದ ಅಧ್ಯಕ್ಷರು. ಮೂವತ್ತಾರು ಜೋಡಿ ಕುದುರೆ ಕಟ್ಟಿದ ಗಾಡಿ ಯಲ್ಲಿ ಅಧ್ಯಕ್ಷರನ್ನು ಮೆರವಣಿಗೆ ಮಾಡಿತು. ಮೋತಿಲಾಲರು ತಮ್ಮ ಹೆಸರಿನ ವರದಿಯನ್ನು ಹಿಡಿದು ಕಾಂಗ್ರೆಸ್ಸಿನಲ್ಲಿ ಅದರಂತೆ ಕರ್ತವ್ಯ ವನ್ನು ನಿರ್ಣಯಿಸಲು ಸಂಕಲ್ಪಮಾಡಿದ್ದರು. ಜವಾಹರಲಾಲರಿಗೆ ಆ ಸಂಕಲ್ಪ ಹಿತವೆಂದು ತೋರಲಿಲ್ಲ. ಸ್ವಾತಂತ್ರ್ಯವೇ ಗುರಿಯಾಗಿರ ತಕ್ಕುದೆಂಬ ವಿಶ್ವಾಸ ಅವರಿಗೆ. ತಂದೆ ಮಕ್ಕಳಿಬ್ಬರಿಗೆ ತೀವ್ರವಾದ ಅಭಿಪ್ರಾಯ ಘರ್ಷಣ. ಪರಸ್ಪರವಾಗಿ ವಾದಿಸುವುದನ್ನು ತಪ್ಪಿಸಿ ಕೊಂಡಿರುತ್ತಿದ್ದಾಗ್ಗೂ ಇಬ್ಬರಿಗೂ ಈ ವ್ಯತ್ಯಾಸದಿಂದ ಮನಸ್ಸಿಗೆ ನೋವೇ ಆಗಿತ್ತು. ತಮ್ಮ ಅಭಿಪ್ರಾಯದಂತೆ ನಿರ್ಣಯವಾಗದಿದ್ದ ಪಕ್ಷದಲ್ಲಿ ತಾವು ಅಧ್ಯಕ್ಷರಾಗಿರಲು ಸಾಧ್ಯವಿಲ್ಲವೆಂದರು ಮೋತಿಲಾಲರು. ಅವರನ್ನು ಕಳೆದುಕೊಳ್ಳುವ ಸಿದ್ಧತೆಯಾಗಲಿ ಅವರು ಸೂಚಿಸಿದ ಮಾರ್ಗಕ್ಕೆ ಒಪ್ಪಿಗೆಯಾಗಲಿ ಇಲ್ಲದಿದ್ದ ಸಂದರ್ಭ; ಕಾಂಗ್ರೆಸ್ ಸದಸ್ಯ ರಲ್ಲಿ ಎಷ್ಟೋ ತಿಸ್ರುಗಳಾಗಿ ಕಡೆಗೊಂದು ಸಮಾಧಾನ ಹುಟ್ಟಿಕೊಂಡಿತು. ನೆಹರು ವರದಿಯನ್ನನುಸರಿಸಿ ಬ್ರಿಟಿಷ್ ಸರ್ಕಾರದವರು ತಕ್ಕ ಕಾರ್ಯ ಕ್ರಮವನ್ನು ಒಂದು ವರ್ಷದೊಳಗಾಗಿ ನಡೆಸದಿದ್ದರೆ ಕಾಂಗ್ರೆಸ್ ಪೂರ್ವ ದಂತೆ ಸ್ವಾತಂತ್ರ್ಯವೇ ಗುರಿಯೆಂಬುದಾಗಿ ಘೋಷಿಸಬೇಕೆಂಬ ನಿರ್ಣಯ

ರೂಪಗೊಂಡಿತು. ಜವಾಹರಲಾಲರಿಗಿದೆಲ್ಲವೂ ದುರ್ಬಲವೆನ್ನಿಸಿತು. ಆ ನಿರ್ಣಯ ಚರ್ಚೆಯಾದಾಗ ಅದನ್ನು ವಿರೋಧಿಸಿದರು. ಆದಾಗ್ಯೂ ಪುನಃ ಜನರಲ್ ಸೆಕ್ರೆಟರಿ ಪದವಿ ಬಂತು. ಅಧ್ಯಕ್ಷ ಪದವಿಯಲ್ಲಿ ಯಾರಿದ್ದರೂ ಸರಿಯೆ, ಕಾರ್ಯದರ್ಶಿಯ ಸ್ಥಾನ ಜವಾಹರಲಾಲರಿಗೆ ಶಾಶ್ವತವಾಗಿ ಕಟ್ಟಿದ ಪಟ್ಟದಂತೆ ಆಯಿತು.

ಸ್ವಾತಂತ್ರ್ಯವೇ ಸರಿಯಾದ ಲಕ್ಷ್ಯವೆಂದು ನಿರ್ಣಯಿಸಿಕೊಂಡಿದ್ದ ಜವಾಹರಲಾಲರಿಗೆ 1928-29ನೆ ವರ್ಷಗಳಲ್ಲಿ ನಡೆದ ರಾಜಕೀಯ ಚಳುವಳಿಗಳು ಸಮಾಧಾನವನ್ನುಂಟುಮಾಡದಿದ್ದುದು ಸಹಜ. ಯೂರೋಪಿನಿಂದ ಹಿಂತಿರುಗಿದಾರಭ್ಯ ಆ ಗುರಿಯನ್ನೇ ಮನಸ್ಸಿನಲ್ಲಿ ಪೋಷಿಸುತ್ತಲಿದ್ದು ಇಂಡಿಪೆಂಡೆನ್ಸ್ ಲೀಗ್ ಎಂಬುದರ ಸ್ಥಾಪನೆಯಲ್ಲಿ ಅಗ್ರಗಾಮಿಗಳಾಗಿದ್ದರು. ಆದರೆ ಕಾಂಗ್ರೆಸ್ಸಿನಲ್ಲಿದ್ದವರೇ ಅದರಲ್ಲಿಯೂ ಇರಬೇಕಾದ ಸ್ಥಿತಿ. ಯುಕ್ತಪ್ರಾಂತದಲ್ಲಿ ಮಾತ್ರ ಆ ಲೀಗಿನ ಶಾಖೆ ಕೆಲವು ವರ್ಷಗಳು ಮಾತ್ರ ನಡೆಯುತ್ತಿತ್ತು. ಜವಾಹರಲಾಲರಿಗೆ ಆ ಲೀಗ್ ಸ್ಥಾಪನೆ ಮಾತ್ರದಿಂದ ತಮ್ಮ ಕೆಲಸ ಮುಗಿಯಿತೆನ್ನಿಸಲಿಲ್ಲ. 1928ನೆ ವರ್ಷದಲ್ಲಿ ಆದಷ್ಟು ಪ್ರಯಾಣಮಾಡಿ ಪಂಜಾಬ್, ದಿಲ್ಲಿ, ಯುಕ್ತಪ್ರಾಂತ ಮತ್ತು ಮಲೆಯಾಳಗಳ ಪ್ರಾಂತ ಸಮ್ಮೇಳನಗಳಲ್ಲಿ ಅಧ್ಯಕ್ಷರಾಗಿದ್ದರು. ಮುಂಬಯಿ ಬಂಗಾಳಗಳಲ್ಲಿ ಯುವಕ ಸಂಘಗಳನ್ನೂ ವಿದ್ಯಾರ್ಥಿ ಸಮ್ಮೇಳನಗಳನ್ನೂ ಕಂಡು ಭಾಷಣಗಳನ್ನು ಕೊಟ್ಟು ತಾವು ಮನಸ್ಸಿನಲ್ಲಿಟ್ಟುಕೊಂಡಿದ್ದ ಧ್ಯೇಯಗಳನ್ನು ಪ್ರಚಾರಪಡಿಸಿದ್ದರು.

ಕಲ್ಕತ್ತ ಕಾಂಗ್ರೆಸ್ ನಡೆಯುವವೇಳೆಗೆ ಮೋತಿಲಾಲರ ಮನಸ್ಸಿನ ಯೋಚನೆಗಳಲ್ಲಿ ಬದಲಾಗಿತ್ತು. ಮೊದಲಿನಿಂದಲೂ ಆತನಿಗೆ ಪಲ್ಲಟಕಾರಿತನ ರುಚಿಸಲಿಲ್ಲ; ನ್ಯಾಯಶಾಸ್ತ್ರವನ್ನೂ ವಿಧಿಕೋಶಗಳನ್ನೂ ಸ್ವಾಧೀನಮಾಡಿಕೊಂಡು ವಕಾಲತ್ ನಡೆಸಿ ವಾದಸಮರ್ಥರಾಗಿದ್ದವರಿಗೆ ಆ ರೀತಿಯೊಪ್ಪದಿದ್ದುದು ಸಹಜ. ಆದ್ದರಿಂದ ಸ್ವರಾಜ್ ಪಕ್ಷವನ್ನು ಕಟ್ಟಿ ಶಾಸನ ಸಭೆಯಲ್ಲಿ ಅಧಿಕಾರಿ ವರ್ಗದವರನ್ನು ವಿರೋಧಿಸುತ್ತ ಖಂಡಿಸುತ್ತಲಿದ್ದರು. 1928ರ ವೇಳೆಗೆ ಆ ಮಾರ್ಗವನ್ನು ಹಿಡಿದು ಪ್ರಯಾಸಪಡುವುದು ವ್ಯರ್ಥವೆಂಬುದು ಆತನಿಗೆ ಸ್ಪಷ್ಟವಾಗಿತ್ತು. 1929ನೆ

ವರ್ಷದ ಆದಿಯಲ್ಲಿ ದಿಲ್ಲಿಯ ಶಾಸನ ಸಭಾಧ್ಯಕ್ಷ ವಿಠಲಭಾಯಿ ಪಟೇಲರಿಗೂ ವೈಸರಾಯ್ ಲಾರ್ಡ್ ಇರ್ವಿನ್ನರವರಿಗೂ ಘರ್ಷಣೆ ನಡೆಯಿತು. ಸಭಾಧ್ಯಕ್ಷನನ್ನು ಗೌರವಿಸಿದಂತೆ ನಟಿಸಿ ವೈಸರಾಯಿ ತನ್ನ ಉದ್ದೇಶವನ್ನು ಸಾಧಿಸಿಯೇ ಸಾಧಿಸಿದನು. ಆಗ ವಿಧಿಬದ್ಧವಾದ ರಾಷ್ಟ್ರರೂಪವೆಂಬುದು ಇಲ್ಲವೇ ಇಲ್ಲವೆನ್ನಿಸಿತು. ಈ ಪ್ರಸಂಗವೆತ್ತಿದಕೂಡಲೆ ಮನಸ್ಸಿಗೆ ಹಿಂಸೆಯಾಗುವಷ್ಟು ರೇಜಿಗೆಯೇರಿತ್ತು.

ಗಾಂಧೀಜಿಯುವರಿಗೋ? ಸ್ವರಾಜ್ ಪಕ್ಷ ಪ್ರಬಲಗೊಂಡಂದಿನಿಂದ ಕಾಂಗ್ರೆಸ್ಸಿನ ರಾಜಕೀಯ ಕಲಾಪಗಳಲ್ಲಿ ಹೆಚ್ಚಾಗಿ ಸೇರದೆ ಇದ್ದು ತಮ್ಮ ಸರ್ವಚೈತನ್ಯವನ್ನು ಖಾದಿ ಪ್ರಚಾರಕ್ಕೂ ಚರಖಾ ಸಂಘಕ್ಕೂ ವಿನಿಯೋಗಿಸುತ್ತಿದ್ದರು. ಪ್ರಾಂತಗಳನ್ನೊಂದೊಂದನ್ನಾಗಿ ಆರಿಸಿಕೊಂಡು ಪ್ರತಿ ಜಿಲ್ಲೆಯಲ್ಲಿಯೂ ಸಂಚಾರಕ್ರಮವನ್ನೇರ್ಪಡಿಸಿಕೊಂಡು ಹಿಂದೆಂದೂ ಯಾರೂ ನೆರವೇರಿಸದ ದೇಶಯಾತ್ರೆಯನ್ನು ಮಾಡುತ್ತಿದ್ದರು. ಭಾರತಭೂಮಿಯಲ್ಲಿ ಆತನು ಪ್ರಯಾಣ ನಡೆಸಿರುವಷ್ಟನ್ನು ಯಾವ ಮನುಷ್ಯನೂ ನಡೆಸಲಿಲ್ಲ. 1929ರಲ್ಲಿ ಯುಕ್ತಪ್ರಾಂತಗಳಲ್ಲಿ ಆತನ ಸಂಚಾರ ನಡೆಯಿತು.

> "ಆಗಿಂದಾಗ್ಗೆ ನಾನು ಅವರ ಜೊತೆಯಲ್ಲಿ ಸೇರಿಕೊಳ್ಳುತ್ತಿದ್ದೆ. ಆತನನ್ನು ಕಾಣಲು ಸೇರುತ್ತಿದ್ದ ಜನಬಾಹುಳ್ಯವನ್ನು ಕಂಡು ಹಿಂದಿನ ಅನುಭವವಿದ್ದವನಾದರೂ ನನಗೆ ಆಶ್ಚರ್ಯವಾಯಿತು. ನಮ್ಮ ಪ್ರಾಂತದ ಮೂಡಲಲ್ಲಿ ಗೋರಖಪುರ ಮುಂತಾದ ಜಿಲ್ಲೆಗಳಲ್ಲಂತೂ ಜನಸ್ತೋಮ ಮಿಡಿತೆಗಳದಂಡಿನಂತೆ ಕಾಣುತ್ತಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಮೋಟಾರಿನ ಪ್ರಯಾಣ ಮಾಡುತ್ತಿರುವಾಗ್ಗೆ ಹತ್ತು ಹನ್ನೆರಡು ಮೈಲು ದೂರಗಳಿಗೆಲ್ಲ ಹತ್ತುಸಾವಿರದಿಂದ ಇಪ್ಪತ್ತೈದುಸಾವಿರ ಸಂಖ್ಯೆಯ ಜನರು ಗುಂಪುಸೇರಿ ದಾರಿಯಲ್ಲಿ ನೆರೆದಿರುತ್ತಿದ್ದರು. ಗೊತ್ತಾದ ಸಭೆಯೆಂದರೆ ಲಕ್ಷ ಜನಕ್ಕೆ ಕಡಿಮೆಯಿಲ್ಲ. ಬೃಹದ್ಧ್ವನಿಯಂತ್ರವೆಂಬುದಿಲ್ಲದಿದ್ದಾಗ ಯಾರುತಾನೇ ಅಷ್ಟು ಜನರಿಗೆ ಕೇಳುವಂತೆ ಮಾತನಾಡಬಲ್ಲವರು! ಪ್ರಾಯಶಃ ಬಹುಭಾಗದವರಿಗೆ ಮಾತನ್ನು ಕೇಳುವ ಆಸೆಯಿರಲೇ ಇಲ್ಲ. ಮಹಾತ್ಮಾಜಿಯನ್ನು ಕಾಣುವ ಆಸೆಯೆಷ್ಟೋ ಅಷ್ಟೇ ಅಮೋಘವೆನ್ನಿಸಿತ್ತು. ಗಾಂಧೀಜಿ ಕೂಡ ಗಂಟಲಿಗೆ ಆಯಾಸವಾಗದಂತೆ ಚಿಕ್ಕ ಚಿಕ್ಕ ಭಾಷಣಗಳನ್ನೇ ಮಾಡುತ್ತಿದ್ದರು. ಇಲ್ಲದಿದ್ದರೆ ಅಸಾಧ್ಯವಾಗಿತ್ತು.

ಅವರು ಹೋದೆಡೆಗಳಿಗೆಲ್ಲ ನಾನು ಹೋಗಲಿಲ್ಲ. ನನ್ನಿಂದ ವಿಶೇಷ ಪ್ರಯೋಜನವಿಲ್ಲದಿದ್ದಾಗ ಅವರ ಗುಂಪಿನಲ್ಲಿ ನಾನು ಸೇರಿಕೊಂಡಿರುವುದರ ಅರ್ಥ ಕಾಣಲಿಲ್ಲ. ಜನರ ಗುಂಪೆಂದರೆ ನನ್ನ ಆಕ್ಷೇಪವೇನೂ ಇಲ್ಲ. ಆದರೆ ಗಾಂಧೀಜಿಯ ಹಿಂದಿದ್ದು ನೂಕಿಸಿಕೊಳ್ಳುವುದಕ್ಕೂ ನಜ್ಜುಬಜ್ಜಿಯಾಗುವುದಕ್ಕೂ ತಕ್ಕಷ್ಟು ಪ್ರಯೋಜನ ಕಾಣಲಿಲ್ಲ. ಖಾದಿ ಪ್ರಚಾರಕ್ಕಿಂತ ಮುಖ್ಯವಾದ ಬೇರೆ ಕೆಲಸಗಳೆಷ್ಟೋ ಇವೆಯೆನ್ನಿಸಿದ್ದುದು ಬೇರೆ. ಇತರ ಕೆಲಸಗಳನ್ನು ಬಿಟ್ಟುಕೊಟ್ಟು ಖಾದಿಯೊಂದನ್ನೇ ಗಾಂಧೀಜಿ ಹಿಡಿದಿದ್ದುದು ಆಗ ನನ್ನ ಮನಸ್ಸಿಗೆ ಅಸಮಾಧಾನವನ್ನು ತಂದಿಟ್ಟಿತ್ತು. ಆತನ ಚಿತ್ತವೃತ್ತಿಯೂ ನನಗೆ ಪೂರ್ಣವಾಗಿ ತಿಳಿಯಲಿಲ್ಲ. ಭಾಷಣಗಳನ್ನು ಮಾಡುತ್ತ ದರಿದ್ರನಾರಾಯಣ ಸೇವೆಯೆಂದು ಆತನು ಕಾಣಿಕೆಗಳನ್ನೆತ್ತುತ್ತಿದ್ದಾಗ ನನ್ನಲ್ಲಿ ನಾನೇ 'ದರಿದ್ರರಿಗೆ ಸಹಾಯವು ಅವಶ್ಯ, ಸರಿಯೆ; ಆದರೆ ದಾರಿದ್ರ್ಯವನ್ನೇ ದೇವರ ಅವತಾರವೆಂದರೆ ದರಿದ್ರರಾಗಿರುವ ಆಸೆಯನ್ನು ಬೆಳೆಸುವಂತೆ ಜನರಿಗೆ ಬೋಧೆ ಮಾಡಿದಂತಾಯಿತಲ್ಲವೇ!' ಎಂದುಕೊಳ್ಳುತ್ತಿದ್ದೆ. 'ಲೋಕದಲ್ಲಿ ದಾರಿದ್ರ್ಯವೇತಕ್ಕೆ ಶಾಶ್ವತವಾಗಿರಬೇಕು? ದಾರಿದ್ರ್ಯಕ್ಕವಕಾಶವಿಲ್ಲದಂತೆ ಏತಕ್ಕಿರಬಾರದು?' ಎನ್ನುವ ವಾದವನ್ನು ಸಮಯ ಲಭಿಸಿದಾಗ ಅವರೊಂದಿಗೆ ಬೆಳೆಸುತ್ತಿದ್ದೆ. ಅದಕ್ಕವರು 'ಧನಿಕರಾದವರು ತಮ್ಮ ಆಸ್ತಿಪಾಸ್ತಿಗಳನ್ನು ತಮ್ಮಲ್ಲಿ ಭಗವಂತನು ನಿಕ್ಷಿಪ್ತವಾಗಿ ಕೊಟ್ಟುದೆಂದು ಭಾವಿಸಿ ಧರ್ಮಿಷ್ಠರಾದರೆ ಶಾಶ್ವತವಾದ ದಾರಿದ್ರ್ಯವೇಕಿರುವುದು?' ಎನ್ನುತ್ತಿದ್ದರು. ಎಲ್ಲ ಧನಿಕರೂ ನಿಸ್ಸ್ವಾರ್ಥತೆ ಬೆಳೆಸುವುದೆಂದರೆ ನನಗೆ ನಂದೋರಾಜಾಭವಿಷ್ಯತಿ ಯೆಂದಹಾಗಾಗುತ್ತಿತ್ತು."

ಗೋಪ್ಯವಾಗಿದ್ದುಕೊಂಡು ಕ್ರಾಂತಿ ನಡೆಸುವವರು ಆ ವರ್ಷ ಅಲ್ಲಲ್ಲಿ ಚಟುವಟಿಕೆ ನಡೆಸಿದರು. ಹಿಂದಿನ ವರ್ಷ ಲಾಲಾಜಿಯುವರನ್ನು ಹೊಡೆಸಿದ್ದುದಕ್ಕಾಗಿ ಜನರಲ್ಲಿ ಆಕ್ರೋಶವೇರಿತ್ತು. ಅದೇ ಆಕ್ರೋಶವೇ ಮೂಲವಾಗಿ ಕ್ರಾಂತಿಕಾರಯುವಕರು ಕೆಲವರು ದಿಲ್ಲಿಯ ಶಾಸನ ಸಭೆಯಲ್ಲಿ ಗಾಬರಿಪಡಿಸುವ ಉದ್ದೇಶದಿಂದ ಬಾಂಬೆಸೆದರು. ತರುವಾಯ ಲಾಹೋರಿನಲ್ಲಿ ಸಾಂಡರ್ಸ್ (Saunders) ಎಂಬ ಪೋಲೀಸಧಿಕಾರಿಯ ಹತ್ಯ ನಡೆದುಹೋಯಿತು. ಪಿತೂರಿ ಪತ್ತೆಯಾಗಿ ಭಗತ್ ಸಿಂಗ್ ಮತ್ತು ಜತೀಂದ್ರನಾಥಸೇನ್ ಮುಂತಾದವರು ಆಪಾದಿತರಾದರು. ಅವರು ನಡೆಸಿದ ಹತ್ಯವನ್ನು ಖಂಡಿಸಿದವರೆಷ್ಟೋ ಮಂದಿಯ ಮನಸ್ಸಿನಲ್ಲಿ ಆ ಯುವಕರು ಉದ್ರೇಕವಶರಾಗಿ ಅಕೃತ್ಯ ಮಾಡಿದ್ದುದ

ರಿಂದ ಕ್ಷಮಾರ್ಹರೆಂಬ ಭಾವನೆಯಿತ್ತು. ಲಾಲಾಜಿಯನ್ನು ನಡು ಬೀದಿಯಲ್ಲಿ ಹೊಡೆದಂದಿನಿಂದ ಜನರ ಆಕ್ರೋಶವು ಅಡಗಿದಂತಿದ್ದರೂ ಬಲವಾಗಿತ್ತು; ಆ ಕಾರಣದಿಂದ ಆ ಯುವಕರಲ್ಲಿ ಜನರಿಗೆ ಪಕ್ಷಪಾತ ವಿತ್ತು. ಸರ್ಕಾರದವರು ಮೊಕದ್ದಮೆ ನಡೆಸಿದರು; ವಿಚಾರಣೆ ನಡೆ ಯುತ್ತಿದ್ದ ಸಮಯದಲ್ಲಿಯೇ ಆಪಾದಿತರಾದವರನೇಕರು ಕೆಲವು ಕಾರಣಗಳಿಗಾಗಿ ಉಪವಾಸವನ್ನಾರಂಭಿಸಿದರು. ದಿನಗಳಾದವು, ವಾರಗಳು ಕಳೆದವು; ನಿತ್ಯವೂ ಅವರನ್ನು ಬಂದೀಖಾನೆಯಿಂದ ಕೋರ್ಟಿಗೆ ತಂದು ನಿಲ್ಲಿಸುವುದಕ್ಕೆ ಆಗಲಿಲ್ಲ. ಆಗ ಸರ್ಕಾರದವರು ಆಪಾದಿತರಿಲ್ಲದಿದ್ದರೂ ಕೋರ್ಟಿನ ಕ್ರಮ ಮುಂದುವರಿಯುವಂತೆ ಏರ್ಪಡಿಸಿಕೊಂಡರು.

ಉಪವಾಸಗಳಾರಂಭವಾಗಿ ಒಂದು ತಿಂಗಳು ಕಳೆದಿದ್ದ ಸಮಯ ದಲ್ಲಿ ಜವಾಹರಲಾಲರು ಲಾಹೋರಿನಲ್ಲಿದ್ದರು. ಬಂದೀಖಾನೆಯಲ್ಲಿ ಆಪಾದಿತರನ್ನು ಕಾಣಲು ಅನುಮತಿ ಪಡೆದು ಅಲ್ಲಿಗೆ ಹೊರಟರು. ಆಪಾದಿತರೆಲ್ಲರೂ ಅತಿದುರ್ಬಲರಾಗಿ ಹಾಸಿಗೆಮೇಲೆ ಮಲಗಿಯೇ ಇದ್ದರು. ಭಗತ್‌ಸಿಂಗನ ಮುಖದಲ್ಲಿ ಶಾಂತಿಯ ಕಳೆ ತುಂಬಿತ್ತು; ಲೇಶವಾದರೂ ಕ್ರೋಧ ಕಾಣಲಿಲ್ಲ. ಮಾತನ್ನು ಅತಿಮೃದುವಾಗಿ ಆಡಿದನು. ಪ್ರಾಯಶಃ ಉಪವಾಸದಿಂದ ದುರ್ಬಲಗೊಂಡಿದ್ದಾಗ್ಯೂ ಮುಖವು ಸೌಮ್ಯವಾಗಿ ಆಕರ್ಷಕವಾಗಿತ್ತು. ಜತೀಂದ್ರದಾಸನು ಇನ್ನೂ ಕೋಮಲ; ಅಬಲೆಯಂತೆ ಕಂಡನು. ಆದರೆ ಆತನು ನೋವಿನಿಂದ ನರಳುತ್ತಿದ್ದನು. ಉಪವಾಸ ಮೊದಲಿಟ್ಟು ಅರುವತ್ತು ದಿನಗಳನ್ನು ಕಳೆದು ಅರುವತ್ತೊಂದನೆ ದಿನ ಆತನು ಪ್ರಾಣಗಳನ್ನು ಬಿಟ್ಟನು. ಭಗತ್ ಸಿಂಗನಿಗೆ ಒಂದಂಶದಲ್ಲಿ ಅತಿ ಕುತೂಹಲವಾಗಿತ್ತು. ಹಿಂದೆ 1907ರಲ್ಲಿ ಲಾಲಾಜಿಯವರೊಂದಿಗೆ ಗಡೀಪಾರಾಜ್ಞೆಗೆ ಸಿಕ್ಕಿದ್ದ ಅಜಿತಸಿಂಗನು ಆತನ ಸಮೀಪ ಬಂಧು. ಅಜಿತಸಿಂಗ್ ಎಲ್ಲಿರುವನೋ ಹೇಗಿರುವನೋ ತಿಳಿಯುವ ಆಸೆ ಬಲವಾಗಿತ್ತು.

ಜತೀಂದ್ರದಾಸನ ಮರಣದಿಂದ ದೇಶದಲ್ಲೆಲ್ಲಿಯೂ ಜನರ ಮನ ಸ್ಸುಗಳು ಕರಗಿದವು. ಆತನ ದೇಹವನ್ನು ಕಲ್ಕತ್ತೆಗೊಯ್ದಾಗ

ಲಕ್ಷಾಂತರ ಜನರು ಅದರೊಂದಿಗೆ ಮೆರವಣಿಗೆ ಹೊರಟರು. ಆಪಾದಿತ ರಾದವರನ್ನು ಬಂಧನದಲ್ಲಿರಿಸುವಾಗಲೂ ಖೈದಿಗಳನ್ನು ಬಂದೀಖಾನೆ ಯಲ್ಲಿ ಶಿಕ್ಷೆಗೆಂದಿಡುವಾಗಲೂ ಅಧಿಕಾರಿಗಳು ನಡೆಸುವ ಕ್ರಮವನ್ನು ತಿದ್ದುಪಡಿಗೆ ಗುರಿಪಡಿಸಬೇಕೆಂಬ ಚಳುವಳಿ ಆ ಸಾವಿನ ಪರಿಣಾಮ ವಾಗಿ ಹುಟ್ಟಿ ರೇಗಿತು. ಸರ್ಕಾರದವರು ಅದಕ್ಕಾಗಿ ವಿಶೇಷ ಉಪ ಸಭೆಯೊಂದನ್ನು ನಿಯಮಿಸಿದರು. ಆ ಸಭೆಯ ವರದಿಯಲ್ಲಿದ್ದ ಸೂಚ ನೆಗಳು ಸ್ಥಿತಿಗತಿಗಳನ್ನು ಮೇಲುಗೊಳಿಸುವುದಾಗಿ ಕಂಡಿತು. ವಾಸ್ತವ ವಾಗಿ ಹಿಂದಿನಂತೆಯೆ ಮುಂದೆಯೂ ಅಸಮಾಧಾನಕಾರಕವಾಗಿ ಉಳಿಯಿತು.

1929ನೆ ವರ್ಷ ಕಳೆಯುತ್ತ ಬಂತು. ಪ್ರಾಂತಗಳ ಕಾಂಗ್ರೆಸ್ ಸಭೆಗಳು ಅಧ್ಯಕ್ಷ ಚುನಾವಣೆಯಲ್ಲಿ ತೊಡಗಿದವು. ತಾಟಸ್ಥ್ಯವನ್ನು ಆದಷ್ಟು ಕಾಲ ಸ್ಥೈರಿಸಿದ್ದು ಬೇಸರಗೊಂಡಿದ್ದ ಪರಿಸ್ಥಿತಿ. ಆದ್ದರಿಂದ ಪ್ರತಿ ಪ್ರಾಂತದವರೂ ಗಾಂಧೀಜಿಯ ನೇತೃತ್ವವನ್ನೇ ಬಯಸಿದರು. ಬರ್ದೋಲಿ ಸತ್ಯಾಗ್ರಹವನ್ನು ಆದರ್ಶ ಪೂರ್ವಕವಾಗಿ ನಡೆಸಿದ ಸರದಾರ್ ವಲ್ಲಭ್ಭಾಯಿಪಟೇಲರನ್ನು ಕೆಲವರು ಅಧ್ಯಕ್ಷ ಸ್ಥಾನಕ್ಕೆ ಸೂಚಿ ಸಿದ್ದರು. ಜವಾಹರಲಾಲರ ಹೆಸರನ್ನೂ ಹಲಕೆಲವರೆತ್ತಿದ್ದರು. ಲಖನೌ ನಗರದಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿ ನೆರೆದ ವೇಳೆ ಯಲ್ಲಿ ಇದರ ಇತ್ಯರ್ಥವಾಗಬೇಕಾಗಿದ್ದಿತು. ಗಾಂಧೀಜಿಯವರನ್ನೆ ಲ್ಲರೂ ಒಪ್ಪಿಕೊಂಡಿದ್ದಾಗ್ಯೂ ಆತ ಮಾತ್ರ ಅಧ್ಯಕ್ಷನಾಗಿರಲೊಪ್ಪಲಿಲ್ಲ. ಕಡೆತನಕ ಬಿಡಬಾರದೆಂದು ಸರ್ವ ಪ್ರಯತ್ನವನ್ನೂ ಮಾಡುತ್ತ ಒಪ್ಪ ಬಹುದೆಂಬ ಆಸೆಯನ್ನು ಸಭಿಕರು ಇಟ್ಟುಕೊಂಡಿದ್ದರು. ಆದರೆ ಮಹಾ ತ್ಮಾಜಿ ಒಲ್ಲೆನೆಂಬುದನ್ನೇ ಸಾಧಿಸಿ ಕಡೆಯ ಕ್ಷಣದಲ್ಲಿ ಜವಾಹರ ಲಾಲರನ್ನು ಆರಿಸಬಹುದೆಂದರು. ಅಖಿಲಭಾರತ ಕಾಂಗ್ರೆಸ್ ಕಮಿಟಿಗೆ ಆ ವೇಳೆಗೆ ಸ್ವಲ್ಪ ಬೇಸರವೂ ತೋರಿತ್ತು; ಗಾಂಧೀಜಿ ಹೇಳಿದುದನ್ನೇ ಒಪ್ಪಿ ಜವಾಹರಲಾಲರನ್ನು ಗೊತ್ತುಮಾಡಿದರು.

ಇದರಿಂದ ಜವಾಹರಲಾಲರ ಮನಸ್ಸಿನಲ್ಲಿ ವಿಚಿತ್ರವಾದ ಹಿಂಸೆ ತೋರಿತು.

"ಈ ಬಗೆಯ ಹಿಂಸೆಯೂ ಅವಮಾನವೂ ನನ್ನ ಅನುಭವದಲ್ಲಿ ಅಪೂರ್ವವಾಗಿಯೆ ಇತ್ತೆನ್ನಬಹುದು. ರಾಷ್ಟ್ರಪತಿಯ ಸ್ಥಾನವೆಷ್ಟು ಗೌರವಮಯವಾದುದೆಂಬುದನ್ನು ನಾನು ಮರೆಯಲಿಲ್ಲ. ಕ್ರಮವಾದ ರೀತಿಯಲ್ಲಿ ನನ್ನನ್ನು ಚುನಾಯಿಸಿದ್ದಿದ್ದರೆ ನಾನು ಸಂತೋಷವನ್ನೂ ಹೆಮ್ಮೆಯನ್ನೂ ಪಡುತ್ತಿದ್ದೆ. ನಡೆದುದಾದರೂ ಹೇಗೆ? ಮುಂದಿನ ಬಾಗಲಿನಿಂದ ನೇರವಾಗಿ ಬಾರದೆ ಪಕ್ಕದಿಂದಲೂ ಬಾರದೆ ಹಿತ್ತಿಲ ಸಂದಿಯಿಂದ ನುಸುಳಿಕೊಂಡು ಬಂದು ಆಕಸ್ಮಿಕವಾಗಿ ಸಭಿಕರೆದುರಿಗೆ ನಿಂತಹಾಗಾಯಿತು. ಸಭಿಕರಾದರೋ ಸಹನೆ ತಂದುಕೊಂಡು ಕ್ವೈನ ಗುಳಿಗೆಯನ್ನು ರೋಗಿ ಸ್ವೀಕರಿಸಿದಂತೆ ನನ್ನನ್ನು ಸ್ವೀಕರಿಸಬೇಕಾಯಿತು. ಸ್ವಾಭಿಮಾನ ಮುರಿದಂತಾಗಿ ನಾನೂ ಒಲ್ಲೆನೆನ್ನೋಣವೆನ್ನಿಸಿತು. ಆದರೆ ಮುಷ್ಕರದ ಹುಡುಗಾಟವನ್ನು ಪ್ರದರ್ಶಿಸದೆ ಅಗಳ್ಳುಂಗಿ ಒಪ್ಪಿಕೊಂಡೆ."

ಜವಾಹರಲಾಲರೆಷ್ಟು ಸೂಕ್ಷ್ಮತೆಯ ಅಭಿಮಾನಿಶಾಲಿಯೆಂಬುದಕ್ಕೆ ಉತ್ತಮ ದೃಷ್ಟಾಂತ.

ಜವಾಹರಲಾಲರಿಗೆ ಆಗ ನಲವತ್ತು ವರ್ಷ ವಯಸ್ಸು. ಅಧ್ಯಕ್ಷಪದವಿಗೆ ಜವಾಹರಲಾಲರು ಗೊತ್ತಾದ ಕೂಡಲೆ ದೇಶದ ಜನರಲ್ಲಿ ನಿರೀಕ್ಷೆ ಹೆಚ್ಚಿದುದು ಸಹಜ. ಅತ್ತ ಬ್ರಿಟಿಷ್ ಸರ್ಕಾರದವರೂ ಅನೇಕ ಕಾರಣಗಳಿಂದ ಪ್ರೇರಿತರಾಗಿ ಔದಾರ್ಯವನ್ನು ಕಾಣಿಸಲಾರಂಭಿಸಿದರು. ವೈಸರಾಯಿ ಲಾರ್ಡ್ ಇರ್ವಿನ್ನರು ಬ್ರಿಟಿಷರ ಉದ್ದೇಶಗಳನ್ನು ವಿವರಿಸುತ್ತ ಭಾರತ ವರ್ಷಕ್ಕೆ ಡುಮಿನಿಯನ್ ಪದವಿಯೇ ಗುರಿಯೆಂದು ಪ್ರಕಟಿಸಿ ಮುಖ್ಯನಾಯಕರೊಂದಿಗೆ ಮಾತುಕಥೆಗಳನ್ನು ಬೆಳೆಸಿದರು. ಕಾಂಗ್ರೆಸ್ ಪ್ರಮುಖರೂ ಲಿಬರಲ್ ಪಾರ್ಟಿ ಪ್ರಮುಖರೂ ಒಟ್ಟು ಸೇರಿ ಅದಕ್ಕೊಪ್ಪಿದಂತೆ ಕಾಣಿಸಿ ಮುಂದಾಗಿ ಹಲ ಕೆಲವು ಷರತ್ತುಗಳನ್ನೊಡ್ಡಿದರು. ಅಲ್ಲಿಗೆ ಸ್ವಾತಂತ್ರ್ಯ ಲಕ್ಷ್ಯವನ್ನು ಬಿಟ್ಟುಕೊಟ್ಟಂತೆಯೇ ಜವಾಹರಲಾಲರಿಗೆ ಕಂಡಿತು. ಸುಭಾಷಚಂದ್ರ ಬಾಬುವೂ ಹಾಗೆಯೇ ಅಭಿಪ್ರಾಯ ಪಟ್ಟುದರಿಂದ ಇಬ್ಬರೂ ಆ ನಾಯಕರ ಪ್ರಕಟನೆಗೊಪ್ಪದಾದರು. ಜವಾಹರಲಾಲರಾಸಮಯದಲ್ಲಿ ತಮ್ಮ ಮುಂದಿನ ಅಧ್ಯಕ್ಷತೆಯನ್ನು ಬಿಟ್ಟುಕೊಡುವ ನಿಶ್ಚಯವನ್ನೂ ಮಾಡಿಕೊಂಡು ಗಾಂಧೀಜಿಗೆ ಬರೆದು ತಿಳಿಸಿದರು. ಗಾಂಧೀಜಿ ಪ್ರತಿಯಾಗಿ ಕಾಗದ ಬರೆದು ಸಮಾಧಾನಪಡಿಸಿದರು.

ನಾಯಕರು ತೋರಿದ ಷರತ್ತುಗಳನ್ನು ಸರ್ಕಾರದವರು ನಡೆಸಿಕೊಡದೆ ಕಾಲಹರಣ ಮಾಡಿದರು. ಅತ್ತ ಇಂಗ್ಲಂಡಿನ ಪಾರ್ಲಿಮೆಂಟಿನಲ್ಲಿ ವಿರೋಧದ ಸ್ವರಗಳೂ ಬಿರುಸಾಗಿ ಹೊರಟವು. ವೈಸರಾಯಿಯವರು ಮೊದಲಿಟ್ಟ ಸಂಧಾನ ಅಲ್ಲಿಗೆ ಮುಕ್ತಾಯಗೊಂಡಂತೆಯೆ ಆಯಿತು. ಲಾಹೋರ್ ಕಾಂಗ್ರೆಸ್ ಸಭೆಯಲ್ಲಿ ಸ್ವಾತಂತ್ರ್ಯವೇ ಗುರಿಯೆಂಬುದನ್ನು ಸಾಧಿಸಲು ಅಡ್ಡಿಯಿಲ್ಲದೆ ನೆರವೇರಿತು.

ಕಾಂಗ್ರೆಸ್ ನೆರೆಯುವುದಕ್ಕೆ ಮುಂಚಿತವಾಗಿ ನಾಗಪುರದಲ್ಲಿ ಟ್ರೇಡ್ ಯೂನಿಯನ್ ಕಾಂಗ್ರೆಸ್ ಅಥವಾ ಕಾರ್ಮಿಕ ಸಂಘಗಳ ಸಮ್ಮೇಳನ ನಡೆಯಬೇಕಾಗಿತ್ತು. ಆ ಸಮ್ಮೇಳನಕ್ಕೂ ಜವಾಹರಲಾಲರೇ ಅಧ್ಯಕ್ಷರು; ಹಿಂದೆಯೇ ನಿರ್ಣೀತವಾಗಿತ್ತು. ಕಾರ್ಮಿಕ ಸಮ್ಮೇಳನಕ್ಕೂ ಕಾಂಗ್ರೆಸ್ ಸಮ್ಮೇಳನಕ್ಕೂ ಒಬ್ಬರೇ ನಾಯಕರೆನಿಸುವುದು ಅಪೂರ್ವವಾಗಿತ್ತು. ಒಬ್ಬನೇ ಎರಡಕ್ಕೂ ಅಧ್ಯಕ್ಷನಾಗಿದ್ದಲ್ಲಿ ಎರಡೂ ಒಟ್ಟುಗೂಡಬಹುದೆಂಬ ಭಾವನೆ ಜವಾಹರಲಾಲರಿಗಿತ್ತು. ಆದರೆ ಕಾರ್ಮಿಕ ಸಮ್ಮೇಳನದಲ್ಲಿಯೂ ಕಕ್ಷಿ ಪ್ರತಿಕಕ್ಷಿಗಳು ತಾಂಡವವಾಡುತ್ತಿದ್ದವು. ಆಗತಾನೇ ಸರ್ಕಾರದವರು ಗೊತ್ತುಮಾಡಿದ್ದ ವ್ಹಿಟ್ಲೆ ಕಮಿಷನ್ (Whitley Commission) ಎಂಬ ವಿಚಾರಕ ಸಭೆಯೊಂದಿಗೆ ಸಹಕರಿಸಬೇಕೇ ಬೇಡವೇ ಎಂಬ ಪ್ರಸ್ತಾಪವೇ ಮುಖ್ಯವಾಗಿ ಸಮ್ಮೇಳನದಲ್ಲಿ ನಡೆದ ಚರ್ಚೆಯ ಪರಿಣಾಮವಾಗಿ ಕಾರ್ಮಿಕ ಸಮುದಾಯವೆಂಬುದು ಮೂರು ನಾಲ್ಕು ಕಕ್ಷಿಗಳಾಗಿ ಒಡೆದುಹೋಯಿತು. ಈ ಒಳಪಂಗಡಗಳ ಪರಸ್ಪರ ಘರ್ಷಣೆಗಳಿಗೆ ತಾವು ಹೊಸಬರಾಗಿದ್ದುದರಿಂದ ಜವಾಹರಲಾಲರು ನ್ಯಾಯವನ್ನು ಸೂಚಿಸಿಕೊಟ್ಟು ಅಧ್ಯಕ್ಷತೆಯನ್ನು ನಿರ್ವಹಿಸಿದರು. ಕೂಡಲೆ ಲಾಹೋರ್ ಕಾಂಗ್ರೆಸ್ಸಿಗೆ ಸಿದ್ಧರಾದರು.

## 9. ರಾಜಾರೋಷಮೂರ್ತಿ ಮೋತಿಲಾಲ್ ನೆಹರು

ಲಾಹೋರ್ ಕಾಂಗ್ರೆಸ್ಸಿಗೆ ಸನ್ನಾಹ. ಗಾಂಧೀಜಿಯ ಪ್ರಭಾವ ಮೊದಲು ತೋರಿದ್ದ ಪ್ರಾಂತ; ಮೋತಿಲಾಲರು ಅಧ್ಯಕ್ಷತೆಯನ್ನು ಮೊದಲು ವಹಿಸಿಕೊಂಡ ಪ್ರಾಂತ. ಈಗ ಮೋತಿಲಾಲರ ಮಗ ಜವಾಹರ

ಲಾಲರು ಅಧ್ಯಕ್ಷರಾಗತಕ್ಕವರು. ಕಲ್ಕತ್ತೆಯ ಅಧಿವೇಶನ ಪ್ರಾರಂಭ ದಿಂದ ರಾಷ್ಟ್ರಪತಿಯಾಗಿದ್ದ ಮೋತಿಲಾಲರೇ ತಮ್ಮ ಪಟ್ಟವನ್ನು ಮಗ ನಿಗೆ ಬಿಟ್ಟುಕೊಡಬೇಕು. ಪಿತ್ರಾರ್ಜಿತ ಪಟ್ಟವನ್ನು ಮಗನು ಪಡೆ ದಂತೆಯೆ ಆಯಿತು. ಮೋತಿಲಾಲರ ಹೆಮ್ಮೆಗೆ ಆ ವೇಳೆಯಲ್ಲಿ ಮೇರೆ ಯುಂಟೇ? ಆತನ ಗಂಭೀರವೇ ಮೇರೆ.

ಪಂಜಾಬಿನ ಜನರೂ ಇತರರೂ ಲಕ್ಷಾವಧಿ ಗುಮಿಗೂಡಿ ಜವಾ ಹರಲಾಲರಿಗೆ ಸ್ವಾಗತವನ್ನರ್ಪಿಸಿದರು. ಇತರ ರಾಷ್ಟ್ರಪತಿಗಳ ಮೆರ ವಣಿಗೆ ಮೋಟಾರುಕಾರುಗಳಲ್ಲಿ ಅಥವಾ ಕುದುರೆ ಬಂಡಿಗಳಲ್ಲಿ ನಡೆ ದಿತ್ತು. ಮೂಟೆ ಬಿದ್ದಹಾಗೆ ಕುಕ್ಕರಿಸಲೊಲ್ಲದೆ ಜವಾಹರಲಾಲರು ಮೆರವಣಿಗೆಗೆ ಬಿಳಿ ಕುದುರೆಯನ್ನೇರಿ ಹೊರಟರು. ಅತ್ಯದ್ಭುತವಾದ ಸಂದರ್ಭವಾಯಿತು. ರಾಷ್ಟ್ರೀಯ ಧ್ವಜಾರೋಹಣವನ್ನು ಜವಾಹರ ಲಾಲರು ನಡೆಸಿದ ಸಂದರ್ಭದಲ್ಲಿ ಅಲ್ಲಿಲ್ಲದೆ ದೂರದಲ್ಲಿದ್ದವರ ತನುಮನ ಗಳೂ ಮಿಳಿತವಾದವು. ಮೈಸೂರಿನಲ್ಲಡಗಿದ್ದವರೊಬ್ಬರ ಉತ್ಸಾಹ ಹಾಡಿನ ರೂಪದಲ್ಲಿ ಹೊರಟಿತು:—

ಕಣ್ತುಂಬ ನೋಡೆಮ್ಮ ಹರಸು ತಾಯೆ,
ಭಾರತ ಭಾಗ್ಯೇಶ್ವರೀ—ಹರಸು ತಾಯೆ||
ಕೋಟಿ ಮುವ್ವತ್ತೈದು ಕೊರಲುಗಳ ತಾರಸರ
ಒಗ್ಗೊರಲ ಮೇಳದಲಿ ಮೊಳಗುತಿದೆ ಕೇಳಾ!
ಮೊಳಗುತಿದೆ ಪರತಂತ್ರ ಕೊನೆಗಂಡಿತೆನ್ನುತ್ತೆ
ಸಕಲ ಸಾಧನವಾಯ್ತು ಸ್ವಾಧೀನವೆನುತೆ—||
ಇಷ್ಟವಿಲ್ಲದ ಮನದಿ ಅರೆಲೋಕ ಭಾಪೆನಲು
ಭುಜವೆತ್ತಿ ನಿನ್ನ ಧ್ವಜವಾಡುತಿದೆ ನೋಡಾ!
ಹತ್ತುದಿಕ್ಕಿನ ಗಾಳಿ ಹೊತ್ತು ಪರಿಮಳವೆರೆದು
ನೆತ್ತಿಯನು ನೆಲಕಿಕ್ಕಿ ಬಾಗಿಹವು ನೋಡಾ—||
ಸಾಗರದ ಆಳಕ್ಕೆ ಅಡಿಯೂರಿ ಮೇಲೆದ್ದು
ಧವಳಗಿರಿಗೇರಿರುವ ಪರಿಯ ನೋಡಾ!
ನಿನ್ನ ಕೀರುತಿ ಕಳಸ ಗೌರಿಶಂಕರರೆದುರು

ಮೇರುಗಿರಿಯಲ್ಲಿ ನಟ್ಟ ವಿಭವ ನೋಡಾ—||
ಭಾರತ ಚಕ್ರೇಶ್ವರೀ,
ಜೈಯೆಂಬ ಜಯಘೋಷ ಕೇಳಾ!

ಯೂರೋಪಿನಿಂದ ಜವಾಹರಲಾಲರು ಹಿಂತಿರುಗಿ ಬಂದಿದ್ದು ಮೂರುವರ್ಷಗಳಾಗಿದ್ದವು. ಹೊರಗಿನ ಜಗತ್ತನ್ನು ಕಣ್ಣಾರೆ ಕಂಡು ಬಂದಾಗಿನಿಂದ ಭಾರತಕ್ಕೆ ಸರ್ವಸ್ವಾತಂತ್ರ್ಯವೇ ಗುರಿಯಾಗತಕ್ಕು ದೆಂಬ ನಿಶ್ಚಯ ಅವರ ಮನಸ್ಸಿನಲ್ಲಿ ಭದ್ರವಾಗಿ ನೆಲೆಸಿತ್ತು. ಬ್ರಿಟಿಷರ ಸಮುದಾಯ ಬಂಧದ ಬೇಲಿಯೊಳಗಡೆಯೇ ಭಾರತ ರಾಷ್ಟ್ರವಿರ ಬೇಕೆಂಬುದು ಅವಿವೇಕವೂ ಅಯೋಗ್ಯವೂ ಎನಿಸಿತ್ತು. ರಾಜಕೀಯ ದೃಷ್ಟಿ ಮಾತ್ರವನ್ನಲ್ಲದೆ ಆರ್ಥಿಕ ದೃಷ್ಟಿಯನ್ನೂ ವಹಿಸಿ ಗುರಿಯನ್ನು ಗೊತ್ತುಮಾಡಬೇಕೆನ್ನಿಸಿತ್ತು. ಆರ್ಥಿಕ ಸ್ಥಿತಿಯಲ್ಲಿ ನ್ಯಾಯವನ್ನು ಸ್ಥಾಪಿಸದಿದ್ದರೆ ಕೇಡಾಗುವುದೆಂದೇ ಹೇಳುತ್ತಿದ್ದ ಜವಾಹರಲಾಲರನ್ನು ಪ್ರತಿಭಟಿಸಲಾರದವರಾಗಿದ್ದರೂ ದೂರದಿಂದಲೇ ಟೀಕಾ ಟೂಕೆಗಳನ್ನು ಬೀರುತ್ತಿದ್ದವರನೇಕರಿದ್ದರು. ಲಿಬರಲ್ ಪಾರ್ಟಿಯವರು ವಿರೋಧ ವನ್ನು ಮಾತ್ರವಲ್ಲದೆ ಗಾಬರಿಯನ್ನೂ ಕಾಣಿಸಿದ್ದರು.

ಒಂದಾನೊಂದು ಕಾಲದಲ್ಲಿ ಲಿಬರಲ್ ಗುಂಪಿನಲ್ಲಿಯೆ ಗಣ್ಯರಾಗಿದ್ದವರಲ್ಲವೆ ಮೋತಿಲಾಲರು? ಗಾಂಧೀಯುಗಕ್ಕೆ ಹಿಂದಿನ ಮೋತಿಲಾಲರಿಗೂ 1930ರಲ್ಲಿ ಕಂಡ ಮೋತಿಲಾಲರಿಗೂ ಎಷ್ಟು ಅಂತರ! ಆ ವ್ಯತ್ಯಾಸಕ್ಕೆ ಗಾಂಧೀಜಿಯ ಪ್ರಭಾವವೊಂದು ಕಾರಣವಾದರೆ ಜವಾಹರ ಲಾಲರ ಪ್ರಭಾವವು ಮತ್ತೊಂದು ಸಮಾನಬಲವುಳ್ಳಕಾರಣ. ಮಗನು ಬೆಳೆಸಿದ್ದ ಆದರ್ಶ ಧ್ಯೇಯಗಳನ್ನೊಪ್ಪಲಾರದವರಾಗಿದ್ದಾಗ್ಯೂ ಸಹಜ ವಾಗಿ ಹೃದಯದಲ್ಲಿ ಅತ್ಯಭಿಮಾನಶಾಲಿ. ಜವಾಹರಲಾಲರನ್ನು ಶಿಕ್ಷಿಸುವಂತೆಯೋ ತಿದ್ದುವಂತೆಯೋ ತಾವು ಆಗಾಗ್ಗೆ ವರ್ತಿಸು ತ್ತಿದ್ದಾಗ್ಯೂ ಆಯಧಿಕಾರವನ್ನು ಇತರರಲ್ಲಿ ಸಹಿಸತಕ್ಕವರಲ್ಲ. ಮತ್ತಾ ರಾದರೂ ಜವಾಹರಲಾಲರನ್ನಾಕ್ಷೇಪಿಸಿದಲ್ಲಿ ಅಂತಹವರನ್ನು ಮೋತಿ ಲಾಲರು ಧ್ವಂಸಮಾಡಿಬಿಡುತ್ತಿದ್ದರು. ಪ್ರಾಯಶಃ ಗಾಂಧೀಜಿ ಯೊಬ್ಬರು ವಿನಾ. ದಾಂಡಿಯಾತ್ರೆಯನ್ನು ಕಂಡಾಗ ಅದನ್ನು ಹಿಂದೆ

ಅಯೋಧ್ಯೆ ಬಿಟ್ಟು ಹೊರಟ ಶ್ರೀರಾಮಚಂದ್ರನ ಅರಣ್ಯಯಾತ್ರೆಗೆ ಹೋಲಿಸಿದ್ದ ಮೋತಿಲಾಲರಿಗೆ ಗಾಂಧೀಜಿ ವಸಿಷ್ಠ ವಿಶ್ವಾಮಿತ್ರರಂತೆಯೂ ಜವಾಹರ್ ಶ್ರೀರಾಮನಂತೆಯೂ ಪರಾಕ್ರಮಣ ಮಾರೀಚ ಸುಬಾಹುಗಳಂತೆಯೂ ತಾವು ದಶರಥರಂತೆಯೂ ಎಂದಾದರೂ ತೋರಿದ್ದಿತೋ ಏನೋ !

ಆದರೆ ರಾಜಾ ದಶರಥನ ದೈನ್ಯ ಮೋತಿಲಾಲರಲ್ಲಿರಲಿಲ್ಲ. ಮೃದುವಾಗಿಯೋ ಕೋಮಲವಾಗಿಯೋ ವಾದಿಸುವ ರೀತಿಯೇ ಇಲ್ಲ. ಶತ್ರುಸ್ಥಾನದಲ್ಲಿರುವವರ ಎದುರುಬದುರಾಗಿ ನಿಂತು ಹೋರಾಡುವುದು ಅವರ ಇಷ್ಟ. ವಾದವಿವಾದಗಳಲ್ಲಿ ಸಿಂಹದಂತೆಯೆ ಇದ್ದವರಾದುದರಿಂದ ನ್ಯಾಯಸ್ಥಾನಗಳಲ್ಲಿ ಹೇಗೋ ಹಾಗೆಯೇ ಶಾಸನ ಸಭೆಗಳಲ್ಲಿಯೂ ಕಾಂಗ್ರೆಸ್ ಸಮಿತಿಗಳಲ್ಲಿಯೂ ಎದುರಾಳಿಗಳನ್ನು ಗಂಭೀರರೀತಿಯಲ್ಲಿ ನೆಲಸಮವನ್ನೇ ಮಾಡುತ್ತಿದ್ದರು. ಹಿಂದೆ ಕುಸ್ತಿಯಾಟದಲ್ಲಿದ್ದಂತೆಯೆ. ಬಲವಾದ ಪೆಟ್ಟನ್ನು ಹೊಡೆದು ಪ್ರತಿಯಾಗಿ ಬಲವಾದ ಪೆಟ್ಟನ್ನು ನಿರೀಕ್ಷಿಸುವ ಸ್ವಭಾವ. ಅಲ್ಪರನ್ನೂ ಮೂಢರನ್ನೂ ನಿರ್ಲಕ್ಷ್ಯವಾಗಿ ಕಂಡು ದೃಷ್ಟಿಮಾತ್ರದಿಂದಲೆ ಭೂಗತ ಮಾಡತಕ್ಕವರು. ಹೋರಾಟಕ್ಕೆ ನಿಂತಮೇಲೆ ದಯೆಯೆಂದರೇನೆಂದು ಕೇಳುವ ಸ್ವಭಾವ !

ಎಂದೋ ಒಂದು ಸಲ ಮೋತಿಲಾಲರು ಹಿಂದುಸ್ತಾನಿ ಮಾತನಾಡದೆ ಇಂಗ್ಲಿಷ್ ಭಾಷಣವನ್ನುಪಕ್ರಮಿಸಿದರು. ಸಭಿಕರಲ್ಲೊಬ್ಬಾತನು "ಏನು ಹಿಂದುಸ್ತಾನಿ ಬಾರದೋ ಇವರಿಗೆ?" ಎಂದು ಕ್ಷುದ್ರರೀತಿಯ ಆಕ್ಷೇಪವನ್ನೆತ್ತಿದನು. "ನನಗೆ ಸರಿತೋರಿದ ಭಾಷೆಯಲ್ಲಿ ನಾನು ಮಾತು ಬೆಳೆಸುತ್ತಿದ್ದೇನೆ. ಹಿಂದುಸ್ತಾನಿಯು ಹಟ ಹಿಡಿದರೆ ನಿಮಗರ್ಥವಾಗದಷ್ಟು ಪ್ರೌಢರೀತಿಯಲ್ಲಿ ಮಾತನಾಡಿಬಿಟ್ಟೇನು!" ಎಂದೊದರಿದರು. ವಾಸ್ತವವಾಗಿ ಮೋತಿಲಾಲರು ಫಾರ್ಸಿ ಭಾಷೆಯಲ್ಲಿ ಅಸಾಧಾರಣಪಂಡಿತರಾಗಿದ್ದುದರಿಂದ ಅದು ಗೊಡ್ಡು ಬೆದರಿಕೆಯಾಗಿರಲಿಲ್ಲ. ಆ ಸಭಿಕನು ತೆಪ್ಪನಾಗಬೇಕಾಯಿತು. ಸ್ವರಾಜ್ ಪಕ್ಷವನ್ನು ಕಟ್ಟಿಕೊಂಡು ದಿಲ್ಲಿಯ ಶಾಸನ ಸಭೆಯಲ್ಲಿರುವಾಗ್ಗೆ ಈತನೆದುರಿನಲ್ಲಿ ಸರ್ಕಾರೀ ಪಕ್ಷದವರಿಗೆ ಹೆದರಿಕೆಯೆ ಇರುತ್ತಿತ್ತು. ಹೆಣಗುವುದು ಕಷ್ಟ

ವಾಗಿತ್ತು. ಸರ್ ಮಾಲ್ಕೋಂ ಹೈಲಿ (ಲಾರ್ಡ್ ಹೈಲಿ) ಅಧಿಕಾರಿ ವರ್ಗಕ್ಕೆ ಮುಖ್ಯನಾಗಿ ಹೆಣಗಾಡಿ ಪಂಜಾಬಿಗೆ ಗವರ್ನರಾಗಿ ಹೊರಡುತ್ತ "ಕಷ್ಟ ತಪ್ಪಿತಯ್ಯ! ಸದ್ಯಕ್ಕೆ ಪಂಜಾಬಿನಲ್ಲಿ ಪಂಡಿತರೂ ಪಟೇಲರೂ ಇಲ್ಲ" ಎಂದುಕೊಂಡನು. ಮೋತಿಲಾಲರೊಡನೆ ಹೋರಾಟವೆಂದರೆ ಯಾರಿಗಾದರೂ ಗಾಬರಿಯಾಗಬೇಕಾದುದೇ. ಗಾಂಧೀಜಿಯವರು ಕೂಡ ಮೋತಿಲಾಲರ ವಿರೋಧವನ್ನು ಅನುಭವಿಸಿದ್ದವರು. 1925ರ ಸುಮಾರಿನಲ್ಲಿ ಜವಾಹರಲಾಲರು ತೋರಿಸಿದ ಮೋತಿಲಾಲರ ಪೋಟೋವೊಂದನ್ನು ದೀರ್ಘಕಾಲ ನೋಡುತ್ತ "ಈತನ ದಂಷ್ಟ್ರಾಬಲವೆಷ್ಟೆಂದು ಹಿಂದೆ ನಾನೆಣಿಸಿಕೊಂಡಿರಲಿಲ್ಲ"ವೆಂದರಂತೆ.

ವಿರೋಧಿಗಳಾಗಿ ನಿಂತಾಗ ಅತಿ ಬಲಾಢ್ಯರಾಗಿದ್ದ ಮೋತಿಲಾಲರಿಗೆ ಗಂಭೀರವಾದ ಹಾಸ್ಯಗ್ರಾಹಿತನವೂ ಇತ್ತು. 1910ರಲ್ಲಿ ನಿಹಾಲಸಿಂಗರು ಇಲಾಹಾಬಾದಿನಲ್ಲಿ ಮೋತಿಲಾಲರ ಮನೆಯಲ್ಲಿಳಿದಿದ್ದಾಗ ನಡೆದ ಸುಖಸಂಕಥಾವಿನೋದಗಳ ಮಧ್ಯೆ ಮುಂಬಯಿ ಬಂದರಿನಲ್ಲಿ ಸುಂಕದ ವಸೂಲಿಯ ಪ್ರಸ್ತಾಪ ಹುಟ್ಟಿತು. ಆಗ ಮೋತಿಲಾಲರು ತಮ್ಮ ಅನುಭವವೊಂದನ್ನು ಸ್ವಾರಸ್ಯವಾಗಿ ವರ್ಣಿಸಿದರು. ಒಂದು ಸಾರಿ ಯೂರೋಪಿನಿಂದ ಹಿಂತಿರುಗಿದಾಗ ಮೋತಿಲಾಲರು ನೂರಾರು ಪೆಟ್ಟಿಗೆಗಳನ್ನು ಲಗ್ಗೇಜ್ ಮಾಡಿದ್ದರು. ಸುಂಕದ ಅಧಿಕಾರಿಗಳು ಬಂದು ತಡಕಿದ ರೀತಿಯು ಚೋದ್ಯವೆನ್ನಿಸಿತು. ಒಂದು ಪೆಟ್ಟಿಗೆ ತೋರಿಸುತ್ತ "ಅದರಲ್ಲಿರುವುದೇನು?" ಎಂದು ಕೇಳಿದಾಗ ಮೋತಿಲಾಲರು "ನನಗೆ ಹೇಗೆ ಗೊತ್ತಿರಬೇಕು? ಈ ಪೆಟ್ಟಿಗೆಗಳಲ್ಲಿ ನನ್ನ ಆಳುಗಳು ಏನೇನು ತುಂಬಿಟ್ಟರೋ ನನಗೆ ಜ್ಞಾಪಕವಿರುತ್ತದೆಯೆ?" ಎಂದೋ "ಏನಿದೆಯೆಂದು ತಿಳಿದುಕೊಳ್ಳಬೇಕಾದರೆ ತೆಗೆದು ನೋಡು. ನನ್ನ ಆಕ್ಷೇಪವೇನೂ ಇಲ್ಲ" ಎಂದೋ ಉತ್ತರ ಕೊಡುತ್ತ ಆ ಅಧಿಕಾರಿಯ ಚರ್ಯೆಯನ್ನು ಕಂಡು ವಿನೋದಗೊಂಡರು. ಟ್ರಂಕನ್ನು ತೆಗೆದು ಸಾಮಾನುಗಳನ್ನು ಒಂದೊಂದಾಗಿ ಎತ್ತಿ ನೋಡಿದರೆ ಎಲ್ಲ ಬಟ್ಟೆಬರೆಗಳು, ಅಲಂಕಾರ ಸಾಮಗ್ರಿಗಳು, ಅಥವಾ ಆಟಪಾಟಗಳ ವಸ್ತುಗಳು! ರಿವಾಲ್ವರ್ ಆಗಲಿ ನಿಷಿದ್ಧ ಪುಸ್ತಕವಾಗಲಿ ಕಾಣಲಿಲ್ಲ.

ಒಂದು ಬಾರಿ ವಿಲಾಯತಿಗೆ ಹೊರಟಿದ್ದರು ಮೋತಿಲಾಲರು. ಅದೇ ಜಹಜಿನಲ್ಲಿಯೆ ಹೈದರಾಬಾದಿನಿಂದ ಬಂದಿದ್ದ ಒಬ್ಬ ನವಾಬನೂ ಇದ್ದನು. ತನ್ನ ವೈಭವಕ್ಕಿಂತ ಮೋತಿಲಾಲರ ವೈಭವವೇ ಎಲ್ಲ ಅಂಶಗಳಲ್ಲಿಯೂ ಹೆಚ್ಚಾಗಿದ್ದುದನ್ನು ಕಂಡು ಹೇಗಾದರೂ ಈತನನ್ನು ಮಾತಿನಲ್ಲಾದರೂ ಗೆಲ್ಲಬೇಕೆಂದುಕೊಂಡು ಒಂದು ದಿನ ಸಮಯಕಾದು "ನೀವು ಗೋಮಾಂಸವನ್ನು ತಿನ್ನಬಲ್ಲಿರೋ ?" ಎಂದು ಕೇಳಿ ಹಿಗ್ಗಿದನು. ಕೂಡಲೇ ಮೋತಿಲಾಲರು ಗಂಭೀರಮುದ್ರೆಯಿಂದ "ಗೋಮಾಂಸ ವನ್ನು ತಿನ್ನುವುದಿಲ್ಲ ; ಆದರೆ ಗೋಭಕ್ಷಕರ ಮಾಂಸವನ್ನು ಬೇಯಿಸಿಟ್ಟರೆ ಆದಕ್ಕೆ ಮಸಾಲೆ ಚೆಲ್ಲಿಕೊಂಡು ಆನಂದದಿಂದ ತಿಂದು ಲೊಟಿಕೆ ಹಾಕು ತ್ತೇನೆ" ಎಂದುಬಿಟ್ಟರು.

ಲಾಲಾಲಜಪತರಾಯರಿಗೊಂದುಸಲ ಕೋಪ ಬಂತು. "ಪಂಡಿತ್ ಮೋತಿಲಾಲರಿಗೆ ವೇದಗಳಲ್ಲಿ ಭಕ್ತಿಯಿಲ್ಲವೋ ?" ಎಂದು ಗರ್ಜಿಸಿದರು. ಮೋತಿಲಾಲರು ಗಂಭೀರವಾದರೂ ಚುರುಕುತನದಿಂದ "ವೇದಗಳಿ ಗಾಧಾರಭೂತವಾದ ತತ್ತ್ವಗಳಲ್ಲಿ ನನಗೆ ಭಕ್ತಿಯುಂಟು" ಎಂದು ಆ ಪ್ರಶ್ನೆಯನ್ನು ಪಾತಾಳಕ್ಕೆ ತಳ್ಳಿದರು. ಹೆಸರುಪಡೆದ ಮೌಲಾನಾ ಒಬ್ಬಾತ ನೊಂದುದಿನ ಬಂದು ಮೋತಿಲಾಲರನ್ನು ಕಂಡು "ರಂಗೀಲಾ ರಸೂಲ್ ಪುಸ್ತಕವನ್ನು ಖಂಡಿಸುತ್ತ ತಾವು ಹೇಳಿಕೆ ಕೊಟ್ಟು ಪೈಗಂಬರರ ಕೀರ್ತಿಗೆ ಕಳಂಕ ಬಾರದಂತೆ ಎಸಗಬೇಕು" ಎಂದನು. ಪ್ರತ್ಯುತ್ತರ ವಾಗಿ ಮೋತಿಲಾಲರು "ಪೈಗಂಬರರು ನಿಜವಾಗಿ ಪೈಗಂಬರರಾಗಿರುವ ಪಕ್ಷದಲ್ಲಿ ಅವರ ಕೀರ್ತಿಯನ್ನುದ್ಧರಿಸುವ ಕರ್ತವ್ಯ ನನಗೂ ಇಲ್ಲ, ನಿಮಗೂ ಇಲ್ಲ"ವೆಂದುಬಿಟ್ಟರು. ಹಾಸ್ಯ ಮಾಡಿದಂತೆಯೇ ಭಾರಿ ಏಟು.

ಮತ್ತೊಂದು ದೃಷ್ಟಾಂತ ಸಾಕು. ಯು. ಪಿ. ಪ್ರಾಂತದಲ್ಲಿ ಹೆಸರುವಾಸಿಯಾದ 'ಲೀಡರ್' ಪತ್ರಿಕೆಗೆ ಸಂಪಾದಕರಾಗಿದ್ದ ಚಿಂತಾ ಮಣಿಗಳವರು ಯಾವುದೋ ಚುನಾವಣೆಕಾಲದಲ್ಲಿ ಪಂಡಿತ್ ಚಿಂತಾ ಮಣಿಯೆನಿಸಿಕೊಂಡಿದ್ದರು. ಅವರ ಭಕ್ತನೊಬ್ಬಾತ ಮೋತಿಲಾಲರ ಬಳಿಗೆ ಬಂದು "ನೀವು ಬ್ರಾಹ್ಮಣರಾಗಿದ್ದು ಮಾಂಸವನ್ನೂ ಮೊಟ್ಟೆ ಯನ್ನೂ ಭಕ್ಷಿಸುವುದೇಕೆ ?" ಎಂದಾಕ್ಷೇಪಿಸಿದನು. ಒಡನೆಯೆ ಬಂತು

ಪ್ರತ್ಯುತ್ತರ "ಎರಡನ್ನೂ ನಾನು ತಿನ್ನುತ್ತೇನೆ, ನಮ್ಮ ತಂದೆ ತಿನ್ನು ತ್ತಿದ್ದರು, ನಮ್ಮ ತಾತ ತಿನ್ನುತ್ತಿದ್ದರು, ಮುತ್ತಾತ ತಿನ್ನುತ್ತಿದ್ದರು. ಏಳು ತಲೆಗಳಿಂದ ನಾವು ಮೊಟ್ಟೆ ಮಾಂಸಗಳನ್ನು ತಿನ್ನುತ್ತಿದ್ದೇವೆ. ಆದರೆ ನನಗೆ ತಿಳಿದ ಮಟ್ಟಿಗೆ ನಿಮ್ಮ ಹೊಸ ಪಂಡಿತರು ಅವುಗಳನ್ನು ಗವರ್ನರ್ ಕೊಟ್ಟ ಊಟಗಳಲ್ಲಿ ಸೇವಿಸಲಾರಂಭಿಸಿದರು." ಪರಿಣಾಮ ವಾಗಿ ಲೀಡರ್ ಪತ್ರಿಕೆಯಲ್ಲಿ ಅಂದಿನಿಂದ ಮೋತಿಲಾಲರನ್ನು ಪಂಡಿತ್ ಎನ್ನದೆ ಮಿಸ್ಟರ್ ಎನ್ನಲು ಮೊದಲಾಯಿತು.

ಕೋಪ ಬಂದಾಗ ಮೋತಿಲಾಲರು ನಿಜವಾಗಿ ಉಗ್ರಮೂರ್ತಿ. ಹಿಂದೆಯೇ ಅದಕ್ಕೆ ದೃಷ್ಟಾಂತಗಳನ್ನು ಜವಾಹರಲಾಲರ ಮಾತಿನಿಂದಲೇ ತಿಳಿದುದಾಯಿತು. ತಮ್ಮ ಯಾಜಮಾನ್ಯಕ್ಕೆ ಅಡ್ಡಿತೋರಿದಾಗ ಸ್ವಾಭಾ ವಿಕವಾಗಿ ಯಾರಿಗಾದರೂ ಕೋಪ. ಇನ್ನು ಮೋತಿಲಾಲರಿಗೋ? ಎಷ್ಟೋ ಸಾಮರ್ಥ್ಯವನ್ನು ವೆಚ್ಚಮಾಡಿ ಸ್ವರಾಜ್ ಪಕ್ಷವನ್ನು ಕಟ್ಟಿದ ಬಳಿಕ ಆ ಪಕ್ಷದವರು ಶಿಸ್ತಿಯಿಂದ ಕೂಡಿ ಮೋತಿಲಾಲರ ಯಾಜಮಾನ್ಯ ದಲ್ಲಿ ವರ್ತಿಸಬೇಕಾಗಿ ಬಂತು. ಆ ಗುಂಪಿನವರೆಲ್ಲೆಷ್ಟೋ ಮುಂದಿಗೆ ಭಾಷಣ ಕೊಡುವ ಚಾಪಲ್ಯ. ಆದರೆ ಮೋತಿಲಾಲರ ಅನುಮತಿ ಯಿಲ್ಲದೆ ಮಾತನಾಡುವ ಹಾಗಿರಲಿಲ್ಲ. ದಿಲ್ಲಿಯ ಶಾಸಕ ಸಭೆಯಲ್ಲಿ ಸರ್ಕಾರದ ಹುದ್ದೆದಾರರು ಮೋತಿಲಾಲರನ್ನು ಕಂಡು ಅಂಜಿಕೆಪಡು ತ್ತಿದ್ದಂತೆಯೇ ಸ್ವರಾಜ್ ಪಕ್ಷೀಯರೂ ಅಂಜಿಕೆ ಪಡಬೇಕಾಗಿತ್ತು. ಒಬ್ಬಾನೊಬ್ಬರು ಅವಿಧೇಯರಾಗಿ ವರ್ತಿಸಿದಾಗ ಮೋತಿಲಾಲರು "ಸ್ವರಾಜ್ ಪಾರ್ಟಿಯಿಂದ ನಿಮ್ಮನ್ನೊದ್ದು ಕಳುಹಿಸಿಬಿಡುತ್ತೇನೆ" ಎಂದಿದ್ದುದು ಇನ್ನೂ ಎಷ್ಟೋ ಜನರ ಜ್ಞಪ್ತಿಯಲ್ಲಿಯೇ ಇದೆ.

ನಿಹಾಲಸಿಂಗರು ಮೊದಲು ಮೋತಿಲಾಲರನ್ನು ಕಂಡುದು 1910 ರಲ್ಲಿ. ಆಗಲೆ ಅವರ ವಾರ್ಷಿಕ ಸಂಪಾದನೆ ನಾಲ್ಕು ಲಕ್ಷ ರೂಪಾಯಿ ಗಳಿಗೆ ಕಡಿಮೆಯಿಲ್ಲವೆಂದುಕೊಂಡರು. ಇನ್ನೂ ಕಾಲ ಕಳೆಯುತ್ತ ಮೋತಿಲಾಲರ ಸಂಪಾದನೆಯೇರಿತು. ತಿಂಗಳಿಗರ್ಧಲಕ್ಷವೆಂದುಕೊಂಡರೆ ಏನೂ ಅತಿಶಯೋಕ್ತಿಯಲ್ಲ. ವಕೀಲೀ ವೃತ್ತಿಯಲ್ಲಿ ಹಾಗೆಯೆ ಭಾರಿ ಸಂಪಾದನೆ ಮಾಡಿದ ಇತರರೂ ಇದ್ದರು; ಅವರಲ್ಲೊಬ್ಬರಿಗಾದರೂ

ಮೋತಿಲಾಲರ ರಾಜಠೀವಿ ಇರಲಿಲ್ಲ. ಕಲ್ಕತ್ತೆಯಲ್ಲಿ ಪ್ರಸಿದ್ಧ ವಕೀಲರಾಗಿ ತಿಂಗಳಿಗೆ ಇಪ್ಪತ್ತೈದೋ ಮೂವತ್ತೋ ಸಾವಿರ ರೂಪಾಯಿಗಳನ್ನು ಬಾಚಿಕೊಳ್ಳುತ್ತ ಹೈಕೋರ್ಟ್ ಜಡ್ಜಿ ಪದವಿಯನ್ನು ಬೇಡವೆಂದವರು ರಾಸಬಿಹಾರಿ ಘೋಷರು. ಸೂರತ್ ಕಾಂಗ್ರೆಸ್ಸಿಗೆ ಅಧ್ಯಕ್ಷರಾಗಬೇಕಾಗಿದ್ದವರು. ಸಮೃದ್ಧಿಯಾಗಿ ದಾನವನ್ನೂ ಮಾಡಿ ಧರ್ಮಿಷ್ಠರೆನಿಸಿದವರು; ಕಲ್ಕತ್ತ ವಿಶ್ವವಿದ್ಯಾನಿಲಯಕ್ಕೆ ನಲವತ್ತು ಲಕ್ಷಗಳನ್ನು ಕೊಟ್ಟವರು. ಇಲಾಹಾಬಾದಿಗೆ ಬಂದಾಗ ಮೋತಿಲಾಲರ ಮನೆಯಲ್ಲಿ ಳಿದುಕೊಳ್ಳುತ್ತಿದ್ದರು. ಒಂದು ಬಾರಿ ಮೋತಿಲಾಲರು ಕಲ್ಕತ್ತೆಗೆ ಹೊರಟಿದ್ದರು; ತಮ್ಮ ಮನೆಗೆ ಬಂದಿರಬೇಕೆಂದು ರಾಸಬಿಹಾರಿ ಘೋಷರು ಕರೆದು ತಕ್ಕ ಸಿದ್ಧತೆಗಳನ್ನು ಎಣಿಸೆಣಿಸಿ ನಡೆಸುತ್ತ ಶಂಕಾವಿಷ್ಟರಾಗಿಯೆ ಇದ್ದರಂತೆ. ಅದನ್ನು ಕಂಡು ಕೆಲವರು "ಇದೇನೀ ವಿಚಿತ್ರ! ರಾಸಬಿಹಾರಿ ಘೋಷರ ಮನೆಯಲ್ಲಿ ಬರುವ ಅತಿಥಿಯ ಸೌಕರ್ಯಕ್ಕೆ ಸಂಕೋಚಪಡುವುದು!" ಎಂದುಕೊಂಡು ಕೇಳಿಯೂ ಕೇಳಿದರು. ಅದಕ್ಕೆ ಘೋಷರು "ಮೋತಿಲಾಲರ ಜೀವನದ ರೀತಿಯನ್ನು ನೀವು ಕಾಣಿರಿ. ನಾನು ಕಂಡಿದ್ದೇನೆ. ನಮ್ಮ ಮನೆಯಲ್ಲಿ ಆತನಿಗೆ ಅನುಕೂಲವಾಗಿರುವುದೋ ಇಲ್ಲವೋ ಎಂದು ಸಂದೇಹಪಡಲು ಅದೇ ಕಾರಣ" ಎಂದರಂತೆ.

ತಮ್ಮ ಸಂಪಾದನೆಯೆಷ್ಟೆಂಬುದನ್ನು ಪ್ರಾಯಶಃ ಮೋತಿಲಾಲರೇ ಲೆಕ್ಕಮಾಡಲಿಲ್ಲ. ಲೆಕ್ಕಮಾಡುವ ಸ್ವಭಾವವಲ್ಲ. ವೆಚ್ಚದಲ್ಲಿಯೂ ಹಾಗೆಯೆ ಹಿಡಿತವೆಂಬುದಿಲ್ಲ. ಹಣವೆಂದರೆ ನಿರ್ಲಕ್ಷ್ಯ! ಹೀಗಿದ್ದಾತನ ಔದಾರ್ಯಕ್ಕೆ ಮೇರೆಯೆಲ್ಲಿಂದ ಬರಬೇಕು? ತನ್ನ ಆಶ್ರಯದಲ್ಲಿದ್ದವರಿಗೆ ಸುಖಸಮೃದ್ಧಿಯಿರಬೇಕೆಂಬುದು ಆತನ ಮೊದಲನೆ ಇಷ್ಟ. 'ಲೀಡರ್' ಪತ್ರಿಕೆಯ ಸಂಬಂಧ ಬಿಟ್ಟು 'ಇಂಡಿಪೆಂಡೆಂಟ್' ಎಂಬ ಪತ್ರಿಕೆಯನ್ನು ಸ್ಥಾಪಿಸಿದಾಗ ಆ ಪತ್ರಿಕೆಗೆ ಸಂಪಾದಕನನ್ನು ಗೊತ್ತುಮಾಡುವ ಸಮಯ. "ಕಚೇರಿಗೆ ಬಂದು ಡೆಸ್ಕಿಬಳಿ ಅಂಟಿಕೊಂಡಿದ್ದು ಗುಲಾಮಗಿರಿ ಅವಶ್ಯವಿಲ್ಲ: ನಿತ್ಯವೂ ಬರೆಯಬೇಕೆಂಬ ನಿಯಮವೂ ಇಲ್ಲ. ಪತ್ರಿಕೆಯ ನೀತಿ ರೀತಿಯ ಮೇಲ್ವಿಚಾರಣೆ ನಡೆಸಿದರೆ ಸಾಕು"

ಎಂದರು. "ಸಂಬಳವೆಷ್ಟು?" ಎನ್ನುವ ಪ್ರಶ್ನೆಯಾಯಿತು. "ನೀವು ಬಯಸಿದಷ್ಟು" ಎಂಬುದು ಅದಕ್ಕೆ ಉತ್ತರ. ಇದರಿಂದ ಜವಾಹರ ಲಾಲರು ಬರೆದ "ತಂದೆಯಂತೆ ನಾನೂ ಜೂಜಿನ ಗೀಳಿನವನು" ಎಂಬ ಮಾತು ಅರ್ಥವಾಗುವುದು.

ರಾಜಯೋಗ್ಯವಾದ ಬಿಂಕ; ರಾಜಯೋಗ್ಯವಾದ ಠೀವಿ. ಆದುದ ರಿಂದ ಮೋತಿಲಾಲರು ಬಂದು ಕುಳಿತರೆ ಆತನೇ ಅಧ್ಯಕ್ಷನಂತೆ ಇತರರಿಗೆ ಕಾಣುವುದು. ಕುಳಿತುಕೊಳ್ಳುವುದೂ ನಡೆಯುವುದೂ ಮಾತನಾಡು ವುದೂ ಎಲ್ಲವೂ ಘನಗಂಭೀರ. ಅವರ ಮೂರ್ತಿಯನ್ನು ಕಂಡವರು ಹಿಂದಿನ ರೋಮಕ ಚಕ್ರವರ್ತಿಗಳ ನಿಲುವು ಬಿಂಕಗಳನ್ನು ಸ್ಮರಿಸಿ ಕೊಳ್ಳುತ್ತಿದ್ದರು; ಇಟಲಿಯ ಜನರೇ ಆ ಹೋಲಿಕೆಯನ್ನು ಗುರುತಿಸಿ ದರು. ಯಾವ ಗವರ್ನರಾಗಲಿ ವೈಸರಾಯಿಯಾಗಲಿ ಮೋತಿಲಾಲರು ಅವರಿಗೆ ಸರಿಸಮಾನರಂತೆ ವರ್ತಿಸತಕ್ಕವರೇ ವಿನಾ ಕುಗ್ಗತಕ್ಕವರಲ್ಲ. ಆನಂದಭವನದಲ್ಲಿ ಅತಿಥಿಗಳಾಗಿ ಗವರ್ನರುಗಳೂ ರಾಜ ಮಹಾರಾಜರು ಗಳೂ ಹೊರಡುತ್ತಿದ್ದರು. ಪ್ರತಿಷ್ಠಾ ಮತ್ತನೆನಿಸಿದ್ದ ಲಾರ್ಡ್ ಕರ್ಸ್ಜನ್ ಗೋಖಲೆಯಂತಹವರ ಪ್ರತಿಭಟನೆಯನ್ನು ಕಾಣದೆ ಮೋತಿ ಲಾಲರ ಪ್ರತಿಭಟನೆಯನ್ನು ಕಂಡಿದ್ದರೆ ಸ್ವಾರಸ್ಯವಾಗಿರುತ್ತಿತ್ತೆನ್ನಿಸು ವುದು.

1926-27ರಲ್ಲಿ ಯೂರೋಪಿನಲ್ಲಿದ್ದಾಗ ಈ ಠೀವಿಗೊಂದು ನಿದ ರ್ಶನ. "ಲಂಡನ್ನಿನಿಂದೇನು ತರಬೇಕು ನಿನಗೆ?" ಎಂದು ಮೋತಿಲಾಲರು ಕೃಷ್ಣೆಯನ್ನು ಕೇಳಿದ್ದಕ್ಕೆ "ಒಂದು ಚಿಕ್ಕ ಚರ್ಮದಂಗಿಯನ್ನು ಆದರೆ ತನ್ನಿ" ಎಂದಿದ್ದಳು. ಇತರರೆಲ್ಲರೂ ಪ್ಯಾರಿಸ್ಸಿನಲ್ಲಿದ್ದರು. ಲಂಡನ್ನಿ ನಲ್ಲಿ ಮೋತಿಲಾಲರು ಸೆಲ್ಫ್‌ರಿಡ್ಜ್ (Selfridge's) ಎಂಬ ಭಾರಿ ಮಳಿಗೆಗೆ ಹೊರಟು ಅಂತಹ ಅಂಗಿಗಳಿವೆಯೋ ಎಂದು ಕೇಳಿದರು. ಇವೆ ಯೆಂದ ಮೇಲೆ "ನಿಮ್ಮ ಮ್ಯಾನೇಜರನ್ನು ನಾನು ಕಾಣಬೇಕು" ಎಂದರಂತೆ. ಆತನೂ ಬಂದನು. "ನಿಮ್ಮಲ್ಲಿ ಕೆಲಸಮಾಡುತ್ತಿರುವ ಯುವತಿಯರಲ್ಲಿ ಸುಮಾರು ಇಪ್ಪತ್ತು ವಯಸ್ಸಿನವರೆಷ್ಟು ಮಂದಿ ಇದ್ದಾ ರೆಯೋ ಅವರೆಲ್ಲರನ್ನೂ ಕರೆಸಿ ಸಾಲಾಗಿ ನಿಲ್ಲಿಸಿ. ನನ್ನ ಮಗಳಿಗೆ

ಸರಿಯಾಗುವ ಅಂಗಿಯಳತೆ ಯಾವುದೆಂದು ಸುಮಾರಾಗಿಯಾದರೂ ಗೊತ್ತುಮಾಡಬಹುದು" ಎಂದರು ಮೋತಿಲಾಲರು. ಕಿರೀಟಧಾರಿಗಳು ಕೂಡ ಈ ರೀತಿ ಬಯಸಲು ಅದು ಸ್ಥಳವಲ್ಲ. ಆದರೂ ಆ ಮ್ಯಾನೇಜರ್ ಮೋತಿಲಾಲರನ್ನು ಮೆಚ್ಚಿಸುವ ಮನಸ್ಸು ಮಾಡಿ ಹಾಗೆಯೆ ಯುವತಿಯರನ್ನು ನಿಲ್ಲಿಸಿದನು. ಕೃಷ್ಣೆಯ ಗಾತ್ರವುಳ್ಳವಳನ್ನಾರಿಸಿ ಆಕೆಗೊಪ್ಪುವ ಅಂಗಿಯನ್ನು ಕೊಂಡು ತೆಗೆದುಕೊಂಡು ಮೋತಿಲಾಲರು ಮಗಳಿಗೆ ತಂದುಕೊಟ್ಟರು. ನಡೆದುದನ್ನು ವಿವರಿಸಿದರು. ಇತರರಿಗೆ ವಿನೋದವಾಗಿತ್ತು; ಜವಾಹರಲಾಲರಿಗೆ ಮಾತ್ರ ಕೋಪ ಬಂತು. ತಂದೆಯವರ ವರ್ತನೆಯನ್ನು ಔದ್ಧತ್ಯವೆನ್ನುತ್ತ ಆಗ್ರಹದಿಂದ ಖಂಡಿಸಿದರು. ತಂದೆಯ ರೀತಿಗೂ ಮಗನ ರೀತಿಗೂ ವ್ಯತ್ಯಾಸವನ್ನು ತೋರಿಸಿ ಕೊಡುವ ಸಂದರ್ಭವಾಯಿತು.

ಗಾಂಧೀಯುಗಕ್ಕೆ ಹಿಂದಿನ ಕಾಲದಲ್ಲಿ ಮೋತಿಲಾಲರ ವೇಷಭೂಷಣಗಳೆಲ್ಲ ಐರೋಪ್ಯರಂತೆಯೇ. ಮಹಾತ್ಮಾಜಿಯ ಪ್ರಭಾವ ತಗುಲಿದ ಮೇಲೆ ಆನಂದಭವನದಲ್ಲಿ ಪರದೇಶೀ ವಸ್ತ್ರಗಳನ್ನು ಹೊರಕ್ಕೆಸೆದು ಬೆಂಕಿಯಿಡಲು ಗುಡ್ಡೆಮಾಡಿದಾಗ ಚಿಕ್ಕದಾದ ಬೆಟ್ಟದಷ್ಟಾಗಿತ್ತಂತೆ. ಆ ತರುವಾಯವೋ ಮೋತಿಲಾಲರ ಠೀವಿ ಮೋತಿಲಾಲರದೇ. ನಖಶಿಖಪರ್ಯಂತ ಶುಭ್ರವಾದ ಬಿಳಿಯ ಉಡುಪು; ಬಿಳಿ ಟೋಪಿ, ಬಿಳಿಯ ಜುಬ್ಬ, ಬಿಳಿಯ ಧೋತ್ರ, ಬಿಳಿಯ ಮೋಜ, ಬಿಳಿಯ ಪಾದರಕ್ಷೆಗಳಲ್ಲದೆ ಬಿಳಿಯ ಉತ್ತರೀಯವನ್ನು ಬಲ ಕಂಕುಳಲ್ಲೆಳೆದು ಎಡ ಭುಜದ ಮೇಲೇರಿಸುವ ಬಿನ್ನಾಣ. ಕೆಂಪೇರಿ ತುಂಬಿದ ಮಾವಿನಹಣ್ಣಿನ ಬಣ್ಣದ ಮೈ. ಭಾಷಣಮಾಡಲು ವೇದಿಕೆಯನ್ನೇರಿದಾಗಲೂ ಅದೇ ಗಂಭೀರ. ಮೈಕೈ ಅಲುಗಾಡಿಸುವ ಚೇಷ್ಟೆಯಿಲ್ಲ; ಉದ್ರೇಕವನ್ನೋ ಉದ್ವೇಗವನ್ನೋ ದೃಷ್ಟಿ ಬೀರುವುದರಲ್ಲಿ ಅಥವಾ ಸ್ವರದಲ್ಲಿ ಕಾಣಬೇಕು. ಸಾಧಾರಣ ವೇಳೆಗಳಲ್ಲಿ ಮುಖದಿಂದ ಮಾತು ಹೊರಡುವುದು ಗಂಭೀರವಾಹಿನಿ ನದಿಯಂತೆ; ರೋಷಗೊಂಡಾಗ ಮಾತ್ರ ಗಾಂಭೀರ್ಯ ನಷ್ಟ ಮಾಡದ ಬಿರುಸು ಮಾತುಗಳು ವೇಗ ವೇಗವಾಗಿ ಸುರಿಮಳೆಯಂತೆ ಬೀರಿಕೊಂಡು ಹೊರಡುತ್ತಿದ್ದವು.

ಮೊದಲನೆಸಲ ದಸ್ತಗಿರಿ ವಿಚಾರಣೆಗಳು ನಡೆದುದು ವಾಲಂಟಿಯರ್ ಆದುದಕ್ಕಾಗಿ. ಕೋರ್ಟಿನಲ್ಲಿ ದಾಖಲೆಯಾಗಿದ್ದುದು ಮೋತಿಲಾಲರ ಸ್ವಹಸ್ತವಿದ್ದ ಅಪ್ಲಿಕೇಷನ್. ಅದಕ್ಕೆ ಹಿಂದೀ ರುಜುವಿತ್ತು. ಸಾಧಾರಣವಾಗಿ ಇಂಗ್ಲಿಷಿನಲ್ಲಿಯೇ ಇಡುತ್ತಿದ್ದುದರಿಂದ ಆತನ ಹಸ್ತಾಕ್ಷರ ಕಂಡಿದ್ದವರು ಅದನ್ನು ಗುರುತಿಸಲಾರದವರಾದರು. ಆ ಕಾರಣದಿಂದಲೋ ಎಂತೋ ಪೋಲೀಸ್ ಪಕ್ಷದವರು ಆ ಕೆಲಸಕ್ಕಾಗಿ ಯಾರನ್ನೋ ಹಿಡಿದಿದ್ದರು; ಆ ಗೆಳೆಯನು ಕಾಗದವನ್ನು ತಲೆ ಕೆಳಕಾಗಿ ಹಿಡಿದು ಮೋತಿಲಾಲರ ಸ್ವಹಸ್ತವೆಂದು ಪ್ರಮಾಣ ಮಾಡಿಯೇ ಬಿಟ್ಟನು. ವಾಸ್ತವವಾಗಿ ಅವನು ನಿರಕ್ಷರಕುಕ್ಷಿ! ಆ ಗೆಳೆಯನಂತಹವನೇ ಮತ್ತೊಬ್ಬನು ತನ್ನ ಮಗನ ಸಂಪಾದನೆ ಕೆಡಿಸಲು ಮೋತಿಲಾಲರು ಸ್ವರಾಜ್ ಚಳುವಳಿಯಲ್ಲಿ ತೊಡಗಿದ್ದರೆಂದು ಫಿರ್ಯಾದ್‌ಕೊಟ್ಟು ಒಂದು ರೂಪಾಯಿ ಪರಿಹಾರದ್ರವ್ಯಕ್ಕಾಗಿ ಕೇಸ್ ನಡೆಸಲು ಸಿದ್ಧನಾಗಿದ್ದನು!

ವಕೀಲಿ ಬಿಟ್ಟುಕೊಟ್ಟ ಬಳಿಕ ಹಿಂದಿನ ಕಕ್ಷಿಗಾರರೆಷ್ಟೋ ಮುಂದಿಬಂದು ತಮ್ಮ ಕೇಸನ್ನು ಹಿಡಿಯುವಂತೆ ಉಪಾಯ ಮಾಡುತ್ತಿದ್ದರು. ಒಂದು ಸಂದರ್ಭದಲ್ಲಿ ಕಕ್ಷಿಗಾರನೊಬ್ಬಾತನು ಒಂದು ಲಕ್ಷ ರೂಪಾಯಿಗಳನ್ನೆದುರಿನಲ್ಲಿಟ್ಟು ಬೇಡಿದನು. ತಿರಸ್ಕಾರಪೂರ್ವಕವಾಗಿ ಅದನ್ನು ಕಾಣುತ್ತ ಮೋತಿಲಾಲರು ಪಕ್ಕದಲ್ಲಿ ನಿಂತಿದ್ದ ಕೃಷ್ಣೆಯನ್ನು ಕೇಳಿದರು "ನೀನೇನು ಹೇಳುವಿ, ಬೇಟೀ? ಈ ಕೇಸನ್ನು ತೆಗೆದುಕೊಳ್ಳುವುದು ನ್ಯಾಯವೇ ನನಗೆ?" "ಇಲ್ಲ ಅಪ್ಪಾಜಿ, ನ್ಯಾಯವೆಂದು ಕಾಣುವುದಿಲ್ಲ" ಎಂಬ ಉತ್ತರ ಬಂತು. ಕೂಡಲೆ ಮೋತಿಲಾಲರು ಕಕ್ಷಿಗಾರನೊಡನೆ "ಮನ್ನಿಸಿ ಕೊಡಿ. ನನ್ನ ಪುಟ್ಟಮಗಳು ಕೂಡ ಆಕ್ಷೇಪಿಸುವುದನ್ನು ಕಂಡಿರೋ ಇಲ್ಲವೋ!" ಎಂದುಬಿಟ್ಟರು. ಕಕ್ಷಿಗಾರನನ್ನು ತಪ್ಪಿಸಿಕೊಳ್ಳುವುದಕ್ಕೆ ಮಾತ್ರವೇ ಅಲ್ಲ; ಮಗಳ ಮನಸ್ಸನ್ನು ಪರೀಕ್ಷೆಮಾಡಿಕೊಳ್ಳುವ ಉದ್ದೇಶವೂ ಇತ್ತು. ತನ್ನ ಮಗಳು ಧೀರೆಯಾಗಿರಬೇಕೆಂಬ ಆಕಾಂಕ್ಷೆ.

ಕೋರ್ಟುಗಳಲ್ಲಿ ಮೋತಿಲಾಲರ ಧೋರಣೆಯೆಷ್ಟಿತ್ತೋ ನ್ಯಾಯಶಾಸ್ತ್ರ ವಿಧಿಕೋಶಗಳಲ್ಲಿ ಪಾಂಡಿತ್ಯವೂ ಅಷ್ಟೇ ಇತ್ತು. ಎಂತಹ ಜಡ್ಜಿ

ಗಾದರೂ ಆ ಪಾಂಡಿತ್ಯ ಕಂಡು ಅಮಿತವಾದ ಗೌರವ. ಮನೆಯಲ್ಲಿ ವಕೀಲಿ ಸಂಬಂಧವಾದ ಪುಸ್ತಕಭಂಡಾರ ಅಮೂಲ್ಯವಾಗಿದ್ದುದೇನು ಹೆಚ್ಚಲ್ಲ. ಹೆಚ್ಚೆನಿಸಿದ್ದುದು ಮೋತಿಲಾಲರು ಶೇಖರಿಸಿಟ್ಟುಕೊಂಡಿದ್ದ ಹೋಮಿಯೋಪಥಿ ಗ್ರಂಥಗಳು. ಚೈತನ್ಯಕ್ಕೆ ವಕೀಲೀ, ಪತ್ರಿಕೆ, ರಾಜಕೀಯೋದ್ಯಮಗಳುಸಾಲದೆ 'ಬಿಡುವಿನ ಕಾಲಕ್ಕೆ' ಎಂದು ಆ ಗ್ರಂಥಗಳ ಪರಿಶೀಲನವಾಗಬೇಕಾಗಿತ್ತು.

ಮೊದಲನೆ ಸತ್ಯಾಗ್ರಹ ಪ್ರಕರಣ ಕಳೆದ ಬಳಿಕ ಮೋತಿಲಾಲರು ಯಾವ ಕಾರಣದಿಂದಲೋ ಮೀಸೆ ತೆಗೆಸಿದರು. ಮೀಸೆ ಕಾಣದ ಫ್ಹೋಟೊಗಳು ಅಲ್ಲಲ್ಲಿ ಕಂಡವು. ಹೊಸ ಫ್ಹೋಟೊಗಳನ್ನು ಕಂಡು ದಿಲ್ಲಿಯ ಒಂದಾನೊಂದು ಮಹಿಳಾ ಸಭೆಯವರು ಮೋತಿಲಾಲರು ಮೀಸೆ ತೆಗೆಸಿದುದರಿಂದ ಅಲಂಕಾರ ನಷ್ಟವಾಯಿತೆಂದು ಮಾತನಾಡಿ ಅದನ್ನು ಮೋತಿಲಾಲರಿಗೇ ತಿಳಿಸಿದರು. ಆ ಮಹಿಳೆಯರ ಯಜಮಾನರುಗಳು ಇದನ್ನು ತಿಳಿದು ತಮ್ಮ ತಮ್ಮ ಪತ್ನಿಯರನ್ನು ದೂಷಿಸಿದರಂತೆ. ಚಿಲ್ಲರೆ ವಿನೋದವೆಂದು ಕಾಣುವ ಸಂಗತಿಯಾದರೂ ಗಂಭೀರಾಕೃತಿಗೂ ಅಟ್ಟಹಾಸಕ್ಕೂ ಮೋತಿಲಾಲರು ಪ್ರಸಿದ್ಧರಾಗಿದ್ದುದನ್ನು ತಿಳಿಸುವ ಅಂಶ.

ಈ ಬಗೆಯ ರಾಜಾರೋಷಮೂರ್ತಿಯಾದ ಮೋತಿಲಾಲರಿಗೂ ಯತಿಪುರುಷರಲ್ಲಿಯೂ ಅತಿದೀನರೆನಿಸುವ ಗಾಂಧೀಜಿಗೂ 1920ರಲ್ಲಿ ಜೊತೆಯಾದುದು ಪರಮಾಶ್ಚರ್ಯವೆನಿಸದೆ ಮತ್ತೇನು? ಆದರೆ ಅಷ್ಟು ಆಶ್ಚರ್ಯಪಡಲು ಕಾರಣವಿಲ್ಲ. ಮೂಲತಃ ಮೋತಿಲಾಲರು ಹೆಮ್ಮೆ ತುಂಬಿದ ದೇಶಭಕ್ತರು. ದೇಶೋದ್ಧಾರವನ್ನು ಸಾಧಿಸುತ್ತಿದ್ದ ಗಾಂಧೀಜಿಯಲ್ಲಿ ಆತನಿಗೆ ಪೂಜ್ಯಭಾವ ಸಹಜವಾಗಿಯೇ ಇದ್ದಿತು. ಗಾಂಧೀಜಿ ತೋರಿಕೊಟ್ಟ ಮಾರ್ಗಗಳೆಲ್ಲವನ್ನೂ ಮೋತಿಲಾಲರೊಪ್ಪದೆ ಕೆಲಕಾಲವಿದ್ದುದು ನಿಜ. ತಾವೇ ಅಗ್ರಸ್ಥಾನದಲ್ಲಿ ನಿಂತು ಹೋರಾಟ ನಡೆಸುವ ಇಷ್ಟ ಮೋತಿಲಾಲರಿಗೆ ಬಲವಾಗಿತ್ತು; ವಾದವಲ್ಲಿ ಯಾರನ್ನಾದರೂ ಬಲಿಹಾಕುವ ಧೈರ್ಯವಿತ್ತು. ಆದುದರಿಂದ ಸ್ವರಾಜ್ ಪಕ್ಷವನ್ನು ಕಟ್ಟಿ ಸರ್ಕಾರದವರೊಡನೆ ಹಣಾಹಣಿ ನಡೆಸಿದ್ದರು ಆಗಿನ ಶಾಸನ ಸಭೆ

ಯಲ್ಲಿ; 1928 ವೇಳೆಗೆ ಆ ಮಾರ್ಗವನ್ನನುಸರಿಸುವುದು ವ್ಯರ್ಥಪ್ರಯಾಸವೆಂದು ಸ್ಪಷ್ಟವಾಯಿತು. ಜವಾಹರಲಾಲರು ವಿಸ್ತರಿಸುತ್ತಿದ್ದ ಸರ್ವಸ್ವಾತಂತ್ರ್ಯಲಕ್ಷ್ಯದ ವಿವರವೂ ಮನಸ್ಸಿಗೊಪ್ಪಿತು. ಆದುದರಿಂದ ಲಾಹೋರ್ ಕಾಂಗ್ರೆಸ್ ಸಭೆಯಲ್ಲಿ ಮೋತಿಲಾಲರು ತಮ್ಮ ಮಗನ ಅಧೀನನಾಗಿದ್ದು ಶ್ರಮಿಸಲು ಹೆಮ್ಮೆಯಿಂದಲೇ ಸಿದ್ಧರಾದರು. ಆರೋಗ್ಯದ ದಾರ್ಢ್ಯ ಮಾತ್ರ ಇರಲಿಲ್ಲ.

*

# IV

## 1. ರಾಷ್ಟ್ರಪತಿ ಜವಾಹರಲಾಲ್‌ಜಿ

ಡಿಸೆಂಬರ್ ತಿಂಗಳಲ್ಲಿ ಲಾಹೋರ್ ಕಾಂಗ್ರೆಸ್. ಜವಾಹರ ಲಾಲರಿಗೆ ಅಲ್ಲಿಯ ಜನರು ಅದ್ಭುತವೆನಿಸುವ ಸ್ವಾಗತವನ್ನು ನೀಡಿ ಹೆಮ್ಮೆಯಿಂದ ಬರಮಾಡಿಕೊಂಡರು. ದೇಶದ ನಾನಾ ಭಾಗಗಳಿಂದ ಪ್ರತಿನಿಧಿಗಳೂ ಯಾತ್ರಾರ್ಥಿಗಳೂ ಕಾಂಗ್ರೆಸ್ ಶಿಬಿರದಲ್ಲಿ ಓಡಾಡುತ್ತಿದ್ದರು; ಅವರ ಮಧ್ಯೆ ಕಾಣುತ್ತಿದ್ದ ಸರಹದ್ದಿನ ಪ್ರಾಂತದ ಪಠಾನರು ನೋಟವನ್ನು ಸೆಳೆಯುತ್ತಿದ್ದರು. ಅಧ್ಯಕ್ಷಭಾಷಣ ಗಂಭೀರವೆನ್ನಿಸಿತು. ತರುವಾಯ ಯಥಾಕ್ರಮವಾಗಿ ಭಾಷಣಗಳು, ಸಂಕಲ್ಪಗಳು, ನಿರ್ಣಯ ಗಳು. ಮುಖ್ಯವಾಗಿ ಬ್ರಿಟಿಷರ ಸರ್ಕಾರಕ್ಕೆ ಕೊಟ್ಟಿದ್ದ ವರ್ಷದ ಅವಧಿ ಕಳೆಯುತ್ತ ಬಂದಾಗ್ಗೂ ಲೆಕ್ಕಕ್ಕೆ ಬರತಕ್ಕುದಾಗಿ ಯಾವ ಅಧಿಕಾರ ವನ್ನೂ ಅವರು ಬಿಟ್ಟುಕೊಟ್ಟಿರಲಿಲ್ಲ. ಆದುದರಿಂದ ಕಾಂಗ್ರೆಸ್ಸಿನ ಗುರಿ ಪೂರ್ಣ ಸ್ವಾತಂತ್ರ್ಯ ಅಥವಾ ಪೂರ್ಣ ಸ್ವರಾಜ್ಯವಾಗಿರತಕ್ಕುದೆಂದೂ ಆ ಗುರಿಯನ್ನು ಸಾಧಿಸಲು ತಕ್ಕ ಕರ್ತವ್ಯಕ್ರಮವನ್ನು ಮುಂದಿಟ್ಟು ಕೊಳ್ಳಬೇಕೆಂದೂ ನಿರ್ಣಯವಾಯಿತು. ಗಾಂಧೀಜಿಯವರು ಸಭೆ ಮುಂದಿಟ್ಟ ಆ ನಿರ್ಣಯಕ್ಕೆ ವಿರೋಧಿಗಳೇ ಇಲ್ಲವಾಯಿತು.

1930ನೆ ವರ್ಷ ಮೊದಲಾಗುವ ಕ್ಷಣಕ್ಕೆ ಹಿಂದಿನ ಕ್ಷಣವೇ (ಡಿಸೆಂಬರ್ 31ನೆ ರಾತ್ರಿ 12 ಗಂಟೆ) ದೃಢಸಂಕಲ್ಪ ರೂಪಗೊಂಡುದು. ಅನೇಕರು ಅದನ್ನು ಶುಭಸೂಚಕವೆಂದು ಭಾವಿಸಿದ್ದರು. ಕಾಂಗ್ರೆಸ್ ಮಹಾಸಭೆ ಮುಗಿದ ಕೂಡಲೆ ವರ್ಕಿಂಗ್ ಕಮಿಟಿ ಕೂಡಿತು. ಮೊದ ಲನೆ ಹೆಜ್ಜೆಯಾಗಿ ಶಾಸನ ಸಭೆಗಳ ಸದಸ್ಯರು ರಾಜಿನಾಮೆ ಕೊಡತಕ್ಕ ದ್ದೆಂದು ಗೊತ್ತಾಯಿತು. ಮೊದಲು 27 ಮಂದಿ ಸದಸ್ಯರು ರಾಜಿನಾಮೆ ಕೊಟ್ಟರು. ಜನವರಿ 26ನೆ ತಾರೀಖಿನ ದಿನ ಸ್ವಾತಂತ್ರ್ಯ ದಿನಾಚರಣೆ ಮಾಡಬೇಕೆಂಬ ನಿರ್ಣಯವೂ ಹುಟ್ಟಿತ್ತು; ಅದಕ್ಕನುಸಾರವಾಗಿ ದೇಶ ದಲ್ಲೆಲ್ಲೆಲ್ಲಿಯೂ ಧ್ವಜವಂದನೆಯ ಕ್ರಮಗಳು ನಡೆದವು. ಫೆಬ್ರುವರಿ ವೇಳೆಗೆ 172 ಮಂದಿ ಶಾಸನ ಸಭಾಸದಸ್ಯರುಗಳು ರಾಜಿನಾಮೆಗಳನ್ನು

ಬರೆದೆಸೆದಿದ್ದರು. ಗಾಂಧೀಜಿಯುವರು ಮತ್ತೊಮ್ಮೆ ದಳಪತಿಸ್ಥಾನದಲ್ಲಿ ನಿಂತು ಗುರಿಯನ್ನು ಸಾಧಿಸುವ ಉಪಾಯಗಳನ್ನೂ ಮಾರ್ಗಗಳನ್ನೂ ವಿವರಿಸಿಕೊಡತಕ್ಕವರಾದರು. ಫೆಬ್ರುವರಿ ತಿಂಗಳಲ್ಲಿ ಸಾಬರ್ಮತಿಯಲ್ಲಿ ವರ್ಕಿಂಗ್ ಕಮಿಟಿ ಸೇರಿತು; ವಿಧಿಗಳನ್ನೂ ನಿಬಂಧನೆಗಳನ್ನೂ ಕ್ರಮವಾಗಿ ಮುರಿಯುವ ಕರ್ತವ್ಯಕ್ರಮವನ್ನು ಸೂಚಿಸಿಕೊಡುತ್ತ ಗಾಂಧೀಜಿಯುವರು 'ಉಪ್ಪಿನ ಸತ್ಯಾಗ್ರಹ'ವೇ ಮೊದಲನೇ ಹೆಜ್ಜೆ ಯೆಂದು ತಿಳಿಸಿದರು.

ಲಾಹೋರ್ ಕಾಂಗ್ರೆಸ್ ಮುಗಿಸಿಕೊಂಡು ಪ್ರಯಾಗಕ್ಕೆ ಹಿಂತಿರುಗುವವೇಳೆಗೆ ಆ ಕ್ಷೇತ್ರದಲ್ಲಿ ಮಾಘಮೇಳ. ಲಕ್ಷಾಂತರ ಜನರು ಹೊರಗಿನಿಂದ ಬಂದಿದ್ದು ಗುಂಪುಗುಂಪಾಗಿ ಸೇರಿಕೊಂಡು ಓಡಾಡುತ್ತಲಿದ್ದರು. ರೈತರು, ಕೂಲಿಗಾರರು, ವ್ಯಾಪಾರಿಗಳು, ಬಡವರು, ಧನಿಕರು—ನಾನಾ ವರ್ಗದವರು ಸಮೂಹಸಮೂಹವಾಗಿ ಕಾಣುತ್ತಿದ್ದರು. ಜವಾಹರಲಾಲರು ಆ ಜನಸ್ತೋಮವನ್ನು ಕಂಡು ಮನಸ್ಸಿನಲ್ಲಿ ತಾವೇ ವಿಸ್ಮಯಗೊಂಡರು. "ಅನಂತವಾಗಿ ಕಾಣುವ ಈ ಜನರು ಕಾಂಗ್ರೆಸ್ಸಿನವರಿಡುವ ಕರ್ತವ್ಯಕ್ರಮವನ್ನು ಹೇಗೆ ಭಾವಿಸಿಯಾರೋ! ಅವರಲ್ಲೆಷ್ಟುಭಾಗಕ್ಕೆ ಲಾಹೋರ್ ನಿರ್ಣಯಗಳಲ್ಲಿ ಆಸಕ್ತಿಯಿರಬಹುದು? ಸಾವಿರಾರು ವರ್ಷಗಳಿಂದ ಈ ಕ್ಷೇತ್ರದಲ್ಲಿ ಗಂಗಾಸ್ನಾನಕ್ಕೆಂದು ವರ್ಷೇ ವರ್ಷೇ ಜನರನ್ನೆಳೆದುತರುವ ಭಕ್ತಿಯ ಬಲ್ಮೆಯೆಷ್ಟು! ಆ ಭಕ್ತಿಯ ಬಲವೇ ರಾಜಕೀಯೋದ್ಯಮದಲ್ಲಿ ಪ್ರಯೋಗವಾಗುವುದಾದರೆ ಎಷ್ಟು ಸುಲಭಸಾಧ್ಯವಾದೀತು! ಈ ಜನರಲ್ಲೆಷ್ಟುಮಾತ್ರ ರಾಜಕೀಯಾರ್ಥಿಕಗಳಲ್ಲಿ ಪರಿಜ್ಞಾನ? ಎಷ್ಟುಮಾತ್ರ ಸ್ಥೈರಣೆ, ಎಷ್ಟು ಮಾತ್ರ ಶಿಸ್ತಿ?" ಎಂದು ಯೋಚಿಸುವಂತಾಯಿತು.

ಅನಂದಭವನದ ಸಮೀಪವೇ ಭರದ್ವಾಜ ಕ್ಷೇತ್ರ. ಪರಮ ಪವಿತ್ರವೆನಿಸಿದ ಕ್ಷೇತ್ರಗಳಲ್ಲಿ ಅದೂ ಒಂದು. ಆದುದರಿಂದ ನೆಹರು ವಾಸಗೃಹದ ಬಳಿಯಲ್ಲಿಯೇ ಸಾವಿರಾರು ಯಾತ್ರಿಕ ತಂಡಗಳ ಸುಳಿದಾಟ. ಸುಳಿದಾಡಿದವರಿಗೆಲ್ಲರಿಗೂ ನೆಹರು ಮನೆತನದವರನ್ನು ದೂರದಿಂದಲಾದರೂ ಕಾಣುವ ಕುತೂಹಲ. ಅನೇಕರಿಗೆ ರಾಜಕೀಯ

ಸುದ್ದಿಗಳಲ್ಲಿ ಆಸಕ್ತಿ; ಅಂತಹವರು ಆಗಾಗ್ಗೆ ಬಂದು ಆ ಪ್ರಶ್ನೆ ಈ ಪ್ರಶ್ನೆಗಳನ್ನು ಕೇಳಲಾರಂಭ. ಜವಾಹರಲಾಲರು ಬೆಳಿಗ್ಗೆಯಾದಕೂಡಲೆ ಕಾದಿದ್ದವರನ್ನು ಕಂಡು ಕೇಳಿದ ಪ್ರಶ್ನೆಗಳಿಗೆ ಸಮಾಧಾನಕೊಡಲು ತೊಡಗಿದರು.

"ಐವತ್ತೋ ನೂರೋ ಕೂಡಿ ಒಂದರಹಿಂದೆ ಮತ್ತೊಂದಾಗಿ ಬರುತ್ತಿದ್ದ ಗುಂಪುಗಳೊಡನೆ ಹಲಕೆಲವು ಮಾತುಗಳನ್ನಾಡಿ ಕೊಟ್ಟು ಕಳುಹಿಸಲು ಯತ್ನಿಸಿದೆ. ಮಾತನಾಡಿಸಿ ಕಳುಹಿಸುವುದು ಸ್ವಲ್ಪಕಾಲದಲ್ಲಿಯೇ ಅಸಾಧ್ಯವಾಯಿತು. ಬಂದುನಿಂತ ಗುಂಪಿನೆದುರಿಗೆ ನಾನೂ ಕ್ಷಣಕಾಲ ನಿಂತು ಮೌನದಿಂದಲೇ ನಮಸ್ಕಾರವಿಟ್ಟು ಕಳುಹಿಸಲು ತೊಡಗಿದೆ. ಅದೂ ಕಷ್ಟವಾಯಿತು. ಎಲ್ಲ ದಿಕ್ಕುಗಳಿಂದಲೂ ನಿರಂತರವಾಗಿ ಕೇಳಿಬರುವ ಜಯಕಾರ ಧ್ವನಿಗಳು ಕಿವಿ ಕಿವುಡಾಗುವಂತಿದ್ದರೆ ಮನೆಯ ವರಾಂಡಗಳ ತುಂಬ ತುಂಬಿಕೊಂಡು ಸುಳಿದಾಡುವ ಹೊಸ ಹೊಸ ಗುಂಪುಗಳೇ ಕಣ್ಣಿಗೆ ಕಾಣುತ್ತಿದ್ದವು. ಬಾಗಿಲಿದ್ದೆಡೆ ನಿಂತು ಒಳಕ್ಕೆ ನೋಡುವವರ ಗುಂಪು; ಕಿಟಕಿಯಿದ್ದೆಡೆ ಹೇಗಾದರೂ ಇಣಿಕಿ ಕಂಡಷ್ಟನ್ನು ಕಾಣಲು ಕಾದಿರುವ ಇನ್ನೊಂದು ಗುಂಪು. ಮನೆಯೊಳಗಿದ್ದ ನಮ್ಮ ಮೇಲೆ ಎಲ್ಲ ದಿಕ್ಕುಗಳಿಂದಲೂ ಜನರ ನಟ್ಟನೋಟ, ಅವಿಚಲಿತ ದೃಷ್ಟಿ. ಯಾವ ಕಂಡಿಯಲ್ಲಿ ಕಂಡರೂ ಜನಗಳ ಕಣ್ಣುಗಳೇ ನಮಗೆ ಕಾಣುವಂತಾದುದು ಹಿಂಸೆಯಾಯಿತು. ನಾವು ಮಾತನಾಡಿಕೊಳ್ಳುವುದಕ್ಕೂ ನಿತ್ಯ ಕೆಲಸಗಳನ್ನು ನಡೆಸಿಕೊಳ್ಳುವುದಕ್ಕೂ ಊಟ ಮಾಡಿಕೊಳ್ಳುವುದಕ್ಕೂ ಸ್ವಸ್ಥತೆಯಿಲ್ಲದಾಯಿತು. ಇದೆಂತಹ ವಿಚಿತ್ರ ಶಿಕ್ಷೆಯಾಯಿತು ನಮಗೆ! ಆದರೆ ಪ್ರೀತಿ ಕೊಟ್ಟ ಕಾಂತಿಯಿಂದ ಹೊಳೆವ ಕಣ್ಣುಗಳಿಂದ ನಮ್ಮನ್ನು ದೂರದಿಂದಲೇ ನೋಡಿ ತೃಪ್ತಿಗೊಂಬ ಆ ಜನರನ್ನು ಗದರಿಸಲು ಸಾಧ್ಯವೇ? ತಲೆತಲಾಂತರವಾಗಿ ಘೋರ ದಾರಿದ್ರ್ಯ ದುಃಖಗಳನ್ನು ಅನುಭವಿಸುತ್ತಿದ್ದು ಒಂದೆರಡು ಮೃದುವಚನಗಳನ್ನು ಮಾತ್ರ ಆಶಿಸಿ ಸಂತೋಷಗೊಂಡ ಆ ಜನರ ಭಕ್ತಿಯನ್ನೂ ಪ್ರೇಮವನ್ನೂ ನೆನಸಿದಕೂಡಲೆ 'ನಾವೆಷ್ಟು ಸಣ್ಣವರೀಲೋಕದಲ್ಲಿ' ಎನಿಸುತಿತ್ತು."

"ಏತಕ್ಕಿಷ್ಟು ವಿಶ್ವಾಸ ಜನರಿಗೆ ನನ್ನಲ್ಲಿ? ಮೇಧಾವಿಯೆಂದಲ್ಲ; ನಾನಷ್ಟು ಪ್ರಚಂಡ ಮೇಧಾವಿಯಲ್ಲ, ಮೇಧಾವಿಗಳನ್ನು ಸಾಮಾನ್ಯ ಜನ ಮೆಚ್ಚುವುದೂ ಇಲ್ಲ. ನಮ್ಮ ತ್ಯಾಗಕ್ಕಾಗಿಯೆ? ಇರಲಾರದು. ಏಕಂದರೆ ನಮಗಿಂತಲೂ ಹೆಚ್ಚು ತ್ಯಾಗಮಾಡಿದ ಲಕ್ಷಾಂತರ ಜನ ದೇಶದಲ್ಲೆಲ್ಲೆಲ್ಲಿಯೂ ಇರುವರು. ನನ್ನನ್ನು ವೀರನೆಂದು ಇವರು ಭಾವಿಸಿರುವುದು ನಿಜವಾದರೂ ನಾನು ವೀರ

ನೆಂಬುದು ಬರಿಯ ಮೋಸ. ನಾನು ವೀರನೆಂದು ನನಗೆನ್ನಿಸುವುದಿಲ್ಲ. ಬೇರೆ ಕಾರಣವಿರಬಹುದೆ? ಅಲ್ಲವೆಂದು ಬಾರಿ ಬಾರಿ ಹೇಳಿದಾಗ್ಗೂ ಹಬ್ಬಿಕೊಳ್ಳುತ್ತಿರುವ ಸುಳ್ಳು ವೃತ್ತಾಂತಗಳಿಂದ ಜನರು ಮುಗ್ಧರಾಗಿರಬಹುದೇ? ನಮ್ಮ ಬಟ್ಟೆಗಳನ್ನು ವಾರವಾರಕ್ಕೂ ಪ್ಯಾರಿಸ್ಸಿನ ಅಗಸರಿಂದ ಚಲುವೆ ಮಾಡಿಸುತ್ತಿದ್ದೆವೆಂಬುದೊಂದು ಅಂತಹ ಪೊಳ್ಳು ಕಥೆ. ನಾನು ಬ್ರಿಟಿಷ್ ಯುವರಾಜರೊಂದಿಗೆ ಶಾಲೆಯಲ್ಲಿದ್ದೆನೆಂಬುದಿನ್ನೊಂದು ಪೊಳ್ಳು ಕಥೆ. ಎರಡೂ ಶುದ್ಧ ಸುಳ್ಳು! ಜನರು ನಮ್ಮಲ್ಲಿ ತೋರುವ ವಿಶ್ವಾಸಕ್ಕೆ ಇಂತಹ ವೃತ್ತಾಂತಗಳು ಮಾತ್ರವೇ ಆಧಾರವಾಗಿರಲಾರವು. ಸಮಸ್ಯೆಯೇನೋ ತೃಪ್ತಿಕರವಾಗಿ ಪರಿಹಾರವಾಗಲಿಲ್ಲ. ನನ್ನ ಮನಸ್ಸಿನಲ್ಲಿಯೇ ಬೇರೆ ಬೇರೆ ಆಶೋತ್ತರಗಳಿಗೂ ಶ್ರದ್ಧಾಭಕ್ತಿಗಳಿಗೂ ರಣರಂಗವೊಂದು ನಿರ್ಮಿತವಾದಂತೆ ಪರಿಣಮಿಸಿತು. ಅಂತರಂಗದಲ್ಲಡಗಿದ್ದ ಅವ್ಯಕ್ತವಾದ ಯಾವುದೋ ಆಸೆ ತೃಪ್ತಿಗೊಳ್ಳದೆ ಸಮಾಧಾನವಿಲ್ಲವಾಯಿತು. ಕಾರ್ಯೋನ್ಮುಖನಾಗಿ ಕೆಲಸದಲ್ಲಿ ಮುಳುಗಿದಾಗ ಈ ಅಂತರಂಗದ ಅಸಮಾಧಾನ ಅಡಗಿರುತ್ತಿತ್ತು. ಆದುದರಿಂದ ಕೆಲಸವನ್ನು ಅಟ್ಟಿಕೊಂಡು ಹೊರಟೆ."

ಇದೇ ರೀತಿಯಲ್ಲಿ ಆತ್ಮಪರೀಕ್ಷೆಯನ್ನು ಮಾಡಿಕೊಂಡ ವಿವರವನ್ನು ಬರೆಯುತ್ತ ಜವಾಹರಲಾಲರು ಎತ್ತಿಹೇಳುವ ಇನ್ನೂ ಕೆಲವಂಶಗಳು ಸ್ವಾರಸ್ಯ ತುಂಬಿರುವುದಲ್ಲದೆ ಆತನ ಮನೋಧರ್ಮವನ್ನು ಪ್ರಕಾಶಪಡಿಸುತ್ತವೆ.

"ನನ್ನ ಬುದ್ಧಿ ಕೆಡದಂತೆ ನೆರವೇರುವುದರಲ್ಲಿ ನನ್ನಾಪ್ತಬಂಧುಗಳೂ ಮಿತ್ರರೂ ಉಪಕಾರಗೈದರು. ಸಾರ್ವಜನಿಕ ಸಭೆಗಳು, ಬಿನ್ನವತ್ತಳೆಗಳು, ಮೆರವಣಿಗೆಗಳು, ಬಿರುದಾವಳಿಗಳು ಮುಂತಾದುವೆಲ್ಲವೂ ನನ್ನ ತಾಳ್ಮೆಯ ಬಲಕ್ಕೆ ಪರೀಕ್ಷೆಗಳಂತಿದ್ದವು. ಆ ಅತಿಶಯೋಕ್ತಿಗಳನ್ನು ಕೇಳುತ್ತ ಸುತ್ತ ನೆರೆದಿದ್ದವರ ಗಂಭೀರ ಮುಖಮುದ್ರೆಗಳನ್ನು ಕಂಡಾಗ ವೇದಿಕೆಯ ಮೇಲಿದ್ದ ಹಾಗೆಯೇ ಲಾಗಹಾಕಿಯೋ ಅಣಕಿಸಿಯೋ ಯಾವುದಾದರೂ ಕೋತಿಚೇಷ್ಟೆ ಮಾಡಿ ಆ ಗಂಭೀರವನ್ನು ಕೆಡಿಸುವ ಚಾಪಲ್ಯ ಬಲವಾಗಿ ಮೂಡುತ್ತಿತ್ತು. ಇಂತಹ ಚಾಪಲ್ಯಗಳನ್ನು ಸಾಧಾರಣವಾಗಿ ಅಡಗಿಸಿಕೊಳ್ಳುತ್ತಿದ್ದೆ. ಆದರೂ ಕೃತ್ರಿಮವೆನಿಸಿದ ಆ ಬಿಂಕವನ್ನು ಸಹಿಸಲಾರದೆ ಇದ್ದಕ್ಕಿದ್ದಹಾಗೆಯೆ ಮೆರವಣಿಗೆಯ ಮಧ್ಯದಲ್ಲಿ ತಪ್ಪಿಸಿಕೊಂಡು ಪತ್ತೆಯಿಲ್ಲದೆ ಗುಂಪಿನಲ್ಲಿ ಸೇರಿಕೊಳ್ಳುತ್ತಿದ್ದೆ.

ನನ್ನ ಮೇಲೆ ಸಭೆಗಳಲ್ಲಿ ವೃಷ್ಟಿಗರೆದ ಬಿರುದಾವಳಿಗಳನ್ನೆತ್ತಿಕೊಂಡು ಮನೆಯಲ್ಲಿ ಕಮಲೆಯೊಡನೆ ತಂಗಿಯರೂ ಇತರರೂ ಸೇರಿ ಗಂಭೀರವನ್ನು ನಟಿ

ಸುತ್ತ ವಿನೋದ ಮಾಡುತ್ತಿದ್ದುದು ನನ್ನ ಬುದ್ಧಿ ಸ್ಥಿಮಿತವಾಗಿರಲು ಸಹಾಯವಾಯಿತು. "ಓ ಭಾರತ ಭೂಷಣನೇ! ಇತ್ತ ಬಾ!" ..."ಎಲೈ ತ್ಯಾಗಮೂರ್ತಿಯೇ! ಉಪವಿಷ್ಟನಾಗು" ಎಂದು ಎಲ್ಲರೂ ಉಲ್ಲಾಸಗೊಳ್ಳುತ್ತ ವಿನೋದಪಡುತ್ತಲಿದ್ದರು. ನನ್ನ ಪುಟ್ಟ ಮಗಳೂ ಈ ಆಟದಲ್ಲಿ ಸೇರಿಕೊಂಡಳು. ನಮ್ಮಮ್ಮನಿಗೆ ಮಾತ್ರ ಇತರರು ನನ್ನನ್ನು ಹಾಸ್ಯಗೈದುದು ಸರಿಬೀಳುತ್ತಿರಲಿಲ್ಲ. ಬಿರುದಾವಳಿಗಳಲ್ಲಿ ತನ್ನ ಮುದ್ದುಮಗನನ್ನು ವರ್ಣಿಸಿದ ರೀತಿ ಯಥಾರ್ಥವೆಂದೇ ಆಕೆಯ ಅಂತರಂಗಕ್ಕೆ. ಎಲ್ಲರ ಚಿತ್ತವೃತ್ತಿಯನ್ನೂ ಸೂಕ್ಷ್ಮವಾಗಿಯೆ ತಿಳಿಯುತ್ತಿದ್ದ ತಂದೆಯವರು ಮಾತ್ರ ಮಂದಹಾಸ ಬೀರುತ್ತ ಮೌನದಿಂದಲೇ ಉಲ್ಲಾಸಗೊಳ್ಳುತ್ತಿದ್ದರು."

ಫೆಬ್ರುವರಿ ತಿಂಗಳಲ್ಲಿ ವರ್ಕಿಂಗ್ ಕಮಿಟಿಯವರು ಸಾಬರ್ಮತಿಯಲ್ಲಿ ಮೂರು ದಿನ ಸಭೆಸೇರಿ ಸಿವಿಲ್ ಡಿಸ್ಓಬೀಡಿಯನ್ಸ್ ಅಥವಾ ವಿನೀತ ರೀತಿಯ ಅವಿಧೇಯತೆಯ ಕ್ರಮವನ್ನು ಮಂಜೂರ್ಮಾಡಿದ್ದರಷ್ಟೆ. ಮಾರ್ಚ್ ತಿಂಗಳು ಬಂದ ಕೂಡಲೆ ಗಾಂಧೀಜಿಯವರು ವೈಸರಾಯಿಯವರಿಗೆ ಪತ್ರ ಬರೆದು ಕೊಟ್ಟುಕಳುಹಿಸಿ ಸಮಾಧಾನ ಕೊಡುವ ಪ್ರತ್ಯುತ್ತರ ಬಾರದಿರಲು 12ನೆ ತಾರೀಖಿನ ದಿನ ಎಪ್ಪತ್ತೊಂಬತ್ತು ಪಾದಚಾರಿಗಳೊಡನೆ ದಾಂಡಿಗೆ ಹೊರಟರು. ಮುಂದೆ ಹೊರಟು ತಕ್ಕ ಏರ್ಪಾಟುಗಳನ್ನು ನಡೆಸಬೇಕೆಂದಿದ್ದ ಸರ್ದಾರ್ ವಲ್ಲಭ್ಭಾಯಿ ಪಟೇಲರನ್ನು ಸರ್ಕಾರದವರು ಮೊದಲು ದಸ್ತಗಿರಿ ಮಾಡಿದರು. ಆ ಕಾಲ್ನಡಿಗೆಯ ಯಾತ್ರೆ ದಿನೇ ದಿನೇ ಜಗದಾಕರ್ಷಕವಾಯಿತು. ನೂರಾರು ಪಟೇಲರು ರಾಜಿನಾಮೆ ಕೊಡಲಾರಂಭವಾಯಿತು. ಆಗಲೆ ಅಹಮದಾಬಾದಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯನ್ನು ಜವಾಹರಲಾಲರು ಸೇರಿಸಿ ಮುಂದಿನ ಕರ್ತವ್ಯಕ್ರಮವನ್ನು ನಿಶ್ಚಯಮಾಡಿಟ್ಟರು. ದಸ್ತಗಿರಿಗಳಾಗುತ್ತಿದ್ದಂತೆ ಖಾಲಿ ಸ್ಥಾನಗಳನ್ನು ಭರ್ತಿಮಾಡುವ ಅಧಿಕಾರವನ್ನು ಕಾಂಗ್ರೆಸ್ ನಾಯಕರಿಗೆ ತಕ್ಕಂತೆ ಕೊಡತಕ್ಕುದೆಂದು ನಿಶ್ಚಯವಾಯಿತು. ಮುಂದಿನ ಕರ್ತವ್ಯವನ್ನೀರೀತಿಯಲ್ಲಿ ನಿಷ್ಕರ್ಷೆಮಾಡಿಕೊಂಡ ಕೂಡಲೆ ಜವಾಹರಲಾಲರೇ ಮೊದಲಾಗಿ ಎಲ್ಲ ಸಭಿಕರೂ ಅನ್ಯೋನ್ಯತೆಯಿಂದ ಒಬ್ಬರನ್ನೊಬ್ಬರು ಬೀಳ್ಕೊಟ್ಟರು. ಮುಂದೆ ಯಾರು ಯಾರು ಎಲ್ಲೆಲ್ಲಿರುವರೋ ಸಭೆ ಸೇರುವುದೋ ಇಲ್ಲವೋ ಯಾರು ಹೇಳಬಲ್ಲವರು!

ಅಹಮದಾಬಾದಿನ ಸಭೆ ಮುಗಿದ ಕೂಡಲೆ ಮೋತಿಲಾಲರೂ ಜವಾಹರಲಾಲರೂ ಗಾಂಧೀಜಿಯನ್ನು ಕಾಣಲು ಹೊರಟರು. ಜಂಬೂಸರದಲ್ಲಿ ಯಾತ್ರಾರ್ಥಿಗಳೊಡನೆ ಮಹಾತ್ಮಾಜಿಯಿದ್ದಾಗ ತಂದೆ ಮಕ್ಕಳಿಬ್ಬರೂ ಸಂದರ್ಶನ ಮಾಡಿ ಸ್ವಲ್ಪ ಹೊತ್ತು ಕಳೆದರು. ಮಾತು ಮುಗಿಸಿ ಮಹಾತ್ಮಾಜಿ ತಮ್ಮ ಕೋಲನ್ನೂರಿಕೊಂಡು ಮುಂದಕ್ಕೆ ಹೊರಟೇ ಹೊರಟರು. ಶಾಂತಿ ತುಂಬಿದ್ದರೂ ಧೀರ ಸಂಕಲ್ಪವನ್ನೂ ನಿದಾರ್ಕ್ಷಿಣ್ಯವನ್ನೂ ಮುಖದಲ್ಲಿ ಬೀರುತ್ತ ಭದ್ರವಾಗಿಯೂ ವೇಗವಾಗಿಯೂ ಹೆಜ್ಜೆಹಾಕುತ್ತ ನಡೆದ ಬಾಪುಜಿಯನ್ನು ಕಡೆಯ ಸಾರಿಯೆಂದು ಜವಾಹರಲಾಲರು ಪೂಜ್ಯ ಭಾವದಿಂದ ಕಂಡು ದೂರದಿಂದಲೇ ನಮಿಸಿದರು.

ಪ್ರಯಾಗಕ್ಕೆ ಹಿಂತಿರುಗಿದಕೂಡಲೆ ಮೋತಿಲಾಲರು ತಮ್ಮ ಆನಂದಭವನವನ್ನು ಕಾಂಗ್ರೆಸ್ಸಿಗೆ ಅರ್ಪಿಸುವ ನಿಶ್ಚಯ ಮಾಡಿದರು. ಲಕ್ಷಾಂತರ ಬಾಳುವ ಆ ಸೌಧವನ್ನು ತಂದೆಯಾದಾತನು ದಾನ ಮಾಡುತ್ತ ಮಗನಿಗೆ ಅರ್ಪಿಸುವ ವಿಚಿತ್ರ ವಿನೋದ! ಏಕಂದರೆ ಜವಾಹರಲಾಲರೇ ಕಾಂಗ್ರೆಸ್ ಅಧ್ಯಕ್ಷರು. ಅಂದಿನಿಂದ ಅದೇ ಸ್ವರಾಜ್ ಭವನವಾಯಿತು. ಅಖಿಲಭಾರತ ಕಾಂಗ್ರೆಸ್ ಕಮಿಟಿಯ ಕಚೇರಿ ಅಲ್ಲಿಯೇ. ಸೌಧದ ಬಹುಭಾಗವು ಚಿಕಿತ್ಸಾಲಯವಾಯಿತು; ವಾಸಕ್ಕೆ ಸಮೀಪದಲ್ಲಿಯೆ ಮತ್ತೊಂದು ಆನಂದಭವನ–ಅಥವಾ ಆನಂದಕುಟೀರ ವಾಯಿತು. ದೇಶದ ಹೃದಯಕ್ಕೆ ಅದೇ ನೆಲೆಯಾಯಿತು. ಹಿಂದೆ ಒಂದು ಸಮಯದಲ್ಲಿ ಜವಾಹರಲಾಲರು ಭಾಷಣಮಾಡುತ್ತ "ಧನಿಕರ ಡಂಭ ನಾಶವಾಗಬೇಕು" ಎಂದಾಗ ಒಬ್ಬಾನೊಬ್ಬ ಠಾಕೂರನೆದ್ದು ಉದ್ರೇಕ ವಶನಾಗಿ ನಿಂತು "ನಿಮ್ಮ ಆನಂದಭವನವನ್ನು ನಾಶಗೊಳಿಸಿ ಮೊದಲು" ಎಂದು ಆಲ್ಪೋಕ್ತಿಯನ್ನು ಬೀರಿದ್ದನು. ಆತನ ವೃತ್ತಾಂತವೆಲ್ಲಿಯೋ! "ಆನಂದಭವನ ಸೌಂದರ್ಯದ ರಾಶಿ; ಅದನ್ನು ನಾಶವೇ? ಸೌಂದರ್ಯಕ್ಕಿಂತ ಪವಿತ್ರತೆಯ ನಿಧಿ; ಅದನ್ನು ಕೈ ತೊಳಕೊಂಡ ಬಳಿಕ ಮುಟ್ಟಬೇಡವೇ?" ಎಂದು ಈಗ ಕೇಳದವರಾರು?

ಪ್ರಯಾಗಕ್ಕೆ ಹಿಂತಿರುಗಿ ಬಂದ ಬಳಿಕ ಜವಾಹರಲಾಲರು ರಾಷ್ಟ್ರ ಸೇವಕ ಪಡೆಗಳ ಶಿಕ್ಷಣವನ್ನು ನಡೆಸುತ್ತ ವ್ಯವಸ್ಥೆಗೊಳಿಸುತ್ತಲಿದ್ದರು.

ಕಮಲಾದೇವಿಯ ಸಂಗಡ ಕೃಷ್ಣೆಯೂ ಸೇರಿಕೊಂಡಳು. ಇಬ್ಬರೂ ಗಂಡಸರಂತೆ ವಾಲಂಟಿಯರ್ ಪೋಷಾಕನ್ನು ಧರಿಸಿ ಪಡೆ ಸೇರಿದರು. ಏಪ್ರಿಲ್ 6ನೇ ತಾರೀಖು ಬಂತು; ಹಿಂದಿನ ಸತ್ಯಾಗ್ರಹದಾರಂಭ ಜಾಲಿಯನ್‌ವಾಲಾ ಹತ್ಯಗಳ ನೆನಪು ಕೊಡುವ ವಾರ. ಆ ದಿನವೇ ಗಾಂಧೀಜಿ ದಾಂಡಿಯಲ್ಲಿ ಉಪ್ಪಿನ ಕಾನೂನನ್ನು ಭಂಗಪಡಿಸಿ ಎಲ್ಲ ಕಾಂಗ್ರೆಸ್ ಸಭೆಗಳೂ ತದ್ವತ್ತಾಗಿ ಆ ಕಾನೂನನ್ನು ಮುರಿದು ಮುಂದಿನ ಹೆಜ್ಜೆಗಳನ್ನಿಡಲು ಸನ್ನದ್ಧರಾಗತಕ್ಕದೆಂದರು.

ಆಲ್ಲಿಂದ ಮುಂದಾದುದೋ! ಎಷ್ಟದ್ಭುತವೋ ಅಷ್ಟು ವಿಚಿತ್ರವಾಯಿತು. ನಡೆದುದನ್ನು ಸ್ಮರಿಸಿ ವಿನೋದಗೊಳ್ಳುತ್ತ ಜವಾಹರಲಾಲರೇ ವಿವರಿಸಿರುವುದು ಹೀಗೆ:—

"ಯಾವುದೋ ಭಾರಿ ಜಲಪ್ರಪಾತದೆಡೆ ಪ್ರವಾಹಕ್ಕೆ ಅಡ್ಡಿಯಾಗಿಟ್ಟಿದ್ದ ಕಲ್ಲನ್ನು ಜರುಗಿಸಿಟ್ಟಂತೆಯೋ ಸ್ಪ್ರಿಂಗ್ ತಿರುಗಿಸಿಬಿಟ್ಟ ಯಂತ್ರದಂತೆಯೋ ಆಯಿತು. ಯಾವ ಊರಿನಲ್ಲಿ ಕೇಳಿದರೂ ಉಪ್ಪಿನ ತಯಾರಿ ಪ್ರಸ್ತಾಪವೇ. ಬಗೆಬಗೆಯಾದ ತಯಾರಿಗಳು ಹುಟ್ಟಿಕೊಂಡವು. ನಮಗಾದರೋ ಆ ವಿಷಯವೇ ತಿಳಿದಿರಲಿಲ್ಲ. ಸಿಕ್ಕಿದಷ್ಟನ್ನು ಓದಿಕೊಂಡು ಮಾಡಬೇಕಾದುದನ್ನು ಹೇಳಿಕೊಂಡೆವು. ಬಾಣಲಿಗಳನ್ನೂ ತಪಲೆಗಳನ್ನೂ ಹೊಂದಿಸಿಕೊಂಡು ಕಷ್ಟಪಟ್ಟು ಕಡೆಗೆ ಯಾವುದೋ ಮುದ್ದೆಯನ್ನು ಬೇಯಿಸಿ ಜಯಶಾಲಿಗಳಂತೆ ಅದನ್ನು ತೋರಿಸಿ ವಿಜೃಂಭಿಸುತ್ತ ಅಮೂಲ್ಯ ವಸ್ತುವನ್ನು ಹರಾಜಿಗಿಟ್ಟಂತೆ ಇಟ್ಟೆವು. ವಸ್ತು ಒಳ್ಳೇದೋ ಕೆಟ್ಟದ್ದೋ ಎಂಬ ಚಿಂತೆಯೇ ಇಲ್ಲ. ಕಾಯಿದೆ ಮುರಿಯುವುದು ಮುಖ್ಯವಾಗಿತ್ತು. ನಾವು ತಯಾರಿಸಿದ ಉಪ್ಪಿನಲ್ಲಿ ಕಸವೇ ತುಂಬಿರಬಹುದಾಗಿದ್ದರೂ ಕರ್ತವ್ಯ ನೆರವೇರಿತು. ಆಗ ಜನರಲ್ಲಿ ಕಾಣಿಸಿದ ಉತ್ಸಾಹಸಮೃದ್ಧಿಯನ್ನೂ ಕಾಡ್ಗಿಚ್ಚಿನಂತೆ ಉಪ್ಪಿನತಯಾರಿ ವ್ಯಾಪಿಸಿದ್ದನ್ನೂ ಕಂಡು ನಾವು ವಿಸ್ಮಯಗೊಂಡೆವು. ಉಪ್ಪಿನ ಕಾಯಿದೆ ಭಂಗವೆಂಬುದನ್ನು ಮೊದಲು ಕೇಳಿದಾಗ ಅಪಹಾಸ್ಯ ಮಾಡಿದವರಿಗೆ ನಾಚಿಕೆಯೇರಿತು. ಜನರಾಶಿಯನ್ನು ಸೆಳೆದು ಸುವ್ಯವಸ್ಥಿತ ರೀತಿಯಲ್ಲಿ ವರ್ತಿಸುವಂತೆ ನೆರವೇರಿಸಬಲ್ಲ ಗಾಂಧೀಜಿಯ ಬುದ್ಧಿಸೂಕ್ಷ್ಮತೆಯೆಷ್ಟು ಮಹತ್ತರವಾದುದೆಂದೆಲ್ಲರೂ ಮರುಳಾದೆವು."

ಏಪ್ರಿಲ್ 14ನೆ ತಾರೀಖಿನ ದಿನ ಜವಾಹರಲಾಲರು ರಾಯಪುರಕ್ಕೆ ಹೊರಡಬೇಕೆಂದು ರೈಲನ್ನೇರುವ ವೇಳೆಯಲ್ಲಿ ದಸ್ತಗಿರಿಯಾ

ಯಿತು. ಉಪ್ಪಿನಕಾನೂನು ಮುರಿದುದಕ್ಕಾಗಿ ಆರು ತಿಂಗಳ ಶಿಕ್ಷೆ ಗೊತ್ತಾಯಿತು. ದಸ್ತಗಿರಿಯಾಗುವ ನಿರೀಕ್ಷೆಯಿದ್ದುದರಿಂದ ಆದಕ್ಕೆ ಮೊದಲೇ ಅಧ್ಯಕ್ಷಸ್ಥಾನದಲ್ಲಿ ಗಾಂಧೀಜಿಯುವರಿರಬೇಕೆಂದು ನಿರ್ಧರ ಮಾಡಿದ್ದರು. ಒಂದು ಪಕ್ಷ ಗಾಂಧೀಜಿಯುವರೊಪ್ಪದಿದ್ದರೆ ಮೋತಿ ಲಾಲರು ವಹಿಸಿಕೊಳ್ಳಬೇಕೆಂದು ಹೇಳಿ ಜೈಲಿಗೆ ಹೊರಟರು. ಗಾಂಧೀಜಿಯೊಪ್ಪಲಿಲ್ಲವಾದುದರಿಂದ ಮೋತಿಲಾಲರೇ ವಹಿಸಿಕೊಂಡರು. ದೇಹಸ್ಥಿತಿ ಸಮರ್ಪಕವಾಗಿಲ್ಲದಿದ್ದಾಗ್ಯೂ ಮೋತಿಲಾಲರು ಯಾಜ ಮಾನ್ಯವಹಿಸಿ ಕಾರ್ಯಕಲಾಪಗಳಲ್ಲಿ ಶಿಷ್ಟಿ ನಷ್ಟವಾಗದಂತೆ ಸಾಧಿಸಲು ಆರಂಭಿಸಿದರು.

## 2. ನೈನಿ ಜೈಲಿನಲ್ಲಿ

ಜೈಲನ್ನು ಬಿಟ್ಟು ಏಳು ವರ್ಷಗಳಾಗಿತ್ತು. ನೈನಿ ಸೆಂಟ್ರಲ್ ಪ್ರಿಸನ್ ಎಂಬುದು ಯುಕ್ತಪ್ರಾಂತದ ದೊಡ್ಡ ಜೈಲುಗಳಲ್ಲೊಂದು. ಈ ಬಾರಿ ಜವಾಹರಲಾಲರನ್ನು ಒಂಟಿಯಾಗಿಟ್ಟರು. ನಾಲ್ಕು ಸಣ್ಣ ಕೋಣೆಗಳಿದ್ದ ಒಂದು ಕಟ್ಟಡ; ಅದರ ಸುತ್ತಲೂ ಕೋಟೆ ಗೋಡೆ ಯಿಟ್ಟಂತೆ ಹದಿನೈದಡಿಯೆತ್ತರದ ಪೌಳಿಗೋಡೆ. ಜವಾಹರರಿಗೆ ಎರಡು ಕೋಣೆಗಳನ್ನು ಕೊಟ್ಟರು.

ಹೊರಗಿನ ಚಟುವಟಿಕೆಗೂ ಜೈಲಿನೊಳಗಿನ ಪ್ರಪಂಚಕ್ಕೂ ಎಷ್ಟು ವ್ಯತ್ಯಾಸ! ಜವಾಹರಲಾಲರ ಮನಸ್ಸು ಖಿನ್ನತೆಯುನ್ನು ತಾಳಿತ್ತು. ಅತಿಯಾಗಿ ಆಯಾಸಪಟ್ಟಿದ್ದುದರಿಂದ ಮೊದಲೆರಡು ಮೂರು ದಿನಗಳು ಚನ್ನಾಗಿ ನಿದ್ದೆಮಾಡಿದರು. ಬೇಸಗೆ ತಲೆ ಹಾಕಿತ್ತು. ಕೋಣೆಯೊ ಳಗೆ ಉಸಿರಾಟ ಕಟ್ಟುವ ಸೆಕೆ; ಆದ್ದರಿಂದ ಕಟ್ಟಡಕ್ಕೂ ಕೋಟೆ ಗೋಡೆಗೂ ಮಧ್ಯೆ ಸಂದಿಯುಲ್ಲಿ ಮಲಗಲಿಷ್ಟಪಟ್ಟರು. ನೌಕರರು ಜೈಲು ಮಂಚವನ್ನು ಅಲ್ಲಿಯೆ ಸರಪಳಿಗಳಿಂದ ಬಿಗಿದು ಆಗಬಹು ದೆಂದರು. ಸರಪಳಿಗಳಿಂದ ಬಿಗಿಯದಿದ್ದರೆ ಮಲಗಿದವರು ಮಂಚವ ನ್ನೆತ್ತಿಕೊಂಡು ಹೊರಟುಬಿಡಬಹುದೆಂದೋ, ಆ ಮಂಚವನ್ನೇ ಗೋಡೆ ಗಿಟ್ಟು ಏಣಿಮಾಡಿಕೊಂಡು ಪರಾರಿಯಾಗಬಹುದೆಂದೋ ಶಂಕೆ! ರಾತ್ರಿ ಕಾಲವೆಲ್ಲವೂ ಯಾವುದೋ ಕೂಗುಗಳ ಶಬ್ದ; ದೂರದಲ್ಲಿ ಬೀಸಿ

ಕೊಂಡು ಹೋಗುತ್ತಿರುವ ಬಿರುಗಾಳಿಯ ಶಬ್ದದಂತೆ. ಹೊರಗೆ ಪಹರೆ ಕೊಡುತ್ತಿದ್ದವರೂ ರಾತ್ರಿ ಕಾವಲುಗಾರರೂ ಅವರವರ ಯೋಗ್ಯತಾನು ಸಾರವಾಗಿ ಗಂಟಲನ್ನುಪಯೋಗಿಸಿ ಮಂದ್ರಮಧ್ಯತಾರ ಸ್ವರಗಳಲ್ಲಿ ದೀರ್ಘವಾಗಿಯೂ ರಾಗವಾಗಿಯೂ ಒಬ್ಬರನ್ನೊಬ್ಬರು ಎಚ್ಚರಿಸುತ್ತಿರು ವುದರ ಮಧ್ಯೆ ಯಾರೋ ಅಧಿಕಾರಿ ಬೀಗದಕೈಗಳ ಸದ್ದು ಮಾಡುತ್ತ ತಿರುಗಾಡುತ್ತ ಹೊರಗಿನಿಂದಲೇ ತನ್ನ ಕೈಕೆಳಗಿನ ಚಾಕರರಿಗೆ ಹಾಕುವ ಪ್ರಶ್ನೆಗಳು ಅವುಗಳಿಗುತ್ತರಗಳು! ಯಾವುದೋ ಅರಣ್ಯದ ಅಂಚಿ ನಲ್ಲಿದ್ದು ಬೇಸಾಯಗಾರರೂ ಕುರುಬರೂ ದುಷ್ಟಮೃಗಗಳನ್ನು ಬೆದರಿಸಿ ಅಟ್ಟಲು ಬೊಬ್ಬಿರಿಸಿ ಅರಚುತ್ತಿದ್ದ ಹಾಗೆ ತೋರುತ್ತಿತ್ತು. ಕೆಲವುವೇಳೆ ಗೂಬೆಗಳೂ ಗುಳ್ಳೆ ನರಿಗಳೂ ಕಾಡು ಜನರೂ ಒಟ್ಟು ಸೇರಿ ಕೂಗಿ ಕೊಳ್ಳುತ್ತಿದ್ದರೆ ಹೇಗೋ ಹಾಗೆ ಮನಸ್ಸಿಗೆ ಭಾಸವಾಗುತ್ತಿತ್ತು.

ಯಾವ ಕಾರಣದಿಂದಲೋ ಏನೋ ಜವಾಹರಲಾಲರಿದ್ದ ಕಟ್ಟಡ ಅಥವಾ ಬರಾಕಿಗೆ ಕುತ್ತಾಘರ್ (ನಾಯಿಗಳ ಮನೆ) ಎಂಬ ಹೆಸರಿತ್ತು. ಕೊಲೆಪಾತಕರಿಗೋ ಗುಲ್ಮ ಘಾತಕರಿಗೋ ವಾಸ ಲಾಗಿದ್ದ ಆ ಬರಾಕಿನಲ್ಲಿ ಇತ್ತೀಚೆಗೆ ರಾಜಕೀಯ ಕೈದಿಗಳನ್ನು ಇಡು ತ್ತಿತ್ತು. ಆ ಬರಾಕಿನ ಎದುರಿಗೆ ಮೊದಲಸಾರಿ ಜವಾಹರರಿಗೆ ಒಂದು ದೊಡ್ಡ ಪಂಜರ ಕಂಡಿತು. ಒಳಗಡೆ ಹದಿನೈದು ಹದಿನಾರು ಕೈದಿಗಳು ಗಾಣದೆತ್ತುಗಳಂತೆ ಸುತ್ತಲೂ ಸುತ್ತುತ್ತ ಎಳೆಯುತ್ತಲಿದ್ದರು. ಆ ರೀತಿಯಲ್ಲಿ ಅಲ್ಲಿ ಕೈದಿಗಳಿಂದ ನೀರೆನ್ನೆತ್ತಿಸುತ್ತಿದ್ದರೆಂದು ಕಾಲಾನಂತರ ದಲ್ಲಿ ತಿಳಿಯಿತು. ಮೃಗಶಾಲೆಯಲ್ಲಿ ಮೃಗಗಳನ್ನು ಹಿಡಿದಿಟ್ಟು ಬೀಗ ಹಾಕುವ ಬೋನಿನಂತೆ ಕಾಣುತ್ತಿತ್ತು; ನೋಡಿದಾಗಲೆಲ್ಲ ಮೃಗ ಶಾಲೆಯೆಂಬ ಭ್ರಾಂತಿ ಹಿಡಿಯುತ್ತಿತ್ತು.

ಬರಾಕಿನಿಂದ ಹೊರಕ್ಕೆ ಜವಾಹರಲಾಲರನ್ನು ಯಾವ ಕಾಲ ದಲ್ಲಿಯೂ ಬಿಡದಾದರು ಕೆಲಕಾಲ. ಆರೋಗ್ಯ ಪಾಲನೆಗಾಗಿ ಕೈ ಕಾಲು ಗಳನ್ನಾಡಿಸುವುದಕ್ಕೇ ಕಷ್ಟವಾಯಿತು. ತರುವಾಯ ಬೆಳಕು ಹರಿಯದೆ ಇನ್ನೂ ಕತ್ತಲಾಗಿಯೇ ಇರುವ ವೇಳೆಯಲ್ಲಿ ಅರ್ಧ ಗಂಟೆಯಷ್ಟು ಹೊತ್ತು ಬರಾಕಿನ ಹೊರಗಡೆಯಾದರೂ ಜೈಲಿನೊಳಗಡೆ ತಿರುಗಾಡಿ

ಬರಲು ಅನುಮತಿ ಕೊಟ್ಟರು. ಇತರ ಕೈದಿಗಳಾರನ್ನೂ ಜವಾಹರರು ಕಾಣದಂತೆ ಈ ಏರ್ಪಾಟು! ಜವಾಹರಲಾಲರು ಆದಷ್ಟು ಪ್ರಯೋಜನವನ್ನು ಅಷ್ಟರಲ್ಲೆ ಪಡೆಯಲು ಅರ್ಧಗಂಟೆ ಹೊತ್ತಿನಲ್ಲಿ ಹೊರಗಡೆ ಓಡಾಟವನ್ನಿಟ್ಟುಕೊಂಡರು. ಅಷ್ಟು ವೇಳೆಯಲ್ಲಿ ಸುಮಾರು ಎರಡು ಮೈಲಿಯಷ್ಟು ಓಡಿಬಂದು ಸಂತೋಷಗೊಳ್ಳುತ್ತಿದ್ದರು. ಇದಕ್ಕಾಗಿ ಬೆಳಕಾಗುವ ಮುನ್ನ ರಾತ್ರಿ ಮೂರುವರೆಗೋ ನಾಲ್ಕಕ್ಕೋ ನಿದ್ದೆ ಬಿಟ್ಟೇಳಬೇಕಾಗಿದ್ದುದು ಸುಲಭವೇ ಆಗಿತ್ತು. ಓದಲು ಸಾಕಾದಷ್ಟು ದೀಪವಿಲ್ಲದಿದ್ದುದರಿಂದ ಬೇಗನೆ ಮಲಗಿಕೊಳ್ಳುತ್ತಿದ್ದರು. ಮಲಗಿಕೊಂಡು ಮೇಲ್ಗಡೆ ಕಂಡಷ್ಟು ಆಕಾಶವನ್ನು ದಿಟ್ಟಿಸುತ್ತ ನಕ್ಷತ್ರಗಳನ್ನು ಕಂಡಾಗ್ಗೆ ಆಪ್ತ ಸಖರನ್ನು ಕಂಡಂತೆ ಸಮಾಧಾನಗೊಳ್ಳುತ್ತಿದ್ದರು. ಸುತ್ತ ಎತ್ತರವಾದ ಗೋಡೆಯಾದುದರಿಂದ ಆಕಾಶದಲ್ಲಿ ನೆತ್ತಿಯ ಮೇಲಣ ಭಾಗ ಮಾತ್ರ ನಿದಾನವಾಗಿ ಸುತ್ತುವ ಚಕ್ರದಂತೆ ಕಾಣುತ್ತಿತ್ತು. ಉತ್ತರದ ಗೋಡೆಯ ಮೇಲೆ ಅಂಟಿಕೊಂಡಿದ್ದಂತೆಯೆ ಧ್ರುವ ನಕ್ಷತ್ರ. ಯಾರು ಕಾಣದಿದ್ದರೂ ಜವಾಹರಲಾಲರಿಗೆ ಧ್ರುವನಕ್ಷತ್ರ ನಿತ್ಯವೂ ಗೋಚರವಾಗಿ ಇದ್ದಲ್ಲಿಯೇ ಭದ್ರವಾಗಿ ನಿಂತು ಮನಸ್ಸಿಗೆ ಸ್ಥೈರ್ಯ ಕೊಡುತ್ತಿತ್ತು. ನಕ್ಷತ್ರ ರಾಶಿಗಳು ಅಂತರಿಕ್ಷದ ಆ ಮಧ್ಯ ಮಂಡಲ ಮಾತ್ರದಲ್ಲಿ ಉದಯಾಸ್ತಮನ ಪಡೆದುದನ್ನು ಗುರುತಿಸಿ ಹೊತ್ತೆಷ್ಟೆಂದು ನಿರ್ಣಯ ಮಾಡುವುದು ಅಭ್ಯಾಸವಾಯಿತು. ಗೋಡೆಯ ಹೊರಗಡೆ ಕಾಣದ ಆಕಾಶದ ಭಾಗವನ್ನು ಸ್ಮರಿಸಿದಾಗ್ಗೆ ಯಾವುದೋ ಕೃತಕವಾದ ನಕ್ಷತ್ರಗಳ ಗೋಳವನ್ನು ಎದುರಿಗೆತ್ತಿ ಹಿಡಿದಂತೆ ತೋರುತ್ತಿತ್ತು; ಸುತ್ತ ಗೋಡೆಯನ್ನೂ ತಾವಿದ್ದ ಸ್ಥಲವನ್ನೂ ಕಂಡಾಗ ಯಾವುದೋ ಬಾವಿಯ ತಳದಲ್ಲಿದ್ದಂತೆ ತೋರುತ್ತಿತ್ತು.

ಯಾರ ಜೊತೆಯೂ ಇಲ್ಲದೆ ಒಂದು ತಿಂಗಳ ಕಾಲ ಕಳೆಯಿತು. ಬಂದಿಗಳಲ್ಲಿಯೇ ಆರಿಸಿ ಗೊತ್ತಾಗಿದ್ದ ಕಾವಲುಗಾರ, ಮೇಲ್ವಿಚಾರಕ, ಪರಿಚಾರಕರಿಬ್ಬರು ಮಾತ್ರ ಕಾಣುತ್ತಿದ್ದರು. ತರುವಾಯ ಬೇರೆ ಬೇರೆ ನೆಪಗಳಿಂದ ಇತರರೂ ಸ್ವಲ್ಪ ಸ್ವಲ್ಪವಾಗಿ ಬರಲಾರಂಭವಾಯಿತು. ಕೈದಿಗಳಲ್ಲಿ ಆಜೀವ ಶಿಕ್ಷೆಗೆ ಗೊತ್ತಾದವರು ಆಗಾಗ್ಗೆ ಕಾಣತಕ್ಕವರು.

ಕೈದಿಗಳೆಲ್ಲರಿಗೂ ಹೆಗಲಮೇಲೊಂದು ಮರದ ಬಿಲ್ಲೆ; ಅದರ ಮೇಲೆ ಅವರ ನಂಬರೂ ಅವಧಿಯ ಗುರುತೂ ಇರುತ್ತದೆ. ಇಪ್ಪತ್ತು ವರ್ಷಕ್ಕೆ ಆಜೀವ ಶಿಕ್ಷೆ ಆಖೈರೆಂಬ ಭಾವನೆಯಿದ್ದರೂ ಆ ಜೈಲಿನಲ್ಲಿ ಇನ್ನೂ ಹೆಚ್ಚಿನ ಕಾಲ ಅನುಭವಿಸಿದವರು ಕಂಡರು. ಮಧ್ಯ ವಯಸ್ಸು ದಾಟಿದ ಒಬ್ಬ ಕೈದಿಯ ಬಿಲ್ಲೆಯ ಮೇಲೆ 1996 ನೆ ಇಸವಿಯಲ್ಲಿ ಬಿಡುಗಡೆಯೆಂದಿತ್ತು! ವರ್ಷಗಟ್ಟಲೆಯಾಗಿ ಈ ವರ್ಗದವರು ಒಂದು ಮಗುವನ್ನು ಕಾಣರು, ಹೆಂಗಸನ್ನು ಕಾಣರು, ಇತರ ಪ್ರಾಣಿಗಳನ್ನೂ ಕಾಣರು. ಮನಸ್ಸಿನಲ್ಲಿ ಸದಾ ದ್ವೇಷವನ್ನೋ ಕ್ರೋಧವನ್ನೋ ಪೋಷಿಸಿಕೊಂಡಿದ್ದು ಭಯಕ್ಕೆಷ್ಟುಮಾತ್ರ ತುತ್ತಾಗಿರುತ್ತಾರೆಂಬುದನ್ನು ವರ್ಣಿಸಲಳವಲ್ಲ. ಎಲ್ಲ ದಿನಗಳೂ ಒಂದೇ ರೀತಿ! ದಯೆಯೆಂಬುದನ್ನು ಕಾಣರು, ಸಂತೋಷವನ್ನೂ ನಗುವನ್ನೂ ತಿಳಿಯರು; ಇಹಲೋಕದಲ್ಲಿ ಒಳ್ಳೆತನವುಂಟೆಂಬುದೇ ಅವರ ಮನಸ್ಸಿನಲ್ಲಿ ಸುಳಿಯದು. ಮರಣ ದಂಡನೆಯನ್ನು ನಿಷೇಧಿಸಿ ಆಜೀವ ಶಿಕ್ಷೆಯನ್ನು ವಿಧಿಸಬಯಸುವವರು ಈ ಬಡಪಾಯಿಗಳ ಪಾಡನ್ನು ಕಂಡರೇನೆಂದಾರೋ! ಅವರಲ್ಲೊಬ್ಬಾತನೊಮ್ಮೆ ಜವಾಹರಲಾಲರ ಬಳಿಗೆ ಬಂದು "ನಮ್ಮ ಗತಿಯೇನು? ಸ್ವರಾಜ್ ಬಂದರೆ ನಮಗೆ ಈ ನರಕ ತಪ್ಪೀತೆ?" ಎಂದು ಕೇಳಿದನು.

ಇತರ ಕೈದಿಗಳಲ್ಲೆಷ್ಟೋ ಮಂದಿ ವಾಸ್ತವವಾಗಿ ವಿಶ್ವಾಸಾರ್ಹರಾಗಿಯೇ ಇರುತ್ತಾರೆ. ಅನೇಕರು ಯುವಕರಾಗಿರುತ್ತಾರೆ. ಅಂತಹವರನ್ನು ಏಕಾಂತ ಶಿಕ್ಷೆಗೆ ದೂಡುವುದಕ್ಕಿಂತ ಘೋರವಾದುದಿಲ್ಲ. ಅಲ್ಪಾವಧಿಯ ಏಕಾಂತ ಶಿಕ್ಷೆಯಾದಾಗ್ಲೂ ಆಕ್ಷೇಪಣೀಯವೇ. ನಿದಾನವಾಗಿ ಹುಚ್ಚುಹಿಡಿಸಬೇಕಾದರೆ ಹಾಗೆ ಮಾಡಬಹುದು. ಕೈದಿಗಳಲ್ಲಿ ದಯಾದಾಕ್ಷಿಣ್ಯಗಳಿಲ್ಲದೆ ಇಲ್ಲ. ಒಬ್ಬಾನೊಬ್ಬ ಕುರುಡನಿಗೆ ಹದಿಮೂರು ವರ್ಷ ಕಳೆದ ಕೂಡಲೆ ಬಿಡುಗಡೆಯಾಗುವ ಸಂದರ್ಭ. ಅಸಹಾಯನಾಗಿ ಹೊರಕ್ಕೆ ಹೊರಡಬೇಕಾಗಿತ್ತು. ಆಗ ಅವನ ಜೊತೆಗಾರರೆಲ್ಲರೂ ಸಹಾಯ ಕೊಡಲು ಸಿದ್ಧರಾದರು. ಆದರೆ ಅವರೆಷ್ಟುಮಾತ್ರ ಸಹಾಯಮಾಡಬಲ್ಲವರು? ಎತ್ತಿಟ್ಟಿದ್ದ ಷರಟನ್ನೊಬ್ಬನು,

ಶಾಲನ್ನು ಮತ್ತೊಬ್ಬನು ಕೊಟ್ಟನು. ತನಗಾಗಿ ಹೊರಗಿನಿಂದ ಆಗತಾನೆ ಕೊಟ್ಟುಕಳುಹಿಸಿದ್ದ ಚಪ್ಪಲಿ ಜೊತೆಯನ್ನು ಹೆಮ್ಮೆಯಿಂದ ಧರಿಸಿಕೊಂಡು ಓಡಾಡಿದ್ದ ಮತ್ತೊಬ್ಬನು ಆ ಹೊಸ ಚಪ್ಪಲಿಗಳನ್ನು ಕುರುಡನಿಗೆ ಕೊಟ್ಟುಬಿಟ್ಟನು. ಅದನ್ನು ಕಂಡು ಜವಾಹರಲಾಲರ ಮನಸ್ಸಿನಲ್ಲಿ ಜೈಲಿನ ಹೊರಗಿರುವುದಕ್ಕಿಂತ ಒಳಗಡೆಯೆ ಹೆಚ್ಚು ದಯಾ ದಕ್ಷಿಣ್ಯ ಕನಿಕರಗಳುಂಟೆನ್ನಿಸಿತು.

ಜೈಲಿನೊಳಗೆ ವರ್ತಮಾನಪತ್ರಿಕೆಗಳಿಲ್ಲ. ಯಾವುದೋ ಹಿಂದೀ ವಾರಪತ್ರಿಕೆಯೊಂದು ಮಾತ್ರ ಜವಾಹರಲಾಲರಿಗೆ ಸಿಕ್ಕುತ್ತಿತ್ತು. ಹೊರ ಗಡೆ ನಡೆಯುತ್ತಿದ್ದುದು ಪರಮಾದ್ಭುತ. ಲಾಠಿ ಛಾರ್ಜುಗಳೇನು, ಗೋಲಿಬಾರ್ ಪ್ರಕರಣಗಳೇನು, ದಸ್ತಗಿರಿಗಳೇನು, ಹರತಾಲಗಳೇನು! ಒಂದಕ್ಕಿಂತ ಮತ್ತೊಂದು. ಏಪ್ರಿಲ್ 23ನೆ ತಾರೀಖಿನಲ್ಲಿ ಗಹರ್ವಾಲಿ ಗಳು ಗುಂಡು ಹಾರಿಸುವ ಆಜ್ಞೆ ಮುರಿದುದೋ ಸೊಲ್ಲಾಪುರದಲ್ಲಿಯೂ ಪೆಷಾವರದಲ್ಲಿಯೂ ಗುಂಡಿನ ಮಳೆಗೆ ಹೆದರದೆ ಜನರೆದೆ ಕೊಟ್ಟು ನಿಂತುದೋ! ಎಂತಹ ಕ್ರೂರ ಶಿಕ್ಷೆಗಾದರೂ ಹೆದರದೆ ಜನರೆಷ್ಟು ಧೈರ್ಯ ವನ್ನು ಕಾಣಿಸಿದರು! ಇಷ್ಟಕ್ಕೂ ಕಾರಣಕರ್ತರಾದ ಗಾಂಧೀಜಿಯ ಚೈತನ್ಯವೆಷ್ಟು ದೊಡ್ಡದು! ಜೇಡಿಮಣ್ಣನ್ನು ಮುಟ್ಟಿ ಬಂಗಾರಮಾಡ ಬಲ್ಲವರೆಂದು ಗೋಖಲೆಯುವರು ಹೇಳಿದ್ದುದು ಜ್ಞಾಪ್ತಿಗೆ ಬಂತು. ಅತಿ ಸಾಮಾನ್ಯ ಜನರನ್ನು ಅಸಾಮಾನ್ಯ ವೀರಪುರುಷರನ್ನಾಗಿ ಪರಿವರ್ತನ ಗೊಳಿಸುವ ಆ ಮಹಾನುಭಾವನ ಪ್ರಭಾವವೆಂತಹ ಇಂದ್ರಜಾಲ! ಭಾರತೀಯ ಸ್ತ್ರೀಯರ ಮನಸ್ಸುಗಳಲ್ಲಿ ಆತನ ಮಹಿಮೆಯೆಷ್ಟು ವಿಸ್ಮಯಕಾರಕವಾಗಿ ಪರಿಣಮಿಸಿತ್ತು! ಪರದೇಶೀ ವಸ್ತ್ರ ಬಹಿಷ್ಕಾರ ಸಾಧನೆಯನ್ನು ಹೆಂಗಸರು ಹಿಡಿದು ವಿದೇಶೀ ವಸ್ತ್ರಗಳನ್ನು ಮಾರುತ್ತಿದ್ದ ಅಂಗಡಿಗಳ ಮುಂದೆ ದೀಕ್ಷೆ ವಹಿಸಿ ನಿಂತರು. ಪ್ರಯಾಗದಲ್ಲಿಯೇ ಜವಾಹರಲಾಲರ ತಾಯಿಯವರು ಮುಂದೆ ಬಂದು ನಿಂತರು. ಕಮಲಾ ದೇವಿಯೊಡನೆ ಜವಾಹರಲಾಲರ ತಂಗಿಯರೂ ಹೊರಟು ಉರಿಬಿಸಿ ಲಲ್ಲಿ ಪರದೇಶೀ ಬಟ್ಟೆಯಂಗಡಿಗಳ ಮುಂದೆ ಕಾವಲು ನಿಂತರು; ಅದನ್ನು ತಿಳಿದು ಜವಾಹರಲಾಲರ ಮನಸ್ಸು ಕರಗಿತು. ಅಸ್ಪಷ್ಟವಾಗಿ

ಸಮಾಚಾರಗಳು ತಿಳಿಯುತ್ತಿದ್ದಾಗ್ಗೂ ಕಮಲಾದೇವಿ ತನ್ನ ಅಸ್ವಸ್ಥತೆಯನ್ನು ಗಮನಿಸದೆ ಹಗಲೆಲ್ಲ ಬಿಸಿಲಿನಲ್ಲಿ ಅಲೆದಾಡುತ್ತ ಪರದೇಶೀ ಬಟ್ಟೆಯ ಬಾಯ್ಕಾಟಿಗೆ ವ್ಯವಸ್ಥೆ ನಡೆಸುತ್ತಿದ್ದುದು ಕೇಳಿಸಿತು. ಸುದ್ದಿ ತಿಳಿದವರೆಲ್ಲರೂ ಹೆಮ್ಮೆಗೊಂಡರು. ತಮ್ಮ ತಾಯಿ ಹೆಂಡತಿ ತಂಗಿಯರೂ ಬಂಧು ವರ್ಗದವರೂ ಈ ರೀತಿಯಲ್ಲಿ ವರ್ತಿಸುತ್ತಿದ್ದುದನ್ನು ತಿಳಿದು ಜವಾಹರಲಾಲರು ಮನಸ್ಸಿನಲ್ಲಿ ಸಮಾಧಾನವನ್ನು ತುಂಬಿಕೊಂಡರು. ಅಗಲಿದ್ದರೂ ಒಟ್ಟಿಗಿದ್ದಂತೆಯೆ ತೋರಿತು.

ಜೈಲಿನೊಳಗಿದ್ದವರ ಮುಖಗಳಲ್ಲಿಯೂ ಈ ಸುದ್ದಿಗಳ ಪ್ರಭಾವದಿಂದ ಹೊಸ ಕಳೆ ಕಾಣುತ್ತಿತ್ತು. ಸಾಧಾರಣ ಕೈದಿಗಳು ಕೂಡ "ಸ್ವರಾಜ್ ಸಮೀಪಕ್ಕೆ ಬರುತ್ತಲಿದೆ" ಎಂದುಕೊಳ್ಳುತ್ತಿದ್ದರು. ಜೈಲಿನ ನೌಕರರು ಮಾತ್ರ ಅಪ್ರತಿಭರಾಗಿರುತ್ತಿದ್ದರು; ಉಳಿದವರೆಲ್ಲರಿಗೂ ಏನೋ ಉತ್ಸಾಹ. ಜವಾಹರಲಾಲರಿದನ್ನು ಗುರುತಿಸಿದರು. ಸ್ವಂತ ಬಂಧುಗಳಾದ ಸ್ತ್ರೀಯರು ಬಿಸಿಲಿನಲ್ಲಿ ಬೆಂದು ಬಳಲುವುದನ್ನು ಲಕ್ಷ್ಯ ಮಾಡದೆ ಇದ್ದುದನ್ನು ಸ್ಮರಿಸಿ "ಇತರರು ಹೊರಗೆ ಇಷ್ಟು ಕಷ್ಟಪಡುತ್ತಿದ್ದರೆ ನಾನು ಮಾತ್ರ ಇಲ್ಲಿ ಹಾಯಾಗಿರುವೆನಲ್ಲ!" ಎಂದುಕೊಂಡರು. ಹೊರಗೆ ಹೊರಡಲು ಕಾತರತೆ ತೋರಿತು; ಆದರೆ ಅದು ಅಸಾಧ್ಯ. ಆದ್ದರಿಂದ ತಾವೂ ಅದಷ್ಟು ಕಷ್ಟಪಡಬೇಕೆಂಬ ನಿಶ್ಚಯಮಾಡಿಕೊಂಡರು. ಚರಖಾ ಹಿಡಿದು ಕುಳಿತು ನಿತ್ಯವೂ ಮೂರುಗಂಟೆ ಕಾಲ ನೂಲುವುದನ್ನೂ ಮತ್ತೆರಡು ಮೂರು ಗಂಟೆ ಕಾಲ ನವಾರು ನೇಯುವುದನ್ನೂ ಇಟ್ಟುಕೊಂಡು ತಮ್ಮ ಉತ್ಸಾಹದ ಜ್ವರವನ್ನು ಕಳೆಯಲು ತೊಡಗಿದರು. ಗುಡಿಸಿಕೊಳ್ಳುವುದೂ ಒಗೆಯುವುದೂ ಮುಂತಾದ ಕೆಲಸಗಳು ಯಥಾಪೂರ್ವ. ಅದಷ್ಟು ಪುಸ್ತಕಗಳನ್ನೂ ಓದಿದರು.

ಏಕಾಂತ ಬಂಧನದಲ್ಲಿ ಒಂದು ತಿಂಗಳು ಕಳೆಯಿತು. ಆ ವೇಳೆಗೆ ಸರ್ದಾರ್ ನರ್ಮದಾಪ್ರಸಾದಸಿಂಗನು ಬಂದು ಜೊತೆಯಾದನು. ಆತನ ಜೊತೆಯಲ್ಲಿ ಎರಡೂವರೆ ತಿಂಗಳು ಕಳೆಯುವಷ್ಟರಲ್ಲಿಯೆ ಜೂನ್ ತಿಂಗಳ 30ನೆ ತಾರೀಖಿನ ದಿನ ಅರುಣೋದಯ ಸಮಯದಲ್ಲಿ ಮೋತಿಲಾಲರು ಡಾ|| ಸಯ್ಯದ್‌ಮಹಮ್ಮದರೊಡನೆ ಬಂದು ಸೇರಿಕೊಂಡರು.

ಇನ್ನೂ ಹಾಸಿಗೆಯಲ್ಲಿದ್ದಾಗಲೆ ಮೋತಿಲಾಲರನ್ನು ಆ ಬೆಳಿಗ್ಗೆ ದಸ್ತಗಿರಿ ಮಾಡಿದ್ದರು.

## 3. ಸಪ್ರು ಜಯಕರರ ಸಂಧಾನ

ಜವಾಹರಲಾಲರು ಜೈಲಿಗೆ ಹೊರಟಾಗ ಮೋತಿಲಾಲರು ಅಧ್ಯಕ್ಷತೆ ವಹಿಸಿದರಷ್ಟೆ. ಹಿಂದೆ ಸ್ವರಾಜ್ ಪಕ್ಷದಲ್ಲಿ ಶಿಷ್ಟಿಯನ್ನು ಕಾಪಾಡಿದ್ದ ಅನುಭವ ಈಗ ವಿದೇಶೀ ಬಟ್ಟೆಯ ಬಾಯ್ಕಾಟನ್ನು ಶಿಷ್ಟಿಯಿಂದ ನಡೆಸುವುದರಲ್ಲಿ ವಿನಿಯುಕ್ತವಾಯಿತು. ಅದಕ್ಕಾಗಿ ಮುಂಬಯಿಗೆ ಹೊರಟರು. ಜವಾಹರಲಾಲರ ತಾಯಿಯವರೂ ಹೆಂಡತಿಯೂ ಜೊತೆಯಲ್ಲಿ ಹೊರಟು ಮುಂಬಯಿ ಜನರ ಉತ್ಸಾಹವನ್ನು ಕಂಡರು. ಮೋತಿಲಾಲರ ಕಾರ್ಯಸಾಧನೆಯಿಂದ ವರ್ತಕ ಮಾಲೀಕರು ಕಾಂಗ್ರೆಸ್ಸಿನವರ ಬಳಿ ಬಂದು ತ್ರಾಹಿತ್ರಾಹಿಯೆನ್ನುವಂತಾಯಿತು. ಹೊರದೇಶಗಳಿಂದ ಬಂದ ವಸ್ತ್ರರಾಶಿಗಳು ಬಂದರಿನಲ್ಲಿಯೆ ಮುಗ್ಗುವ ಸ್ಥಿತಿಗೆ ಬಂತು. ಬಾಯ್ಕಾಟಿನ ವ್ಯವಸ್ಥೆಯನ್ನು ಪೂರ್ತಿಗೊಳಿಸಿ ಮೋತಿಲಾಲರು ಹಿಂತಿರುಗಿದರು. ಆರೋಗ್ಯವಿರಲಿಲ್ಲ; ಕೆಲಕಾಲ ಮುಸ್ಸೂರಿಯಲ್ಲಿರಬೇಕೆಂದಿದ್ದರು. ಆ ವೇಳೆಯಲ್ಲಿ ಅವರ ದಸ್ತಗಿರಿಯೂ ನಡೆಯಿತು; ಕಾಂಗ್ರೆಸ್ ವರ್ಕಿಂಗ್ ಕಮಿಟಿಯೆಂಬುದೇ ವಿಧಿಬಾಹಿರವೆನಿಸಿ ಆ ಹೆಸರಿದ್ದವರೆಲ್ಲರೂ ದಸ್ತಗಿರಿಯಾಗಲಾರಂಭವಾಯಿತು. ಆಗ ಅಧ್ಯಕ್ಷಸ್ಥಾನದಲ್ಲಿ ಹಂಗಾಮಿಯಾಗಿ ಯಾರಾದರೂ ಗೊತ್ತಾಗುತ್ತಲಿದ್ದರು. ಮಹಿಳೆಯರೂ ಧೈರ್ಯ ವಹಿಸಿ ಅಂತಹ ಪದವಿಗಳನ್ನು ಹೊತ್ತು ದಸ್ತಗಿರಿಗೆ ಗುರಿಯಾಗಲು ಸಿದ್ಧರಾದರು. ಸ್ವಲ್ಪ ಕಾಲದಲ್ಲಿಯೆ ಕಮಲಾದೇವಿಯ ಸರದಿಯೂ ಪ್ರಾಪ್ತವಾಯಿತು.

ಜೈಲಿನಲ್ಲಿ ಪ್ರವೇಶಿಸಿದಾಗ ಮೋತಿಲಾಲರು ತುಂಬಾ ಅಸ್ವಸ್ಥತೆಗೊಡಿದ್ದರು. ಜವಾಹರಲಾಲರ ಬರಾಕಿನಲ್ಲಿ ಈಗ ನಾಲ್ವರಾದರು; ಅಲ್ಲಿ ಮೋತಿಲಾಲರಿಗೆ ಸ್ವಲ್ಪವಾದರೂ ಹಿತವಿಲ್ಲ. ಬೇರೆಡೆಯಲ್ಲಿ ಅವರನ್ನಿಡುವುದಾಗಿ ಅಧಿಕಾರಿಗಳೇನೋ ಹೇಳಿದರು. ಅದಕ್ಕೆ ಜವಾಹರಲಾಲ್ ನರ್ಮದಾ ಶಂಕರ್ ಸಯ್ಯದ್ ಮಹಮ್ಮದರೊಪ್ಪಲಿಲ್ಲ. ಜೊತೆ

ಯಲ್ಲಿಯೇ ಇದ್ದರೆ ತಾವೇ ಉಪಚರಿಸುತ್ತಿರಬಹುದೆಂಬ ಯೋಚನೆ. ಬರಾಕಿನೊಳಗೆ ಅತಿ ಕಿಷ್ಕಿಂಧ. ಮೋತಿಲಾಲರಿಗೆ ಮಲಗಲು ಚಿಕ್ಕ ವರಾಂಡದಲ್ಲಿ ಏರ್ಪಾಟು ಮಾಡಿದರು; ಆದರೆ ಚಾವಣಿಯೆಲ್ಲ ಸೋರುತ್ತಿತ್ತು. ಮೋತಿಲಾಲರಿಗೆ ಜ್ವರ ಬರುತ್ತಿದ್ದುದರಿಂದ ಈ ಮೂವರಿಗೆ ಚಿಂತೆಯಾಯಿತು. ಅಧಿಕಾರಿಗಳು ಸ್ಥಿತಿಯನ್ನು ಕಂಡು ಮತ್ತೊಂದು ವರಾಂಡ ಕಟ್ಟಿಸಿದರು.

ಜುಲೈ ತಿಂಗಳಲ್ಲಿ ಇದ್ದಕ್ಕಿದ್ದಂತೆಯೇ ಸಪ್ರು ಜಯಕರರಿಬ್ಬರೂ ಗಾಂಧೀಜಿಯವರಿಂದ ಒಂದು ಪತ್ರವನ್ನು ಹೊತ್ತು ತಂದರು. ಮುಂಬಯಿಯಲ್ಲಿದ್ದಾಗ ಮೋತಿಲಾಲರು ಜಾರ್ಜ್ ಸ್ಲೊಕೋಂಬ್ ಎಂಬಾತನಿಗೊಂದು ಹೇಳಿಕೆಯನ್ನು ಕೊಟ್ಟಿದ್ದರು. ಅದರ ಭಾಗವೊಂದಕ್ಕೆ ಒಂದರ್ಥವನ್ನು ಕಟ್ಟಿ ಸತ್ಯಾಗ್ರಹ ನಿಲ್ಲಿಸುವ ಪ್ರಯತ್ನದಲ್ಲಿ ಸಪ್ರು ಜಯಕರರಿಬ್ಬರೂ ತೊಡಗಿ ವೈಸರಾಯಿಯ ಸಹಕಾರ ಪಡೆದು ಬಂದಿದ್ದರು. ತಂದೆ ಮಕ್ಕಳಿಬ್ಬರೂ ಪ್ರಸ್ತಾಪ ನಡೆಸಿದರು. ಗಾಂಧೀಜಿಯವರನ್ನೂ ಕೇಳದೆ ವರ್ಕಿಂಗ್ ಕಮಿಟಿಯ ಇತರ ಸದಸ್ಯರ ಅಭಿಪ್ರಾಯವನ್ನೂ ತಿಳಿಯದೆ ತಾವಿಬ್ಬರು ಏನನ್ನೂ ಹೇಳಲಾರೆವೆಂದರು. ಆ ಕೂಡಲೆ ಆ ಸಂಧಾನಕರಣಿಗಳಿಬ್ಬರೂ ವೈಸರಾಯಿ ಬಳಿಗೆ ಹೊರಟರು. ವೈಸರಾಯಿಗೆ ವರ್ಕಿಂಗ್ ಕಮಿಟಿಯ ಸದಸ್ಯರು ಸಭೆ ಸೇರುವುದು ಇಷ್ಟವಾಗಲಿಲ್ಲ; ನೆಹರುಗಳಿಬ್ಬರೂ ಯರವಾಡಕ್ಕೆ ಹೊರಟು ಗಾಂಧೀಜಿಯೊಡನೆ ಮಾತುಕಥೆ ನಡೆಸುವುದರಲ್ಲಿ ಮಾತ್ರ ಆಕ್ಷೇಪ ತೋರಲಿಲ್ಲ. ಆ ಮಾತನ್ನು ಹೊತ್ತುಕೊಂಡು ಪುನಃ ಸಪ್ರು ಜಯಕರರು ನೈನಿ ಜೈಲಿಗೆ ಬಂದರು. ಸಮಾಧಾನವಾಗುವ ಸಂಭವವಿಲ್ಲವೆಂದು ಜವಾಹರಲಾಲರು ಹೇಳಿದಾಗ್ಗೂ ಅವರಿಬ್ಬರೂ ಸೇರಿಕೊಂಡು ಯರವಾಡ ಜೈಲಿನಲ್ಲಿ ಗಾಂಧೀಜಿಯನ್ನು ನೆಹರುಗಳಿಬ್ಬರೂ ಕಾಣುವಂತೆ ಯತ್ನದಿಂದ ಒಪ್ಪಿಸಿದರು.

ಆ ಪ್ರಕಾರ ಆಗಸ್ಟ್ 10ನೆ ತಾರೀಖು ಗೋಪ್ಯರೀತಿಯಲ್ಲಿ ನೈನಿಯಿಂದ ಪುಣೆಗೆ ಸ್ಪೆಷಲ್ ಟ್ರೈನ್ ಹೊರಟಿತು. ಮೋತಿಲಾಲ್ ಜವಾಹರಲಾಲ್ ಮತ್ತು ಸಯ್ಯದ್ ಮಹಮ್ಮದರ ಪ್ರಯಾಣ. ದೊಡ್ಡ ಸ್ಟೇಷನ್ನುಗಳಲ್ಲಿ ನಿಲ್ಲದೆ ಯಾವುದೋ ಅಪ್ರಸಿದ್ಧ ಸ್ಟೇಷನ್ನುಗಳಲ್ಲಿ ನಿಲ್ಲುತ್ತ ರೈಲು

ಹೊರಡುತ್ತಿದ್ದಾಗಲೂ ಜನರಿಗೆ ಹೇಗೋ ಸಮಾಚಾರ ತಿಳಿದು ಎಲ್ಲ ಸ್ಟೇಷನ್ನುಗಳಲ್ಲಿಯೂ ರೈಲು ಬಂದ ವೇಳೆಗೆ ಜನರ ಗುಂಪು ಸೇರಿಯೇ ಇರುತ್ತಿತ್ತು. ಹನ್ನೊಂದನೆ ತಾರೀಖು ಯರವಾಡ ಜೈಲನ್ನು ಸೇರಿದರು. ಅಲ್ಲಿ ಗಾಂಧೀಜಿಯ ಜೊತೆಯಲ್ಲಿಯೆ ತಾವೂ ಇರಲಾಗುವುದೆಂಬ ನಂಬಿಕೆ ಯಿತ್ತು; ಯರವಾಡದ ಅಧಿಕಾರಿ ಲೆ|| ಕ|| ಮಾರ್ಟಿನ್ನನೂ ಹಾಗೆ ಏರ್ಪಡಿಸಿಕೊಂಡಿದ್ದನು. ಆದರೆ ನೈನಿಯಿಂದ ಕಾವಲಿಗಾಗಿ ಜೊತೆಯಲ್ಲಿ ಬಂದಿದ್ದ ಪೋಲೀಸ್ ಅಧಿಕಾರಿ ಮಾರ್ಟಿನ್ನನ ಕಿವಿಯಲ್ಲಿ ಏನನ್ನೋ ಉಸುರಿದನು. ಏನೆಂಬುದು ಸ್ವಲ್ಪ ಕಾಲದಲ್ಲಿಯೆ ಪತ್ತೆಯಾಯಿತು. ನೆಹರುಗಳಿಬ್ಬರೂ ಗಾಂಧೀಜಿಯೊಡನೆ ಏಕಾಂತರೀತಿಯಲ್ಲಿ ಮಾತ ನಾಡಲು ಅವಕಾಶಕೊಡಬಾರದೆಂದೂ ಮಾತೆಲ್ಲವನ್ನೂ ಸಪ್ರು ಜಯಕರ ರೆದುರಿಗೇ ನಡೆಸುವಂತೆ ಏರ್ಪಡಿಸಬೇಕೆಂದೂ ಸರ್ಕಾರದವರು ನಿಶ್ಚಯಿ ಸಿದ್ದರು. ಆದ್ದರಿಂದ ಆ ರಾತ್ರಿ ಮಾತ್ರವಲ್ಲದೆ ಮರುದಿನವನ್ನೂ ರಾತ್ರಿ ಯನ್ನೂ ಬೇರೆ ಬರಾಕಿನಲ್ಲಿಯೆ ತಂದೆ ಮಕ್ಕಳು ಕಳೆಯಬೇಕಾಯಿತು. ಗಾಂಧೀಜಿಯನ್ನು ಕಂಡು ಮಾತನಾಡುವುದಕ್ಕಾಗಿಯೆ ನೈನಿಯಿಂದ ಪ್ರಯಾಣ ಮಾಡಿ ಬಂದು ಬೇರೆಯಾಗಿರುವುದು ಮೋತಿಲಾಲರಿಗೆ ಸಹಿಸಲಾರದ ಹಿಂಸೆಯಾಗಿ ತೋರಿತು. 13ನೇ ತಾರೀಖು ಮಧ್ಯಾಹ್ನ ಕರೆ ಬಂತು. ಸಪ್ರು ಜಯಕರರಿಬ್ಬರೂ ಬಂದಿರುವರೆಂದೂ ಅವರೊಂದಿಗೆ ಮಹಾತ್ಮಾಜಿ ಜೈಲಿನ ಕಚೇರಿಯಲ್ಲಿರುವರೆಂದೂ ಅಲ್ಲಿಗೇ ಹೊರಡ ಬೇಕೆಂದೂ ಸಂದೇಶ ತಲಪಿತು. ಮೋತಿಲಾಲರಾಗ ಹೊರಡುವುದಿಲ್ಲ ವೆಂದು ಘನವಾದ ಕಾಠಿಣ್ಯವನ್ನು ವಹಿಸಿದರು. ಎಷ್ಟೋ ಸಮಾಧಾನ ವನ್ನೂ ಕ್ಷಮಾಪಣೆಯ ಮಾತುಗಳನ್ನೂ ಅಧಿಕಾರಿಗಳಾಡುತ್ತ ಪ್ರತ್ಯೇಕ ವಾಗಿ ಗಾಂಧೀಜಿಯನ್ನು ಕಾಣಲು ಅಭ್ಯಂತರವಿಲ್ಲವೆಂದು ಹೇಳಿದ ತರು ವಾಯ ಹೊರಡಲೊಪ್ಪಿದರು. ಆ ಸಂಜೆ ಗಾಂಧೀಜಿಯ ಬಳಿಯಲ್ಲಿಯೇ ಈ ಮೂವರಲ್ಲದೆ ಜಯರಾಂದಾಸ್ ದೌಲತರಾಂ, ವಲ್ಲಭ್ಭಾಯಿ ಪಟೇ ಲರೂ ಸೇರಿಕೊಂಡರು. ಸಪ್ರು ಜಯಕರರೊಡನೆ ಮೂರು ದಿನಗಳ ಚರ್ಚೆ ನಡೆಯಿತು; ಆ ಸಂಬಂಧವಾದ ಕಾಗದ ಪತ್ರಗಳು ದೇಶದ ಚರಿತ್ರೆಯಲ್ಲಿ ಸೇರಿರುವ ಸರಕು.

ಮೋತಿಲಾಲರಿಗೆ ಜ್ವರ ಬರುತ್ತಲೇ ಇತ್ತು. ಆ ಸ್ಥಿತಿಯಲ್ಲಿ ಸರ್ಕಾರದ ಅಧಿಕಾರಿಗಳೂ ಕೂಡ ಆದಷ್ಟು ಅನುಕೂಲಗಳನ್ನೊದಗಿಸಿಕೊಡಲು ಸಿದ್ಧರಾಗಿದ್ದರು. ಯರವಾಡ ಜೈಲನ್ನು ಸೇರಿದಾಗ ಒಂದು ವಿನೋದವೇ ನಡೆಯಿತು. ಸೂಪೆರಿಂಟೆಂಡೆಂಟ್ ಕರ್ನಲ್ ಮಾರ್ಟಿನ್ ಬಂದು ಮೋತಿಲಾಲರನ್ನೇ "ತಮ್ಮ ಆಹಾರಕ್ಕೇನೇನಾಗಬೇಕೋ ಹೇಳಬೇಕು" ಎಂದು ಕೇಳಿದನು. ಮೋತಿಲಾಲರು "ಅಂತಹ ವಿಶೇಷವೇನೂ ಇಲ್ಲ. ಸಾಮಾನ್ಯವಾದ ಆಹಾರ"ವೆನ್ನುತ್ತ ಪ್ರಾತಃಕಾಲದ ಟೀ ಪಾನದಿಂದ ಹಿಡಿದು ರಾತ್ರಿಯೂಟದವರೆಗೆ ತಾವು ನಿತ್ಯವೂ ಅಭ್ಯಾಸದಲ್ಲಿಟ್ಟುಕೊಂಡಿದ್ದ ವಸ್ತುಗಳ ಪಟ್ಟಿಯನ್ನು ಹೇಳುತ್ತ ಬಂದರು. ಟಾಜ್‌ಮಹಲ್ ಹೊಟೇಲಿನಂತಹ ಸ್ಥಳಕ್ಕೆ ಅದು ಸಾಮಾನ್ಯ; ಯರವಾಡಾ ಜೈಲಿಗೆ! ಕೇಳುತ್ತ ಕೇಳುತ್ತ ಮಾರ್ಟಿನ್ ಮುಖದಲ್ಲಿ ಗಾಬರಿ ಕಂಡಿತು; ಗಾಬರಿಯಿಂದ ಬಾಯಿ ತೆರೆದನು. ಆತನ ಮುಖದಲ್ಲಾದ ಬಣ್ಣದ ಬದಲಾವಣೆಯನ್ನು ಗಮನಿಸುತ್ತ ಜವಾಹರಲಾಲರೂ ಸಯ್ಯದ್ ಮುಹಮ್ಮದರೂ ಮನಸ್ಸಿನೊಳಗೇ ಉಲ್ಲಾಸಗೊಂಡರು. ಭಾರತೀಯ ಪ್ರಮುಖರಲ್ಲಿ ಸರ್ವಶ್ರೇಷ್ಠನಾದ ಪುಣ್ಯಮೂರ್ತಿಯನ್ನು ತನ್ನ ಸುಭರ್ದಿನಲ್ಲಿಟ್ಟುಕೊಂಡಿದ್ದ ಆ ಮಾರ್ಟಿನ್ನನಿಗೆ ಮೇಕೆ ಹಾಲು ಖರ್ಜೂರಗಳನ್ನೋ ಎಂದಾದರೂ ನಾಲ್ಕು ಕಿತ್ತಿಲೆ ಹಣ್ಣುಗಳನ್ನೋ ಕೊಡಿಸುವ ಅಭ್ಯಾಸವಾಗಿತ್ತು. ಮೋತಿಲಾಲರಂತಹ ಭಾರತರಾಷ್ಟ್ರ ನಾಯಕರನ್ನು ಆತನು ಆದುವರೆಗೂ ಕಾಣ.

ಪುನಃ ಅದೇ ಬಗೆಯ ಪ್ರಯಾಣ ಯರವಾಡದಿಂದ ನೈನಿಗೆ. ಭಾರಿ ಸ್ಟೇಷನ್ನುಗಳಲ್ಲಿ ರಭಸದಿಂದ ನುಗ್ಗುತ್ತ ಎಲ್ಲಿಯೋ ಬೇಚಿರಾಘಿನಂತಹ ಸ್ಟೇಷನ್ನುಗಳಲ್ಲಿ ನಿಲ್ಲುತ್ತ ಹೊರಟಿತು ಸ್ಪೆಷಲ್ ಟ್ರೈನ್. ಆದರೇನು? ಜನರ ಗುಂಪುಗಳು ಹಿಂದಿನ ಪ್ರಯಾಣದಲ್ಲಿದ್ದುದಕ್ಕೆ ಎರಡು ಮೂರರಷ್ಟು. ಪ್ಲಾಟ್‌ಫಾರಂಗಳಲ್ಲಿ ಮಾತ್ರವಲ್ಲದೆ ಕಂಬಿಗಳ ಪಕ್ಕದಲ್ಲೂ ಕಂಬಿಗಳ ಮೇಲೂ ಜನರ ಸಂದಣಿ. ಕೆಲವೆಡೆಗಳಲ್ಲಿ ಅನಾಹುತಗಳೇ ಸಂಭವಿಸಬೇಕಾಗಿತ್ತು. ಹೇಗೋ ತಪ್ಪಿತು.

ನೈನಿ ಜೈಲಿನಲ್ಲಿ ಮೋತಿಲಾಲರಿಗೆ ಮನೆಯಿಂದಲೇ ಆಹಾರ ತರುತ್ತಿತ್ತು. ಆದಾಗ್ಗೂ ದಿನೇ ದಿನೇ ರೋಗವು ಪ್ರಬಲವಾಯಿತು. ಅನೇಕ

ಡಾಕ್ಟರುಗಳು ಬಂದು ಪರೀಕ್ಷೆ ನಡೆಸಿದರು. ಜೈಲಿನಲ್ಲಿದ್ದರೆ ವಾಸಿಯಾಗ ಲಾರದೆಂಬುದು ಎಲ್ಲರಿಗೂ ಸ್ಪಷ್ಟವಾಗಿದ್ದುದರಿಂದ ಯಾರೋ ಮಿತ್ರರು ಮೋತಿಲಾಲರನ್ನು ಅಸ್ವಸ್ಥತೆಗಾಗಿ ಬಿಡುಗಡೆ ಮಾಡಿಸುವುದು ಯೋಗ್ಯ ವೆಂದು ಪತ್ರಿಕೆಯಲ್ಲಿ ಬರೆದಿದ್ದರು. ಆ ಬಗೆಯ ಸೂಚನೆ ಮೋತಿಲಾಲ ರಿಗಿಷ್ಟವಾಗಲಿಲ್ಲ. ತಾವೇ ವೈಸರಾಯಿ ಬಳಿಗೆ ತಂತಿ ಕೊಡುತ್ತ "ಯಾವ ಕೃಪಾಕಟಾಕ್ಷದಿಂದಲೂ ನನ್ನ ಬಿಡುಗಡೆಯ ಯೋಚನೆ ನಡೆಸಬೇಕಾ ದುದಿಲ್ಲ"ವೆಂದು ತಿಳಿಸಿದರು. ಆದರೆ ದಿನೇದಿನೇ ಕೃಶರಾಗುತ್ತಿದ್ದರು ; ಇತರರಿಗೆ ಚಿಂತೆಗೂ ಗಾಬರಿಗೂ ಆಸ್ಪದವಾಯಿತು. ಸೆಪ್ಟೆಂಬರ್ ೮ನೇ ತಾರೀಖಿನ ದಿನ ಬಿಡುಗಡೆಯಾಯಿತು. ಜೈಲಿನಲ್ಲಿ ಹತ್ತುವಾರಗಳನ್ನು ಕಳೆದಿದ್ದರು.

ಮೋತಿಲಾಲರು ಹೊರಟ ಬಳಿಕ ಜವಾಹರಲಾಲರಿಗೂ ಗೆಳೆಯ ರಿಗೂ ಬಲು ಕಷ್ಟ ತೋರಿತು. ಮೋತಿಲಾಲರಿದ್ದಾಗ ಅವರ ಉಪಚರ್ಯೆ ಗಾಗಿ ಎಷ್ಟೋ ಕೆಲಸಗಳನ್ನು ಮೂವರೂ ಯೋಚಿಸುತ್ತ ನಡೆಸುತ್ತ ಮನಸ್ಸಿನಲ್ಲಿ ಸಮಾಧಾನ ತಂದುಕೊಂಡಿದ್ದರು. ನವಾರು ನೇಯುವು ದನ್ನೂ ಚರಖಾ ತಿರುಗಿಸುವುದನ್ನೂ ಅಷ್ಟು ಕಾಲವೂ ಜವಾಹರ ಲಾಲರು ಬಿಟ್ಟುಕೊಟ್ಟಿದ್ದರು. ಮೋತಿಲಾಲರಿದ್ದಾಗ ಬರುತ್ತಿದ್ದ ನಿತ್ಯ ಪತ್ರಿಕೆಯೂ ನಿಂತುಹೋಯಿತು. ಅತಿ ಖಿನ್ನತೆಯನ್ನು ತಾಳುತ್ತ ಹಿಂದಿನ ದಿನಚರ್ಯೆಯನ್ನು ಮತ್ತೆ ಪ್ರಾರಂಭಿಸಿಕೊಂಡರು. ಮೋತಿ ಲಾಲರು ಹೊರಟ ನಾಲ್ಕೈದು ದಿನಗಳ ತರುವಾಯ ಜವಾಹರ ಲಾಲರ ಭಾವಂದಿರು ರಣಜಿತ್ ಸೀತಾರಾಮ ಪಂಡಿತರು ದಸ್ತಗಿರಿಯಾಗಿ ಅದೇ ಬರಾಕಿನಲ್ಲಿ ಬಂದು ಸೇರಿಕೊಂಡರು. ಅಕ್ಟೋಬರ್ 11ನೆ ತಾರೀಖಿಗೆ ಆರು ತಿಂಗಳು ತೀರಿದಂತಾಗಿ ಜವಾಹರಲಾಲರಿಗೆ ಬಿಡುಗಡೆ ಯಾಯಿತು.

## 4. ಎಂಟು ದಿನಗಳ ಬಿಡುಗಡೆ

ಬಿಡುಗಡೆಯಾದಾಗಲೆ ಜವಾಹರಲಾಲರ ಮನಸ್ಸಿನಲ್ಲಿ ಪುನಃ ಜೈಲಾಗುವುದು ಖಂಡಿತವೆಂಬ ನಿಶ್ಚಯವಿತ್ತು. ದೇಶದ ಪರಿಸ್ಥಿತಿಯೇ ಹಾಗೆ. ಸಪ್ರು ಜಯಕರರ ಸಂಧಾನ ಚಾತುರ್ಯವೆಲ್ಲ ಹಾಳಾಗಿ

ಹೋಗಿದ್ದುದಲ್ಲದೆ ಸರ್ಕಾರದವರು ಒಂದೊಂದಾಗಿ ಆರ್ಡಿನೆನ್ಸ್ ಬಾಣಗಳನ್ನು ಮಸೆದೆಸೆಯುತ್ತಿದ್ದರು. ಸ್ವಲ್ಪ ಕಾಲ ಹೊರಗಿದ್ದರೂ ಏನಾದರೂ ಪರಿಣಾಮಕಾರಕವಾದುದನ್ನು ನಡೆಸುವ ಉತ್ಸಾಹದಿಂದ ಜವಾಹರಲಾಲರು ಮನೆಗೆ ಹೊರಟರು.

ಮೋತಿಲಾಲರು ಚಿಕಿತ್ಸೆಗನುಸಾರವಾಗಿರಲು ಮಸ್ಸೂರಿಗೆ ಹೊರಟಿದ್ದರು. ಸ್ವರೂಪರಾಣಿದೇವಿ ಹೆಣ್ಣುಮಕ್ಕಳನ್ನು ಕರೆದುಕೊಂಡು ಆತನ ಉಪಚರ್ಯೆಗಾಗಿ ಅಲ್ಲಿಯೆ ಇದ್ದರು. ಪ್ರಯಾಗದ ಮನೆಯಲ್ಲಿ ಕಮಲಾದೇವಿಯೊಬ್ಬಳೇ. ಜವಾಹರಲಾಲರು ಮನೆಗೆ ಬಂದ ಕೂಡಲೆ ಯು. ಪಿ. ಪ್ರಾಂತದಲ್ಲಿ ಅದುವರೆಗೂ ನಡೆದಿದ್ದುದನ್ನು ತಿಳಿದು ಮುಂದೆ ಮಾಡತಕ್ಕುದನ್ನು ಯೋಚಿಸಿದರು.

ಎಷ್ಟೋ ಜನರು ಸಣ್ಣ ಗುಂಪುಗಳಾಗಿಯೋ ದೊಡ್ಡ ಗುಂಪುಗಳಾಗಿಯೋ ಜೈಲುಗಳಿಗೆ ಹೊರಟಿದ್ದರು. ಜೈಲು ಪ್ರವೇಶ ಅತಿ ಸಾಮಾನ್ಯವಾಗಿತ್ತು. ಮೆರವಣಿಗೆಗಳೂ ಹರತಾಲಗಳೂ ಹಾಗೆಯೆ ಸಾಮಾನ್ಯ. ಬಾಯ್ಕಾಟ್ ಕೆಲಸವೂ ಸಮರ್ಪಕವಾಗಿ ಮುಂದುವರಿಯುತ್ತಿತ್ತು. ಗುಜರಾಥ ಪ್ರಾಂತದಲ್ಲಾದರೆ ಗ್ರಾಮಸ್ಥರೂ ಸೇರಿಕೊಂಡು ಕಂದಾಯ ಸಲ್ಲಿಸದಿರುವ ಕ್ರಮವನ್ನು ಆರಂಭಿಸಿದ್ದರು. ತಮ್ಮ ಪ್ರಾಂತದಲ್ಲಿಯೂ ಆ ಕ್ರಮವೇಕಾಗಬಾರದೆಂದು ಜವಾಹರಲಾಲರಿಗೂ ಇತರರಿಗೂ ಯೋಚನೆ ಚರ್ಚೆಗಳು 12ನೆ 13ನೆ ತಾರೀಖಿನ ದಿನಗಳಲ್ಲಿಯೇ ನಡೆದವು. ಯು. ಪಿ. ಪ್ರಾಂತದ ರೈತರು ಕಂದಾಯಕೊಡುವುದು ಸರ್ಕಾರಕ್ಕಲ್ಲ; ತಾಲೂಕಾದಾರರಿಗೆ. ರೈತರು ತಮ್ಮ ಗುತ್ತಿಗೆ ಹಣ ಕೊಡದಿದ್ದರೆ ತಾಲೂಕಾದಾರರಿಗೂ ಅವರಿಗೂ ಘರ್ಷಣೆಯಿಟ್ಟುಕೊಂಡು ಅನೈಕ್ಯತೆ ಹುಟ್ಟಿ ರೇಗುವ ಸಂಭವವೊಂದು ಕಡೆ; ಕಡುಬಡವರಾಗಿ ಅಸಮಾಧಾನ ತುಂಬಿಕೊಂಡಿದ್ದ ರೈತರಿಗೆ ತಕ್ಕ ಕ್ರಮವನ್ನೊದಗಿಸಿ ಬಹು ಸಂಖ್ಯಾಕ ಗ್ರಾಮಸ್ಥ ಜನರನ್ನೂ ರಾಷ್ಟ್ರಮುಖವಾಗಿ ನಡೆಯುವ ಪ್ರಯತ್ನದಲ್ಲಿ ಸೇರಿಸಿಕೊಳ್ಳತಕ್ಕ ಅವಶ್ಯಕತೆಯಿನ್ನೊಂದು ಕಡೆ. ರೈತರೂ ತಾಲೂಕಾದಾರರೂ ಒಟ್ಟುಗೂಡಿ ಕಂದಾಯವನ್ನು ಸಲ್ಲಿಸದಿದ್ದಲ್ಲಿ ಸುಸೂತ್ರ. ಪರಿಸ್ಥಿತಿ ಹೀಗಿದ್ದುದರಿಂದ ಜವಾಹರಲಾಲರೂ

ಇತರನಾಯಕರೂ ಯಾವ ಜಿಲ್ಲೆಯಲ್ಲಾದರೂ ಒಟ್ಟಾಗಿ ನಡೆಯುವು ದಾದರೆ ನಡೆಸತಕ್ಕದ್ದೆಂದೂ ರೈತರಿಗೂ ತಾಲೂಕಾದಾರರಿಗೂ ಪರಸ್ಪರ ವೈಷಮ್ಯ ಬೆಳೆಯದಂತೆ ಕ್ರಮಗೊಳ್ಳಬೇಕೆಂದೂ ನಿರ್ಧರವಾ ಡಿದರು. ತಾವೇ ಪ್ರಾರಂಭಿಸಲಿಲ್ಲ. ಯಾವ ಜಿಲ್ಲೆಯವರಾದರೂ ತಕ್ಕ ಸನ್ನಾಹ ಮಾಡಿಕೊಂಡಿದ್ದು ಕಾತರರಾಗಿದ್ದಲ್ಲಿ ಆ ಜಿಲ್ಲೆಯವರು ಪ್ರಾರಂಭಿಸಲು ಅನುಮತಿ ಕೊಟ್ಟರು. ನಿರ್ಧರವೀಬಗೆಯ ರೂಪ ವನ್ನು ಪಡೆದ ಮೇಲೆ ಜವಾಹರಲಾಲರು ಇಲಾಹಾಬಾದ್ ಜಿಲ್ಲೆಯ ಕೃಷೀವಲರ ಸಮ್ಮೇಳನವನ್ನು ನಡೆಸತಕ್ಕದೆಂದು ನಿಶ್ಚಯಮಾಡಿಕೊಂ ಡರು. ಈ ಚರ್ಚೆಗಳೂ ನಿರ್ಣಯಗಳೂ ಮುಗಿದ ಬಳಿಕ ನಗರದ ಮೈದಾನದಲ್ಲಿ ಭಾರಿ ಸಭೆ; ಜವಾಹರಲಾಲರು ಆ ಜನಸ್ತೋಮದೆದು ರಿಗೆ ನಿಂತು ಉಜ್ಜ್ವಲ ಭಾಷಣ ಮಾಡಿದರು.

ಬಿಡುಗಡೆಯಾದ ಮೊದಲನೆ ದಿನ ಕೆಲಸ ತೃಪ್ತಿಕಾರಕವಾಗಿ ನಡೆಯಿತೆಂದುಕೊಂಡು ಜವಾಹರಲಾಲರು ಕಮಲಾದೇವಿಯೊಡನೆ ತಂದೆಯವರನ್ನು ಕಾಣಲು ಮಸ್ಸೂರಿಗೆ ಪ್ರಯಾಣ ಮಾಡಿದರು. ಮೂರು ದಿನಗಳ ಕಾಲವನ್ನೇ ಅಲ್ಲಿ ಕಳೆದುದು. ಮೋತಿಲಾಲರು ಗುಣಮುಖವಾಗಿದ್ದಂತೆ ಕಂಡರು. ಮನಸ್ಸಿಗೆ ಹರ್ಷವಾಯಿತು. ಮಕ್ಕಳನ್ನಾಡಿಸುತ್ತ ಆಡುತ್ತ ಕಾಲ ಕಳೆದರು. ರಾಷ್ಟ್ರೀಯ ಧ್ವಜವನ್ನು ಚಿಕ್ಕ ಮಗುವು ಹೊತ್ತು ಮುಂದೆ ಹೊರಟರೆ ಇತರರೆಲ್ಲರೂ 'ಝಂಡಾ ಊಂಚಾ' ಹಾಡುತ್ತ ಹೊರಟು ಆ ಮನೆಯ ಪ್ರದಕ್ಷಿಣೆ ಮಾಡಿದಂತೆ ಮೆರವಣಿಗೆ ನಡೆಸುವುದೊಂದು ಆಟ. ಹೀಗೆ ಕಳೆದ ಮೂರು ದಿನಗಳೇ ತಂದೆಯೊಂದಿಗೆ ಹಿತವಾಗಿ ಕಳೆದ ಕಡೆಯ ಸಮಯವಾಯಿತು.

ಬೇಸಾಯಗಾರರ ಸಮ್ಮೇಳನ 19ನೆ ತಾರೀಖಿಗೆಂದು ನಿಶ್ಚಯ ವಾಗಿತ್ತು. ಆದಕ್ಕಾಗಿ ಜವಾಹರಲಾಲರು 17ನೆ ತಾರೀಖಿನ ದಿನವೇ ಮಸ್ಸೂರಿಯಿಂದ ಹೊರಡಲು ಸಿದ್ಧರಾದರು. ಮೋತಿಲಾಲರು ಮರುದಿನ ತಾವೂ ಹೊರಡಬೇಕೆಂದು ಗೊತ್ತುಮಾಡಿದರು. ಪುನಃ ಬೇಗನೆ ಮಗನಿಗೆ ದಸ್ತಗಿರಿಯಾದೀತೆಂಬ ಊಹೆಯಿತ್ತು; ಮಗನೊಡನೆ ಇರಬೇಕೆಂಬ ಇಷ್ಟ. ಆದುದರಿಂದ ಅಪರೀಕ್ಷಿತವಾಗಿ ತಾವೂ ಪ್ರಯಾಣಯೋಚನೆ ಬೆಳೆಸಿದರು.

ಆ ವೇಳೆಗಾಗಲೆ ಸರ್ಕಾರದವರು ಜವಾಹರಲಾಲರ ಮೇಲೆ ವಾರಂಟುಗಳನ್ನು ಹೊರಡಿಸಿದ್ದರು. ಡೇರಾಡೂನಿನಲ್ಲಿ ರೈಲು ಹೊರಡುವ ವೇಳೆಗೆ ಜವಾಹರಲಾಲರ ಕೈಗೆ 144ನೆ ಸೆಕ್ಷನ್ ಪ್ರಕಾರದ ಆಜ್ಞೆಯನ್ನು ಕೊಟ್ಟರು. ಲಖನೌ ಸ್ಟೇಷನ್ ಬಂತು. ಲಕ್ಷಾಂತರ ಜನರು ಗುಂಪುಗೂಡಿದ್ದರು; ಆ ನಗರದ ಮುನಿಸಿಪಾಲಿಟಿಯವರು ಏಕಮುಖವಾಗಿ ಬಿನ್ನವತ್ತಳೆಯರ್ಪಿಸಲು ಸಿದ್ಧಪಡಿಸಿದ್ದರು. ರೈಲಿನಿಂದಿಳಿದು ಜವಾಹರಲಾಲರು ಎರಡು ಮೂರು ಗಂಟೆ ಕಾಲವನ್ನು ಅಲ್ಲಿಯೆ ಕಳೆಯಬೇಕಾಯಿತು. 144ನೆ ಸೆಕ್ಷನ್ ಪ್ರಕಾರ ಮತ್ತೊಂದಾಜ್ಞೆಯನ್ನು ಕೈಗೆ ಕೊಡಬೇಕೆಂದು ಪೋಲೀಸ್ ಅಧಿಕಾರಿಯೊಬ್ಬನು ಎಷ್ಟು ಪ್ರಯತ್ನ ಮಾಡಿದರೂ ಜನರ ಮಧ್ಯೆ ದಾರಿಗಾಣದೆ ಹೋದನು! ಆ ಜನಸಮೂಹ ಮಧ್ಯದಿಂದ ಜವಾಹರಲಾಲ್ ಕಮಲಾದೇವಿಯರು ಕಾರಿನ ಪ್ರಯಾಣವನ್ನೇ ಇಲಾಹಾಬಾದಿಗೆ ನಡೆಸಿದರು. ದಾರಿಯುದ್ದಕ್ಕೂ ಜನರ ಗುಂಪುಗಳು, ಸಭೆಗಳು! 18ನೆ ತಾರೀಖಿನ ದಿನ ಇಲಾಹಾಬಾದ್ ಸೇರಿದರು. ಬೆಳಗಾಗುವ ವೇಳೆಗೆ ಮತ್ತೊಂದಾಜ್ಞೆ (144ನೆ ಸೆಕ್ಷನ್) ಸಿದ್ಧವಾಗಿತ್ತು. ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಲಾಗದೆಂಬ ಆಜ್ಞೆ. ಆ ವೇಳೆಗಾಗಲೆ ರೈತರ ಸಮ್ಮೇಳನಕ್ಕೆ ಸಿದ್ಧವಾಗಿ 1600 ಪ್ರತಿನಿಧಿಗಳು ಸಭೆಗೂಡಿ ಜವಾಹರಲಾಲರಿಗಾಗಿ ಕಾದಿದ್ದರು. ಕೂಡಲೆ ಆ ಸಭೆಗೆ ಹೊರಟು ಜವಾಹರಲಾಲರು ಅಲ್ಲಿಯ ಕರ್ತವ್ಯವನ್ನು ನಿರ್ವಹಿಸಿಕೊಂಡು ತಂದೆಯವರನ್ನೆದುರುಗೊಳ್ಳಲು ರೈಲ್ವೆ ಸ್ಟೇಷನ್ನಿನ ಕಡೆ ನಡೆದರು. ಆ ರೈಲು ತಡವಾಗಿ ಬಂತು. ಮೋತಿಲಾಲರನ್ನು ಮನೆಗೆ ಕಳುಹಿಸಿದ್ದಾಯಿತು. ಜವಾಹರಲಾಲರೂ ಕಮಲಾದೇವಿಯೂ ಆಗಲೆ ಮತ್ತೊಂದು ಸಭೆಗೆ ಹೋಗಬೇಕಾಗಿತ್ತು. ಸಭೆ ಮುಗಿಸಿಕೊಂಡು ಮನೆಗೆ ಬಂದಮೇಲೆ ತಂದೆಯವರೊಡನೆ ಸಿದಾನವಾಗಿ ಮಾತನಾಡುವ ಆಸೆಯಿಂದ ಆ ಸಭೆಗೆ ಹೊರಟು ಅಲ್ಲಿಯ ಕಾರ್ಯ ಮುಗಿಸಿಕೊಂಡು ಹಿಂತಿರುವ ವೇಳೆಗೆ ರಾತ್ರಿ 8 ಗಂಟೆ ದಾಟಿಹೋಗಿತ್ತು. ಮನೆಯೆದುರಿಗೆ ಕಾರ್ ಬರುವ ಕ್ಷಣಕ್ಕೆ ಸರಿಯಾಗಿ ಪೋಲೀಸ್ ಅಧಿಕಾರಿಗಳು ಕಾಣಿಸಿಕೊಂಡು ಬಂಡಿಯನ್ನು ನಿಲ್ಲಿಸಿದರು. ಜವಾಹರಲಾಲರ ದಸ್ತಗಿರಿ

ನಡೆಸಿದರು. ಆ ಕೂಡಲೆ ಯಮುನಾ ನದಿಯ ಆಚೆ ದಡಕ್ಕೆ ಸಾಗಿಸಿದರು. ಒಂಭತ್ತು ಹೊಡೆಯುತ್ತಿದ್ದವೇಳೆಗೆ ಸರಿಯಾಗಿ ನೈನಿ ಜೈಲ್ ಪ್ರವೇಶ ಮಾಡಿಸಿದರು. ಕಮಲಾದೇವಿಯೊಂಟಿಯಾಗಿಯೆ ಮನೆಯೊಳಕ್ಕೆ ಹೊರಟು ನಡೆದುದನ್ನು ಇತರರಿಗೆ ತಿಳಿಸಬೇಕಾಯಿತು.

## 5. ಕಮಲಾದೇವಿಯ ದಸ್ತಗಿರಿ

ಎಂಟು ದಿನಗಳಲ್ಲಿ ಸಯ್ಯದ್ ಮಹಮ್ಮೂದ್ ನರ್ಮದಾ ಶಂಕರ ಪ್ರಸಾದ್ ಮತ್ತು ರಣಜಿತ್ ಪಂಡಿತರ ಜೊತೆಯಲ್ಲಿರಲು ಹಳೇ ಕುತ್ತಾಫುರ್ ಬರಾಕಿಗೆ ಬಂದರು ಪುನಃ ಜವಾಹರಲಾಲರು. ಬಿಡುಗಡೆಯಾಗಿದ್ದ ದಿನ ಇಲಾಹಾಬಾದಿನಲ್ಲಿ ಕೊಟ್ಟ ಭಾಷಣದ ಬೇರೆ ಬೇರೆ ಭಾಗಗಳನ್ನೆತ್ತಿಕೊಂಡು ಒಂದೊಂದು ಭಾಗಕ್ಕೂ ಒಂದೊಂದು ಶಿಕ್ಷೆಯಂತೆ ವಿಚಾರಣೆಯಲ್ಲಿ ಗೊತ್ತಾಯಿತು. ಒಂದು ಸೆಕ್ಷನ್ ಪ್ರಕಾರ 18 ತಿಂಗಳ ಕಠಿಣ ಸಜಾ + 500 ರೂ. ದಂಡ; ಉಪ್ಪಿನ ಕಾನೂನು ಪ್ರಕಾರ 6 ತಿಂಗಳ ಸಜಾ + 100 ರೂ. ದಂಡ; ಯಾವುದೋ ಆರ್ಡಿನೆನ್ಸ್ ಪ್ರಕಾರ 6 ತಿಂಗಳ ಸಜಾ + 100 ರೂ. ದಂಡ. ಒಟ್ಟು ಎರಡು ವರ್ಷ ಕಠಿಣ ಸಜಾ; ದಂಡ ತೆರದಿದ್ದರೆ ಕೊಸರಿಗೆ 5 ತಿಂಗಳ ಸಜಾ.

ಕಮಲಾದೇವಿ ಆನಂದಭವನದೊಳಕ್ಕೆ ಹೊರಟು ನಡೆದುದನ್ನು ತಿಳಿಸಿದಾಗ ಯಾವುದೋ ಪೆಟ್ಟು ತಿಂದವರಂತೆ ಮೋತಿಲಾಲರು ಕ್ಷಣಕಾಲ ಸ್ತಬ್ಧರಾದರು. ಕೂಡಲೆ ಮುಷ್ಟಿಯಿಂದ ಮೇಜನ್ನಪ್ಪಳಿಸಿ ಗರ್ಜಿಸುವ ಸಿಂಹದಂತೆ ಭೀಷಣರಾಗಿ "ಇನ್ನು ನಾನು ಮಲಗುವುದಿಲ್ಲ. ಕಾಹಿಲೆಗೆ ವಶನಾಗುವುದಿಲ್ಲ. ಊರಿ ನಿಂತು ಕೆಲಸ ನಡೆಸುತ್ತೇನೆ, ನೋಡಲಿ!" ಎಂಬ ಸಂಕಲ್ಪ ಮಾಡಿಕೊಂಡರು. ವ್ಯಾಧಿಯಾದರೋ ಬಲಗೊಂಡಿತ್ತು. ಆದರೆ ಆ ಧೀರ ಸಂಕಲ್ಪದ ಬಲದಿಂದಲೋ ಎಂತೋ ಬೇಗಬೇಗನೆ ದೃಢಾರೋಗ್ಯ ಪಡೆವಂತೆ ದಿನದಿನವೂ ಕಾಣುತ್ತಬಂದರು. ಯರವಾಡಕ್ಕೆ ಹೋಗಿ ಬಂದಾಗಿನಿಂದ ಉಗುಳಿನಲ್ಲಿ ಬರುತ್ತಿದ್ದ ರಕ್ತವು ನಿಂತುಹೋಯಿತು. ತನ್ನ ರೋಗವನ್ನು ತಾನೇ ಮನೋಬಲದಿಂದ ಗೆದ್ದೆನೆಂದು ಹೆಮ್ಮೆಯಿಂದ ಮೋತಿಲಾಲರು

ಜವಾಹರಲಾಲರಿಗೆ ಜೈಲಿನಲ್ಲಿ ಆ ಸಂಗತಿ ತಿಳಿಸಿದರು. ಹತ್ತು ಜನರ ಕೆಲಸವನ್ನು ಒಬ್ಬರೇ ಸಾಧಿಸಲು ತೊಡಗಿದರು. ಯುಕ್ತ ಪ್ರಾಂತದಲ್ಲಿ ಮೊದಲಾಗಿದ್ದ ಆಂದೋಳನವನ್ನು ವ್ಯವಸ್ಥೆಗೊಳಿಸುವುದರಲ್ಲಿ ಹಗಲಿರುಳೂ ಸಭೆ ನಡೆಸುತ್ತ ಆಜ್ಞೆಗಳನ್ನು ಸಾರುತ್ತಲಿದ್ದರು. ಎಲ್ಲ ಜವಾಬ್ದಾರಿಯನ್ನೂ ತಾವೇ ಹೊತ್ತು ತಮ್ಮ ಸರ್ವ ಚೈತನ್ಯವನ್ನೂ ಉದ್ರೇಕಗೊಳಿಸಿ ನಿತ್ಯಪ್ರವಾಹದಂತೆ ಹರಿಸಿದರು. ನವೆಂಬರ್ 14ನೆ ತಾರೀಖಿನ ದಿನ ದೇಶದ ಎಲ್ಲೆಡೆಗಳಲ್ಲಿಯೂ ಜವಾಹರಲಾಲರ ಜಯಂತಿಯಾಗುವಂತೆ ಏರ್ಪಡಿಸಿದರು.

ಆ ದಿನ ಎಲ್ಲೆಲ್ಲಿಯೂ ಜಯಂತ್ಯುತ್ಸವಕ್ಕಾಗಿ ಸಭೆಗಳಲ್ಲಿ ಗುಂಪುಗುಂಪಾಗಿ ಸೇರಿದ್ದರು ಜನ. ಸರ್ಕಾರದ ಕಡೆಯವರು ಮೆರೆವಣಿಗೆಗಳನ್ನೂ ಸಭೆಗಳನ್ನೂ ಅಡ್ಡಿಪಡಿಸಿ ಅನೇಕ ಕಡೆಗಳಲ್ಲಿ ಲಾಠೀಪ್ರಯೋಗ ಮಾಡಿಸಿದರು. ಜಯಂತಿಯ ದಿನ ಐದು ಸಾವಿರ ದಸ್ತಗಿರಿಗಳಾದವು. ಈ ರೀತಿಯ ಜಯಂತ್ಯುತ್ಸವ ಎಲ್ಲರಿಗೂ ಹೇಗೆ ನಡೆಯಬೇಕು!

ಸಾವಿರದಾರುನೂರು ಮಂದಿ ಪ್ರತಿನಿಧಿಗಳು ಗ್ರಾಮಾಂತರ ಪ್ರದೇಶಗಳಿಂದ ಇಲಾಹಾಬಾದಿಗೆ ಬಂದಿದ್ದಾಗಲೆ ಜವಾಹರಲಾಲರನ್ನು ಬಂಧಿಸಿದ್ದರಿಂದ ಪ್ರಯತ್ನಕ್ಕೆ ಹದಕೊಟ್ಟಂತೆಯೇ ಆಯಿತು. ಅವರ ಉತ್ಸಾಹ ಹೆಚ್ಚಿ ಜಿಲ್ಲೆಯ ಪ್ರತಿ ಸ್ಥಳಕ್ಕೂ ಸಭಾ ನಿರ್ಣಯಗಳ ವಿಸ್ತಾರ ವಿವರವು ದೊರಕುವಂತಾಯಿತು. ಆರಂಬಗಾರರು ಕಂದಾಯ ಕೊಡದಾದರು. ಜಮೀನ್ದಾರರೂ ಮೊದಮೊದಲು ಕೊಡುವುದಿಲ್ಲವೆಂದು ಹೇಳಿದರು; ಸ್ವಲ್ಪ ಕಾಲ ಕಳೆದ ಬಳಿಕ ಬಹುಸಂಖ್ಯಾಕರಾಗಿ ಸರ್ಕಾರಕ್ಕೆ ಕೊಡಬೇಕಾದುದನ್ನು ಸಲ್ಲಿಸಿಬಿಟ್ಟರು. ಗುತ್ತಿಗೆ ಹಣವನ್ನು ಸಲ್ಲಿಸಲಾರೆವೆಂದ ರೈತರಿಗೂ ಅತ್ತ ಕಂದಾಯ ತೆತ್ತು ರೈತರಿಂದ ವಸೂಲಿಯಾಗಬೇಕೆಂದ ಜಮೀನ್ದಾರರಿಗೂ ಖಾಡಾಖಾಡಿಯಾಗಿ ಪರಿಣಮಿಸಿತು. ಆರ್ಥಿಕ ಮುಗ್ಗಟ್ಟು ಬೇರೆ ಆ ಕಾಲಕ್ಕೆ ಸರಿಯಾಗಿ. ಪಟ್ಟಣಗಳಲ್ಲಿ ನಡೆಯುತ್ತಿದ್ದುದನ್ನು ಅಡಗಿಸುವ ಪ್ರಯತ್ನದಲ್ಲಿದ್ದ ಸರ್ಕಾರಕ್ಕೆ ಈ ಹೊಸ ತೊಂದರೆಯನ್ನು ಕೆರಳಿಸುವ ಸಿದ್ಧತೆಯಿರಲಿಲ್ಲ. ಜಿಲ್ಲಾ ವಿಭಾಗಗಳಲ್ಲಿ ಕ್ರೂರ ವರ್ತನೆಗೆ ತೊಡಗಲಿಲ್ಲ; ಪಟ್ಟಣಗಳಲ್ಲಿ

ಮಾತ್ರ ತಮ್ಮ ಪ್ರಯತ್ನ ನಿರರ್ಥಕವಾದುದನ್ನು ಕಂಡು ಆಕ್ರೋಶ ಪಟ್ಟರು. ಶಿಕ್ಷೆಯೆಂದು ಜೈಲಿಗೆ ನೂಕಿದರೆ ಹೊರಕ್ಕೆ ಬಂದ ಕೂಡಲೆ ಕುಣಿಯುತ್ತ ಸಂಭ್ರಮದಿಂದ ಪುನಃ ಜೈಲಿಗೇ ನುಗ್ಗುವುದೇ! ಸರ್ಕಾರದ ಪಕ್ಷದವರಿಗೆ ಕ್ರೌರ್ಯವೇ ಯೋಗ್ಯವೆನ್ನಿಸಿತು. ನವೆಂಬರ್ ಡಿಸೆಂಬರ್ ತಿಂಗಳುಗಳಲ್ಲಿ ಜೈಲುಗಳಲ್ಲಿ ಚಾಟಿಯೇಟು ಹೊಡೆಸುವುದಕ್ಕಾರಂಭವಾಯಿತು; ಯು. ಪಿ. ಪ್ರಾಂತದಲ್ಲಿಯೇ ಯಾವುದೋ ಜೈಲು ನಿಯಮಗಳನ್ನು ಮುರಿದರೆಂದು ತರುಣ ಕೈದಿಗಳನ್ನು ಚಾಟಿಯೇಟಿನ ಶಿಕ್ಷಣಕ್ಕೆ ಗುರಿಮಾಡಿದರು.

ಈ ಹೊಸ ಶಿಕ್ಷೆಯ ಸುದ್ದಿ ಜವಾಹರಲಾಲರಿಗೆ ಹಾಗೂ ಹೀಗೂ ತಿಳಿಯಿತು. ಕಟುಕರಂತಹ ಕ್ರೂರಿಗಳಾದ ಪಾಪಿಗಳನ್ನು ಕೂಡ ಆ ಶಿಕ್ಷೆಗಿಡುವುದು ರಾಕ್ಷಸ ಕೃತ್ಯವೆಂಬ ಭಾವನೆ ತುಂಬಿಕೊಂಡಿದ್ದ ಜವಾಹರಲಾಲರ ಮನಸ್ಸಿಗೆ ಸಹಿಸದಾಯಿತು. ಕುತ್ತಾಘರ್ ಬರಾಕಿನಲ್ಲಿದ್ದ ನಾಲ್ವರೂ ನೊಂದು ಮಾಡತಕ್ಕುದೇನೆಂದು ಮಾತನಾಡಿಕೊಂಡರು; ಆ ವಿಷಯ ಕುರಿತು ಅಧಿಕಾರಿಗಳಿಗೆ ಪತ್ರ ಬರೆದರು. ಒಂದು ವಾರವಾಯಿತು; ಎರಡು ವಾರಗಳಾದವು; ಆದರೂ ಪ್ರತ್ಯುತ್ತರವೆಂಬುದು ಬರಲಿಲ್ಲ. ಆಗ ನಾಲ್ವರೂ ಸೇರಿ ಮೂರು ದಿನಗಳ ಕಾಲ ಅಖಂಡವಾಗಿ ಉಪವಾಸ ಮಾಡುವುದಾಗಿ ನಿರ್ಧರಮಾಡಿಕೊಂಡರು.

ಮೂರು ದಿನಗಳ ಉಪವಾಸವೆಂಬುದಷ್ಟು ದೊಡ್ಡದಾಗಿ ಕಾಣದಿರಬಹುದು. ಆದರೆ ಆ ನಾಲ್ವರಲ್ಲಿ ಒಬ್ಬರಾದರೂ ಉಪವಾಸದ ಅಭ್ಯಾಸ ಮಾಡಿದ್ದವರೇ ಅಲ್ಲ. ಜವಾಹರಲಾಲರು ಹಿಂದೆ ಒಂದು ದಿನಕ್ಕಿಂತ ಹೆಚ್ಚು ಕಾಲ ಉಪವಾಸಗೈದಿರಲಿಲ್ಲ. ಆದರೂ ಇಟ್ಟುಕೊಂಡ ಬಳಿಕ ಮೂರು ದಿನಗಳ ನಿರಶನ ವ್ರತವನ್ನು ಹೆಚ್ಚು ಕಷ್ಟವಿಲ್ಲದೆ ನಡೆಸಿದರು. ಜವಾಹರಲಾಲರು ಆ ಕಾಲದಲ್ಲಿ ತಮ್ಮ ಓಟ ಹಾರಾಟಗಳನ್ನು ನಿಲ್ಲಿಸದೆ ಯಥಾಪ್ರಕಾರವಾದ ದಿನಚರಿಯನ್ನೇ ನಡೆಸಿದರು. "ಶುದ್ಧ ಅವಿವೇಕತನದಿಂದ ಉಪವಾಸದ ದಿನಗಳಲ್ಲಿಯೂ ನನ್ನ ವ್ಯಾಯಾಮವನ್ನು ಮಾಡಿಯೇ ಮಾಡಿದೆ. ಅದರಿಂದ ನನಗೆ ಮೇಲೇನೂ ಆಗಲಿಲ್ಲ. ಉಪವಾಸಕ್ಕೆ ಪೂರ್ವ ನಾನಷ್ಟು ಸ್ವಸ್ಥ

ನಾಗಿಯೂ ಇರಲಿಲ್ಲ. ಅಲಕ್ಷ್ಯದಿಂದ ಇದ್ದುಬಿಟ್ಟೆ. ಪರಿಣಾಮದಲ್ಲಿ ನಮ್ಮಲ್ಲಿ ಪ್ರತಿಯೊಬ್ಬರೂ ತೂಕದಲ್ಲಿ ಕಡಿಮೆಯಾದೆವು." ಚಾಟಿ ಶಿಕ್ಷೆಗೆ ಆಕ್ಷೇಪ ಸೂಚಿಸಿದ ಈ ಉಪವಾಸಗಳೇ ಅಲ್ಲದೆ ಇತರೆಡೆಗಳಲ್ಲಿಯೂ ಸರ್ಕಾರದವರ ನೀತಿಗೆ ವಿರೋಧ ತೋರಿತ್ತು. ಯು. ಪಿ. ಸರ್ಕಾರದವರು ತಾತ್ಕಾಲಿಕವಾಗಿ ಆ ಬರ್ಬರತನವನ್ನು ನಿಲ್ಲಿಸಿದರು.

ಆಗ ಹಿತವಾದ ಚಳಿಗಾಲ; ಕುತ್ತಾಘರದಲ್ಲಿ ನಾಲ್ವರೂ ಸಮಾಧಾನದಿಂದಲೇ ಕಾಲ ಕಳೆದರು. ರಣಜಿತ್ ಪಂಡಿತರಿಗೆ ಹೂತೋಟ ಮಾಡುವುದರಲ್ಲಿ ಒಳ್ಳೆ ಆಸಕ್ತಿ ಪರಿಜ್ಞಾನಗಳು. ಬರಾಕಿನ ಸುತ್ತಲಿದ್ದ ಓಣಿಯಲ್ಲಿ ಆತನ ಯಾಜಮಾನ್ಯದಲ್ಲಿ ನಾಲ್ವರೂ ಹೂಗಿಡಗಳನ್ನು ಬೆಳೆಸಿದರು. ಕಿರಿದಾದ ಆ ಜಾಗದಲ್ಲಿ ಒಂದು ಪುಟ್ಟ ಕ್ರೀಡಾ ಕ್ಷೇತ್ರವನ್ನು ಏರ್ಪಡಿಸಿದರು. ಆಗಾಗ್ಗೆ ತಲೆಯಮೇಲೆ ಆಕಾಶದಲ್ಲಿ ವಿಮಾನಗಳು; ಆಸ್ಟ್ರೇಲಿಯ ಹಿಂದು ಚೀನ ಮುಂತಾದ ದೇಶಗಳಿಗೆ ಮೊಳಗುತ್ತ ಹೊರಡುತ್ತಿದ್ದವು. ಅರುಣೋದಯಕಾಲದ ಕತ್ತಲೆಯ ಆಕಾಶದಲ್ಲಿ ದೀಪಗಳಿಂದಲಂಕೃತವಾದ ವಿಮಾನಗಳು ಕೆಲವುಬಾರಿ ಕಂಡು ಬಂದು ಸೊಗಸುದೋರುತ್ತಿತ್ತು. ಆ ಚಳಿಗಾಲ ನಡೆಯುತ್ತಿದ್ದಾಗಲೇ ನೈನಿ ಜೈಲಿಗೆ ವೃದ್ಧಪಿತಾಮಹ ಮಾಲವೀಯರನ್ನು ಸರ್ಕಾರದವರು ತಂದಿಟ್ಟರು. ಪ್ರತ್ಯೇಕವಾದ ಸ್ಥಳದಲ್ಲಿದ್ದಾಗ್ಗೂ ಮಾಲವೀಯರು ಜವಾಹರಲಾಲರನ್ನೂ ಗೆಳೆಯರನ್ನೂ ನಿತ್ಯವೂ ಕಾಣುತ್ತ ಸಲ್ಲಾಪ ಬೆಳೆಸುತ್ತಲಿದ್ದರು. ಮುಪ್ಪಿನಲ್ಲಿದ್ದಾಗ್ಗೂ ಅತಿಚಟುವಟಿಕೆ ಅತ್ಯುತ್ಸಾಹ ಆತನಿಗೆ. ಆಶ್ಚರ್ಯಕರವಾದ ಜ್ಞಾಪಕಶಕ್ತಿ. ರಣಜಿತ್ ಪಂಡಿತರ ಸಹವಾಸಮಾಡಿ ಜರ್ಮನ್ ಭಾಷೆ ಕಲಿಯಲು ಆಗ ತೊಡಗಿದರಂತೆ. ಚಾಟಿಯೇಟುಗಳ ಸುದ್ದಿ ಬಂದಾಗ ಅವರು ತಳಮಳಿಸಿ ಪ್ರಾಂತದ ಗವರ್ನರನಿಗೆ ಪತ್ರ ಬರೆದರು. ಆದರೆ ಆ ಚಳಿಯನ್ನು ಅವರು ಸಹಿಸಿಕೊಂಡು ನೈನಿಯಲ್ಲಿರಲಾರದವರಾದುದರಿಂದ ಅಸ್ವಸ್ಥರಾದರು; ಆ ಕಾರಣದಿಂದ ಅವರನ್ನು ಆಸ್ಪತ್ರೆಗೊಯ್ದರು; ಸ್ವಲ್ಪಕಾಲದಲ್ಲಿಯೆ ಬಿಡುಗಡೆ ಮಾಡಿಬಿಟ್ಟರು.

ಮೋತಿಲಾಲರ ದೇಹಸ್ಥಿತಿ ಬರಬರುತ್ತ ಕೆಟ್ಟಿತು. ಜವಾಹರಲಾಲರ ಜಯಂತಿಯ ಆಚರಣೆಗಳು ನಡೆದ ತರುವಾಯ ಅವರನ್ನು

ಕಂಡಾಗ ಜವಾಹರಲಾಲರಿಗೆ ಚಿಂತೆಗಿಟ್ಟುಕೊಂಡಿತು " ಇನ್ನುಮೇಲೆ ನೀವಾವುದನ್ನೂ ಕಟ್ಟಿಕೊಂಡು ನಡೆಸಬೇಡಿ. ಹಾಗೂ ಇಲಾಹಾಬಾದಿ ನಲ್ಲಿದ್ದರೆ ಜನರು ನಿಮ್ಮನ್ನು ಹುಡುಕಿಕೊಂಡು ಬರುತ್ತಲೇ ಇರುವರು. ವಿಶ್ರಾಂತಿ ಅತ್ಯಗತ್ಯ; ಅಲಕ್ಷ್ಯ ಮಾಡುವಂತಿಲ್ಲ. ರಂಗೂನ್ ಸಿಂಗಪುರಗಳ ಕಡೆಗೆ ಸಮುದ್ರಪ್ರಯಾಣ ಮಾಡಿ. ವಿಶ್ರಾಂತಿ ಲಾಭವಾಗುತ್ತದೆ" ಎಂದು ಬೇಡಿದ್ದರು. ಅದರಂತೆಯೆ ಡಾಕ್ಟರೊಬ್ಬನನ್ನು ಕರೆದುಕೊಂಡು ಮೋತಿಲಾಲರು ಕಲ್ಕತ್ತೆಯವರೆಗೂ ಪ್ರಯಾಣಮಾಡಿ ಅಲ್ಲಿಂದ ಮುಂದಕ್ಕೆ ಹೊರಡಲು ಚೈತನ್ಯ ಸಾಲದೆ ಅಲ್ಲಿಯೇ ಮನೆಮಾಡಿಕೊಂಡಿದ್ದುಬಿಟ್ಟರು. ಇಲಾಹಾಬಾದಿನಲ್ಲಿ ಕಮಲಾದೇವಿ ಮಾತ್ರ ಉಳಿದುಕೊಂಡಳು. ಕಾಂಗ್ರೆಸ್ ಕೆಲಸಕಾರ್ಯಗಳನ್ನು ಕಟ್ಟಿಕೊಂಡು ಧೀರೆಯಾಗಿ ದಿನದಿನಕ್ಕೂ ಶ್ರಮಿಸಿದಳು.

1931ನೆ ವರ್ಷದ ಮೊದಲನೆ ದಿನ ಬಂತು. ಲಾಹೋರ್ ಕಾಂಗ್ರೆಸ್ಸಿನ ಸಂಕಲ್ಪವಾಗಿ ಸರಿಯಾಗಿ ಒಂದು ವರ್ಷ. ಹೊಸ ವರ್ಷದ ಮೊದಲನೆ ದಿಸ ಇಲಾಹಾಬಾದಿನಲ್ಲಿ ಕಮಲಾದೇವಿಯನ್ನು ದಸ್ತಗಿರಿ ಮಾಡಿದರು. ಅದುವರೆಗೂ ಸ್ತ್ರೀಯರನ್ನು ಶಿಕ್ಷೆಗೆ ಗುರಿಮಾಡದಿದ್ದ ಸರಕಾರದವರು ಸ್ತ್ರೀಯರನ್ನೂ ಹಿಡಿಯಲಾರಂಭಿಸಿದರು. ದಸ್ತಗಿರಿಯಾದ ಕ್ಷಣದಲ್ಲಿ ಯಾರೋ ಸುದ್ದಿಗಾರ ಸಮೀಪಿಸಿ ಕಮಲಾದೇವಿಯನ್ನು ಸಂದೇಶಕ್ಕಾಗಿ ಯಾಚಿಸಿದರೆ ಆಕೆಯೇನು ಹೇಳಬೇಕು! " ನನ್ನ ಪತಿಯನ್ನು ಹಿಂಬಾಲಿಸಲು ನನಗೆ ಅತಿ ಸುಖವಾಗಿದೆ. ಹೆಮ್ಮೆಯಾಗಿದೆ; ನಮ್ಮ ಧ್ವಜವನ್ನೆಂದಿನಂತೆ ಎತ್ತರವಾಗಿ ಹಾರಿಸುತ್ತಲಿರಲಿ ನಮ್ಮ ದೇಶ ಬಂಧುಗಳು!" ಲಖನೌ ಜೈಲಿನೊಳಗೆ ಪ್ರವೇಶವಾಯಿತು. ಈ ವಿವರವು ಜವಾಹರಲಾಲರಿಗೆ ತಿಳಿಯಿತು. ಸಂತೋಷವೂ ಆಯಿತು; ಹೆಮ್ಮೆಯೂ ತೋರಿತು.

ಅತ್ತ ಕಲ್ಕತ್ತೆಯಲ್ಲಿದ್ದ ಮೋತಿಲಾಲರಿಗೂ ಸಮಾಚಾರ ಮುಟ್ಟಿತು. ತನ್ನ ಸೊಸೆ ದಸ್ತಗಿರಿಯಾದುದನ್ನು ಕೇಳಿದಕೂಡಲೆ ಹಾಸಿಗೆ ಬಿಟ್ಟೆದ್ದು ತಕ್ಷಣವೇ ಇಲಾಹಾಬಾದಿಗೆ ಹೊರಡಬೇಕೆಂದು ನಿಶ್ಚಯಮಾಡಿದರು. ಮುಂದಾಗಿ ಕೃಷ್ಣೆಯನ್ನು ಕಳುಹಿಸಿ ತಾವೂ ಹೊರಟುಬಿಟ್ಟರು. ಜನವರಿ

12ನೆ ತಾರೀಖಿನ ದಿನ ಮಗನನ್ನು ಕಾಣಲು ನೈನಿ ಜೈಲಿಗೆ ಬಂದರು. ಜವಾಹರಲಾಲರಿಗೆ ಆಗ ಆರೋಗ್ಯ ಕೆಟ್ಟಿತ್ತು. ತಂದೆಯ ಮುಖವನ್ನು ಕಂಡಕೂಡಲೆ ಗಾಬರಿಯಾಯಿತು. ಮುಖವೆಲ್ಲ ಊದಿಕೊಂಡಿತ್ತು. ತನಗೆಷ್ಟೋ ಮೇಲೆಂದು ಮೋತಿಲಾಲರು ಹೇಳಿದುದನ್ನು ನಂಬಲಾಗ ಲಿಲ್ಲ. ಕಾಲವೆಂತಹ ಮೋಸವನ್ನು ಆಚರಿಸುವುದೋ ಎಂತೋ ಎಂಬ ಕಳವಳ ಬಲಗೊಂಡಿತು. ಯಾವುದಕ್ಕೂ ಹೆದರದ ಜೀವ ಕಾಲಪುರುಷನ ಲೀಲೆಯನ್ನು ಕುರಿತು ಚಿಂತಿಸಬೇಕಾಯಿತು.

ಕಮಲಾದೇವಿಯ ದಸ್ತಗಿರಿಯಾದ ಬಳಿಕ ಮೋತಿಲಾಲರು ಆನಂದಭವನದಲ್ಲಿದ್ದಾಗ ವಿಚಿತ್ರ ರೀತಿಯಲ್ಲಿ ಕೃಷ್ಣೆಯ ದಸ್ತಗಿರಿ ಯಾಗಿತ್ತು. ಯಾರೋ ಸ್ನೇಹಿತೆಯ ವಿಚಾರಣೆಯೆಂದು ಕೋರ್ಟಿಗೆ ಹೋಗಿದ್ದಾಗ ಆಕಸ್ಮಿಕವಾಗಿ ದಸ್ತಗಿರಿಯೂ ಒಂದು ತಿಂಗಳ ಸಜ ಅಥವಾ ನೂರು ರೂಪಾಯಿ ಜುಲ್ಮಾನೆಯೂ ನಿಶ್ಚಯವಾಗಿ ಹೋಯಿತು. ಕೋರ್ಟಿನಿಂದ ನೇರವಾಗಿ ಜೈಲಿಗೇ ಪ್ರವೇಶ! ತಂದೆ ಯವರಿಗೆ ಕಾಹಿಲೆಯಾಗಿದ್ದಾಗಲೂ ಆತನನ್ನು ಕೇಳದೆ ಜೈಲಿಗೆ ಹೊರಟು ದರಿಂದ ಕೃಷ್ಣೆಗೆ ಕಳವಳವೇ ಆಯಿತು. ಮರುದಿನ ಬಿಡುಗಡೆಯಾಯಿತು. ಯಾರೋ ಅಜ್ಞಾತಪುರುಷ ಆ ಜುಲ್ಮಾನೆಯನ್ನು ಸಲ್ಲಿಸಿದ್ದನಂತೆ. ಯಾರೆಂದು ತಿಳಿಯಲೇ ಇಲ್ಲ. ಮನೆಗೆ ಹೋಗಿ ತಂದೆಯವರಿಗೆ ತಿಳಿಸಿ ದ್ದಾಯಿತು. ಬಂದ ಮಗಳನ್ನು ಕಂಡು ಸಂತಸಗೊಂಡರೂ ಜುಲ್ಮಾನೆ ಯನ್ನು ಯಾರೋ ಕೊಟ್ಟಿದ್ದ ವಿಷಯದಲ್ಲಿ ತುಂಬಾ ಆಗ್ರಹಗೊಂಡರು. ಅನೇಕ ಮಿತ್ರರಾವೇಳೆಗೆ ಬಂದಿದ್ದು "ಜುಲ್ಮಾನೆಯನ್ನು ನೀವು ಕೊಡಲಾಗದಿದ್ದರೆ ನಾವು ಸಲ್ಲಿಸುವಂತಾದರೂ ಒಪ್ಪಿಗೆ ಕೊಡಿ" ಎಂದು ಕೇಳಿದ್ದರು. ಅದಕ್ಕೆ "ಕೊಡದಿರುವುದು ಕರ್ತವ್ಯ. ಯಾರಾದರೂ ಕೊಟ್ಟರೆ ಆತ ನನ್ನ ಹಿತೈಷಿಯಲ್ಲ! ಕೊಟ್ಟರೆ ನನ್ನನ್ನು ಹೊಡೆದಂತೆಯೆ ಆಗುವುದು. ಆ ಮಾತನ್ನೇ ಎತ್ತಬೇಡಿ" ಎಂಬುದು ಉತ್ತರವಾಗಿತ್ತು. ಯಾರೋ ಕೊಟ್ಟೇ ಕೊಟ್ಟರು; ಯಾರೆಂದು ತಿಳಿಯಲೇ ಇಲ್ಲ.

ಇದಾದ ತರುವಾಯ ಕೃಷ್ಣೆಗೆ ಅಲ್ಲಲ್ಲಿ ಜನರು ಬಿನ್ನವತ್ತಳೆ ಗಳನ್ನೂ ಕರಂಡಗಳನ್ನೂ ಗೌರವದಿಂದ ಅರ್ಪಿಸಿದರು. ಅದನ್ನು ಕುರಿತು

ಜವಾಹರಲಾಲರು ಒಂದು ಸಣ್ಣ ಚೀಟಿಯಲ್ಲಿ "ನಿನಗೆ ಬಿನ್ನವತ್ತಳಿಗಳನ್ನು ಭರಣಿಗಳಲ್ಲಿಟ್ಟು ಜನರು ಕೊಟ್ಟುದನ್ನು ನೀನು ಸ್ವೀಕರಿಸುತ್ತಿರುವಿಯಂತೆ. ಯಾವ ವೀರ ಕಾರ್ಯಗಳಿಗಾಗಿ? ಜೈಲಿನಲ್ಲಿ ಹಲ ಕೆಲವು ಗಳಿಗೆಗಳನ್ನು ಕಳೆದುದಕ್ಕೆ ವೀರ ಮರ್ಯಾದೆಯೇ! ಹೇಗಾದರೂ ಇರಲಿ. ತಲೆ ತಿರುಗಿದಂತಾಗದಿರಲಿ! ಆದರೂ ಖಾಲಿ ಬುರುಡೆ ಹೊರುವುದಕ್ಕಿಂತ ತಲೆತಿರುಗಿರುವುದು ಮೇಲಾಗಿದ್ದರೂ ಇರಬಹುದು" ಎಂದು ಬರೆದಿದ್ದರು.

ಇದೇ ಕಾಲದಲ್ಲಿ ಲಂಡನ್ನಿನಲ್ಲಿ ಚಕ್ರಗೋಷ್ಠಿಯಷ್ಟೆ! ಜನವರಿ 19ನೆ ತಾರೀಖಿನ ದಿನ ಇಂಗ್ಲಂಡಿನ ಪ್ರಧಾನಿ ರಾಮ್ಸೆ ಮಕ್ಡಾನಲ್ಡ್ (Ramsay Macdonald) ಮುಕ್ತಾಯ ಭಾಷಣದ ಮೂಲೆಯಲ್ಲಿ "ಈಗ ವಿನೀತ ರೀತಿಯ ಅವಿಧೇಯತೆಯ ಕ್ರಮದಲ್ಲಿರುವವರು ತಮ್ಮ ಕ್ರಮವನ್ನು ನಿಲ್ಲಿಸಿದರೆ ಅವರನ್ನೂ ಸೇರಿಸಿಕೊಳ್ಳಲಾಗುವುದು" ಎಂಬ ಸ್ವರವನ್ನೆತ್ತಿದ್ದರು. ಪರಿಸ್ಥಿತಿ ಹೇಗೋ ಬದಲಾಯಿಸುವ ಸೂಚನೆಯಾಯಿತೆಂದು ಅನೇಕರು ಭಾವಿಸಿದ್ದ ಕಾರಣದಿಂದ ಇಲಾಹಾಬಾದಿನಲ್ಲಿಯೇ ವರ್ಕಿಂಗ್ ಕಮಿಟಿ ಸೇರಿತು. ಆ ವೇಳೆಗೆ ಮೋತಿಲಾಲರು ಕಲ್ಕತ್ತೆಯಿಂದ ಹಿಂತಿರುಗಿ ಬಂದು ವ್ಯಾಧಿ ಪೀಡಿತರಾಗಿ ನರಳುತ್ತಿದ್ದರಷ್ಟೆ. ಸುದ್ದಿ ಕೇಳಿ ಮೋತಿಲಾಲರು ತಮ್ಮೆದುರಿನಲ್ಲೇ ಆ ಸಭೆ ನಡೆಯತಕ್ಕದೆಂದು ಹೇಳಿ ಕಳುಹಿಸಿದರು. ಹಾಗೆಯೆ ನಡೆಯಿತು. ಅಧ್ಯಕ್ಷರಾಗಿದ್ದವರು ರಾಜೇಂದ್ರ ಪ್ರಸಾದರು. ಪಂಡಿತ ಮಾಲವೀಯರೂ ಸಭೆಗೆ ಬಂದಿದ್ದರು. ಮೋತಿಲಾಲರ ಹಾಸಿಗೆಯೆದುರಿಗೆ ಸಭಿಕರೆಲ್ಲರೂ ಕುಳಿತು ಚರ್ಚೆಗಾರಂಭಿಸಿದರು. ಮಧ್ಯೆ ಯಾರೋ ಒಬ್ಬರು "ಬ್ರಿಟಿಷ್ ಪ್ರಧಾನರೇ ಸ್ವತಃ ನಮ್ಮನ್ನು ಸ್ಮರಿಸಿರುವುದರಿಂದ ನಾವು ವಿರೋಧ ಕರ್ತವ್ಯಗಳಿಂದ ತಕ್ಕಮಟ್ಟಿಗೆ ವಿರಮಿಸಿ ಸಮಾಧಾನಕ್ಕೆ ಯತ್ನಿಸುವುದು ಹಿತವೆಂದು ಕಾಣುತ್ತದೆ" ಎಂದ ಕೂಡಲೆ ಮೋತಿಲಾಲರು ಎದ್ದು ಕುಳಿತು "ನಮ್ಮ ಗುರಿ ಮುಟ್ಟುವವರೆಗೆ ಸಮಾಧಾನ ಸಾಧ್ಯವಿಲ್ಲ! ನಾನೊಬ್ಬನೇ ಉಳಿದರೂ ಕರ್ತವ್ಯವನ್ನು ಜರುಗಿಸಿಯೇ ಜರುಗಿಸುತ್ತೇನೆ" ಎಂದು ಗರ್ಜಿಸಿದರು. ಈ ರೀತಿಯಲ್ಲಿ ಉದ್ರೇಕ

ಗೊಂಡುದರಿಂದ ಜ್ವರವೇರಿತು; ವಿಶ್ರಾಂತಿಯೊದಗುವಂತೆ ಡಾಕ್ಟರರು ಉಪಾಯದಿಂದ ನೆರವೇರಿಸಬೇಕಾಯಿತು.

ಇಂಗ್ಲಂಡಿನಿಂದ ಹಿಂತಿರುಗಿ ಬರುತ್ತಿದ್ದ ಸಪ್ರು ಮತ್ತು ಶ್ರೀನಿವಾಸ ಶಾಸ್ತ್ರಿಗಳೀರ್ವರೂ ವರ್ಕಿಂಗ್ ಕಮಿಟಿಯವರಿಗೆ "ದಯವಿಟ್ಟು ನಾವು ಬಂದು ಮುಖತಃ ಮಾತನಾಡುವವರೆಗೂ ಯಾವ ನಿರ್ಧರವನ್ನೂ ಮಾಡದಿರಿ. ನಮಗಾಗಿ ಸ್ವಲ್ಪ ಕಾಲನಿರೀಕ್ಷೆಮಾಡಿ" ಎಂದು ನೀರು ತಂತಿಕೊಟ್ಟಿದ್ದರು. ಅದಕ್ಕಾಗಿ ವರ್ಕಿಂಗ್ ಕಮಿಟಿಯವರು ತಮ್ಮ ನಿರ್ಧರವನ್ನು ಪ್ರಕಟಗೊಳಿಸದೆ ಇದ್ದರು. ಅದೇ ವೇಳೆಯಲ್ಲಿ ವೈಸ ರಾಯಿ ಭವನದಲ್ಲಿಯೂ ಘಟನೆಗಳು ವ್ಯತ್ಯಾಸಗೊಳ್ಳುತ್ತಲಿದ್ದವು. ಆ ಸಂಗತಿಗಳ ವೃತ್ತಾಂತ ದೇಶದ ಚರಿತ್ರೆಯ ಸರಕು.

ನೈನಿ ಜೈಲಿನಲ್ಲಿರುವವರಿಗೆ ಈ ಸಂಗತಿಗಳು ಹೇಗೆ ತಿಳಿಯಬೇಕು? ದೂರದಲ್ಲಿ ಗಾಳಿಬೀಸಿದಂತೆ ಅಸ್ಫುಟವಾಗಿ ಕೇಳುತ್ತಿದ್ದುದೆಷ್ಟೋ ಅಷ್ಟು ಮಾತ್ರವೇ. ಜವಾಹರಲಾಲರಿಗೂ ಇತರರಿಗೂ ಯೋಚನೆ ಹಿಡಿದಿದ್ದುದು ಮುಂದಿನ 26ನೆ ತಾರೀಖಿನ ದಿನಕ್ಕೆ ಸಂಬಂಧವಾದುದು. ಆ ದಿನವೇ ಸ್ವಾತಂತ್ರ್ಯದ ಆಚರಣೆ ದೇಶದಲ್ಲೆಲ್ಲೆಲ್ಲಿಯೂ ನಡೆಯತಕ್ಕುದು. ಬಹು ಸಂಖ್ಯಾಕರು ಜೈಲುಗಳೊಳಗಿರುವ ಪರಿಸ್ಥಿತಿಯಲ್ಲಿ ಆಚರಣೆ ಹೇಗೆ ತಾನೇ ನಡೆದೀತೋ ಏನೋ ಎಂದುಕೊಳ್ಳುತ್ತಿದ್ದಾಗಲೆ 26ನೆ ದಿನವೂ ಉದಯಿಸಿತು. ಪ್ರಾತಃಕಾಲ ಕಳೆಯುತ್ತ ಬಂತು. ಆಗಲೆ ಆಕಸ್ಮಿಕವಾಗಿ ಅಧಿಕಾರಿಯೊಬ್ಬಾತನು ಬಂದು "ನಿಮ್ಮ ತಂದೆಗೆ ಬಹಳ ಕಾಹಿಲೆಯಾಗಿದೆ. ನೀವು ಅವರ ಬಳಿಗೆ ಹೊರಡಬೇಕಾಗಿದೆ" ಎಂದನು. ಇದೇನೆಂದು ವಿಚಾರಿಸಿದಾಗ ಅದೇ ಬಿಡುಗಡೆಯೆಂದು ತಿಳಿಯಿತು. ರಣಜಿತ್‌ಪಂಡಿತರ ಜೊತೆಯಲ್ಲಿ ಕೂಡಲೆ ಜವಾಹರಲಾಲರು ಹೊರಟರು.

ಬಂಧನದಲ್ಲಿದ್ದ ಇತರ ವರ್ಕಿಂಗ್ ಕಮಿಟಿ ಸದಸ್ಯರನ್ನೂ ಆ ಸಂಜೆಯೇ ಬಿಡಬೇಕಾಯಿತು. ಲಖನೌ ಜೈಲಿನಲ್ಲಿದ್ದ ಕಮಲಾದೇವಿಗೂ ಬಿಡುಗಡೆಯಾಯಿತು. ಜವಾಹರಲಾಲರನ್ನು ಮಾತ್ರ ಮೂರು ನಾಲ್ಕು ಗಂಟೆಗಳು ಮುಂಚಿತವಾಗಿ ಬಿಟ್ಟಹಾಗಾಯಿತು.

## 6. ತನಿಮ್ನಾ ಶೋಭಾಯಮಾನ

ತಂದೆಯನ್ನು ಕಂಡು ಹದಿನಾಲ್ಕು ದಿನಗಳು ಕಳೆದಿದ್ದವು. ಬಲು ಕಾಹಿಲೆಯಾಗಿದೆಯೆಂದರೇನರ್ಥವೋ? ರಣಜಿತ್‌ಪಂಡಿತರೊಡನೆ ಜವಾಹರಲಾಲರು ಮನೆಗೆ ಬಂದಾಗ ಮನಸ್ಸಿನ ತುಂಬ ಕಳವಳ. ಮನೆ ಸೇರಿ ತಂದೆಯ ಬಳಿ ಬಂದಾಗ ಮುಖವಿನ್ನೂ ಊದಿದ್ದಂತೆ ಕಂಡಿತು; ಕಷ್ಟದಿಂದ ಮಾತನಾಡುವಂತೆ ತೋರಿತು. ದೇಹಸ್ಥಿತಿ ದುರ್ಬಲಗೊಂಡಿದ್ದುದಾದರೂ ಮನೋಬಲವೆಂದಿನಂತೆಯೆ ಇತ್ತು. ಸ್ವಂತ ಸಂಕಲ್ಪಬಲದಿಂದ ಮನಸ್ಸನ್ನೂ ದೇಹವನ್ನೂ ಬಿಗಿಹಿಡಿದಿದ್ದ ಮೋತಿಲಾಲರು ಇಬ್ಬರನ್ನೂ ಕಂಡಕೂಡಲೆ ಮುಖದಲ್ಲಿ ಸಂತಸವನ್ನು ಕಾಣಿಸಿದರು. ಸ್ವಲ್ಪಕಾಲದಲ್ಲಿಯೆ ರಣಜಿತ್‌ಪಂಡಿತರು ಹಿಂತಿರುಗಿ ಜೈಲಿಗೆ ಹೊರಟರು; ಅವರಿಗೆ ಬಿಡುಗಡೆಯಾಗಿರಲಿಲ್ಲ. ಮೋತಿಲಾಲರು ಇದನ್ನು ಸಹಿಸಲಾರದೆ ಹೋದರು. "ದೂರ ದೂರ ಸ್ಥಳಗಳಿಂದೆಷ್ಟೋ ಜನ ನನ್ನನ್ನು ಕಾಣಲು ಬರುತ್ತಿರುವಾಗ ನನ್ನ ಸ್ವಂತ ಅಳಿಯನನ್ನು ದೂರವಾಗಿಟ್ಟಿದಾರೆ!" ಎನ್ನುತ್ತ ಪದೇ ಪದೇ ಕೊರಗಲಾರಂಭಿಸಿದರು. ಈ ಕೊರಗಿನಿಂದ ಇನ್ನೂ ಆರೋಗ್ಯ ಕೆಡುವುದೆಂಬ ಶಂಕೆಯನ್ನು ಬಲವಾಗಿಟ್ಟುಕೊಂಡು ಡಾಕ್ಟರರು ಸರ್ಕಾರದ ಅಧಿಕಾರಿಗಳಿಗೆ ಸೂಚನೆ ಕೊಟ್ಟರು "ರಣಜಿತ್‌ಪಂಡಿತರನ್ನು ಬಿಡುಗಡೆ ಮಾಡಿ ಮೋತಿಲಾಲರ ಬಳಿಯಲ್ಲಿರಿಸದಿದ್ದರೆ ಮೋತಿಲಾಲರ ಮರಣ ಸಮೀಪಿಸುವಂತೆ ನೀವೇ ಎಸಗಿದ ಹಾಗಾಗುವುದು" ಎಂದು. ಪರಿಣಾಮವಾಗಿ ಸರ್ಕಾರದವರು ಮೂರು ನಾಲ್ಕು ದಿನಗಳ ತರುವಾಯ ರಣಜಿತರನ್ನು ಬಿಡುಗಡೆ ಮಾಡಿದರು.

ಜವಾಹರಲಾಲರಿಗೆ ಬಿಡುಗಡೆಯಾದ ದಿನವೇ ಯರವಾಡದಲ್ಲಿ ಗಾಂಧೀಜಿಗೂ ಬಿಡುಗಡೆಯಾಗಿತ್ತು. ಆ ಸುದ್ದಿ ಕೇಳಿದಾಗಿನಿಂದ ಮೋತಿಲಾಲರಿಗೆ ಗಾಂಧೀಜಿಯನ್ನು ಕಾಣುವ ಉತ್ಕಂಠತೆ; ಕ್ಷಣಕ್ಷಣಕ್ಕೂ ಅದೇ ಆಸೆ. ಯರವಾಡದಿಂದ ಮುಂಬಯಿಗೆ ಗಾಂಧೀಜಿ ಹೊರಟಿದ್ದರು. ಮುಂಬಯಿಯಲ್ಲಿ ಹದಿನೈದು ಲಕ್ಷಗಳ ಜೀವರಾಶಿ ಯೊಟ್ಟುಗೂಡಿ ತಮ್ಮ ಬಾಪುವನ್ನು ಎದುರುಗೊಂಡು ಮೈದಾನದ ಸಭೆಯಲ್ಲಿ ಪೂಜಿಸಿದರು. ಇಲಾಹಾಬಾದಿನಲ್ಲಿ ಮೋತಿಲಾಲರು ರೋಗ

ಗ್ರಸ್ತರಾಗಿರುವ ಸುದ್ದಿ ಗಾಂಧೀಜಿಗೆ ತಿಳಿದಕೂಡಲೆ ಮೋತಿಲಾಲರ ಬಳಿಗೆ ಪ್ರಯಾಣ ನಿಷ್ಕರ್ಷೆ ಮಾಡಿ ಆ ದಿನವೇ ಹೊರಟರು. ಗಾಂಧೀಜಿ ಹೊರಟಿದ್ದುದನ್ನು ತಿಳಿದು ಮೋತಿಲಾಲರು ಕ್ಷಣಗಳನ್ನೆಣಿಸುತ್ತಿದ್ದಂತೆ ಎದ್ದೇ ಇದ್ದರು. ರಾತ್ರಿ ಹೊತ್ತಾದಮೇಲೆ ಬಂದರು ಗಾಂಧೀಜಿ. ಎದುರಿಗೆ ಬಂದಕೂಡಲೆ ಎಲ್ಲರಿಗೂ ಸಮಾಧಾನವಾಯಿತು; ಮೊದಲು ಆತನಾಡಿದ ಹಲವು ಮಾತುಗಳಿಂದ ಮೋತಿಲಾಲರ ಮನೋಜ್ವರ ಶಾಂತವಾಯಿತು; ಮೌನದಿಂದಲೇ ಸಂಕಟದ ಭಾರವನ್ನು ಹೊತ್ತಿದ್ದ ಸ್ವರೂಪರಾಣಿಯವರಿಗೆ ಭಾರ ಕಳೆದಂತಾಯಿತು.

ವರ್ಕಿಂಗ್ ಕಮಿಟಿಯ ಸದಸ್ಯರೆಲ್ಲರಿಗೂ ಆಹೊತ್ತೇ ಬಿಡುಗಡೆ ಯಾಗಿತ್ತಷ್ಟೆ. ಕೂಡಲೆ ಸಭೆ ಸೇರಿ ಕರ್ತವ್ಯ ನಿರ್ಣಯ ಮಾಡಬೇಕೆಂದಿದ್ದ ಅವರೆಲ್ಲರಿಗೂ ಮೋತಿಲಾಲರ ವಿಚಾರವಾಗಿ ತೀವ್ರ ಚಿಂತೆ; ಇಲಾಹಾಬಾದಿಗೆ ಪ್ರಯಾಣ ಮಾಡಬೇಕೆಂಬ ಆತುರ. ಬಾಪುಜಿ ಯೊಡನೆ ಮಾತನಾಡುತ್ತ ಆನಂದಭವನದಲ್ಲಿಯೆ ವರ್ಕಿಂಗ್ ಕಮಿಟಿಯ ಅಧಿವೇಶನ ನಡೆಸಬೇಕೆಂದು ಮೋತಿಲಾಲರು ಹೇಳಿದ ವಾಕ್ಯಗಳು ಸ್ಮರಣೀಯ; "ಭಾರತದ ಇತ್ಯರ್ಥ ಸ್ವರಾಜ್ ಭವನದಲ್ಲಿಯೆ ನಡೆ ಯಲಿ! ನನ್ನೆದುರಿಗೇ ನಿಶ್ಚಯ ಮಾಡಿರಿ. ಮಾತೃಭೂಮಿಯ ಭವಿಷ್ಯ ವನ್ನು ನಿರ್ಧರಿಸುವ ಕಾರ್ಯದಲ್ಲಿ ನನಗೂ ಪಾಲಿರಲಿ. ಸ್ವತಂತ್ರಗೊಂಡ ಭಾರತದೆದೆಮೇಲಿರುವಾಗಲೇ ನನಗೆ ಸಾವು ಬರಲಿ!" ಇಲಾಹಾಬಾದಿ ನಲ್ಲಿಯೆ ಸಭೆ ಸೇರಬೇಕೆಂದು ನಿಶ್ಚಯವಾಗಿ ಎರಡು ದಿನ ಕಳೆಯುವುದ ರೊಳಗಾಗಿ ನಲವತ್ತು ಮಂದಿಯೂ ಬಂದರು. ಮೋತಿಲಾಲರಿದ್ದ ಆನಂದಭವನದ ಪಕ್ಕದ ಸ್ವರಾಜ್ ಭವನದಲ್ಲಿ ಸಭೆ ಸೇರಿತು. ಜವಾ ಹರಲಾಲರು ತಂದೆಯ ಬಳಿಯಿಂದ ಸಭಾಸ್ಥಾನಕ್ಕೂ ಸಭಾಸ್ಥಾನದಿಂದ ತಂದೆಯ ಬಳಿಗೂ ಆಗಾಗ್ಗೆ ಓಡಾಡುತ್ತ ದಿಕ್ಕು ಕಾಣದವರಂತೆ ಇದ್ದು ಬಿಟ್ಟರು. ಸಭೆಯ ಕಲಾಪವೇನೆಂದು ತಿಳಿದರೂ ಪ್ರವೇಶಮಾಡಿ ಚರ್ಚಿಸುವ ಮನಸ್ಸಿಲ್ಲ.

ಸದಸ್ಯರೆಲ್ಲರಿಗೂ ಪುನಃ ಕ್ಷಿಪ್ರ ಪ್ರಯಾಣ ಅನಿವಾರ್ಯವಾಗಿತ್ತು. ಎಲ್ಲರಿಗೂ ಮೋತಿಲಾಲರನ್ನು ಕಡೆಯ ಸಲ ಕಂಡು ಅವರ ಆಶೀರ್ವಾದ

ವನ್ನು ಪಡೆಯುವ ಆಶೆ. ಇಬ್ಬರಾಗಿಯೋ, ಮೂವರಾಗಿಯೋ ಸರದಿಯಾಗಿ ಬಂದು ಕಾಣುವ ನಿಶ್ಚಯ ಮಾಡಿಕೊಂಡರು. ಮೋತಿಲಾಲರದನ್ನು ತಿಳಿದು "ನನ್ನ ಗೆಳೆಯರು ಬಂದಾಗ ನಾನು ಮಲಗಿ ಕಾಲು ಚಾಚಿಕೊಂಡು ಬಿದ್ದಿರುವುದೇ? ನಾನ್ಸೆನ್ಸ್! ಕುರ್ಚಿಯಲ್ಲಿ ಕೂರಿಸಿ ನನ್ನನ್ನು!" ಎಂಬ ಹಟ ಮಾಡಿದರು. ಹಾಗೆಯೆ ಆರಾಮ ಕುರ್ಚಿಯಲ್ಲಿ ರಾಶಿಗೊಂಡ ಪೌರುಷದಂತೆ ಕುಳಿತರು. ಊದಿಕೊಂಡಿದ್ದ ಆ ಮುಖವೇಕರೀತಿಯಲ್ಲಿದ್ದಂತೆ ಕಾಣುತ್ತಿದ್ದರೂ ಆ ಮನಸ್ಸಿನಲ್ಲಿ ಎಂತೆಂತಹ ಭಾವನೆಗಳೋಲಾಡಿದುವೋ ತಿಳಿದವರಾರು? ಬಂದ ಮಿತ್ರರೊಬ್ಬೊಬ್ಬರನ್ನಾಗಿ ಕಂಡು ಕಣ್ಣಿನಲ್ಲಿ ಪರಿಚಯ ಸುಖವನ್ನು ಕಾಣಿಸುತ್ತ ಸ್ವಲ್ಪವಾಗಿ ತಲೆಯನ್ನು ಬಾಗಿಸಿ ಹಸ್ತಗಳನ್ನು ಜೋಡಿಸುತ್ತ ಹಾಗೆಯೇ ಕುಳಿತಿದ್ದರು. ಧಾರಾಳವಾಗಿ ಮಾತನಾಡುವಷ್ಟು ಚೈತನ್ಯವಿಲ್ಲದಿದ್ದರೂ ಆಗಾಗ್ಗೆ ಒಂದೆರಡು ಮಾತುಗಳನ್ನಾಡುತ್ತ ಅಷ್ಟರಲ್ಲಿಯೇ ಸಹಜವಾದ ಗಂಭೀರ ಹಾಸ್ಯವನ್ನು ಬೀರುತ್ತಿದ್ದರು. ಗಾಯಗೊಂಡ ಮೃಗರಾಜನಂತೆ ಕಡೆತನಕ ಅಟ್ಟಹಾಸವನ್ನು ಬಿಡದೆ ಕುಳಿತಿದ್ದರು. ಕಾಲಪುರುಷನನ್ನು ದೂರದಲ್ಲಿ ನಿಂತಿರುವಂತೆ ಆಜ್ಞೆಕೊಟ್ಟು ತನ್ನ ಸುತ್ತ ನೆರೆದಿದ್ದವರನ್ನು ವಿಚಾರಿಸುತ್ತ ಸಾಧ್ಯವಾದಾಗ ಸ್ಪಷ್ಟವಾಗಿ ಮಾತನಾಡುತ್ತ ಗಂಟಲಿನಲ್ಲಿ ಅವರೋಧವಾದಾಗ ಕಾಗದದ ಮೇಲೆ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಲಿದ್ದರು.

ವರ್ಕಿಂಗ್ ಕಮಿಟಿಯ ಕಾರ್ಯಕಲಾಪಗಳಲ್ಲಿ ಹಿಂದಿನಂತೆ ಆಸಕ್ತರಾಗಿದ್ದಿದ್ದರೆ ಮೋತಿಲಾಲರು ಆಗಾಗ್ಗೆ ಉದ್ರೇಕಗೊಳ್ಳಬೇಕಾಗಿತ್ತು. ಆದರೆ ಆತನ ಮನಸ್ಸಿನಲ್ಲಿಯೇ ತಮ್ಮ ಅವಸಾನ ಸಮೀಪವೆಂಬ ನಿಶ್ಚಯ ಮೂಡಿತ್ತು. ಗಾಂಧೀಜಿಯನ್ನು ಕಂಡು "ನಾನು ಬೇಗನೆ ಹೊರಡತಕ್ಕವನಾಗಿದ್ದೇನೆ, ಮಹಾತ್ಮಾಜಿ! ಸ್ವರಾಜ್ಯಸಿದ್ಧಿಯನ್ನೆದುರುಗೊಳ್ಳಲು ನಾನಿರುವುದಿಲ್ಲ. ಆದರೆ ಅದನ್ನು ನೀವು ಸಾಧಿಸಿದ್ದೀರಿ, ಬೇಗನೆ ಹಸ್ತಗತಮಾಡಿಕೊಳ್ಳುವಿರಿ; ನನ್ನ ಮನಸ್ಸಿಗೆ ಗೊತ್ತು" ಎಂದರು. ಗಾಂಧೀಜಿಯವರು ಪಕ್ಕದಲ್ಲಿಯೇ ಉಳಿದರು. ಅನ್ಸಾರಿ, ಬಿಧಾನಚಂದ್ರರಾಯ, ಜೀವರಾಜಮೆಹತಾ ಮೂವರೂ ಹಳೇ ಸ್ನೇಹಿತರು ಡಾಕ್ಟರರು. ಅವ

ರನ್ನು ಮಾತನಾಡಿಸಿ ಮೋತಿಲಾಲರು “ಈ ನನ್ನ ದೇಹ ನಿಮ್ಮ ಸುಭರ್ದಿನಲ್ಲಿರಲಿ” ಎಂದಿದ್ದರು. ಇತರರು ತಮ್ಮ ಸ್ಥಳಗಳಿಗೆ ಹೊರಟರು.

ಏಳೆಂಟು ದಿನಗಳು ಕಳೆಯುವ ವೇಳೆಗೆ ಸ್ವಲ್ಪ ಗುಣಮುಖವಾಯಿತು. ಫೆಬ್ರವರಿ 4ನೆ ದಿನ. ಆಗ ಲಖನೌಗೆ ಕರೆದುಕೊಂಡು ಹೋಗಿ ಎಕ್ಸ್‌ರೇ ಚಿಕಿತ್ಸೆ ನಡೆಸುವ ನಿರ್ಧರ ಮಾಡಿಕೊಂಡರು. ಇಲಾಹಾಬಾದಿನಲ್ಲಿ ಆ ಅನುಕೂಲವಿರಲಿಲ್ಲ. ಮೋಟಾರಿನಲ್ಲಿ ಕೂರಿಸಿ ನಿದಾನವಾಗಿ ಪ್ರಯಾಣ ಮಾಡುತ್ತ ಹೊರಟರು; ಹಿಂದೆಯೇ ಮತ್ತೊಂದು ಕಾರಿನಲ್ಲಿ ಗಾಂಧೀಜಿ. ನಿದಾನವಾಗಿ ದಾರಿ ಕಳೆದಿದ್ದರೂ ಲಖನೌ ಸೇರುವ ವೇಳೆಗೆ ಮೋತಿಲಾಲರಿಗೆ ಅತ್ಯಾಯಾಸವಾಗಿತ್ತು. ಮರುದಿನ ಶಾಂತವಾಗಿಯೆ ಕಳೆಯಿತು. ಆಯಾಸದಿಂದ ಪಾರಾಗುತ್ತಿದ್ದಂತೆ ಕಂಡಿತು. 6ನೆ ತಾರೀಖು ಬೆಳಗ್ಗೆ; ಹಾಸಿಗೆ ಬಳಿ ಜವಾಹರಲಾಲರೂ ಸ್ವರೂಪರಾಣಿಯವರೂ ಇದ್ದು ನೋಡುತ್ತಿದ್ದರು. ರಾತ್ರಿಯೆಲ್ಲ ವಿಶ್ರಾಂತಿಹೀನರಾಗಿ ಕಳೆದಿದ್ದ ಮೋತಿಲಾಲರು ವಿಶ್ರಾಂತಿಯನ್ನು ಪಡೆದಂತೆ ಕಂಡಿತು; ಮುಖದಲ್ಲಿ ಶಾಂತತೆಯ ಕಳೆ ತುಂಬುತ್ತ ಬಂತು. ಕಡೆಗೆ ನಿದ್ದೆ ಬಂದಿತೆಂದು ಜವಾಹರಲಾಲರು ಭಾವಿಸಿ ಸಮಾಧಾನಗೊಳ್ಳುವಷ್ಟರಲ್ಲಿ ನಿಜಸ್ಥಿತಿಯನ್ನು ತಿಳಿದ ಸ್ವರೂಪರಾಣಿಯವರು ಕಿಟಾರೆಂದು ಕಿರಿಚಿದರು. “ಗಾಬರಿ ಬೇಡಮ್ಮ; ನಿದ್ದೆ ಬಂದಿದೆ, ಎಬ್ಬಿಸಬೇಡ!” ಎನ್ನುತ್ತ ಜವಾಹರಲಾಲರು ತಾಯಿಯ ಕಡೆ ತಿರುಗಿದರು. ಆ ಕ್ಷಣಕ್ಕೆ ಹಿಂದೆಯೇ ಮೋತಿಲಾಲರ ಘನವಾದ ಪ್ರಾಣ ದೇಹದಿಂದ ಹಾರಿ ಹೊರಟಿತ್ತು! ಮೂರ್ಛೆಗೊಂಡವರಂತೆ ಸ್ವರೂಪರಾಣಿಯವರು ಪಾದದ ಬಳಿ ಕುಳಿತುಬಿಟ್ಟರು.

ಅಲ್ಲಿದ್ದವರೆಲ್ಲರಿಗೂ ತಕ್ಷಣವೇ ತಿಳಿಯಿತು. ಒಬ್ಬೊಬ್ಬರಾಗಿ ಬಂದು ಮೋತಿಲಾಲರ ಶಾಂತಪೂರಿತ ಮುಖವನ್ನೂ ಪಕ್ಕದಲ್ಲಿಯೆ ಕುಳಿತು ಬಿಡಲಾರದ ಕಣ್ಣೀರನ್ನು ಕಣ್ತುಂಬ ಕಾಣಿಸುತ್ತಿದ್ದ ಜವಾಹರಲಾಲರನ್ನೂ ಕಂಡರು. ಸ್ವರೂಪರಾಣಿಯವರು ಪ್ರಜ್ಞೆ ತಪ್ಪಿದಂತೆ ಒಂದು ಮೂಲೆಯಲ್ಲಿ ಕುಳಿತಿದ್ದರು. ಗಾಂಧೀಜಿಯವರೂ ಬಂದರು. ನೇರವಾಗಿ ಹಾಸಿಗೆ ಬಳಿ ಸೇರಿ ಸ್ವಲ್ಪಹೊತ್ತು ತಲೆತಗ್ಗಿಸಿ ಕಣ್ಣುಮುಚ್ಚಿ

ಗಾಢವಾಗಿ ಧ್ಯಾನಮಾಡಿದರು; ತರುವಾಯ ಸ್ವರೂಪರಾಣಿಯ ಪಕ್ಕಕ್ಕೆ ಹೋಗಿ ಕುಳಿತು ಆಕೆಯ ಭುಜದ ಮೇಲೆ ತಮ್ಮ ಹಸ್ತವನ್ನಿಟ್ಟು "ಮೋತಿಲಾಲ್‌ಜಿ ಮೃತಪಟ್ಟಿಲ್ಲ, ತಾಯಿ; ಆತ ಚಿರಂಜೀವಿ" ಎಂದರು.

ಆ ವೇಳೆಗೆ ದೇಶದಲ್ಲೆಲ್ಲ ಸುದ್ದಿ ಹಬ್ಬಿತು. ಲಖನೌ ಪಟ್ಟಣದ ಮೂಲೆ ಮೂಲೆಗೂ ತಿಳಿದು ನೂರು ನೂರಾಗಿ ಸಾವಿರ ಸಾವಿರವಾಗಿ ಜನರು ಬಂದು ಮನೆ ಬಾಗಿಲಲ್ಲಿ ಮೌನದಿಂದ ನಿಂತರು. ಮೋತಿ ಲಾಲರ ಶವವನ್ನು ಪುಷ್ಪಶಯ್ಯೆಯಲ್ಲಿಟ್ಟು ಇಷ್ಟಮಿತ್ರರಿಗೆ ಕಡೆಯ ದರ್ಶನವನ್ನು ಕೊಟ್ಟಿತು. ಸ್ವರೂಪರಾಣಿ ಮತ್ತು ಗಾಂಧೀಜಿ ಒಂದು ಕಡೆ ಕುಳಿತಿದ್ದರೆ ಪಕ್ಕದಲ್ಲಿ ಜವಾಹರಲಾಲರು ನಿಂತಿದ್ದರು. ಮುಖವೆಲ್ಲ ಬಾಡಿದ್ದರೂ ಗಂಭೀರದಿಂದಿದ್ದಿತು. ಅರುಣೋದಯದಿಂದ ಇರುವೆಗಳ ಸಾಲಿನಂತೆ ಜನರು ಒಬ್ಬರಹಿಂದೊಬ್ಬರು ಬಂದು ಮೋತಿಲಾಲ್‌ಜಿಯ ದರ್ಶನ ಮಾಡಿಕೊಂಡು ಹೊರಡುತ್ತಿದ್ದರು.

ಹೊರಗಿನ ಜನಸಮೂಹ ಕ್ಷಣೇ ಕ್ಷಣೇ ಹೆಚ್ಚುತ್ತಿತ್ತು. ಮೋತಿ ಲಾಲರ ದೇಹವನ್ನು ಸ್ವಂತ ಊರಾದ ಪ್ರಯಾಗಕ್ಕೊಯ್ಯಬೇಕಾಗಿತ್ತು. ದೊಡ್ಡದಾದ ರಾಷ್ಟ್ರಧ್ವಜವನ್ನು ದೇಹಕ್ಕೆ ಹೊದ್ದಿಸಿ ಮೋಟಾರ್ ಬಂಡಿ ಯಲ್ಲಿಟ್ಟರು; ಅದರ ಪಕ್ಕದಲ್ಲಿಯೆ ಜವಾಹರರು ಕುಳಿತರು. ರಣಜಿತ್ ಪಂಡಿತರೇ ಸ್ವಯಂ ಷೋಫರ್ ಸ್ಥಾನದಲ್ಲಿ ಕುಳಿತು ಬಂಡಿ ನಡೆಸಲು ಸಿದ್ಧರಾದರು. ಮತ್ತೊಂದು ಮೋಟಾರಿನಲ್ಲಿ ತಾಯಿಯವರೂ ಗಾಂಧೀಜಿ ಯವರೂ ಕುಳಿತುಕೊಳ್ಳುವಂತೆಯೂ ಆ ಬಂಡಿಯನ್ನು ಹಿಂದಿನಿಂದಲೂ ಮೋತಿಲಾಲರ ಭೃತ್ಯನಾಗಿದ್ದ ಡ್ರೈವರನೇ ನಡೆಸುವಂತೆಯೂ ಏರ್ಪಾ ಟಾಯಿತು. ಮೊದಲು ಕಮಲಾದೇವಿಯವರು ಜವಾಹರಲಾಲರ ತಂಗಿಯರಿಬ್ಬರನ್ನೂ ಕರೆದುಕೊಂಡು ಆನಂದಭವನವನ್ನು ಸಜ್ಜುಗೊಳಿ ಸಲು ಮತ್ತೊಂದು ಕಾರಿನಲ್ಲಿ ಹೊರಟರು. ಮೋತಿಲಾಲರ ಆತ್ಯಾಪ್ತ ಸೇವಕ ಹರಿಯೆಂಬುವವನು ಜವಾಹರಲಾಲರ ಪಕ್ಕದಲ್ಲಿಯೆ ಏರಿ ಕೊಂಡನು. ಆ ಮೋಟಾರ್ ಮೇಲಕ್ಕೆ ದೊಡ್ಡದಾದ ರಾಷ್ಟ್ರೀಯ ಧ್ವಜವನ್ನು ಹೊರಡುವ ವೇಳೆಯಲ್ಲಿ ಕಟ್ಟಿದರು.

ಕಮಲಾದೇವಿಯವರು ಕುಳಿತಿದ್ದ ಮೋಟಾರ್ ಮುಂದಾಗಿ ಹೊರಟು ವೇಗವೇಗವಾಗಿ ದಾರಿ ಕಳೆಯಿತು. ದಾರಿಯುದ್ದಕ್ಕೂ ಜನರು ಬಂದು ಸೇರುತ್ತಲೇ ಇದ್ದರು; ಪ್ರಯಾಗವಿನ್ನೂ ನಾಲ್ಕು ಮೈಲಿಯೆನ್ನುವವೇಳೆಗೆ ಬಂಡಿಗೆ ದಾರಿ ಬಿಡಿಸಿಕೊಳ್ಳುತ್ತ ನಿದಾನವಾಗಿಯೇ ನಡೆಸಬೇಕಾಯಿತು. ಜನರು ಸಾವಿರ ಸಾವಿರಗಳಾಗಿ ರಸ್ತೆಯ ಎರಡು ಪಕ್ಕಗಳಲ್ಲಿಯೂ ನಿಂತಿದ್ದು ಕಮಲಾದೇವಿಯ ಮುಖವನ್ನು ಕಂಡಕೂಡಲೆ ಗೋಳಿಟ್ಟು ಆಕೆಗೆ ಮತ್ತೊಮ್ಮೆ ಅಳು ಬರುವಂತೆ ಮಾಡಿದರು. ವಿಜಯಲಕ್ಷ್ಮಿ ಕೃಷ್ಣೆಯರು ಜನರ ಕಣ್ಣೀರನ್ನು ಕಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು. ಆನಂದಭವನವನ್ನು ಹಾಗೆಯೆ ತಲಪಿದರು; ಆನಂದಭವನವಿನ್ನು ಶೋಕಭವನ! ಮನೆ ಮೇಲೆ ರಾಷ್ಟ್ರಧ್ವಜ ಕಂಬದ ಮಧ್ಯಕ್ಕೆ ಕಟ್ಟಿತ್ತು; ಕಾಂಪೌಂಡಿನಲ್ಲಿ ಎತ್ತನೋಡಿದರೂ ಜನಸ್ತೋಮ!

ಸ್ವಲ್ಪ ಹೊತ್ತಾದಬಳಿಕ ರಣಜಿತ್‌ಪಂಡಿತರು ನಡೆಸುತ್ತಿದ್ದ ಬಂಡಿ ಬಂತು. ಜವಾಹರಲಾಲರ ಮುಖ ಕಂಡಿತು; ಜನರೆಲ್ಲರೂ ಏಕಕಂಠವಾಗಿ ಗೋಳಿಟ್ಟರು. ಎಲ್ಲವೂ ಕಣ್ಣಿಗೆ ಸ್ಪಷ್ಟವಾಗಿದ್ದರೂ ಮನಸ್ಸಿಗೇನೂ ತೋಚದಂತಿದ್ದ ಜವಾಹರಲಾಲರ ಗಂಭೀರ ಮುಖಮುದ್ರೆಯನ್ನು ಕಂಡು ಜನರು ತಮ್ಮಲ್ಲಿ ತಾವೇ ಸಂಜ್ಞೆಮಾಡಿಕೊಂಡು ಮೌನವಹಿಸಿದರು. ಆನಂದಭವನಕ್ಕೆ ಅದರ ಸ್ವಾಮಿಯ ದೇಹ ಬಂತು. ಉತ್ತರಕ್ರಿಯೆಗಳನ್ನಾರಂಭಿಸಲು ಗಾಂಧೀಜಿ ಮತ್ತು ಸ್ವರೂಪರಾಣಿಯವರು ಬರುವುದೇ ತಡ. ಅವರ ತರುವಾಯ ಹೊರಟವರು ಬಂದು ಸೇರಿದಾಗ್ಗೂ ಅವರ ಬಂಡಿ ಬರಲಿಲ್ಲ.

ಲಖನೌ ಪ್ರಯಾಗ ರಸ್ತೆ ಅಷ್ಟೇನೂ ಚನ್ನಾಗಿರಲಿಲ್ಲ. ಬಂಡಿಬಿಡುತ್ತಿದ್ದ ಆ ಷೋಫ಼ರನಿಗೆ ಮೇಲಿಂದ ಮೇಲೆ ಕಣ್ಣೀರುಕ್ಕಿಬಂದು ದೃಷ್ಟಿ ಮಂಜಾಗುತ್ತಿತ್ತು. ಎದುರಿಗೊಂದು ಹಳ್ಳಬಂತು. ಅದನ್ನು ಸರಿಯಾಗಿ ಕಾಣಲಾರದೆ ಹೋದ. ದೊಡ್ಡ ಬಂಡಿ ಹಳ್ಳವನ್ನು ಹಾರುತ್ತ ಮಗುಚಿಕೊಂಡಿತು. ಹೇಗೋ ದೈವವಶಾತ್ ಬಾಗಿಲುಗಳು ತಾವಾಗಿಯೇ ತೆರೆದುಕೊಂಡು ಗಾಂಧೀಜಿ ಮತ್ತು ಸ್ವರೂಪರಾಣಿಯವರನ್ನು ಹೊರಕ್ಕೆ ಎಸೆದಿತ್ತು. ಗಾಯವಾಗಲಿಲ್ಲ. ಬಂಡಿಗೂ ಏಟಾಗಲಿಲ್ಲ; ಡ್ರೈವರಿಗೆ

ಮಾತ್ರ ಸ್ವಲ್ಪ ಗಾಯವಾಯಿತು. ಕೂಡಲೆ ಡ್ರೈವರನು ತನ್ನನ್ನು ತಾನೇ ನಿಂದಿಸಿಕೊಂಡು ಪುನಃ ಹೊರಟಿದ್ದನು. ಈ ಸಂಭವದಿಂದ ತಡವಾಯಿತು. ಅಷ್ಟು ವಿಳಂಬವಾಗುವುದರಲ್ಲಿ ಆನಂದಭವನದ ಸುತ್ತಮುತ್ತಲಲ್ಲದೆ ಸಂಗಮದ ಸಮೀಪದಲ್ಲಿಯೂ ಜನರಾಶಿ ಅಪರಿಮಿತವಾಗಿ ಸೇರಿಹೋಯಿತು.

ತಾಯಿಯವರು ಬಂದು ಸೇರುತ್ತಲೆ ನಡೆಸಬೇಕಾದ ಕರ್ಮಗಳನ್ನಾರಂಭಿಸಿದಾಯಿತು. ಪುಷ್ಪರಾಶಿಯಿಂದಲಂಕರಿಸಿ ಮೋತಿಲಾಲರ ದೇಹವನ್ನು ಗಂಗಾತೀರಕ್ಕೊಯ್ದಾಗ ಜನಸಮೂಹವೆಂಬುದೊಂದು ಅಪಾರ ಸಮುದ್ರದಂತಿತ್ತು. ಆರ್ದ್ರಗೊಳ್ಳದ ಹೃದಯವಿಲ್ಲ, ಬಾಷ್ಪಗೂಡದ ಕಣ್ಣಿಲ್ಲ; ಎಲ್ಲರಿಗೂ ಬರಿಯ ತಲೆಗಳು, ಎಲ್ಲರಿಗೂ ನೀರವತೆ. ಗಾಂಧೀಜಿಯವರೂ ಪಂಡಿತ ಮಾಲವೀಯರೂ ಇಬ್ಬರೂ ಮುಂದೆ ನಿಂತಿದ್ದು ಕರ್ತವ್ಯ ನೆರವೇರಿದ ಕೂಡಲೆ ಇತರರಿಗೆ ಧೈರ್ಯಕೊಡುವವರಾದರು. ಮೋತಿಲಾಲರ ದೇಹವನ್ನು ಪಂಚಭೂತಗಳಿಗೆ ಸೇರಿಸಿಕೊಡಲು ಅಗ್ನಿದೇವನು ಸ್ವೀಕಾರ ಮಾಡಿದ ಕೂಡಲೆ ಅಲ್ಲಿ ನೆರೆದಿದ್ದ ಲಕ್ಷಾಂತರ ಜನರನ್ನೂ ದೇಶದಲ್ಲೆಲ್ಲಿಯೂ ಗೋಳಿಡುತ್ತಿದ್ದ ಕೋಟ್ಯಂತರ ಜನರನ್ನೂ ಉದ್ದೇಶಿಸಿ ಈರ್ವರೂ ಸಮಯೋಚಿತವಾಗಿ ಮಾತನಾಡಿದರು. ಗಾಂಧೀಜಿಯವರಾಡಿದ ಮಾತುಗಳು ಸ್ಮರಣೀಯ. "ಇದು ಮೋತಿಲಾಲರ ಚಿತಿಯಲ್ಲ, ರಾಷ್ಟ್ರ ಯಜ್ಞಕ್ಕಾಗಿ ಮೊದಲಿಟ್ಟ ಯಜ್ಞಕುಂಡ! ಮೋತಿಲಾಲರು ಸರ್ವಸ್ವವನ್ನರ್ಪಿಸಿದಂತೆಯೆ ತನುಮನಧನಗಳನ್ನರ್ಪಿಸಬೇಕೆಂದು ಪ್ರತಿಯೊಬ್ಬರಿಗೂ ಆಸೆ ಹುಟ್ಟಬೇಕು. ಕಟ್ಟಕಡೆವರೆಗೂ ರಾಷ್ಟ್ರದ ಚಿಂತೆಯನ್ನೇ ಮಾಡುತ್ತ ಪ್ರಾಣವನ್ನರ್ಪಿಸಿದ ಮಹಾಪುರುಷ ಮೋತಿಲಾಲ್ ನೆಹರು. ನಮ್ಮೆಲ್ಲರ ಹಿತಕ್ಕಾಗಿ ಶ್ರಮಿಸಿ ದೇಹತ್ಯಾಗಮಾಡಿದ ಈ ಮಹಾನುಭಾವ ನಮ್ಮವನೆಂದು ಹೆಮ್ಮೆಗೊಂಬ ಯೋಗ್ಯತೆ ನಮ್ಮಲ್ಲಿ ಲೋಪವಾಗದಿರಲಿ! ಆತನು ತ್ಯಾಗ ಮಾಡಿದಷ್ಟನ್ನು ತ್ಯಾಗಮಾಡುವ ಯೋಗ್ಯತೆ ಪ್ರತಿಯೊಬ್ಬರಿಗೂ ಇರಲಾರದಾದರೂ ಆತನ ಮನೋರಥಸಾಧನೆಗೆ ಸಾಕಾಗುವಷ್ಟನ್ನಾದರೂ ತ್ಯಾಗಮಾಡುವ ಯೋಗ್ಯತೆಯುಂಟು. ಅದೇ ಪ್ರತಿಯೊಬ್ಬರೂ ಸಲ್ಲಿಸಬೇಕಾದ ಋಣ!"

ಅದೇ ಸಮಯದಲ್ಲಿ ಸುದ್ದಿಗಾರನೊಬ್ಬನೊಂದಿಗೆ ಉಸುರಿದುದು ಮರ್ಮ ಭೇದಕವಾಗಿದೆ; " ಈಗ ನನ್ನ ಗತಿ ವಿಧವೆಯ ಗತಿಗಿಂತಲೂ ಕೀಳಾಯಿತು. ಪತಿವ್ರತೆಯಾದವಳಿಗೆ ಪತಿ ಸಂಪಾದಿಸಿದ ಪುಣ್ಯದಲ್ಲಿ ಭಾಗ ಲಭಿಸುತ್ತದೆ. ನನಗಷ್ಟು ಮಾತ್ರವೂ ಇಲ್ಲ. ಮೋತಿಲಾಲರು ಪ್ರಾಣಬಿಟ್ಟಾಗ ನನಗಾದ ನಷ್ಟವು ಶಾಶ್ವತವಾಗಿ ದುರ್ವಾಹ್ಯವಾಗಿಯೆ ಉಳಿಯುವುದು. ಪರಮಾತ್ಮನೇ ನನಗೆ ಶರಣು !"

ಮೋತಿಲಾಲರು ನಿಜವಾಗಿಯೂ ಮೃತಪಟ್ಟರೆಂದು ನಂಬುವುದು ಕಷ್ಟವಾಯಿತು. ಕಣ್ಣೆದುರಿಗೆ ಕಾಣದಿದ್ದರೂ ಎಲ್ಲಿಯೋ ಇದ್ದೇ ಇದ್ದಾರೆಂಬ ಭ್ರಾಂತಿಯೇ ಬಲವಾಗಿತ್ತು ಜವಾಹರಲಾಲರ ಮನಸ್ಸಿನಲ್ಲಿ. ಮೋತಿಲಾಲರು ದೈವಾಧೀನರಾದ ಮೂರು ತಿಂಗಳ ತರುವಾಯ ವಿಶ್ರಾಂತಿಗಾಗಿ ಜವಾಹರಲಾಲರು ಸಿಂಹಳದಲ್ಲಿರುವಾಗ್ಗ ವಿಚಿತ್ರವಾದ ಸಂಭವ. ನುವಾರಎಲಿಯದಲ್ಲಿ ಮನಸ್ಸಿಗೆ ಆಪ್ಯಾಯಮಾನವಾಗಿತ್ತು ; ಆ ಸುಖವನ್ನನುಭವಿಸುತ್ತ ಜವಾಹರಲಾಲರ ಮನಸ್ಸಿಗೆ "ತಂದೆಯವರಿಗೆಷ್ಟು ಹಿತಕರವಾಗಿದ್ದೀತು ಈ ಸ್ಥಳ ! ತಂತಿಕೊಟ್ಟು ಕರೆಸಿಕೊಳ್ಳಬೇಕು" ಎನ್ನಿಸಿತು. ತಂತಿ ಕೊಡಲು ಸಿದ್ಧರಾಗಿದ್ದರು. ಅಷ್ಟು ಹೊತ್ತೂ ವಿಚಿತ್ರ ವಿಸ್ಮೃತಿ !

ಸಿಂಹಳದಿಂದ ಇಲಾಹಾಬಾದಿಗೆ ಹಿಂತಿರುಗಿ ಬರುವ ವೇಳೆಗೆ ಅಂಚೆಯಲ್ಲಿ ವಿಚಿತ್ರವೆನಿಸಿದ ಕಾಗದ ಬಂತು. ಅನೇಕಾನೇಕ ಪೋಸ್ಟಾಫೀಸ್ ಮುದ್ರೆಗಳನ್ನು ಹೊತ್ತ ಮೋತಿಲಾಲರ ಬರವಣಿಗೆ! ನಿಜವಾಗಿಯೂ ಮೋತಿಲಾಲರ ಸ್ವಹಸ್ತ. ಆದರೆ 1926ರಲ್ಲಿ ! ಐದು ವರ್ಷಗಳ ಹಿಂದೆ ಯೂರೋಪಿಗೆ ಹೊರಟಿದ್ದ ಜವಾಹರಲಾಲರಿಗೆ ಅಹಮದಾಬಾದಿನಿಂದ ಮೋತಿಲಾಲರು ಬರೆದಿದ್ದುದು ಆ ಕಾಗದ. ಎಲ್ಲಿಯೋ ಗುರಿತಪ್ಪಿ ದಾರಿತಪ್ಪಿ ಹಾರಾಡಿ ಯಾವುದೋ ಮೂಲೆಯಲ್ಲಿ ಅಡಗಿದ್ದ ಆ ಕಾಗದವನ್ನು ಯಾರೋ ಒಬ್ಬಾತ ಸರಿಯಾದ ವಿಳಾಸಕ್ಕೆ ರವಾನಿಸಿದ್ದನು. ಇನ್ನೂ ವಿಸ್ಮಯಕಾರಕವಾಗಿ ಒಳಗಿದ್ದುದು ಬೀಳ್ಕೊಟ್ಟ ಬರವಣಿಗೆ !

ಇಲಾಹಾಬಾದಿನಲ್ಲಿಯೆ ಇದ್ದ ಸಚ್ಚಿದಾನಂದ ಸಿಂಹರಿಗೆ ಕಾಹಿಲೆಯಿಂದ ಅತಿ ದೌರ್ಬಲ್ಯವಾಗಿದ್ದಾಗ ಡಾಕ್ಟರ್ ಎಂತೆಂತಹ ಟಾನಿಕ್ಕು

ಗಳನ್ನೋ ಕೊಡುತ್ತಿದ್ದು ಕಡೆಗೆ "ನಾಳೆ ನಿಮಗೆ ಅತ್ಯುತ್ಕೃಷ್ಟ ಟಾನಿಕ್ ಕೊಡುತ್ತೇನೆ. ನಾಳೆಯೇ ಆತ ಬರುತ್ತಾನೆ" ಎಂದನು. "ಟಾನಿಕ್—ಆತ" ಎಂದರೇನೋ ಅರ್ಥವಾಗದಿರಲು "ಬೇಗನೆ ಅರ್ಥವಾಗುತ್ತೆ" ಎಂದು ಬಿಟ್ಟು ಆ ಡಾಕ್ಟರ್ ರೋಗಿಯನ್ನು ಮೋತಿಲಾಲರ ಬಳಿಗೆ ಕರೆದುಕೊಂಡು ಹೋಗಿ ಪರಿಚಯಮಾಡಿಸುತ್ತ ಕಿವಿಯಲ್ಲಿ "ಈತನೊಂದಿಗೆ ಮಾತನಾಡುತ್ತಿರುವುದೇ ಎಲ್ಲಕ್ಕಿಂತಲೂ ದೊಡ್ಡ ಟಾನಿಕ್!" ಎಂದಿದ್ದನು. ಸಚ್ಚಿದಾನಂದರಿಗೆ ಆ ಮಾತು ಯಥಾರ್ಥವಾಯಿತು.

ದೇಹತ್ಯಾಗ ಮಾಡಿದ ತರುವಾಯವೂ ಮೋತಿಲಾಲರ ಸಹವಾಸ ಉತ್ತಮವಾದ ಟಾನಿಕ್ಕಾಗಿಲ್ಲವೇ ?

V

## 1. ಇರ್ವಿನ್ ಗಾಂಧೀಯೊಪ್ಪಂದ

ಎಂತಹ ತಂದೆಯನ್ನು ಮೃತ್ಯು ಸೆಳೆದುಕೊಂಡಿತು! ಆದರೆ ಜವಾಹರಲಾಲರ ಮನಸ್ಸಿನಲ್ಲಿ ಪದೇ ಪದೇ ಜ್ಞಾಪಕಕ್ಕೆ ಬಂತು ಗಾಂಧೀಜಿಯಾಡಿದ ಮಾತು "ಈ ಸಮಯದಲ್ಲಿ ನಾವು ದುಃಖಕ್ಕೆ ಸೋತು ನಿರ್ಬಲರಾಗಬಾರದು. ಮೋತಿಲಾಲರಂತಹ ಪುತ್ರನನ್ನು ತನ್ನ ಆಪತ್ಕಾಲದಲ್ಲಿ ಪಡೆದ ನಮ್ಮ ದೇಶಮಾತೆಯೆಷ್ಟು ಪವಿತ್ರ ವೆಂದು ಸಂತೋಷಗೊಂಡು ಕಾರ್ಯಪಟುಗಳಾಗಬೇಕು ನಾವೆಲ್ಲರು" ಘೋರವಾಗಿ ತೋರಿದ ಆ ವಿಪತ್ಕಾಲದಲ್ಲಿ ಗಾಂಧೀಜಿಯೇ ಪಕ್ಕದಲ್ಲಿದ್ದು ಹಿತವಚನಗಳನ್ನಾಡಿ ಎಲ್ಲರನ್ನೂ ಸಮಾಧಾನಪಡಿಸುತ್ತಿರಲಿಲ್ಲವೇ! ತಂದೆ ಗಿಂತ ಹೆಚ್ಚಾದ ಆತನ ಮಹಿಮೆಯಿಂದ ಜವಾಹರಲಾಲರು ತಂದೆಯಿಲ್ಲ ವಾಯಿತೆಂಬ ಕೊರಗನ್ನು ಅಡಗಿಸಿಕೊಂಡು ಕರ್ತವ್ಯದಲ್ಲಿ ತೊಡಗಿದರು.

ಮೋತಿಲಾಲರು ಮೃತಿಪಟ್ಟ ದಿನವೇ ಚಕ್ರಗೋಷ್ಠಿಯಿಂದ ಹಿಂತಿರುಗಿ ಸಪ್ರು, ಶಾಸ್ತ್ರಿ ಮುಂತಾದವರು ಮುಂಬಯಿಯಲ್ಲಿ ಕಾಣಿಸಿ ಕೊಂಡು ತಡಮಾಡದೆ ಇಲಾಹಾಬಾದಿಗೆ ಹೊರಟರು. ಸ್ವರಾಜ್ ಭವನದಲ್ಲಿಯೇ ವರ್ಕಿಂಗ್ ಕಮಿಟಿಯ ಸದಸ್ಯರಿಗೂ ಅವರಿಗೂ ಮಾತು ಕತೆಗಳು ನಡೆದವು. ಕೊನೆಗೆ ಅವರಿಬ್ಬರೂ ಸೇರಿ ಗಾಂಧೀಜಿಯವರು ವೈಸರಾಯಿಯವರನ್ನು ಮುಖತಃ ಕಂಡು ಮಾತನಾಡುವಂತೆ ಪ್ರೇರಿಸಿ ಒಪ್ಪಿಸಿದರು. ದಿಲ್ಲಿಗೆ ಮಹಾತ್ಮಾಜಿ ಹೊರಟು ವೈಸರಾಯಿಯನ್ನು ಕಂಡು ಮಾತನ್ನಾರಂಭಿಸಿ ಹಲ ಕೆಲವು ದಿನಗಳಲ್ಲಿಯೇ ವರ್ಕಿಂಗ್ ಕಮಿಟಿ ಸದಸ್ಯರೂ ಅಲ್ಲಿಗೆ ಬರಬೇಕೆಂದು ತಿಳಿಸಿದರು. ಜವಾಹರ ಲಾಲರೂ ಇತರರಂತೆಯೆ ಹೊರಟರು. ದಿಲ್ಲಿಯಲ್ಲಿ ಮಹಾತ್ಮಾಜಿ ಯವರು ಡಾ|| ಅನ್ಸಾರಿಯವರ ಮನೆಯಲ್ಲಿಳಿದಿದ್ದರು; ಅಲ್ಲಿಯೇ ಕಾಂಗ್ರೆಸ್ ನಾಯಕರ ಮಾತುಕತೆಗಳು ನಡೆಯುತ್ತಿದ್ದವು.

ದಿಲ್ಲಿಯಲ್ಲಿ ಮೂರುವಾರಗಳ ಕಾಲ ಕಳೆಯುವಷ್ಟರಲ್ಲಿ ಎಷ್ಟೋ ನಡೆದುಹೋಯಿತು. ವರ್ಕಿಂಗ್ ಕಮಿಟಿಯ ಸದಸ್ಯರೊಡನೆ ಮಾತ ನಾಡಿಕೊಂಡು ಗಾಂಧೀಜಿ ವೈಸರಾಯಿ ಭವನಕ್ಕೆ ಹೋಗಬೇಕು;

ಅಲ್ಲಿಂದ ಹಿಂತಿರುಗಿ ಬಂದ ಕೂಡಲೆ ನಡೆದಷ್ಟನ್ನು ವಿವರಿಸಿಕೊಡಬೇಕು. ಪತ್ರ ವ್ಯವಹಾರದೊಂದಿಗೆ ದಿನಚರಿಯೂ ಕ್ರಮವಾಗಿ ನಡೆಯಬೇಕು. ವೃತ್ತಪತ್ರಿಕೆಗಳ ಸುದ್ದಿಗಾರರನ್ನು ಕಂಡು ಸಮಾಧಾನವಾಗುವಂತೆ ಮಾತುಗಳನ್ನಾಡಬೇಕು! ಗಾಂಧೀಜಿಗಂತೂ ಒಂದು ನಿಮಿಷ ಕೂಡ ವಿರಾಮವೆಂಬುದಿಲ್ಲ. ಪ್ರಾತಃಕಾಲದಲ್ಲಿ ಕಾಲ್ನಡಿಗೆಗೆ ಹೊರಟ ಸಮಯ ದಲ್ಲಿಯೂ ಜೊತೆಯಲ್ಲಿ ಯಾರೆಂದು ಹಿಂದೆಯೇ ಗೊತ್ತಾಗಿರುತ್ತಿತ್ತು. ಜವಾಹರಲಾಲರಿಗೆ ಗಾಂಧೀಜಿಯನ್ನು ಕಂಡು ಮಾತನಾಡಲು ಅಷ್ಟು ಮಾತ್ರವೇ ಲಭ್ಯ! ಗಾಂಧೀಜಿಗೂ ಕೂಡ ಜವಾಹರಲಾಲರನ್ನು ಕಂಡು ಮಾತನಾಡಿಸಲು ಇಷ್ಟ. ಮೋತಿಲಾಲರು ತೀರಿಕೊಂಡ ತರುವಾಯ ವಂತೂ ಜವಾಹರಲಾಲರಲ್ಲಿ ಗಾಂಧೀಜಿ ಪುತ್ರವಾತ್ಸಲ್ಯವನ್ನೇ ಬೀರು ತ್ತಿದ್ದರು. ಜವಾಹರಲಾಲರೇನು ಹೇಳಿದರೂ ಸಾವಕಾಶವಾಗಿ ಕೇಳಿ ಆದಷ್ಟು ಮಟ್ಟಿಗೆ ಸಮಾಧಾನ ಕೊಡಲು ಇಷ್ಟಪಡುತ್ತಿದ್ದಂತೆ ಎಲ್ಲರಿಗೂ ತೋರಿತು. ಜವಾಹರಲಾಲರಿಗೂ ಹಾಗೆಯೇ ತೋರಿ ತಮ್ಮ ಮನಸ್ಸಿ ನಲ್ಲಿದ್ದ ಆಲೋಚನೆಗಳನ್ನು ಬಿಚ್ಚಿ ಹೇಳುತ್ತಿದ್ದರು.

ವೈಸರಾಯಿಯೊಂದಿಗೆ ಗಾಂಧೀಜಿ ಏಕಾಂತವಾಗಿ ಮಾತುಕತೆ ಗಳನ್ನು ನಡೆಸುತ್ತಿದ್ದ ಆ ಸಮಯದಲ್ಲಿ ಡಾ|| ಅನ್ಸಾರಿ ಮನೆಯನ್ನು ಹುಡುಕಿಕೊಂಡು ಬರಲಾರಂಭಿಸಿದ ನಾನಾ ವರ್ಗದ ಜನರನ್ನು ಕಂಡು ಜವಾಹರಲಾಲರು ತಮ್ಮ ಮನಸ್ಸಿನಲ್ಲಿಯೇ ವಿನೋದಗೊಂಡರು. ಅದು ವರೆಗೂ ಕಾಂಗ್ರೆಸ್ ನಾಯಕರಿಗೆ ಆಪ್ತತೆಯಿದ್ದುದು ಪಟ್ಟಣದ ಜನ ಸಾಮಾನ್ಯರೊಂದಿಗೆ ಅಥವಾ ಹಳ್ಳಿಯ ಬಡಪಾಯಿಗಳೊಂದಿಗೆ ಅಥವಾ ಜೈಲುಗಳಲ್ಲಿ ಶಿಕ್ಷೆಯನ್ನು ಸಮಾಧಾನದಿಂದ ಅನುಭವಿಸುತ್ತಿದ್ದ ವರೊಂದಿಗೆ. ದಿಲ್ಲಿಯಲ್ಲಾದರೋ ದೊಡ್ಡ ದೊಡ್ಡವರೆನಿಸಿದವರು ತಾವಾಗಿ ತಾವೇ ಬಂದು ಆಪ್ತತೆಯನ್ನು ಕಟ್ಟಲಾರಂಭಿಸಿದರು. ಬ್ರಿಟಿಷ್ ಸರ್ಕಾರವನ್ನು ಆಧಾರ ಸ್ತಂಭಗಳಂತೆ ಹೊತ್ತಿದ್ದ ಆ ಜನರು ಮುಂದೆ ಬೇರೆ ಸರ್ಕಾರ ಬರುವುದಾದರೆ ಸ್ತಂಭಗಳಾಗಿಯೆ ನಿಂತು ದೊಡ್ಡಮನುಷ್ಯರಾಗಿಯೆ ಉಳಿದುಕೊಳ್ಳಲು ಯಾವ ಅಭ್ಯಂತರವನ್ನೂ ಕಾಣದವರು!

ಫೆಬ್ರುವರಿ ದಿನಗಳೊಂದೊಂದಾಗಿ ಕಳೆಯುತ್ತ ಬಂದವು. ಇದ್ದಕ್ಕಿದ್ದ ಹಾಗೆ ಗಾಂಧೀಜಿ ವೈಸರಾಯಿ ಸಂಭಾಷಣೆಗಳು ನಿಂತವು. ಗಾಂಧೀಜಿಯನ್ನು ವೈಸರಾಯಿ ಭವನಕ್ಕೆ ಕರೆಸಿಕೊಳ್ಳುತ್ತಿದ್ದುದು ನಿಂತೇ ಹೋಯಿತು. ಇಷ್ಟು ಪ್ರಯಾಸದಿಂದ ನಡೆಸಿದ್ದ ಸಮಾಧಾನ ಪ್ರಯತ್ನವೆಲ್ಲ ವಿಫಲಗೊಂಡಂತೆ ಕಾಂಗ್ರೆಸ್ ಮುಖಂಡರಿಗೆ ಸ್ಪಷ್ಟವಾಗಲು ಮುಂದೆ ಮಾಡಬೇಕಾದುದೇನೆಂಬ ಯೋಚನೆ ನಡೆಯಿತು. ಕಾಂಗ್ರೆಸ್ ಸಭೆಗಳ ಅಧ್ಯಕ್ಷರುಗಳು ಇನ್ನುಮುಂದೆ ತಮ್ಮ ಸ್ಥಾನದಲ್ಲಿ ಮತ್ತೊಬ್ಬರನ್ನು ನಿಯೋಗಿಸುವ ಆವಶ್ಯವಿಲ್ಲವೆಂಬ ನಿರ್ಧರವನ್ನು ರೂಪಕ್ಕೆ ತಂದಿಟ್ಟು ಮುಖಂಡರು ಮತ್ತೆ ಜೈಲುಗುಹೆಗಳಲ್ಲಿ ಪ್ರವೇಶಿಸುವ ಸಮಯ ನಿರೀಕ್ಷೆಯಲ್ಲಿದ್ದರು. ಯಾವ ಸಮಯದಲ್ಲಾದರೂ ಹೊರಡಲು ಸಿದ್ಧರಾದರು. ಹೀಗಿರುವಲ್ಲಿ ಮಾರ್ಚ್ ತಿಂಗಳ 4ನೆ ತಾರೀಖಿನ ದಿನ ವೈಸರಾಯಿಯವರು ಗಾಂಧೀಜಿಯವರಿಗೆ ಹೇಳಿ ಕಳುಹಿಸಿ ಕರೆಸಿಕೊಂಡರು. ಮಧ್ಯರಾತ್ರಿ ವೇಳೆಯಾದರೂ ಹಿಂತಿರುಗಲಿಲ್ಲ. ರಾತ್ರಿ ಎರಡು ಗಂಟೆ ವೇಳೆಗೆ ಗಾಂಧೀಜಿ ಹಿಂತಿರುಗಿ ಬಂದರು ; ಎಲ್ಲರೂ ನಿದ್ದೆಯಿಂದೆದ್ದು ಆದುದನ್ನು ತಿಳಿದರು. ಯಾವುದೋ ಸಮಾಧಾನಕ್ಕೆ ಎರಡು ಪಕ್ಷದವರೂ ಬಂದಿದ್ದರು. ಅದರ ವಿವರವೇನೆಂದು ನೋಡಿದ ಮೊದಲಲ್ಲೆ ಎರಡನೆಯಂಶವೆನಿಸಿದ್ದುದು ಸೇಫ್ಗಾರ್ಡ್ಸ್ (Safeguards) ಅಥವಾ ಭಾರತ ದೇಶದಲ್ಲಿ ಬ್ರಿಟಿಷ್ ಜಾತಿಯವರಾಕ್ರಮಿಸಿಕೊಂಡಿದ್ದ ಉದ್ಯೋಗ ವ್ಯಾಪಾರಗಳಿಗೆ ಶಾಶ್ವತರಕ್ಷೆ ಭದ್ರಗೊಳ್ಳುವ ಅಂಶ. ಜವಾಹರಲಾಲರಿಗೆ ಅದನ್ನು ಕಂಡಕೂಡಲೆ ಘಾತವಾಯಿತು ; ಆ ವೇಳೆಯಲ್ಲಿ ಏನನ್ನೂ ಚರ್ಚಿಸದೆ ಎಲ್ಲರೂ ವಿಶ್ರಾಂತರಾದರು.

"ಇದೇನು ನಡೆಯಿತು ! ಗಾಂಧೀಜಿ ಇದಕ್ಕೊಪ್ಪಿಕೊಂಡುಬಿಟ್ಟರಲ್ಲ ! ಒಂದುವೇಳೆ ನಾವಿದಕ್ಕೊಪ್ಪದೆಹೋದರೆ ಮುಂದೇನು ? ಗಾಂಧೀಜಿಯನ್ನು ಬಿಟ್ಟುಕೊಟ್ಟಂತೆಯೋ ಆತನೊಂದಿಗೆ ವಿರೋಧ ಸಾಧಿಸಿದಂತೆಯೋ ಪರಿಣಾಮವೊಂದು ಕಡೆ. ಮತ್ತೊಂದು ಕಡೆ ಸರ್ಕಾರದವರು ಗಾಂಧೀಜಿಯವರೊಪ್ಪಿರುವರೆಂದು ಪ್ರಕಟಿಸಿಬಿಟ್ಟು ಅತಿಯಾಗಿ ಕಷ್ಟನಷ್ಟಗಳನ್ನು ಪಟ್ಟು ಅಸ್ತವ್ಯಸ್ತರಾಗಿದ್ದ ಜನಸಾಮಾನ್ಯರನ್ನು ಸಮಾ

ಧಾನಕ್ಕೆ ತರುವುದು ಖಂಡಿತ. ಯಾರಾದರೊಬ್ಬರು ಒಪ್ಪಿಗೆ ಕೊಡದಿದ್ದ ಪಕ್ಷಕ್ಕೆ ಅವರಿಗೆ ಮಾತ್ರ ಆತ್ಮತೃಪ್ತಿಯಾದೀತು. ದೇಶಕ್ಕೆ ಪ್ರಯೋಜನ ಕಾಣದಾಯಿತು" ಎಂಬಂತಹ ಆಲೋಚನೆಗಳು ಮನಸ್ಸಿನಲ್ಲಿ ತರಂಗ ಲೀಲೆಯಾಡಿದವು. ಕಡೆಗೆ ಸಭೆಯಲ್ಲಿ ಗಾಂಧೀಜಿಯುವರಂಗೀಕರಿಸಿದ್ದ ಕರಾರಿಗೆ ಒಪ್ಪಿದ್ದಾಯಿತು. ಜವಾಹರಲಾಲರಿಗೆ ಮನಸ್ಸಿನಲ್ಲಿ ತೀರಾ ಅತೃಪ್ತಿಯಾಗಿದ್ದರೂ ಗುಂಪಿಗೆ ದ್ರೋಹವನ್ನಾಚರಿಸುವಂತೆ ವರ್ತಿಸ ಲಾರದವರು. ಸ್ವಾತಂತ್ರ್ಯವೇ ಗುರಿಯೆಂಬುದಕ್ಕೂ ಯುಕ್ತಪ್ರಾಂತ ದಲ್ಲಿ ಗುತ್ತಿಗೆ ಹಣ ಸಲ್ಲಿಸಲಾರದಿದ್ದ ಬೇಸಾಯಗಾರರಿಗೆ ನ್ಯಾಯ ನಡೆಯುವುದಕ್ಕೂ ಲೋಪವಿಲ್ಲದಿರಲೆಂದು ಪ್ರಕಟವಾಗಿ ಆಶಿಸಿದರು. ಆದರೆ ಕರಾರಿನ ಎರಡನೆಯಂಶವೆಂಬುದು ಸ್ವಾತಂತ್ರ್ಯದ ಆಸೆಯನ್ನು ಭಂಗಪಡಿಸುವುದಾಗಿ ಕಂಡಿತು. "ಒಂದು ವರ್ಷಕಾಲ ಧೈರ್ಯವಹಿಸಿ ನಾನಾ ರೀತಿಯ ಹಿಂಸೆಗಳನ್ನೂ ನಷ್ಟಗಳನ್ನೂ ಅನುಭವಿಸಿದ್ದು ಇಷ್ಟು ಮಾತ್ರಕ್ಕೇಯೆ? ನಾವಾಡಿದ ವಚನಗಳೇನು, ಮಾಡಿದ ಪ್ರಮಾಣ ಗಳೇನು? ಕೊನೆಯಲ್ಲಿ ನಿರರ್ಥಕವಾಯಿತಲ್ಲ!" ಎಂಬ ಖಿನ್ನತೆ ಮನಸ್ಸಿ ನಲ್ಲಿ ತುಂಬಿಕೊಂಡಿತು. ರಾತ್ರಿ ಮಲಗಿದ್ದಷ್ಟುಹೊತ್ತೂ ಮನಸ್ಸಿಗೆ ಯಾವುದೋ ಶೂನ್ಯರಾಶಿ ಕಾಣುತಲಿತ್ತು. ಭಾರಿ ಪ್ರಯತ್ನಗಳೆಲ್ಲವೂ ವಿಜೃಂಭಣೆಯಿಂದ ಮುಕ್ತಾಯಗೊಳ್ಳದೆ ಸದ್ದಿಲ್ಲದೆ ಕಾಲಗತಿಯಲ್ಲಿ ಲೀನವಾಗಿಬಿಡುವುವೋ ಎಂತೋ!

ಬೆಳಗಾದಕೂಡಲೆ ಗಾಂಧೀಜಿಗೆ ತಿಳಿಯಿತು. ಜವಾಹರಲಾಲರು ಅತಿ ಖಿನ್ನರಾಗಿರುವರೆಂಬುದನ್ನು ತಿಳಿದಕೂಡಲೆ ತಮ್ಮ ಸಂಗಡ ಕಾಲ್ನಡಿ ಗೆಗೆ ಕರೆದರು. ದೀರ್ಘಕಾಲ ಮಾತನ್ನಾಡಿಸಿ "ಮುಖ್ಯವಾದುದೊಂದನ್ನೂ ನಾನು ಬಿಟ್ಟುಕೊಟ್ಟಿಲ್ಲ. ಆ ರಕ್ಷೆಗಳ ವಿಚಾರದಲ್ಲಿ ಅತೃಪ್ತಿಗೊಳ್ಳುವುದು ನಿಮಗೆ ಸಹಜ. ಆದರೆ ಅಲ್ಲಿಯ ಅರ್ಥ ಅಷ್ಟು ಹಾನಿಕಾರಕವಾಗಿಲ್ಲ. ಈ ದೇಶಕ್ಕೆ ಹಿತವಾಗಿರುವ ತೆರದಲ್ಲಿ ಮಾತ್ರವೇ ಆ ರಕ್ಷೆಗಳು ರೂಪ ಗೊಳ್ಳಬೇಕೆಂದು ನಾನು ಸ್ಪಷ್ಟಗೊಳಿಸಿರುತ್ತೇನೆ" ಎಂದು ಸಮಾಧಾನ ಪಡಿಸಿದರು. ಪ್ರತಿಯಾಗಿ ಜವಾಹರಲಾಲರು "ನೀವಿಡುವ ಅರ್ಥ ಹಾಗೆ. ಅದನ್ನೇ ಆ ಪಕ್ಷದವರೂ ಒಪ್ಪುವರೋ ಇಲ್ಲವೋ ಸಂದೇಹ

ಕರಾರಿನ ಮಾತು ಹಾಗಿರಲಿ. ಹದಿನಾಲ್ಕು ವರ್ಷಕಾಲ ನಿಮ್ಮ ಆಪ್ತ ಸಹವಾಸವನ್ನು ಪಡೆದಿದ್ದಾಗ್ಯೂ ಯಾವ ಸಮಯದಲ್ಲಿ ನೀವೇನು ನಿಶ್ಚ ಯಮಾಡುವಿರೆಂಬುದನ್ನು ನಾವು ಹೇಳಲಾರದವರಾಗಿಯೇ ಇದ್ದೇವೆ. ನಿಮ್ಮಲ್ಲಿ ನಮಗರ್ಥವಾಗದಿರುವ ಚೈತನ್ಯವಾವುದೋ ಇದೆ. ಆಕಸ್ಮಿಕ ವಾಗಿ ಅನಿರೀಕ್ಷಿತವಾದುದನ್ನು ಒಡ್ಡಿಬಿಡುವಿರಿ. ಇದರಿಂದ ನನಗೆ ಭಯವೇ ಆಗುತ್ತದೆ" ಎಂದುದಕ್ಕೆ ಗಾಂಧೀಜಿ "ಹೌದು. ನನ್ನ ಚೈತನ್ಯ ನನಗೇ ಅರ್ಥವಾಗುವುದಿಲ್ಲ. ಅಜ್ಞಾತವಾದ ಆ ಅಂಶ ನನಗೂ ಅಜ್ಞಾತ ವಾಗಿಯೆ ಇದೆ" ಎಂದರು. ಈ ಸಂಭಾಷಣೆಯಿಂದ ಜವಾಹರಲಾಲರ ಬುದ್ಧಿಗೆ ತೃಪ್ತಿಯಾಗದಿದ್ದರೂ ಮನಸ್ಸಿಗೆ ಹಿತವಾಯಿತು. ಒಬ್ಬರು ವಿರೋಧಿಸಿ ತುಂಟತನ ಮಾಡುವುದಕ್ಕಿಂತ ಎಲ್ಲರೊಡನೆ ಗೌರವವಾಗಿ ಒಪ್ಪಿಕೊಂಡಿರುವುದೇ ಮೇಲೆಂದು ನಿರ್ಧರಿಸಿಕೊಂಡರು.

ತಾತ್ಕಾಲಿಕವಾಗಿ ನಡೆದ ಆ ಕರಾರಿನ ಇತ್ಯರ್ಥವಾದ ಕೂಡಲೆ ಅದರ ಷರತ್ತುಗಳನ್ನು ಪ್ರಾಂತಪ್ರಾಂತದಲ್ಲಿಯೂ ಪಾಲಿಸಬೇಕಾಗಿತ್ತು. ಅದಕ್ಕಾಗಿ ದಿಲ್ಲಿಯಿಂದ ಜವಾಹರಲಾಲರು ಲಖನೌಗೆ ಬಂದರು. ತಕ್ಷಣವೇ ಕಂದಾಯ ನಿರೋಧದ ಕರ್ತವ್ಯವನ್ನೆಲ್ಲರೂ ಬಿಟ್ಟುಕೊಡುವಂತೆ ಸಂದೇಶ ಗಳನ್ನು ಸಾರಲಾಯಿತು. ಎಲ್ಲೆಡೆಗಳಲ್ಲಿ ಕಾಂಗ್ರೆಸ್ ಕೆಲಸಗಾರರು ಶಿಸ್ತಿಯಿಂದ ವರ್ತಿಸಿದರು. ಕಂದಾಯ ಸಲ್ಲಿಸದಿದ್ದುದಕ್ಕಾಗಿ ಕಾರಾ ಗೃಹದಲ್ಲಿ ಸೇರಿದ್ದವರ ಬಿಡುಗಡೆಯನ್ನೂ ಕಾಣಲಾಯಿತು. ಸೆರೆಯಿಂದ ಹೊರಗೆ ಬಂದು ತಮ್ಮ ತಮ್ಮ ಊರುಗಳನ್ನು ಸಾವಿರಾರು ಮಂದಿ ಕೈದಿ ಗಳು ಸೇರಿದಾಗ ಊರಿನ ಜನರು ಸಂತೋಷಗೊಳ್ಳದಿದ್ದಾರೆಯೇ? ಬಂಧನದಿಂದ ವಿಮುಕ್ತರಾಗಿ ಬಂದ ತಮ್ಮ ದೇಶ ಬಂಧುಗಳನ್ನು ಅತ್ಯಾ ದರದಿಂದ ಬರಮಾಡಿಕೊಂಡು ಉತ್ಸವ ಹಬ್ಬಗಳನ್ನು ಮಾಡಿಕೊಂಡರು. ಅದನ್ನು ಕಂಡ ಪೋಲೀಸ್ ಅಧಿಕಾರಿಗಳಿಗೂ ದಂಡಧಾರಿಗಳಿಗೂ ಅಹಿತ ವೆನ್ನಿಸಿತು. ಎಷ್ಟೋ ಕಾಲ ಕಳೆದ ಮೇಲೆ ಈ ಅಂಶವನ್ನೆತ್ತಿ ಸರ್ಕಾರದ ವರು ಆಕ್ಷೇಪಿಸಿದರು. ಸಿವಿಲ್ ಡಿಸ್ಲೊಬೀಡಿಯೆನ್ಸ್ ಎಂಬುದೇನೋ ನಿಂತು ಹೋಯಿತು. ಆದರೆ ಗುತ್ತಿಗೆ ಕೊಡಲಾರದಿದ್ದ ಆರಂಬಗಾರರ ಗತಿಯೇನು? ಬಾಕಿಯೆಲ್ಲವನ್ನೂ ಸಲ್ಲಿಸಬೇಕೆಂದು ಹಟ ಹಿಡಿದರೆ ಅವರು

ಹೇಗೆ ಸಲ್ಲಿಸಬೇಕು? ಸಾಲದುದಕ್ಕೆ ದವಸದ ಧಾರಣೆಗಳೆಲ್ಲವೂ ರೈತಾಪಿ ಗುಂಪಿಗೆ ಹಾನಿಕಾರಕವಾಗಿದ್ದುದು ಬೇರೆ. ದಿಲ್ಲಿಯಲ್ಲಿ ಈ ಪ್ರಸ್ತಾಪ ವನ್ನೆತ್ತಿದ್ದಾಗ ವೈಸರಾಯಿಯವರು "ಅದು ಯುಕ್ತ ಪ್ರಾಂತದ ಸರ್ಕಾರಕ್ಕೆ ಸಂಬಂಧಪಟ್ಟ ವಿಷಯ. ನ್ಯಾಯವನ್ನು ನಡೆಸುವಂತೆ ಹೇಳೋಣವಾಗುತ್ತದೆ" ಎಂದಿದ್ದರು. ಆದಷ್ಟು ಗುತ್ತಿಗೆ ಹಣವನ್ನು ಸಲ್ಲಿಸಿಬಿಡಿರೆಂದು ಕಾಂಗ್ರೆಸ್ ಪರವಾಗಿ ಬೇಸಾಯಗಾರರಿಗೆ ಹೇಳಿ ಯೇನೋ ಹೇಳಿತ್ತು; ಆದರೆ ಅತಿ ಕಷ್ಟಕಾಲದಲ್ಲಿ ಅವರ ಪ್ರತಿನಿಧಿಗಳು ಹೆಚ್ಚಾಗಿ ರಿಯಾಯತಿಗಳಾಗಬೇಕೆಂದು ನ್ಯಾಯದ ಪಕ್ಷಪಾತವನ್ನೇ ಕೇಳಿದರು. ಪ್ರಾಯಶಃ ಗವರ್ನರ್ ಸರ್ ಮಾಲ್ಕೊಂ ಹೈಲಿ (Sir Malcolm Hailey) ರಜದ ಮೇಲಿದ್ದ ಕಾರಣದಿಂದ ಅಧಿಕಾರಿ ಗಳು ಆ ಅಂಶವನ್ನು ಇತ್ಯರ್ಥ ಮಾಡದೆ ವಿಲಂಬಮಾಡಿದರು.

ಜವಾಹರಲಾಲರಿಗೆ ಈ ಕಾಲದಲ್ಲಿ ದೃಢಾರೋಗ್ಯವಿಲ್ಲದಿತ್ತು. ಜೈಲಿನಲ್ಲಿದ್ದಾಗಲೇ ಸ್ವಲ್ಪ ಹದ ಗೆಟ್ಟಿತ್ತು; ತಂದೆಯವರ ಮರಣ ದಿಂದಲೂ ದಿಲ್ಲಿಯ ಸಭೆಗಳ ಕಲಾಪದಿಂದಲೂ ದೇಹಸ್ಥಿತಿ ದುರ್ಬಲ ಗೊಂಡಿತ್ತು. ಮನಸ್ಸಿಗೂ ದೇಹಕ್ಕೂ ವಿಶ್ರಾಂತಿಯತ್ಯವಶ್ಯಕವಾಗಿತ್ತು. ಆದಾಗ್ಗೂ ಜವಾಹರಲಾಲರು ಮನಸ್ಸನ್ನು ಗಟ್ಟಿಮಾಡಿಕೊಂಡು ಮಾರ್ಚ್ ತಿಂಗಳಲ್ಲಿ ನಡೆಯಬೇಕೆಂದು ಗೊತ್ತಾಗಿದ್ದ ಕರಾಚಿ ಕಾಂಗ್ರೆಸ್ ಸಭೆಯಲ್ಲಿ ಭಾಗವಹಿಸಲು ಸಿದ್ಧರಾದರು.

ಕರಾಚಿಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಗೆ ಸರ್ದಾರ್ ವಲಬ್ಭಾಯಿ ಅಧ್ಯಕ್ಷರಾಗಿದ್ದಾಗ್ಗೂ ಎಲ್ಲೆಲ್ಲಿಯೂ ಗಾಂಧೀಜಿಯ ಪ್ರಭಾವವೇ ತುಂಬಿತ್ತು. ಸಭೆ ಸೇರುವುದಕ್ಕೆ ಒಂದೆರಡು ದಿನ ಮುಂಚಿತ ವಾಗಿ ಭಗತ್‌ಸಿಂಗ್, ಸುಖದೇವ್ ಮತ್ತು ರಾಜಗುರುಗಳೆಂಬ ಮೂವ ರನ್ನು ಲಾಹೋರ್ ಪಿತೂರಿ ಮೊಕದ್ದಮೆಯ ಪರಿಣಾಮವಾಗಿ ಸರ್ಕಾರ ದವರು ಗಲ್ಲಿಗೇರಿಸಿದ್ದರು. ದಿಲ್ಲಿ ಕರಾರು ನಡೆದ ಸಂದರ್ಭದಲ್ಲಿ ಅವರ ಪ್ರಾಣಗಳನ್ನುಳಿಸಿ ಕೊಡುವಂತೆ ಮಹಾತ್ಮಾಜಿಯವರು ವೈಸರಾಯಿ ಯವರನ್ನು ಕೇಳಿದ್ದರು. ಕರಾರಿನ ಅಂಶಗಳಿಗೂ ಇದಕ್ಕೂ ಸಂಬಂಧ ವೇನೂ ಇರಲಿಲ್ಲ. ಆದಾಗ್ಗೂ ಸರ್ಕಾರದವರು ಆ ವೇಳೆಯಲ್ಲಿಯೆ ಫಾಸಿ

ಶಿಕ್ಷೆಯನ್ನು ತೀರಿಸಿದ್ದುದರಿಂದ ಕೆಲವರಿಗೆ ಗಾಂಧೀಜಿಯ ಮೇಲೆ ಕೋಪ ಬಂದಿತ್ತು! ಹಲಕೆಲವರು ಕಪ್ಪು ಬಾವುಟಗಳನ್ನು ಹಿಡಿದು ಗಾಂಧೀಜಿಯವರಿಗೆ ಅವಮಾನ ಮಾಡಲೆಣಿಸಿದರು. ಅಹಿಂಸಾ ಧರ್ಮವು ಅವತಾರಗೊಂಡಂತಿರುವ ಶಾಂತಮೂರ್ತಿಗೆ ಅದರಿಂದ ಅವಮಾನವಾಗಲಿಲ್ಲ. ಆ ಬಗೆಯ ಪ್ರದರ್ಶನ ಮಾಡಿದವರು ಯಾವುದೋ ಉತ್ಸಾಹದ ಉನ್ಮಾದಕ್ಕೆ ಗುರಿಯಾಗಿದ್ದರು.

ಸಭೆಯ ಕರ್ತವ್ಯ ಕಲಾಪಗಳು ಮೊದಲಾದವು. ದಿಲ್ಲಿಯ ಕರಾರನ್ನು ಅನುಮೋದಿಸುವ ಸಂದರ್ಭ ಬಂದಾಗ ಗಾಂಧೀಜಿ ಜವಾಹರಲಾಲರನ್ನೇ ಭಾಷಣಮಾಡುವಂತೆ ಹೇಳಿಬಿಟ್ಟರು. ಕ್ಷಣಕಾಲ ಚಕಿತರಾದಾಗ್ಯೂ ಜವಾಹರಲಾಲರು ವೇದಿಕೆಯನ್ನೇರಿ ಮುಚ್ಚುಮರೆಯಿಲ್ಲದೆ ಮಾತನಾಡಿದರು. ಪೂರ್ವ ಸಿದ್ಧತೆಯಿಲ್ಲದೆ ವೇದಿಕೆ ಮೇಲೆ ನಿಂತು ಭಾಷಣ ಕೊಟ್ಟು ಸ್ವಂತ ಮನೋಭಾವವನ್ನು ನಿರ್ವಂಚನೆಯಿಂದ ಬಿಚ್ಚಿ ಹೇಳಿದರು. ಅದೇ ಅತ್ಯುತ್ತಮ ಭಾಷಣವಾಯಿತು. ಈ ಭಾಷಣವೊಂದೇ ಅಲ್ಲ. ಪೌರನಿಗೆ ಮೂಲಭೂತವಾದ ಅಧಿಕಾರಗಳ ಸಂಬಂಧವಾಗಿಯೂ ಆರ್ಥಿಕ ವ್ಯವಸ್ಥೆಯ ವಿಚಾರವಾಗಿಯೂ ಮಾತನಾಡಿ ಪ್ರಸಿದ್ಧವಾದ ಸಂಕಲ್ಪವನ್ನು ರೂಪಗೊಳಿಸಿದರು.

ಕಾಂಗ್ರೆಸ್ ಸಭೆ ಮುಗಿದು ಪ್ರತಿನಿಧಿಗಳಾಗಿ ಬಂದಿದ್ದವರು ತಮ್ಮ ಊರುಗಳಿಗೆ ಹೊರಡುವುದರೊಳಗಾಗಿ ಕಾನ್ಪುರದ ದೊಂಬಿಯ ಸುದ್ದಿಯೂ ಆ ಗಲಭೆಯಲ್ಲಿ ಗಣೇಶ ಶಂಕರ್ ವಿದ್ಯಾರ್ಥಿ ಆಹುತಿಯಾದ ಸಮಾಚಾರವೂ ತಿಳಿಯಿತು. ಯುಕ್ತಪ್ರಾಂತದ ಪ್ರತಿನಿಧಿಗಳ ಶಿಬಿರದಲ್ಲಿ ಎಲ್ಲರೂ ಹಾಹಾಕಾರ ಗೈದು ಖಿನ್ನರಾದರು. ಕಷ್ಟಪಟ್ಟು ಸಂಪಾದಿಸಿದ್ದ ಸುಯಶಸ್ಸೆಲ್ಲ ಮಾಯವಾದಂತೆ ಎಲ್ಲರ ಮನಸ್ಸಿನಲ್ಲಿಯೂ ತೋರಿತು. ಆದರೂ ತಮ್ಮ ಗಣೇಶ ಶಂಕರನು ಮೃತ್ಯುಮುಖದಲ್ಲಿ ತೋರಿದ ಧೀರಲೀಲೆಯನ್ನು ಸ್ಮರಿಸಿ "ಆ ಧೀರೋದಾತ್ತ ನಮ್ಮವನು" ಎಂಬ ಗರ್ವವೂ ದುಃಖದ ಮಧ್ಯೆ ತಲೆಯೆತ್ತಿತ್ತು. ಮಹಾಭಾರತದಲ್ಲಿ ಅಭಿಮನ್ಯು ಮರಣದಿಂದ ಪಾಂಡವರು ದುಃಖಿಸಿ ಉದ್ವಿಗ್ನಗೊಂಡಂತೆಯೆ ಆಯಿತು ವಾಸ್ತವವಾಗಿ.

## 2. ಸಿಂಹಳ ಪ್ರವಾಸ

ಕರಾಚಿ ಕಾಂಗ್ರೆಸ್ ವೇಳೆಯಲ್ಲಿಯೆ ಡಾಕ್ಟರರೂ ಮಿತ್ರರೂ ಜವಾಹರಲಾಲರಿಗೆ ವಿಶ್ರಾಂತಿಯನ್ನಿಟ್ಟುಕೊಳ್ಳಬೇಕೆಂದು ಹೇಳುತ್ತಿದ್ದರು. 1927ರಲ್ಲಿ ಯೂರೋಪಿನಿಂದ ಹಿಂತಿರುಗಿ ಬಂದಬಳಿಕ ನಿರಂತರವಾದ ಕೆಲಸ ಕಾರ್ಯಗಳೇ ಆಗಿ ಜೈಲುವಾಸ ಮೋತಿಲಾಲರ ಮರಣಗಳು ಘಟಿಸಿದ್ದವು. ಆದರೆ ದೇಶದಿಂದ ದೂರವಾದೆಡೆಗೆ ಹೋದಾಗಲೆ ವಿರಾಮ ಪ್ರಾಪ್ತಿ. ಸಿಂಹಳಕ್ಕೆ ಹೋಗಿ ಕೆಲಕಾಲ ಕಳೆಯುವುದೆಂದು ನಿಶ್ಚಯವಾಯಿತು. ಕಮಲಾದೇವಿಯನ್ನೂ ಮಗಳು ಇಂದಿರಾಪ್ರಿಯದರ್ಶಿನಿಯನ್ನೂ ಕರೆದುಕೊಂಡು ಮುಂಬಯಿಯಿಂದ ಜಹಜನ್ನೇರಿಕೊಂಡು ಸಿಂಹಳಕ್ಕೆ ಹೊರಟರು.

ಸಿಂಹಳವಾದರೆತಾನೇ ಏನು? ಅಲ್ಲಿಯ ಜನರಿಗೆ ಜವಾಹರಲಾಲರ ಕೀರ್ತಿ ತಿಳಿಯದಾಗಿತ್ತೇ! ಎಲ್ಲಿಹೋದರೂ ಜವಾಹರಲಾಲರನ್ನು ಜನರು ಸಂಭ್ರಮದಿಂದ ಗುಂಪುಕೂಡಿ ಕಾಣಲು ಆತುರಪಟ್ಟರು. ನುವಾರೆಲಿಯದಲ್ಲಿ ಎರಡು ವಾರಗಳ ಕಾಲವಿದ್ದಾಗ ಅಲ್ಲಿಗೂ ಭಕ್ತಿವಿಶ್ವಾಸಗಳಿಂದ ಗುಂಪು ಗುಂಪಾಗಿ ಜನರು ಬಂದು ಕಾದಿದ್ದು ಜವಾಹರಲಾಲರ ದರ್ಶನದಿಂದ ಕೃತಾರ್ಥರಾಗುತ್ತಿದ್ದರು. ಟೀ ತೋಟಗಳಲ್ಲಿ ಕೂಲಿಗಳಾಗಿದ್ದವರು ಹೂವುಗಳನ್ನೋ ತರಕಾರಿಯನ್ನೋ ತಾವೇ ಕಡೆದಿದ್ದ ಬೆಣ್ಣೆಯನ್ನೋ ಆದರದಿಂದ ಹೊತ್ತುಕೊಂಡು ಮೈಲಿಗಳಗಟ್ಟಲೆಯಾದರೂ ದೂರ ನಡೆದುಬಂದು ಅರ್ಪಿಸಿ ಪೂಜಿಸಿದರು. "ಪರಸ್ಪರವಾಗಿ ಮಾತನಾಡುವುದಕ್ಕೆ ಸಾಧ್ಯವಿಲ್ಲ. ಒಬ್ಬರ ಮುಖವನ್ನೊಬ್ಬರು ನೋಡಿ ಮುಗುಳ್ನಗೆಯನ್ನು ಮಾತ್ರ ಕಾಣಿಸುತ್ತಿದ್ದೆವು." ಆ ಬಡಪಾಯಿಗಳು ತಂದುಕೊಟ್ಟ ಕಾಣಿಕೆಗಳಿಂದ ಬಿಡದಿ ಮನೆ ತುಂಬಿಹೋಯಿತು. ಜವಾಹರಲಾಲರು ಆ ವಸ್ತುಗಳನ್ನು ಅಲ್ಲಿಯ ಆಸ್ಪತ್ರೆಗೋ ಅನಾಥಾಲಯಕ್ಕೋ ಕಳುಹಿಸುತ್ತಲಿದ್ದರು. ರಸ್ತೆಯಲ್ಲಿ ಹೋಗುತ್ತಿದ್ದಾಗಲೂ ಇಂತಹ ದೃಶ್ಯಗಳು! ಒಂದುಬಾರಿ ಜಫ್ನ ಬಳಿ ಮೋಟಾರಿನಲ್ಲಿ ಜವಾಹರಲಾಲರು ಕುಳಿತು ಹೊರಡುತ್ತಿದ್ದಾಗ ಯಾವುದೋ ಶಾಲೆಯ ಅಧ್ಯಾಪಕರೊಡನೆ ಬಾಲಕರ ತಂಡವೊಂದು

ಎದುರುಬಂದು ನಿಲ್ಲಿಸಿದರು. ಮಧುರವಾಗಿ ಕುಶಲಪ್ರಶ್ನೆಗಾರಂಭವಾಯಿತು. ಆ ಬಾಲಕರಲ್ಲೊಬ್ಬನು ಜವಾಹರಲಾಲರ ಬಳಿಗೆ ಬಂದು ಹಸ್ತವನ್ನು ಹಸ್ತದಲ್ಲಿಟ್ಟು ಪ್ರಕಾಶಪೂರಿತವಾದ ಕಣ್ಣುಗಳನ್ನೆತ್ತಿ ನೋಡುತ್ತ "ಎಂದಿಗೂ ನಾನು ಹಿಂಜರಿಯುವುದಿಲ್ಲ" ಎಂದನು. ಇಂತಹ ಸಂದರ್ಭಗಳೆಷ್ಟೋ ನಡೆದವು.

ಅನುರಾಧಪುರದಲ್ಲಿ ಪದ್ಮಾಸನಬದ್ಧನಾಗಿ ಕುಳಿತಿರುವ ಬುದ್ಧದೇವನ ವಿಗ್ರಹವನ್ನು ಜವಾಹರಲಾಲರು ಕಂಡು ಮುಗ್ಧರಾದರು. ಬುದ್ಧದೇವನ ಮೂರ್ತಿಯಲ್ಲಿ ಜವಾಹರರಿಗೆ ಬಲು ಆದರ; ಬೌದ್ಧ ಧರ್ಮ ಸಂಬಂಧವಾದ ತರ್ಕ ವಿತರ್ಕಗಳಲ್ಲಲ್ಲ. ದಾರಿಯಲ್ಲಿಯೂ ಮಠಗಳಲ್ಲಿಯೂ ಅನೇಕಾನೇಕ ಭಿಕ್ಷುಗಳನ್ನು ಕಂಡಾಗ್ಗೆ ಜವಾಹರಲಾಲರ ಮನಸ್ಸಿನಲ್ಲಿ ಅಪೂರ್ವವಾದ ಪರಿಣಾಮ ತೋರಿತು.

> "ಅವರೆಲ್ಲರ ಮುಖಗಳಲ್ಲಿಯೂ ಶಾಂತಿಯ ಕಳೆ ತುಂಬಿತ್ತು. ಚಿಂತೆಗಳೂ ವ್ಯಸನಗಳೂ ಅವರಿಂದ ದೂರದಲ್ಲಿದ್ದವು. ಅವರ ದೃಷ್ಟಿಗೆ ಲೋಕವೆಲ್ಲವೂ ನಿದಾನವಾಗಿ ಸಾಗರದ ಕಡೆ ಹರಿವ ನದಿಯಂತೆ ಕಂಡಿತ್ತು. ಅವರ ಮನಸ್ಸಿನ ಸಮಾಧಾನ ನನಗೂ ಎಂದಿಗಾದರೂ ಬಂದೀತೇ ಎನ್ನಿಸಿತು. ನನ್ನ ಜೀವನವಾದರೋ ಬಿರುಗಾಳಿ ಸುಂಟರಗಾಳಿಗಳ ಮಧ್ಯದಲ್ಲಿ. ನನಗೆಲ್ಲಿ ಶಾಂತಿಗೆ ಇಂಬು! ಮನಸ್ಸಿನೊಳಗಿನ ಸುಂಟರಗಾಳಿಗಳು ಹೊರಗಿನ ತುಫಾನುಗಳಿಗಿಂತ ಪ್ರಚಂಡವಾಗಿರತಕ್ಕವನಿಗೆ! ಯಾವ ಚಂಡಮಾರುತಕ್ಕೂ ಆಸ್ಪದವಿಲ್ಲದ ಮೂಲೆಯಲ್ಲಿ ಒಂದು ವೇಳೆ ನಾನಿದ್ದರೂ ನಾನು ಸಮಾಧಾನಗೊಂಡೇನೆಯೆ?"

ಸಿಂಹಳದಲ್ಲಿ ಕಳೆದುದು ಒಂದು ತಿಂಗಳು ಮಾತ್ರ. ಅಲ್ಲಿಂದ ಕನ್ಯಾಕುಮಾರಿ ಕ್ಷೇತ್ರಕ್ಕೆ ಬಂದು ಜವಾಹರಲಾಲರು ತಿರುವಾಂಕೋಡು ಕೊಚ್ಚಿ ಮಲೆಯಾಳ ಮೈಸೂರು ಹೈದರಾಬಾದುಗಳ ಮಾರ್ಗವಾಗಿ ಮುಂಬಯಿಗೆ ಹಿಂತಿರುಗಿದರು. ಆ ದೇಶೀಯ ಸಂಸ್ಥಾನಗಳ ಅನುಭವವನ್ನು ಕುರಿತು "ಎಲ್ಲೆಲ್ಲಿ ಹೋದರೂ ಜನರು ನಮ್ಮಲ್ಲಿ ಆದರವನ್ನು ಬೀರಿದರು. ಆದರೆ ನಮ್ಮ ಬರುವಿಕೆಯಿಂದ ಜನಸಾಮಾನ್ಯರಲ್ಲಿ ಎಂತಹ ಬುದ್ಧಿ ಮೂಡುವುದೋ ಏನೋ ಎಂಬ ಕಳವಳ ಅಧಿಕಾರಿಗಳ ಅಂತರಂಗದಲ್ಲಿತ್ತು. ತಿರುವಾಂಕೋಡು ಮೈಸೂರುಗಳಲ್ಲಿ ಜನರಿಗೆ ತಕ್ಕಮಟ್ಟಿನ ಸ್ವಾತಂತ್ರ್ಯವಿರುವಂತೆ ಮೇಲೆ ಮೇಲೆ ಕಾಣುತ್ತಿತ್ತು. ಆದರೂ ಸಮಯ

ತೋರಿದಂತೆ ಅಧಿಕಾರಿಗಳು ಆ ಅನುಕೂಲ್ಯಗಳನ್ನು ತಪ್ಪಿಸುತ್ತಿದ್ದು ಹಿಂದಕ್ಕೆ ಹೆಜ್ಜೆಯಿಟ್ಟರು. ಹೈದರಾಬಾದಿನಲ್ಲಾದರೆ ತಪ್ಪಿಸುವ ಮಾತೇ ಇಲ್ಲ. ಏಕೆಂದರೆ ಅನುಕೂಲ್ಯಗಳೇ ಇಲ್ಲ. ಮುಂದಿನ ಹೆಜ್ಜೆಯನ್ನಿಡುವುದೆಂಬುದೇ ಇಲ್ಲ." ಹೈದರಾಬಾದಿನಲ್ಲಿದ್ದಾಗ ಸರೋಜಿನಿದೇವಿಯವರ ಮನೆಗೆ ಹೊರಟು ಅಲ್ಲಿ ಕೆಲಕಾಲವನ್ನು ಕಳೆದ ಸಮಯದಲ್ಲಿ ವಿಚಿತ್ರವಾದ ಸಂಗತಿಯೊಂದು ನಡೆಯಿತು. ಪರದೆಯ ಹಿಂದೆಯೆ ಬಾಳನ್ನು ಹೊರುವ ಮಹಿಳೆಯರ ಚಿಕ್ಕ ಸಭೆಯೊಂದು ನಡೆಯಿತು. ಕಮಲಾದೇವಿ ಆ ಸಭೆಯಲ್ಲಿ ಮಾತನಾಡಿದ್ದಳು. ಎರಡು ಮೂರು ವಾರಗಳ ತರುವಾಯ ಹೈದರಾಬಾದಿನಿಂದ ಕಮಲಾದೇವಿಗೊಂದು ಕಾಗದ ಬಂತು. ಯಾರೋ ಗಂಡನೊಬ್ಬಾತನು "ನೀವಿಲ್ಲಿಗೆ ಬಂದು ಹೊರಟಾರಭ್ಯ ನನ್ನ ಹೆಂಡತಿ ವಿಚಿತ್ರವಾಗಿ ಆಡುತ್ತಿದ್ದಾಳೆ. ಎಂದಿನಂತೆ ನನ್ನ ಮಾತನ್ನು ಕೇಳುವುದೂ ಇಲ್ಲ, ನನ್ನಿಷ್ಟದಂತೆ ನಡೆಯುವುದೂ ಇಲ್ಲ. ನನ್ನೊಡನೆ ಎದುರುವಾದಿಸುತ್ತಾಳೆ ಅಂದರೆ!" ಎನ್ನುತ್ತ ಬರೆದಿದ್ದನು.

ಮುಂಬಯಿ ತಲಪಿದ ಕೂಡಲೆ ಕಾಂಗ್ರೆಸ್ ಕೆಲಸ! ನದೀ ಮಧ್ಯದ ಸುಳಿಯಲ್ಲಿ ಸಿಕ್ಕಿಕೊಂಡಂತೆ. ವರ್ಕಿಂಗ್ ಕಮಿಟಿಯ ಸಭೆಗಳು. ವಿರಾಮ ವಿಶ್ರಾಂತಿಗಳು ನಿನ್ನೆಯ ನೆನಪಾಯಿತು. ತೆರಪಿಲ್ಲದ ಕಾರ್ಯಭಾರವನ್ನು ಹೊರಲಾರಂಭವಾಯಿತು ಯಥಾಪೂರ್ವ.

## 3. ಅರ್ಧವಿರಾಮ

ಮುಂಬಯಿಯಲ್ಲಿ ವರ್ಕಿಂಗ್ ಕಮಿಟಿ ಸದಸ್ಯರೆದುರಿಗೆ ಅನೇಕಾನೇಕ ಸಮಸ್ಯೆಗಳು ಸಂದೇಹ ಚಕ್ರಗಳ ಮಧ್ಯೆ ತಲೆಯೆತ್ತಿಕೊಂಡು ಮೆರೆಯುತ್ತಿದ್ದವು. ಗಾಂಧೀಜಿಯವರು ಚಕ್ರಗೋಷ್ಠಿಗಾಗಿ ಲಂಡನ್ನಿಗೆ ಹೋಗಬೇಕೇ ಬೇಡವೇ ಎಂಬುದೇ ಮುಖ್ಯ ಪ್ರಶ್ನೆ. ಹಾಗೆ ಹೊರಟು ಕಾಂಗ್ರೆಸ್ ಪ್ರಾತಿನಿಧ್ಯವನ್ನು ವಹಿಸಿ ಆ ಸಭೆಯಲ್ಲಿ ತಕ್ಕಂತೆ ವಾದಿಸಲು ಎರಡು ಬಗೆಯ ಭರವಸೆಗಳು ಬೇಕಾಗಿದ್ದವು. ಇಂಗ್ಲಂಡಿನಲ್ಲಿ ಮಾತನಾಡುವಾಗ್ಗೆ ಗಾಂಧೀಜಿಯವರು ವಿಷಯವನ್ನು ಮೊದಲಿನಿಂದ ಎತ್ತಿಕೊಂಡು ಪ್ರಸ್ತಾಪಿಸಲು ಅನುಕೂಲವೊಂದು; ಭಾರತದಲ್ಲಿ ಕರಾರಿನಂತೆ

ಸರ್ಕಾರದವರೂ ಕಾಂಗ್ರೆಸ್ಸಿನವರೂ ವರ್ತಿಸುತ್ತಲಿದ್ದು ಉದ್ರೇಕ ಗೊಳ್ಳಲು ಕಾರಣವನ್ನೊದಗಿಸದೆ ಇರತಕ್ಕ ಸ್ಥಿತಿಪಾಲನೆಯೊನ್ನೊಂದು.

ಗಾಂಧೀಜಿಯವರಿಗೂ ಇತರ ಕಾಂಗ್ರೆಸ್ ನಾಯಕರಿಗೂ ಚಕ್ರ ಗೋಷ್ಠಿಯಲ್ಲಿ ಪ್ರವೇಶಿಸಿ ವಾದಿಸುವುದರಿಂದ ಪ್ರಯೋಜನವಾಗುವು ದೆಂಬ ವಿಶ್ವಾಸವೇನೂ ಇರಲಿಲ್ಲ. ಆದರೆ ಯಾವ ಪ್ರಯತ್ನವನ್ನೂ ಬಿಡ ಬಾರದೆಂಬ ವಿವೇಕದ ಸಿದ್ಧತೆ ಇತ್ತು. ಚಕ್ರಗೋಷ್ಠಿಯಲ್ಲಿಯೂ ಭಾಗ ವಹಿಸಿ ನೋಡಿಬಿಡೋಣವೆನ್ನುವ ಯೋಚನೆಯಿತ್ತು. ಇಂತಹ ಸ್ಥಿತಿ ಯಲ್ಲಿ ಸರ್ಕಾರದ ಅಧಿಕಾರಿಗಳನೇಕರಿಗೆ ಕರಾರಿನಿಂದ ಅಸಮಾಧಾನ ವಾಗಿತ್ತು. ಇಂಗ್ಲಂಡಿನ ಟೋರಿ ಪಕ್ಷದ ನಾಯಕ ಚರ್ಚಿಲ್ಲರಿಗೆ ಆ ಪ್ರಸಂಗವೇ ಅಸಹ್ಯವಾಗಿತ್ತು. "ರಾಜಪ್ರತಿನಿಧಿಯಾದ ವೈಸರಾಯಿ ದಂಗೆಕೋರರ ಮುಖಂಡನಾಗಿದ್ದ ಹುಚ್ಚ ಪಕೀರನೊಂದಿಗೆ ಸರಿಸಮ ವಾಗಿ ಭಾಷಣ ನಡೆಸುವುದೇ! ಉಂಟೇ!" ಎನ್ನುವ ಸ್ವರ ಆತನದು. ಅಧಿಕಾರಿ ವರ್ಗದವರಿಗೆ ಅದೇ ರೀತಿಯ ಚಿತ್ತವೃತ್ತಿ. ಲಾರ್ಡ್ ಇರ್ವಿನ್ನರೇ ಗಾಂಧೀಜಿಯನ್ನೂ ಕಾಂಗ್ರೆಸ್ಸನ್ನೂ ಎತ್ತಿಕಟ್ಟಿದಂತಾಯಿ ತೆಂಬ ಭಾವನೆ ಅವರ ಮನಸ್ಸುಗಳಲ್ಲಿ.

ಮೂರು ಪ್ರಾಂತಗಳಲ್ಲಿ ಪರಿಸ್ಥಿತಿ ಚಿಂತಾಜನಕವಾಗಿತ್ತು. ಬಂಗಾಳದಲ್ಲಿ ಸರ್ಕಾರದವರು ತಮ್ಮ ಕ್ರೂರ ಶಾಸನಗಳನ್ನು ಬಿಡ ದಾದರು. ದಸ್ತಗಿರಿಗಳು ಮೇಲಿಂದಮೇಲೆ ನಡೆಯುತ್ತಲೇ ಇದ್ದವು. ಯುಕ್ತಪ್ರಾಂತದಲ್ಲಿ ಗುತ್ತಿಗೆ ಹಣ ಸಂದಾಯದ ಪ್ರಶ್ನೆ ಇತ್ಯರ್ಥವಾಗಲೇ ಇಲ್ಲ. ಅದಕ್ಕಾಗಿ ಗಾಂಧೀಜಿ ತಾವೇ ಹೊರಟು ಅಲ್ಲಿಯ ಗವರ್ನರನ್ನು ಕಂಡು ಸಂಧಾನ ನಡೆಸಿದ್ದರು. ಅದರ ಪರಿಣಾಮವಾಗಿ ಸರ್ಕಾರದವರು ತೋರಿದ ರಿಯಾಯತಿಗಳು ಅತ್ಯಲ್ಪವಾಗಿದ್ದವು. ಬಾಕಿ ವಸೂಲಿಗಾಗಿ ರೈತರಿಗೆ ಹಿಂಸೆ ನಿತ್ಯವೂ ನಡೆಯುತ್ತಿತ್ತು; ಹಿಂಸೆ ತಾಳಲಾರದೆ ರೈತರು ಚಿಕ್ಕ ದಂಗೆಗಳನ್ನೂ ಎಬ್ಬಿಸಿದ್ದರು. ಇನ್ನೂ ಸರಹದ್ದಿನ ಪ್ರಾಂತದಲ್ಲಿ ಖುದಾಯಿ ಖಿದ್ಮತ್ಗಾರರಿಗೂ ಅಧಿಕಾರಿಗಳಿಗೂ ಆಗಾಗ್ಗೆ ಘರ್ಷಣಗಳು ಸಂಭವಿಸುತ್ತಲೇ ಇದ್ದವು. ಆ ಪ್ರಾಂತದ ನಾಯಕ ಅಬ್ದುಲ್ ಗಫ್ಫಾರ್ ಖಾನರಲ್ಲಿ ಅಲ್ಲಿಯ ಜನರಿಗೆ ವಿಶ್ವಾಸವಿತ್ತು; ಸರ್ಕಾರಕ್ಕಿಲ್ಲ. ಅಲ್ಲಿ

ಸಂಚಾರಮಾಡಿ ನೋಡಿಬಿಡುತ್ತೇವೆಂದು ಗಾಂಧೀಜಿಯವರೂ ಜವಾಹರ ಲಾಲರೂ ಹೇಳಿದರೆ ಸರ್ಕಾರದವರು ಕೂಡದೆಂದು ಬಿಟ್ಟರು.

ಇಷ್ಟರ ಮೇಲೆ ಪ್ರತಿಪ್ರಾಂತದಿಂದಲೂ ಕರಾರಿನ ಷರತ್ತುಗಳನ್ನು ಅಧಿಕಾರಿಗಳು ಪಾಲಿಸುತ್ತಿಲ್ಲವೆಂಬ ಸಮಾಚಾರ ವರ್ಕಿಂಗ್ ಕಮಿಟಿಗೆ ತಲಪುತ್ತಲೇ ಇತ್ತು. ಅತ್ತ ಲಾರ್ಡ್ ಇರ್ವಿನ್ ಬದಲಾಗಿ ಲಾರ್ಡ್ ವಿಲ್ಲಿಂಗ್ಡನ್ ವೈಸರಾಯಿ ಸ್ಥಾನಕ್ಕೆ ಬಂದಿದ್ದನು. ಹೇಗಾದರೂ ಮಾಡಿ ಗಾಂಧೀಜಿಯನ್ನು ಲಂಡನ್ನಿಗೆ ಕಳುಹಿಸಿಕೊಡುವ ಇಷ್ಟ ಸರ್ಕಾರದವರ ಮನಸ್ಸಿನಲ್ಲಿದ್ದಂತೆ ಕಂಡಿತು. ಗಾಂಧೀಜಿ ಎರಡು ಬಾರಿ ಸಿಮ್ಲಾದಲ್ಲಿ ವೈಸರಾಯಿಯೊಡನೆಯೂ ಇತರ ಮುಖ್ಯಾಧಿಕಾರಿಗಳೊಡನೆಯೂ ಚರ್ಚೆ ನಡೆಸಿದರು. ಆ ಸಮಯದಲ್ಲಿ ಜವಾಹರಲಾಲರೂ ಗಾಂಧೀಜಿಯ ಜೊತೆಯಲ್ಲಿದ್ದರು. ಯುಕ್ತ ಪ್ರಾಂತದ ಪರಿಸ್ಥಿತಿಯನ್ನು ಕುರಿತು ಅಧಿ ಕಾರಿಗಳೊಡನೆ ತಾವೂ ಪ್ರಸ್ತಾಪ ಮಾಡಿದರು. ಲಂಡನ್ನಿಗೆ ಗಾಂಧೀಜಿ ನಿಶ್ಚಿಂತೆಯಾಗಿ ಹೋಗುವಂತಿರಲಿಲ್ಲ. ಆದಾಗ್ಗೂ ಬಗೆಬಗೆಯಾಗಿ ಸಂಧಾನ ನಡೆಯಿತು. ಕಡೆಯ ಕ್ಷಣದಲ್ಲಿ ಕಾಗದ ಪತ್ರಗಳು ನಡೆದು ಜಹಜು ಹೊರಡುವುದಕ್ಕೆ ಮುಂಚಿತವಾಗಿ ಗಾಂಧೀಜಿ ಮುಂಬಯಿ ತಲಪುವಂತೆ ಆತುರಾತುರವಾಗಿ ಸ್ಪೆಷಲ್ ಟ್ರೈನ್ ಏರ್ಪಾಟಾಯಿತು.

ಸಿಮ್ಲಾದಿಂದ ಮುಂಬಯಿಗೆ ನಡೆದ ಪ್ರಯಾಣದಲ್ಲಿ ಗಾಂಧೀಜಿಯ ಜೊತೆಯಲ್ಲಿಯೇ ಜವಾಹರಲಾಲರಿದ್ದರು. ಆಗಸ್ಟ್ ತಿಂಗಳ ಕೊನೆ ಯಲ್ಲಿ ಗಾಂಧೀಜಿ ಇಂಗ್ಲಂಡಿಗಾಗಿ ಜಹಜನ್ನೇರಿದರು; ತೀರದಲ್ಲಿ ನಿಂತಿದ್ದು ಜವಾಹರಲಾಲರು ಬೀಳ್ಕೊಟ್ಟು ನಮಿಸಿದರು. ಗಾಂಧೀಜಿ ಯನ್ನು ಪುನಃ ಕಾಣಲು ಎರಡು ವರ್ಷಗಳು ಕಳೆಯಬೇಕಾಯಿತು.

ಕಾಂಗ್ರೆಸ್ಸಿನ ಏಕ ಮಾತ್ರ ಪ್ರತಿನಿಧಿಯಾಗಿ ಗಾಂಧೀಜಿ ಹೊರಟಿ ದ್ದರು. ಉದ್ದೇಶ ಪೂರ್ವಕವಾಗಿಯೇ ಒಬ್ಬರನ್ನು ಮಾತ್ರ ಗೊತ್ತು ಮಾಡಿತ್ತು. ಮೂಲ ಭೂತವಾದ ಅಂಶಗಳ ವಿವರವನ್ನು ಸಭೆ ಮುಂದಿಡುವ ಕೆಲಸ ಆತನದು. ಆ ಅಂಶಗಳಿಗೆ ಒಪ್ಪಿಗೆ ದೊರೆಯು ವಂತೆ ಕಂಡ ಪಕ್ಷದಲ್ಲಿ ಗಾಂಧೀಜಿಯವರು ವರ್ಕಿಂಗ್ ಕಮಿಟಿಯ ಸದಸ್ಯ ರೆಲ್ಲರನ್ನೂ ಲಂಡನ್ನಿಗೆ ಕರೆಸಿಕೊಳ್ಳಲು ಸಿದ್ಧರಾಗಿದ್ದರು. ಆ ಕಮಿಟಿಯ

ಸದಸ್ಯರಾಗಿದ್ದ ನಾಯಕರೂ ಆ ಸಂಭವವನ್ನು ಮನಸ್ಸಿನಲ್ಲಿಟ್ಟುಕೊಂಡೇ ಇದ್ದರು. ಆದರೆ ವಾಸ್ತವವಾಗಿ ನಡೆದುದೇನು? ಆ ಮೂಲ ಭೂತ ವಾದ ಅಂಶಗಳನ್ನು ಹಾಗೂ ಹೀಗೂ ಕಾಲವಿಳಂಬ ಮಾಡಿ ತಪ್ಪಿಸಿ ಕೊಳ್ಳಬೇಕೆಂಬ ಉದ್ದೇಶ ಬ್ರಿಟಿಷ್ ಪಕ್ಷದವರಿಗೆ. ಸಭೆಯಲ್ಲಿ ಯಾವಾವುವೋ ಚಿಲ್ಲರೆ ವಿಷಯಗಳನ್ನು ಚರ್ಚೆಗೊಡ್ಡುತ್ತ ಸಭೆಯ ಯಾಜಮಾನ್ಯವನ್ನು ನಿರ್ವಹಿಸುತ್ತಿದ್ದರು. ಮೊದಲನೆ ಸಲ ಚಕ್ರ ಗೋಷ್ಠಿ ಸೇರಿದಾಗ ಹಿಂದುಸ್ತಾನದಲ್ಲಾಗಲಿ ಹೊರಗಾಗಲಿ ಜನರ ಮನಸ್ಸನ್ನು ಅದರ ಕಲಾಪ ಆಕರ್ಷಿಸಲಿಲ್ಲ; ಎಲ್ಲರ ಗಮನವೂ ಹಿಂದುಸ್ತಾನದಲ್ಲಿ ನಡೆಯುತ್ತಿದ್ದ ಅಸಹಯೋಗದ ವೃತ್ತಾಂತದಲ್ಲಿತ್ತು. ಆ ಸಮ್ಮೇಳನಕ್ಕೆ ಹೊರಟವರು ಕಪ್ಪು ಬಾವುಟಗಳ ಮರ್ಯಾದೆ ಮಾಡಿಸಿ ಕೊಂಡು ಹೊರಟಿದ್ದರು. ಎರಡನೆ ಬಾರಿ ಹಾಗಾಗಬಾರದೆಂದು ಸರ್ಕಾರದವರು ಆದಷ್ಟು ಪ್ರಯತ್ನವನ್ನೂ ಸಂಧಾನ ಚಾತುರ್ಯವನ್ನೂ ವೆಚ್ಚಗೊಳಿಸಿ ಗಾಂಧೀಜಿಯವರಲ್ಲಿಗೆ ಹೊರಡುವಂತೆ ಸಾಧಿಸಿದ್ದರು. ಸಭಾ ಕಾರ್ಯಕಲಾಪವನ್ನು ನಡೆಸುತ್ತ ಜಾಣತನದಿಂದ ಕೋಮು ವಾರು ಪ್ರಶ್ನೆಯನ್ನು ಎತ್ತಿಕಟ್ಟಿದರು. ಇಂತಹ ಸನ್ನಿವೇಶದಲ್ಲಿ ಗಾಂಧೀ ಜಿಯವರಿಗೆ ಕಾರ್ಯಸಾಧನೆ ಅತಿ ಕಷ್ಟವಾಗಿತ್ತು. ಹೇಗೆ ತಾನೇ ಇಷ್ಟೆಲ್ಲ ವನ್ನೂ ಸಹಿಸಿಕೊಂಡು ಸಭೆಯ ಕಲಾಪದಲ್ಲಿ ಸೇರಿಕೊಂಡಾರೆಂದು ಜವಾಹರಲಾಲರಂತೆ ಇತರರೂ ಚಿಂತಿಸುತ್ತಿದ್ದರು. ಆದರೆ ಮಹಾತ್ಮಾಜಿ ಯವರು ಅಮಾನುಷ ಸ್ಥೈರಣೆಯನ್ನು ಗಂಟುಕಟ್ಟಿಕೊಂಡು ದಿನ ದಿನವೂ ಸಂದರ್ಭ ಸಂದರ್ಭಕ್ಕೂ ಸಮಾಧಾನವನ್ನು ಸಾಧಿಸಲು ಪ್ರಯತ್ನದ ಮೇಲೆ ಪ್ರಯತ್ನವನ್ನು ಮಾಡುತ್ತಿದ್ದರು. ಎಲ್ಲವೂ ವ್ಯರ್ಥವೆಂಬ ಪ್ರಜ್ಞೆ ಮನಸ್ಸಿನಲ್ಲಿ ಬಲಗೊಂಡಿದ್ದಾಗ್ಯೂ ಪ್ರಯತ್ನವನ್ನು ಬಿಡಲಾಗ ದೆಂಬ ನೀತಿಯನ್ನು ಅನುಸರಿಸುತ್ತಲಿದ್ದರು.

ಆ ಕಾಲದ ವರ್ತಮಾನ ಪತ್ರಿಕೆಗಳ ಹುಡುಗಾಟವೋ ಕ್ಷುಲ್ಲಕ ಚೇಷ್ಟೆಯೋ! ಇಲ್ಲದ ಸಲ್ಲದ ಸಮಾಚಾರಗಳು ದೇಶದ ಹೊರಗಡೆ ಪ್ರಚಾರವಾಗುತ್ತಿದ್ದವು. ಜಹಜನ್ನೇರಿ ಮುಂಬಯಿಯಿಂದ ಗಾಂಧೀಜಿ ಹೊರಟಾಗ ಇತರ ಕಾಂಗ್ರೆಸ್ ನಾಯಕರು ಅವರನ್ನು ಕಾಂಗ್ರೆಸ್ಸಿ

ನಿಂದ ಹೊರಗೆ ಹಾಕುವ ಪಿತೂರಿ ಕಟ್ಟಿರುವರೆಂದು ಒಂದು ಸುದ್ದಿ! ಲಕ್ಷಾಂತರ ಹಣವನ್ನು ಶೇಖರಿಸಿಕೊಂಡು ಗಾಂಧೀಜಿಯವರದನ್ನೆಲ್ಲಿಯೋ ಬಚ್ಚಿಟ್ಟಿದ್ದರೆಂದೂ ಇತರ ಮುಖಂಡರು ಆ ಹಣವನ್ನು ಸಂಪಾದಿಸಿಕೊಳ್ಳಲು ಕಾಂಗ್ರೆಸ್ಸನ್ನು ಬಲಪಡಿಸುತ್ತಿದ್ದರೆಂದೂ ಮತ್ತೊಂದು ಸುದ್ದಿ! ಇಂತಹ ಸುಳ್ಳು ಸುದ್ದಿಗಳಲ್ಲೆಲ್ಲ ಅಪಹಾಸ್ಯಕಾರಕವಾದುದು ಹಿಂದೆ 1921ರಲ್ಲಿ ಹುಟ್ಟಿತ್ತು. ಅಪದ್ಧಕ್ಕೆ ಅಪ್ಪಣೆಯೇನೋ ಇಲ್ಲ. ಆದರೆ ಹೇಳಿದ ಅಪದ್ಧವು ಸಂಭವವೆನ್ನಿಸುವುದೂ ಬೇಡವೇ? ದಿಲ್ಲಿಯಲ್ಲಿ ಬ್ರಿಟಿಷ್ ಯುವರಾಜರಿದ್ದಾಗ ಹಟಾತ್ತಾಗಿ ಗಾಂಧೀಜಿ ಪ್ರವೇಶಿಸಿ ಆ ಯುವರಾಜರ ಪಾದಗಳನ್ನು ಹಿಡಿದು ಅತಿಯಾಗಿ ಗೋಳಿಟ್ಟು ಈ ನಿರ್ಭಾಗ್ಯ ದೇಶಕ್ಕೆ ಶಾಂತಿಯನ್ನು ದಯಪಾಲಿಸಿರೆಂದು ಬಿಕ್ಕಿ ಬಿಕ್ಕಿಯಳುತ್ತ ಅಂಗಲಾಚಿದರೆಂದು ಯಾವನೋ. ಸುದ್ದಿಗಾರನು ಆಧಾರ ಪ್ರಮಾಣಗಳೊಂದಾದರೂ ಇಲ್ಲದೆ ಹರಡಿದ್ದನು. ಸಾಧ್ಯವೇ ಸಂಭವವೇ ಎಂಬ ಯೋಚನೆ ಸ್ವಲ್ಪವಾದರೂ ಬೇಡವೇ? ಇಂಗ್ಲಂಡಿನ ಮತ ಗುರುಗಳಲ್ಲಿ ಶ್ರೇಷ್ಠನಾದ ಕ್ಯಾಂಟರ್ಬರಿಯ ಆರ್ಚ್ ಬಿಷಪ್ ಇಟಲಿಗೆ ಹೊರಟು ಮುಸ್ಸೊಲೀನಿಯ ಬೈಠಕ್ ಖಾನೆಯಲ್ಲಿ ಪ್ರವೇಶಿಸಿ ತಲೆಯನ್ನು ನೆಲಕ್ಕೂರಿ ತಲೆಕೆಳಗಾಗಿ ನಿಂತು ಆಕಾಶದಲ್ಲಿ ಕಾಲುಗಳನ್ನು ಝಾಡಿಸುತ್ತ ನಮಸ್ಕಾರವೆಂದರೆ ಹೇಗೋ ಹಾಗೆಯೇ ಆಯಿತು ಈ ದಿಲ್ಲಿಯ ಪೊಳ್ಳು ಕಥೆ.

ಗಾಂಧೀಜಿಯವರಂತೂ ಇಂಗ್ಲಂಡಿನಲ್ಲಿ ಎಷ್ಟೋ ಸಹನೆಯಿಂದಿದ್ದಾಗ ಭಾರತದಲ್ಲಿ ಆತನ ಜೊತೆಗಾರರಿಗೆ ಬಲು ಕಷ್ಟಕ್ಕಿಟ್ಟುಕೊಂಡಿತು. ಸರಹದ್ದಿನ ಪ್ರಾಂತದಲ್ಲಿ ಅಸಮಾಧಾನವೆಂದು ತಿಳಿದರೂ ಅಲ್ಲಿಗೆ ಹೊರಡುವ ಹಾಗಿಲ್ಲ. ಯುಕ್ತ ಪ್ರಾಂತದಲ್ಲಿಯೂ ಬಂಗಾಳದಲ್ಲಿಯೂ ದಿನೇ ದಿನೇ ಪರಿಸ್ಥಿತಿ ಕೆಡುತ್ತಲೇ ಬಂತು. ಬಂಗಾಳದಲ್ಲಿ ಪಲ್ಲಟಕಾರಿ ಗುಂಪಿನವರಿರುವರೆಂಬ ನೆಪದಿಂದ ಸರ್ಕಾರದವರು ಸಾಧಾರಣವಾಗಿರಬೇಕಾದ ಪೌರಾಧಿಕಾರಗಳಿಲ್ಲದಂತೆ ಮಾಡಿದ್ದರು. ಅನೇಕರನ್ನು ದಸ್ತಗಿರಿಮಾಡಿ ವಿಚಾರಣೆಯಿಲ್ಲದೆ ಬಂಧನದಲ್ಲಿಟ್ಟುಕೊಂಡಿದ್ದರು. ಹಿಜಲಿಯೆಂಬಲ್ಲಿ ಹಾಗೆ ಬಂಧಿತರಾದವರ ಗುಂಪಿಗಾಗಿ ಒಂದು ಕ್ಯಾಂಪಿತ್ತು.

ಅಲ್ಲಿ ಹೊಡೆದಾಟಗಳೆಂಬ ಸುದ್ದಿಯ ಹಿಂದೆಯೆ ಪೋಲೀಸ್ ಅಧಿಕಾರಿಗಳು ಗುಂಡು ಹೊಡೆದರೆಂಬ ವರ್ತಮಾನ. ನಡೆದ ಹೊಡೆದಾಟದಲ್ಲಿ ಏಟು ಬಿದ್ದು ಗಾಯಗೊಂಡವರೆಲ್ಲರೂ ಬಂದಿಗಳೇ ಆಗಿದ್ದುದರಿಂದ ಹಾಹಾಕಾರ ಹುಟ್ಟದಿದ್ದೀತೇ ಜನರಲ್ಲಿ? ಚಿತ್ತಗಾಂಗ್ ಕಡೆ ಬೇರೊಂದು ಬಗೆಯ ಅಕೃತ್ಯ. ಯಾರೋ ಒಬ್ಬ ಪಲ್ಲಟಕಾರಿ ಒಬ್ಬ ಪೋಲೀಸಧಿಕಾರಿಯನ್ನು ಪಿಸ್ತೂಲುಡಾಯಿಸಿ ಕೊಂದನು; ಅದರ ಹಿಂದೆಯೆ ಹಿಂದುಗಳಿಗೂ ಮುಸ್ಲಿಮರಿಗೂ ಲಡಾಯಿಗಳು ಹೇಗೋ ಮೊದಲಾದವು. ಮಧ್ಯೆ ಆಂಗ್ಲೊ ಇಂಡಿಯರ್ ಜಾತಿಯವರೂ ಗಲಭೆಗಳಲ್ಲಿ ಪ್ರವೇಶಿಸಿ ಇನ್ನೂ ಹೆಚ್ಚಿಸಿದರು. ಕಲ್ಕತ್ತೆಯ ಪ್ರಮುಖ ಶ್ರೀ ಸೇನ್ ಗುಪ್ತ ಮುಂತಾದವರೇನು ಮಾಡಿದ್ದಾಗ್ಯೂ ಸರ್ಕಾರದವರು ವಿಚಾರಣೆಗೇ ಅವಕಾಶ ಕೊಡಲಿಲ್ಲ.

ಯುಕ್ತಪ್ರಾಂತದಲ್ಲಿಯೇ ತೊಂದರೆ ಬೇಕಾದಷ್ಟಿತ್ತು. ಆದಾಗ್ಯೂ ಬಂಗಾಳಕ್ಕೆ ಜವಾಹರಲಾಲರು ನವಂಬರ್ ತಿಂಗಳಲ್ಲಿ ಪ್ರಯಾಣವನ್ನಿಟ್ಟುಕೊಂಡು ಕಲಿಕತ್ತೆಯಲ್ಲಿ ಕೆಲವು ದಿನಗಳನ್ನು ಕಳೆದರು. ಪಲ್ಲಟದಾಸೆಯಿಂದ ಭಯೋತ್ಪಾದಕ ಕ್ರಿಯೆಗಳನ್ನು ನಡೆಸುವುದು ಅವಿವೇಕವೆಂಬುದಾಗಿ ಅನೇಕ ಬಹಿರಂಗ ಸಭೆಗಳಲ್ಲಿ ವಿವರಿಸಿದರು. ಆದರೆ ಯುಕ್ತಪ್ರಾಂತದಲ್ಲಿಯ ಕೆಲಸ ಬೆನ್ನಂಟಿದಂತಿತ್ತು. ಅಲ್ಲಿಯ ರೈತಾಪಿ ಜನರಿಗೆ ಬಾಕಿ ಕಂದಾಯ ಗುತ್ತಿಗೆಗಳ ಸಂದಾಯದ ವಿಷಯದಲ್ಲಿ ರಿಯಾಯತಿ ತೋರುವುದು ಅತ್ಯವಶ್ಯಕವೆಂದು ಗವರ್ನರ್ ಬಳಿಯಲ್ಲಿಯೆ ಗಾಂಧೀಜಿ ಪ್ರಸ್ತಾಪ ಮಾಡಿದ್ದರಷ್ಟೆ. ರಿಯಾಯತಿಯನ್ನು ತೃಪ್ತಿಕರವಾಗಿಯಾಗಲಿ ಸಕಾಲದಲ್ಲಾಗಲಿ ಅಧಿಕಾರಿಗಳು ತೋರಲಿಲ್ಲ. ಕಾಂಗ್ರೆಸ್ ಪ್ರಮುಖರಲ್ಲದೆ ಇತರರೂ ಎಷ್ಟೆಷ್ಟೋ ಪ್ರಯತ್ನಮಾಡಿದರೂ ಸಮಾಧಾನ ಸ್ಥಿತಿ ನೆಲೆಸಲಿಲ್ಲ. ಗುತ್ತಿಗೆ ಹಣ ಕೊಡಲಿಲ್ಲವೆಂಬುದಾಗಿ ಅನೇಕ ಬೇಸಾಯಗಾರರ ದನಕರುಗಳನ್ನು ಕಿತ್ತುಕೊಂಡಿದ್ದರು; ಭೂಮಿಗಳನ್ನು ಕಿತ್ತುಕೊಂಡಿದ್ದರು. ಅಂತಹವರೆಲ್ಲರೂ ಬಲು ಕಷ್ಟದಲ್ಲಿ ಸಿಕ್ಕಿದರು. ಮತ್ತೆ ಬೇರೆ ರೈತರು ಸಲ್ಲಿಸಿದ ಹಣವನ್ನು ಬೇರಾವುದೋ ಲೆಕ್ಕಕ್ಕೆ ಜಮಾ ಎಂದಿದ್ದರು. ಇಲಾಹಾಬಾದ್ ಜಿಲ್ಲೆಯಲ್ಲಿಯೆ ಆರಂಬ

ಗಾರರು ತಮ್ಮ ಬಲವನ್ನು ತಿಳಿದವರಾಗಿದ್ದುದರಿಂದ ಹಿಂಸೆಯನ್ನು ತಡೆಯಲಾರದೆ ಪ್ರತಿಕ್ರಿಯೆಯನ್ನೇಕೆ ತೊಡಗಬಾರದೆಂಬುದಾಗಿ ಒತ್ತಾಯಪಡಿಸುವ ಸ್ಥಿತಿಗೆ ಬಂತು. ರೈತರ ಪರವಾಗಿ ಸಂಧಾನ ಮಾಡಲೆಳಸಿದ ಕಾಂಗ್ರೆಸ್ ನಾಯಕರೊಂದಿಗೆ ಮೊದಮೊದಲು ಸರ್ಕಾರದ ಅಧಿಕಾರಿಗಳು ನೇರವಾಗಿ ಮಾತನ್ನೋ ಪತ್ರವನ್ನೋ ಬೆಳೆಸುತ್ತಿದ್ದವರು ಬರಬರುತ್ತ ಬಿಂಕ ತೋರಲಾರಂಭಿಸಿದರು.

ಡಿಸೆಂಬರ್ ತಿಂಗಳಲ್ಲಿ ಪ್ರಯಾಗದಲ್ಲೊಂದು ರೈತರ ಸಮ್ಮೇಳನ ನಡೆಯಿತು. ನ್ಯಾಯವಾಗಿಯೂ ಸಮಾಧಾನವಾಗಿಯೂ ಅಧಿಕಾರಿಗಳು ತಮ್ಮ ಕಷ್ಟನಷ್ಟಗಳನ್ನು ಪರಿಹರಿಸದೆ ಹೋದರೆ ಕಂದಾಯವನ್ನು ಸಲ್ಲಿಸಬಾರದೆಂಬ ನಿಶ್ಚಯಕ್ಕೆ ಬರಲೇಬೇಕಾಯಿತು. ಆ ಸಮ್ಮೇಳನ ಮುಗಿದ ಕೂಡಲೆ ಜವಾಹರಲಾಲರು ಹಿಂದಿನ ವಾಗ್ದಾನವೊಂದನ್ನು ಪಾಲಿಸಲು ಕರ್ಣಾಟಕ ಪ್ರಾಂತದಲ್ಲಿ ಸಂಚಾರವನ್ನಿಟ್ಟುಕೊಂಡರು.

ಹುಬ್ಬಳ್ಳಿಯಲ್ಲಿಯೆ ಹಿಂದುಸ್ತಾನಿ ಸೇವಾದಲದ ಕಾರ್ಯಾಲಯವಿದ್ದುದು. ಕಾಂಗ್ರೆಸ್ಸಿನ ಅಂಗವಾಗಿ ಆ ಸೇವಾದಲವನ್ನು ಜವಾಹರಲಾಲರೂ ಡಾ|| ಹರ್ಡೀಕರರೂ ನಡೆಸುತ್ತಿದ್ದರು. ಹುಬ್ಬಳ್ಳಿಯಲ್ಲಿ ಎರಡು ಮೂರು ದಿನಗಳನ್ನು ಕಳೆದ ಬಳಿಕ ಜವಾಹರಲಾಲರು ಪ್ರಾಂತದ ಇತರೆಡೆಗಳನ್ನೂ ಕಾಣಲು ಹೊರಟರು. ಎಲ್ಲೆಲ್ಲಿಯೂ ಜನರೆಷ್ಟು ಉತ್ಸಾಹಿಗಳಾಗಿದ್ದರೆಂಬುದನ್ನು ಕಂಡು ಆಶ್ಚರ್ಯಚಕಿತರಾದರು. ಅಲ್ಲಿಂದ ಸೊಲ್ಲಾಪುರಕ್ಕೂ ಮುಂದೆ ಮುಂಬಯಿಗೂ ಪ್ರಯಾಣ ಸಾಗಿತು. ಮುಂಬಯಿಯಲ್ಲಿ ಜವಾಹರಲಾಲರು ಅಗತ್ಯವಾದ ಬೇರೊಂದು ಕೆಲಸವನ್ನು ನಿರ್ವಹಿಸಬೇಕಾಗಿತ್ತು. ಕಮಲಾದೇವಿಗೆ ಚಿರಕಾಲದಿಂದ ಅಸ್ವಸ್ಥತೆಯಾಗಿದ್ದುದರಿಂದ ತಕ್ಕ ಚಿಕಿತ್ಸೆಯನ್ನು ಏರ್ಪಡಿಸಬೇಕಾಗಿತ್ತು. ಗಾಂಧೀಜಿ ಆ ವೇಳೆಗೆ ಇಂಗ್ಲಂಡನ್ನು ಬಿಟ್ಟು ಹೊರಟಿದ್ದರು. ಇನ್ನೊಂದು ವಾರ ಕಳೆದರೆ ಮುಂಬಯಿಯಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಆದ್ದರಿಂದ ಜವಾಹರಲಾಲರಿಗೆ ಮಿತ್ರರನೇಕರು ಮುಂಬಯಿಯಲ್ಲಿಯೇ ಇದ್ದು ಗಾಂಧೀಜಿಯನ್ನು ಕಾಣುವಂತೆ

ಹಿತೋಕ್ತಿ ಹೇಳಿದರು. ಆದರೆ ಸಾಧ್ಯವಾಗಲಿಲ್ಲ. ಯುಕ್ತಪ್ರಾಂತದ ಆಡಳಿತಕ್ಕಾಗಿ ವೈಸರಾಯಿ ಸರ್ಕಾರದವರಾಗಲೆ ಹೊಸ ನಿಬಂಧನೆಯನ್ನು ಪ್ರಕಟಿಸಿದ್ದರು. ಮಕ್ಕಳು ಮಾಡಿದ ತಪ್ಪಿತಕ್ಕಾಗಿ ಹೆತ್ತವರನ್ನು ಶಿಕ್ಷೆಗೆ ಗುರಿಮಾಡುವ ಅಧಿಕಾರವೂ ಸೂಚನೆಯಾಗಿತ್ತು ಆ ನಿಬಂಧನೆಯಲ್ಲಿ. ಆ ಪ್ರಾಂತದ ಸರ್ಕಾರದವರು ತಡಮಾಡದೆ ಇಲಾಹಾಬಾದಿನಲ್ಲಿ ಮುಖ್ಯಸ್ಥರಾಗಿದ್ದ ಬಾಬು ಪುರುಷೋತ್ತಮದಾಸ ಟಂಡನ್ ಎಂಬಾತನನ್ನೂ ಇತರರನ್ನೂ ದಸ್ತಗಿರಿ ಮಾಡಿಬಿಟ್ಟಿದ್ದರು. ತಮ್ಮ ಜೊತೆಗಾರರಿಂದ ದೂರವಾಗಿರಲು ಜವಾಹರಲಾಲರಿಗೊಪ್ಪಿಗೆಯಾಗಲಿಲ್ಲ. ಅಲ್ಲದೆ ಎಟಾವದಲ್ಲಿ ಪ್ರಾಂತೀಯ ಸಮ್ಮೇಳನ ಬೇರೆ ನಡೆಯಬೇಕಾಗಿತ್ತು. ಆದ್ದರಿಂದ ಮುಂಬಯಿಯಲ್ಲಿ ನಿಲ್ಲಲಾಗದೆಂದು ನಿಶ್ಚಯಮಾಡಿ ರೋಗದಿಂದ ಹಾಸಿಗೆ ಹಿಡಿದಿದ್ದ ಕಮಲಾದೇವಿಯನ್ನು ಅಲ್ಲಿಯೆ ಬಿಟ್ಟು ಪ್ರಯಾಗಕ್ಕೆ ಹೊರಟರು.

ಮುಂಬಯಿಯಿಂದ ರೈಲು ಪ್ರಯಾಣ ಮಾಡುತ್ತ ಪ್ರಯಾಗವನ್ನು ಸಮೀಪಿಸುತ್ತಿದ್ದಂತೆಯೆ ಛಿಯೋಕಿ ಸ್ಟೇಷನ್ನಿನಲ್ಲಿ ಜವಾಹರಲಾಲರಿಗೆ ಹೊಸ ನಿಬಂಧನೆಯ ಪ್ರಕಾರ ಒಂದಾಜ್ಞೆಯನ್ನು ತಂದಿತ್ತರು. ಇಲಾಹಾಬಾದ್ ಬಿಟ್ಟು ಬೇರೆಲ್ಲಿಯೂ ಹೋಗಕೂಡದೆಂದೂ ಸಭಾ ಸಮ್ಮೇಳನಗಳಲ್ಲಿ ಭಾಗವಹಿಸಕೂಡದೆಂದೂ ಆಜ್ಞೆ ! ಇಲಾಹಾಬಾದ್ ಸ್ಟೇಷನ್ನಿನಲ್ಲಿಳಿದ ಕೂಡಲೆ ಮತ್ತೊಂದು ಆಜ್ಞೆ; ಮನೆ ಸೇರಿದ ಕೂಡಲೆ ಅಲ್ಲಿ ಕಾದಿದ್ದ ಪೋಲೀಸ್ ನೌಕರನಿತ್ತ ಮತ್ತೊಂದು ಆಜ್ಞೆ. ಆಜ್ಞೆಯನ್ನು ತಲಪಿಸಲು ಅಧಿಕಾರಿಗಳು ಸರ್ವ ಪ್ರಯತ್ನಗಳನ್ನೂ ಮಾಡಿದ್ದರು. ಹೀಗೆಯೇ ಎಟಾವದಲ್ಲಿ ಸೇರಲಿದ್ದ ಸಮ್ಮೇಳನಕ್ಕೆ ಅಧ್ಯಕ್ಷನೆಂದು ನಿಶ್ಚಿತವಾಗಿದ್ದ ತಸದ್ದುಕ್ ಶೇರ್ವಾನಿಯೆಂಬಾತನಿಗೂ ಸರ್ಕಾರದವರು ಎಚ್ಚರಿಕೆ ಕೊಟ್ಟಿದ್ದರು. ಆ ಸಮ್ಮೇಳನ ನಡೆಯತಕ್ಕುದು ಅತ್ಯಗತ್ಯವಾಗಿದ್ದರೂ ಗಾಂಧೀಜಿ ಬರುವವರೆಗೆ ತಡೆದಿರೋಣವೆಂದು ಜವಾಹರಲಾಲರೂ ಶೇರ್ವಾನಿಯುವರೂ ಯೋಚಿಸಿ ಸಮ್ಮೇಳನ ವೇಳೆಯನ್ನು ಮುಂದಕ್ಕೆ ಹಾಕಿದರು. ಆದಾಗ್ಯೂ ಎಟಾವದಲ್ಲಿ ಪೋಲೀಸ್ ಪಡೆಯೊಂದಿಗೆ ಮಿಲಿಟರಿಯವರೂ ಕಾಣಿಸಿಕೊಂಡರು. ಕೆಲವರು

ಪ್ರತಿನಿಧಿಗಳ ಗಿರಫ್ತಾರಿಯಾಯಿತು. ಸ್ವದೇಶೀ ವಸ್ತುಪ್ರದರ್ಶನಶಾಖೆಯನ್ನು ಮಿಲಿಟರಿಯವರು ಸ್ವಾಧೀನಪಡಿಸಿಕೊಂಡರು.

ಇಷ್ಟೆಲ್ಲವನ್ನೂ ತಿಳಿದ ಬಳಿಕ ಏನು ಮಾಡಬೇಕೆಂಬುದನ್ನು ನಿಶ್ಚಯ ಮಾಡಿಕೊಂಡು ಜವಾಹರಲಾಲರು ಶೇರ್ವಾನಿಯೊಡನೆ ಮುಂಬಯಿ ಪ್ರಯಾಣವನ್ನಿಟ್ಟುಕೊಂಡರು. ಗಾಂಧೀಜಿ ಬರುವ ದಿನಗಳು; ವರ್ಕಿಂಗ್ ಕಮಿಟಿ ಸಭೆಸೇರಬೇಕಾಗಿತ್ತು. ಅದಕ್ಕೆ ಜವಾಹರಲಾಲರೇ ಕಾರ್ಯದರ್ಶಿಗಳು. ನಿಜಸ್ಥಿತಿಯನ್ನು ತಾವೇ ತಿಳಿಸಲು ಶೇರ್ವಾನಿಯರೂ ಹೊರಟಿದ್ದರು. ಯುಕ್ತ ಪ್ರಾಂತದಲ್ಲಿ ಬೇಸಾಯಗಾರರಿಂದ ತೊಂದರೆಯಾದೀತೆಂದು ರಚಿತವಾಗಿದ್ದ ನಿಬಂಧನೆಗೂ ಈ ಇಬ್ಬರ ಮುಂಬಯಿ ಪ್ರಯಾಣಕ್ಕೂ ಸಂಬಂಧ ಕಾಣಲಿಲ್ಲ. ಆದ್ದರಿಂದ ಆ ಪ್ರಯಾಣ ಆತಂಕವಿಲ್ಲದೆ ನಡೆಯುವುದೆಂಬ ಭಾವನೆಯಿತ್ತು. ಇಬ್ಬರೂ ಡಿಸೆಂಬರ್ 26ನೆ ತಾರೀಖಿನ ದಿನ ರೈಲನ್ನೇರಿ ಕುಳಿತುಕೊಳ್ಳುವ ವೇಳೆಗೆ ಸರಹದ್ದಿನ ಪ್ರಾಂತದಲ್ಲಿಯೂ ಹೊಸ ನಿಬಂಧನೆ ಪ್ರಕಟವಾಯಿತೆಂದೂ ಅಬ್ದುಲ್ ಗಫ್ಫಾರ್ ಖಾನ್ ಮುಂತಾದವರ ದಸ್ತಗಿರಿಯಾಯಿತೆಂದೂ ಸುದ್ದಿ ತಿಳಿಯಿತು. ರೈಲು ಹೊರಟ ಸ್ವಲ್ಪ ಕಾಲಕ್ಕೇ ಸಣ್ಣ ಸ್ಟೇಷನ್ ಇರಾದತ್ ಗಂಜ್ ಬಂತು. ಆ ರೈಲು ಅಲ್ಲಿ ನಿಲ್ಲುವ ವಾಡಿಕೆಯೇ ಇರಲಿಲ್ಲ. ಆದಾಗ್ಯೂ ನಿಂತಿತು. ಕೂಡಲೆ ಪೋಲೀಸ್ ಅಧಿಕಾರಿಗಳು ಹುಡುಕಿಕೊಂಡು ಬಂದು ಜವಾಹರಲಾಲ್ ಶೇರ್ವಾನಿಯಿಬ್ಬರನ್ನೂ ದಸ್ತಗಿರಿಗೈದು ಅಲ್ಲಿಯೆ ಸಿದ್ಧವಾಗಿದ್ದ ಪೋಲೀಸ್ ವ್ಯಾನಿಗೊಯ್ದರು. ಕೂಡಲೆ ನೈನಿ ಜೈಲು ಕಡೆಗೆ ವ್ಯಾನಿನ ಪ್ರಯಾಣ.

ಅದು ಕ್ರಿಸ್ಮಸ್ ಹಬ್ಬದ ವೇಳೆ. ಅದನ್ನೂ ದಸ್ತಗಿರಿ ಮಾಡಿಸಿದ ಪೋಲೀಸ್ ಸೂಪರಿಂಟೆಂಡೆಂಟನನ್ನೂ ಸ್ಮರಿಸಿ ಜವಾಹರಲಾಲರು "ಆಹೊತ್ತು ಬಾಕ್ಸಿಂಗ್ ಡೇ.* ನಮ್ಮನ್ನು ತಡೆದ ಪೋಲೀಸ್ ಅಧಿಕಾರಿಯ ಮುಖದಲ್ಲಿ ಯಾವುದೋ ವ್ಯಥೆಯೇ ಕಾಣುತ್ತಿತ್ತು. ನಮ್ಮಿಂದ ಆ ಹೊತ್ತು ಆತನ ಹಬ್ಬದೂಟದ ರುಚಿ ಕೆಟ್ಟಿರಬೇಕು" ಎಂದು ಬರೆದರು.

---

*ಬಾಕ್ಸಿಂಗ್ ಡೇ—ಕ್ರಿಸ್ಮಸ್ ಹಬ್ಬ ಮುಗಿದ ಕೂಡಲೆ ನಡೆಯುವ ದಿನ; ಆ ಹೊತ್ತು ಕ್ರಿಶ್ಚಿಯನ್ನರು ಇಷ್ಟಮಿತ್ರರಿಗೆ ಬಹುಮತಿಗಳನ್ನು ಸಣ್ಣ ಪೆಟ್ಟಿಗೆಗಳಲ್ಲಿಟ್ಟುಕೊಡುವ ವಾಡಿಕೆ.

## 4. ತಾಯಿಗೆ ಚಿತ್ತ

ಡಿಸೆಂಬರ್ 28ನೆ ದಿನ ಗಾಂಧೀಜಿ ಮುಂಬಯಿಗೆ ಹಿಂತಿರುಗಿ ಬಂದರು. ಮೊದಲು ಕೇಳಿದ ಸುದ್ದಿ ಜವಾಹರಲಾಲರ ದಸ್ತಗಿರಿ ಮತ್ತು ಸರಹದ್ ಪ್ರಾಂತದಲ್ಲಿ ಗೋಲಿಬಾರ್. ಆ ಸಂಜೆ ಆಜ಼ಾದ್ ಮೈದಾನದಲ್ಲಿ ಪ್ರಚಂಡ ಸಭೆ; ಗಾಂಧೀಜಿಯನ್ನು ನಮಸ್ಕರಿಸಲು ಲಕ್ಷ ಗಟ್ಟಲೆ ಸೇರಿದ ಜನಸಮೂಹ. ಮಾರನೆದಿನವೇ ವರ್ಕಿಂಗ್ ಕಮಿಟಿಯ ಸಭೆ ನಡೆದು ಗಾಂಧೀಜಿ ವೈಸರಾಯಿಯೊಡನೆ ವ್ಯವಹರಿಸತಕ್ಕದೆಂದು ಗೊತ್ತಾಯಿತು. ಆ ಹೊತ್ತೇ ಮುಖತಃ ವೈಸರಾಯಿಯವರ ಭೇಟಿ ಯನ್ನಾಶಿಸುತ್ತ ತಂತಿ ಕೊಟ್ಟರು; ಅದಕ್ಕೆ ವೈಸರಾಯಿಯ ಸೆಕ್ರೆಟರಿ ಕೊಟ್ಟ ಜವಾಬು 31ನೆ ತಾರೀಖಿನ ದಿನ ಬಂತು. ವೈಸರಾಯಿ ಭವನದ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿದಂತಾಯಿತು. ಸಂಧಾನಮಾಡಿ ಶಾಂತಿಯನ್ನು ಸಾಧಿಸುವ ಉಪಾಯವೇ ಇಲ್ಲ ದಾಯಿತು. ಜನವರಿ 3ನೆ ತಾರೀಖಿನ ದಿನ ಕಳೆದು ರಾತ್ರಿಯೇರುತ್ತಿ ದ್ದಾಗ ಪೋಲೀಸ್ ಅಧಿಕಾರಿಗಳು ಮಣಿಭವನಕ್ಕೆ ಬಂದು ಗಾಂಧೀಜಿ ಯನ್ನು ದಸ್ತಗಿರಿಮಾಡಿ ಕರೆದುಕೊಂಡು ಹೋದರು. ಆ ವೇಳೆ ಗಾಗಲೆ ಕಾಂಗ್ರೆಸ್‌ಅಧ್ಯಕ್ಷ ಸರ್ದಾರ್ ವಲಭ್ಭಾಯಿಯನ್ನು ದಸ್ತಗಿರಿ ಮಾಡಿದ್ದರು.

4ನೆ ತಾರೀಖಿನ ದಿನ ನಾಲ್ಕು ಹೊಸ ನಿಬಂಧನೆಗಳು ಪ್ರಕಟ ವಾದವು. ಪೋಲೀಸ್ ಅಧಿಕಾರಿಗಳಿಗೂ ದಂಡಧಾರಿಗಳಿಗೂ ವಿಶೇಷ ವಿಶೇಷವಾದ ಅಧಿಕಾರ ಪ್ರಾಪ್ತಿಯಾಗಿ ಜನಸಾಮಾನ್ಯರ ಸಾಧಾರಣ ವ್ಯವಹಾರಕ್ಕೆ ಎಲ್ಲ ದಿಕ್ಕುಗಳಲ್ಲಿಯೂ ಅಡ್ಡಿ ತೋರಿತು. ಪ್ರತಿಯೂರಿ ನಲ್ಲಿಯೂ ಯಾರೋಶತ್ರು ಮುತ್ತಿಗೆ ಹಾಕಿಕೊಂಡು ನಿರ್ಬಂಧಗೊಳಿ ಸಿದ್ದಂತೆಯೇ ಆಯಿತು. ಆ ದಿನವೇ ಊರೂರಿನಲ್ಲಿಯೂ ಗಾಂಧೀಜಿಯ ದಸ್ತಗಿರಿ ತಿಳಿದು ಜನರು ರಾಶಿರಾಶಿಯಾಗಿ ಹೊರಗೆ ಹೊರಟು ಪೋಲೀಸ್ ಅಧಿಕಾರಿಗಳ ಲಾಠಿ ಪ್ರಯೋಗಕ್ಕೂ ಕೆಲವೇಳೆ ಮಿಲಿಟರಿ ಬೀರಿದ ಗುಂಡುಗಳಿಗೂ ಎದುರಿನಲ್ಲಿ ಶಾಂತಿಯಿಂದ ನಿಂತರು. ಗಾಯಗ ಳಾದುದಲ್ಲದೆ ಪ್ರಾಣಗಳೂ ನಷ್ಟವಾದವು. • ದಸ್ತಗಿರಿಗಳೂ ಲೆಕ್ಕಕ್ಕೆ

ಸಿಕ್ಕದಂತೆ ನಡೆದುಹೋದವು. ಇದ್ದ ಜೈಲ್ಖಾನೆಗಳಲ್ಲಿ ತಾವು ಸಾಲದೆ ಟೆಂಪರರಿ ಕ್ಯಾಂಪುಗಳು ಅಲ್ಲಲ್ಲಿ ಸ್ಥಾಪಿತವಾಗಬೇಕಾಯಿತು.

ಕಾಂಗ್ರೆಸ್ ಎಂಬ ಹೆಸರು ಪಡೆದ ಸಂಸ್ಥೆಗಳು ಮಾತ್ರವೇ ಅಲ್ಲದೆ ಸಮೀಪವೋ ಸಂಬಂಧವೋ ಎನಿಸಿದ ಇತರ ಸಂಸ್ಥೆಗಳೂ ವಿಧಿವಿರುದ್ಧ ವೆನಿಸಿದವು. ಕಿಸಾರ್ ಸಭೆಗಳು, ರೈತರ ಸಂಘಗಳು, ಯುವಕರ ಕೂಟ ಗಳು, ವಿದ್ಯಾರ್ಥಿ ಸಭೆಗಳು, ರಾಜಕೀಯ ಸಂಸ್ಥೆಗಳು, ರಾಷ್ಟ್ರೀಯ ವಿದ್ಯಾಲಯಗಳು, ಆಸ್ಪತ್ರೆಗಳು, ಸ್ವದೇಶೀ ಮಳಿಗೆಗಳು, ಪುಸ್ತಕ ಭಂಡಾರ ಗಳು—ಎಲ್ಲವೂ ಕಾನೂನಿಗೆ ಬಾಹಿರವೆನಿಸುವಂತೆ ಸರ್ಕಾರದವರು ಆಜ್ಞೆ ಹೊರಡಿಸಿದರು. ಸರ್ಕಾರದವರು ಅನಿರೀಕ್ಷಿತವೇಳೆಯಲ್ಲಿ ಇಂತಹ ಆಜ್ಞೆಗಳನ್ನು ಸಾರಿ ತಾವೇ ಮೊದಲ ಹೆಜ್ಜೆಯನ್ನಿಟ್ಟುದರಿಂದ ದೇಶ ಭಕ್ತರಾಗಿದ್ದವರು ತಮ್ಮ ರಕ್ಷಣೆಯಲ್ಲಿ ನಿರತರಾಗಬೇಕಾಗಿ ಬಂತು. 1930ರಲ್ಲಾದರೆ ದೇಶಭಕ್ತರೇ ಮುಂದು; ಸರ್ಕಾರದವರಿಗೆ ಮುಂದೇ ನೆಂದು ತಿಳಿಯದಾಗಿದ್ದುದರಿಂದ ಸರ್ಕಾರದವರೇ ತಮ್ಮ ಸ್ವತ್ತನ್ನು ರಕ್ಷಿಸಿ ಕೊಳ್ಳುತ್ತ ಇರಬೇಕಾಗಿತ್ತು. 1932ರಲ್ಲಿ ಸ್ಥಿತಿ ವ್ಯತ್ಯಸ್ತವಾಯಿತು. ಕಾಂಗ್ರೆಸ್ಸಿಗೆ ವಿರೋಧವಾಗಿ ಪ್ರಚಾರವನ್ನು ನಡೆಸುವುದಕ್ಕೂ ತಮ್ಮಲ್ಲಿ ಭಯಭಕ್ತಿಯುಳ್ಳವರನ್ನು ಬಲಪಡಿಸುವುದಕ್ಕೂ ಸರ್ಕಾರದವರು ಉಜ್ಜುಗಿಸುತ್ತಲಿದ್ದು ಕಾಂಗ್ರೆಸ್ ಪಕ್ಷದವರಿಗೆ ಎಲ್ಲಿಯೂ ಅವಕಾಶವಿಲ್ಲ ದಂತೆಸಗಿದರು. ಗುಮಾನಿಯಿದ್ದೆಡೆ ಪ್ರವೇಶಿಸಿ ಆಸ್ತಿಪಾಸ್ತಿಗಳಿಗೆ ಮುಟ್ಟುಗೋಲಿಟ್ಟಾಗ ನೆಮ್ಮದಿವಂತಜನರಿಗೆ ಚಿಂತೆ ಬಲವಾಯಿತು. ದೃಷ್ಟಾಂತವಾಗಿ ಮುಂಬಯಿಯ ಒಬ್ಬಾನೊಬ್ಬ ವರ್ತಕನಿಗಾದ ಪರಿ ಣಾಮವನ್ನು ಕಾಣಬಹುದು. ಆ ವರ್ತಕನು ಪರಮ ಭೀರು; ಒಂದೆರಡು ಸಲ ದೇಶಭಕ್ತರಿಗೆ ದ್ರವ್ಯದಾನ ಮಾಡಿದ್ದುದೆಷ್ಟೋ ಅಷ್ಟೇ ಆತನ ಧೈರ್ಯ. ಆತನಿಗೆ ಐದು ಲಕ್ಷ ರೂಪಾಯಿಗಳ ದಂಡವಲ್ಲದೆ ದೀರ್ಘ ಕಾಲ ಸೆರೆಯಾದೀತೆಂಬ ಹೆದರಿಕೆಯಿಟ್ಟರು.

1930ರಲ್ಲಿ ದೇಶಸೇವಕಿಯರ ದಳಗಳೇ ಪರದೇಶೀ ವಸ್ತ್ರ ಬಾಯ್ಕಾಟ್ ಪ್ರಯತ್ನದಲ್ಲಿ ಮುಂದಾಗಿ ವರ್ತಿಸಿದ್ದುವಷ್ಟೆ. ಸರ್ಕಾರ ದವರು ಈ ಸಲ ಸ್ತ್ರೀಯರಿಗೆ ಧೈರ್ಯನಾಶವಾಗುವ ಹಂಚಿಕೆಯಿಂದ

ಅವರಿಗೆ ಕ್ರೂರ ಶಿಕ್ಷೆಗಳನ್ನೂ ಜೈಲುಗಳಲ್ಲಿ ಕಾಠಿನ್ಯವನ್ನೂ ಬೀರಲಾರಂಭಿಸಿದರು. ದೃಷ್ಟಾಂತಕ್ಕೆ ಇಲಾಹಾಬಾದಿನಲ್ಲಿ ನಡೆದ ಸಂಗತಿಯೊಂದು. ಜವಾಹರಲಾಲರ ತಂಗಿಯರ ದಸ್ತಗಿರಿಗಳಾದ ಬಳಿಕ ಹದಿನೈದು ಹದಿನಾರು ವರ್ಷ ವಯಸ್ಸಿನ ತರುಣಿಯರು ಕೆಲವರು ಏನು ಮಾಡಬೇಕೆಂದು ಮಾತನಾಡಿಕೊಳ್ಳಲು ಒಬ್ಬರ ಮನೆಯಲ್ಲಿ ಸೇರಿದರು. ಆಗಲೆ ಅಧಿಕಾರಿಗಳು ಅವರೆಲ್ಲರನ್ನೂ ದಸ್ತಗಿರಿಮಾಡಿ ಎರಡೆರಡು ವರ್ಷ ಕಠಿಣ ಸಜಾ ತೀರ್ಪು ಹೊರಡಿಸಿದರು. ಅನುಭವವಿಲ್ಲದೆ ಕೇವಲ ಉತ್ಸಾಹಭರಿತರಾಗಿದ್ದ ಆ ಹೆಣ್ಣುಮಕ್ಕಳು ಜೈಲುಗಳಲ್ಲಿ ಎಷ್ಟೋ ಹಿಂಸೆಯನ್ನು ತಾಳಿಕೊಳ್ಳಬೇಕಾಯಿತು.

ಆದರೂ ಕಾಂಗ್ರೆಸ್ ಭಕ್ತರ ಧೈರ್ಯ ಕುಂದಲಿಲ್ಲ. ಯುಕ್ತ ಪ್ರಾಂತದಲ್ಲಿ ರೈತರಿಗೆ ರಿಯಾಯತಿಗಳು ಸಂದಾಯವಾಗಬೇಕೆಂದಲ್ಲವೆ ಜವಾಹರಲಾಲರೂ ಶೇರ್ವಾನಿ ಮುಂತಾದವರೂ ಪ್ರಯತ್ನಿಸುತ್ತಿದ್ದುದು! ಅವರನ್ನು ಜೈಲುಗಳಲ್ಲಿಟ್ಟ ಬಳಿಕ ಸರ್ಕಾರದವರು ರಿಯಾಯತಿ ತೋರಿ ಕಾಂಗ್ರೆಸ್ಸಿನ ಕೀರ್ತಿ ಕೆಡುವಂತೆ ಸಂಧಾನ ನಡೆಸಿದರು. ಹಲಕೆಲವರು ರಿಯಾಯತಿಯಿಂದ ತೃಪ್ತಿಗೊಂಡರು; ತಟಸ್ಥರಾದರು. ಆದರೆ ಒಟ್ಟಿನಲ್ಲಿ ಆ ಪ್ರಾಂತದ ರೈತರು 1930ರಲ್ಲಿ ತೋರಿದ್ದುದಕ್ಕಿಂತ ಹೆಚ್ಚಿನ ಸಂಕಲ್ಪ ಬಲವನ್ನೂ ಶಿಷ್ಟಿಯನ್ನೂ 1932ರಲ್ಲಿ ಕಾಣಿಸಿದರು ಅಜ್ಞಾನಿಗಳೆನಿಸಿದ ಹಳ್ಳಿಯ ಜನರೆಷ್ಟು ಮಾತ್ರ ಧೈರ್ಯ ವಹಿಸಬಲ್ಲವರಾಗಿದ್ದರೆಂಬುದಕ್ಕೆ ಒಂದು ಉದಾಹರಣೆ ಕಾಣಬಹುದು.

ರಾಯಬರೇಲಿ ಜಿಲ್ಲೆಯಲ್ಲಿ ಬಕೂಲಿಯ ಎಂಬ ಹಳ್ಳಿ. ಗುತ್ತಿಗೆ ಹಣ ಕೊಡಲಿಲ್ಲವೆಂದು ಪೋಲೀಸ್ ಅಧಿಕಾರಿಗಳು ಹಳ್ಳಿಯ ನಿವಾಸಿಗಳ ಸಾಮಾನನ್ನು ಜಪ್ತಿಮಾಡಲು ಬಂದರು. ನಿವಾಸಿಗಳು ಅಧಿಕಾರಿಗಳನ್ನು ಗೌರವದಿಂದ ಬರಮಾಡಿಕೊಂಡರು; "ಎಲ್ಲ ಮನೆ ಬಾಗಿಲುಗಳನ್ನು ತೆರೆದಿಟ್ಟಿದೇವೆ. ಬೇಕಾದೆಡೆಗೆ ನೀವು ನಿರಾತಂಕರಾಗಿ ಹೊರಟು ನಿಮ್ಮ ಕೆಲಸವನ್ನು ಮಾಡಬಹುದು" ಎಂದರು. ಅಧಿಕಾರಿಗಳು ಅಲ್ಲಲ್ಲಿ ಹೊರಟು ಕಂಡ ರಾಸುಗಳನ್ನು ಹಿಡಿದರು. ಗ್ರಾಮಸ್ಥರು ತಟ್ಟೆ ತುಂಬ ತಾಂಬೂಲ ತುಂಬಿಕೊಂಡು ಬಂದು ಅಧಿಕಾರಿಗಳನ್ನು

ಬೀಳ್ಕೊಡಲು ಸಿದ್ಧರಾಗಿ ನಿಂತಿದ್ದರು. ಆ ಅಧಿಕಾರಿಗಳ ಮುಖಗಳು ಕಾಸಿನಗಲಕ್ಕೆ ಸಂಕೋಚಗೊಳ್ಳದೆ ಮತ್ತೇನಾದೀತು! ಭಯಗೊಂಡು ನಡುಗುತ್ತ ಮಣ್ಣು ಮುಕ್ಕಲು ಸಿದ್ಧರಾಗಬಹುದಾದ ಕಾಲದಲ್ಲಿ ಹಾಸ್ಯ ಗೊಳ್ಳುವಷ್ಟು ಧೈರ್ಯವನ್ನು ಜನರ ಹೃದಯಗಳಲ್ಲಿ ನಾಟಿದ ಶಕ್ತಿ ಯೆಷ್ಟು ಅದ್ಭುತವಾದುದು!

ನಿಬಂಧನೆಗಳು ಹೊಸ ಹೊಸದಾಗಿ ರೂಪ ತಾಳಿಕೊಂಡವು. ಪ್ರಜೆಗಳ ಸ್ವಾತಂತ್ರ್ಯ ಮಾಯವಾದುದಲ್ಲದೆ ವೃತ್ತಾಂತ ಪತ್ರಿಕೆಗಳೂ ಮುದ್ರಣಾಲಯಗಳೂ ಇರುಕಿನಲ್ಲಿ ಸಿಕ್ಕಿಕೊಂಡವು. ಸ್ವಲ್ಪ ಹೆಸರಿದ್ದವ ರಾದರೂ ಮುಖಂಡರಾಗುವಂತಿದ್ದವರು ವಿಚಾರಣೆಯಿಲ್ಲದೆ ಸೆರೆಮನೆ ಗಳಲ್ಲಿ ಸೇರಿಕೊಳ್ಳಬೇಕಾಯಿತು. ಸಾಮೂಹಿಕವಾಗಿ ದಸ್ತಗಿರಿ ಮಾಡುವುದನ್ನು ನಿಲ್ಲಿಸಿ ಸರ್ಕಾರದವರು ಮುಖಂಡರನ್ನು ಮಾತ್ರ ಹಿಡಿದು ಜೈಲುಗಳಲ್ಲಿಟ್ಟು ಕ್ರೌರ್ಯ ಕಾಠಿನ್ಯಗಳಿಂದ ಅವರ ಮನೋ ಬಲವನ್ನು ಮುರಿಯುವ ವರ್ತನೆಯನ್ನನುಸರಿಸಿದರು. ಗ್ರಾಮ ಗಳಲ್ಲಿಯೂ ನಾಯಕರಾದವರನ್ನು ಮಾತ್ರ ಸೆರೆಗೆ ದೂಡಿ ಉಳಿದವರನ್ನು ಲಾಠಿಯೇಟುಗಳಿಗೆ ಗುರಿಮಾಡುತ್ತ ಬಂದರು.

ಯುಕ್ತ ಪ್ರಾಂತದಲ್ಲಿಯೂ ಕರ್ಣಾಟಕದಲ್ಲಿಯೂ ಕಂದಾಯ ಕೊಡದಿದ್ದ ಜನರು ಈ ರೀತಿಯ ಆಡಳಿತಕ್ಕೆ ಸಿಕ್ಕಿದ್ದಾಗ ಸರಹದ್ದಿನ ಪ್ರಾಂತದಲ್ಲಿ ಮಿಲಿಟರಿ ಗುಂಪುಗಳ ಓಡಾಟ ಹೆಚ್ಚಿತು. ಒಟ್ಟಾಗಿ ಹಳ್ಳಿ ಹಳ್ಳಿಗಳನ್ನೇ ದಂಡಿಸಲು ಸಿದ್ಧರಾಗಿ ದಂಡದ ಹಣವನ್ನು ಹೊರೆಸಿದರು. ಬಂಗಾಳದಲ್ಲಿ ಇನ್ನೂ ಕ್ರೂರವಾಯಿತು. ರಾಶಿರಾಶಿಯಾಗಿ ಜನರನ್ನು ಊರಿಂದ ಹೊರಗೆ ಸಾಗಿಸುವುದು ಅಥವಾ ಊರನ್ನು ಬಿಟ್ಟು ಹೊರಗೆ ಹೊರಡಲಾಗದೆನ್ನುವುದು; ಉಡುಪು ಹೀಗೆಯೇ ಇರಬೇಕೆನ್ನುವುದು; ಶಾಲೆಗಳನ್ನು ಮುಚ್ಚುವುದು; ಬೈಸಿಕಲ್ ಸವಾರಿ ಮಾಡಕೂಡದೆನ್ನು ವುದು; — ಇಷ್ಟು ಅಲ್ಲದೆ ಪೋಲೀಸ್ ಅಧಿಕಾರಿಗಳೂ ಮಿಲಿಟರಿ ಅಧಿ ಕಾರಿಗಳೂ ಹೊರಡಿಸಿದ ನಾನಾ ಬಗೆಯ ನಿರ್ಬಂಧಕಾಜ್ಞೆಗಳು ಬಂಗಾಳ ದಲ್ಲಿ ಆಟವಾಡುತ್ತಿದ್ದವು. ಯುದ್ಧದಲ್ಲಿ ಶತ್ರುಗಳ ಕೈಗೆ ಸಿಕ್ಕಿದ ಬಂದಿಗಳು ಹೇಗೋ ಹಾಗಿರಬೇಕಾಗಿ ಬಂತು ಬಂಗಾಳದ ನಿವಾಸಿಗಳು.

ಪ್ರಾರಂಭದಲ್ಲಿಯೆ ಸ್ವರಾಜ್‌ಭವನವನ್ನು ಸರ್ಕಾರದವರು ಆಕ್ರಮಿಸಿಕೊಂಡರು. ಆ ಭವನದ ಭಾಗದಲ್ಲಿ ನಡೆಯುತ್ತಿದ್ದ* ಆಸ್ಪತ್ರೆಯ ಸರಕನ್ನೂ ಕಾಂಗ್ರೆಸ್ಸಿನ ಆಸ್ತಿಯೆಂದು ವಶಪಡಿಸಿಕೊಂಡರು. ಕೆಲ ದಿನಗಳು ಆಸ್ಪತ್ರೆ ನಿಂತೇಹೋಯಿತು. ತರುವಾಯ ಪಕ್ಕದ ತೋಟದ ಮೈದಾನದಲ್ಲಿಯೆ ಆಸ್ಪತ್ರೆಯನ್ನು ನಡೆಸುತ್ತಿದ್ದು ಕಾಲಾನಂತರ ಅಲ್ಲಿಯೆ ಸಮೀಪದಲ್ಲಿದ್ದ ಒಂದು ಚಿಕ್ಕಮನೆಯಲ್ಲಿ ಎರಡೂವರೆ ವರ್ಷಕಾಲ ನಡೆಸುತ್ತಿತ್ತು.

ಮೋತಿಲಾಲರು ವರಮಾನ ತೆರಿಗೆ ಕೊಡುತ್ತಿದ್ದವರು. 1930ನೆ ಸಾಲಿನ ತೆರಿಗೆಯನ್ನು ಕೊಟ್ಟಿರಲಿಲ್ಲ. 1931ರಲ್ಲಿ ಶಾಂತಿಕಾಲವಾಗಿದ್ದಾಗ ಜವಾಹರಲಾಲರು ಅಧಿಕಾರಿಗಳೊಡನೆ ಮಾತನಾಡಿ ತೆರಿಗೆ ಸಲ್ಲಿಸಲೊಪ್ಪಿ ಒಂದು ಕಂತನ್ನು ಕೊಟ್ಟಿದ್ದರು. ಆ ವೇಳೆಗೆ ಆರ್ಡಿನೆನ್ಸ್ ವಗೈರೆಗಳ ತಾಂಡವ ಪ್ರಾರಂಭವಾಯಿತು. ರೈತಾಪಿ ಜನರಿಗೆ ಕಂದಾಯ ಕೊಡಬೇಡಿರೆಂದು ಹೇಳುತ್ತ ತಾವೇ ವರಮಾನ ತೆರಿಗೆ ಕೊಡುವುದು ತರವಲ್ಲವೆಂದು ಜವಾಹರಲಾಲರು ಉಳಿದ ಕಂತುಗಳನ್ನು ಸಲ್ಲಿಸಲಿಲ್ಲ. ಆದುದರಿಂದ 'ಆನಂದಭವನ'ವೆಂಬ ವಾಸದ ಮನೆಯನ್ನು ಸರ್ಕಾರದವರು ಸ್ವಾಧೀನಪಡಿಸಿಕೊಳ್ಳುವರೆಂದುಕೊಳ್ಳಲು ಕಾರಣವಿತ್ತು.

> "ಒಂದು ಕಾರಣಕ್ಕೆ ಈ ಸಂಭವವು ಸ್ವಲ್ಪವಾದರೂ ನನಗೆ ಸರಿಬೀಳದಾಯಿತು. ನಮ್ಮ ತಾಯಿಗೆ ಮನೆಯಿಲ್ಲದಾಗುವುದಲ್ಲದೆ ಎಷ್ಟೋ ಪುಸ್ತಕ ಪತ್ರಗಳೂ ಇಷ್ಟವಾದ ವಸ್ತುಗಳೂ ಯಾರ ಕೈಗೋ ಸಿಕ್ಕಿ ನಷ್ಟವಾಗುವುದೂ ಮನೆ ಮೇಲೆ ಹಾರುತ್ತಿದ್ದ ರಾಷ್ಟ್ರಧ್ವಜದ ಸ್ಥಾನದಲ್ಲಿ ಯೂನಿಯನ್ ಜಾಕ್ ಏರಿಕೊಳ್ಳುವುದೂ ಅರುಚಿಕರವಾಯಿತು. ಆದರೆ ಮತ್ತೊಂದು ದೃಷ್ಟಿಯಿಂದ ನನ್ನ ಮನೆ ನನಗಿಲ್ಲದೆ ಹೋಗುವ ಸಂಭವ ಮನಸ್ಸಿಗೊಪ್ಪಿತು. ಹಾಗಾದರೆ ನಾನೂ ರೈತರಂತೆ ತಾವು ತಪ್ಪಿದವನಾಗಿ ರೈತರ ಧೈರ್ಯ ಹೆಚ್ಚುತ್ತಿತ್ತು; ಸತ್ಯಾಗ್ರಹಿಗಳೆಲ್ಲರಿಗೂ ಉತ್ಸಾಹವೇರುತ್ತಿತ್ತು. ಆದರೆ ಸರ್ಕಾರದವರು ಮನೆಯ ತಂಟೆಗೆ ಹೋಗಲಿಲ್ಲ. ಪ್ರಾಯಶಃ ಸ್ವರೂಪರಾಣಿದೇವಿಯರಿಗೆ

* ಲಾಠಿಯೇಟು ತಿಂದು ಗಾಯಗೊಂಡವರಿಗಾಗಿ ಮುಂಬಯಿಯಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ಆಸ್ಪತ್ರೆ ಕಂಡ ಬಳಿಕ ಮೋತಿಲಾಲರು ತಮ್ಮ ಮನೆಯಲ್ಲಿಯೆ ಪ್ರಾರಂಭಿಸಿದ್ದುದು.

ಹಿಂಸೆಯಾಗಬಾರದೆಂದೋ; ಅಥವಾ ಹಾಗೆ ಮಾಡಿದಲ್ಲಿ ಅಸಹಯೋಗದ ಚಳುವಳಿ ಮತ್ತಷ್ಟು ಬಲಗೊಂಡೀತೆಂದೋ. ಕೆಲವು ತಿಂಗಳುಗಳ ಬಳಿಕ ಸರ್ಕಾರದವರ ಕೈಗೆ ಯಾವುವೋ ಕೆಲವು ನನ್ನ ಷೇರುಗಳು ಸಿಕ್ಕಿದವು. ತೆರಿಗೆ ಸಲುವಾಗಿ ಅವುಗಳನ್ನು ಕಟ್ಟಿಕೊಂಡರು. ನನ್ನ ಕಾರನ್ನೂ ಭಾವಂದಿರ ಕಾರನ್ನೂ ಆ ಮೊದಲೇ ವಶಪಡಿಸಿಕೊಂಡು ಮಾರಿದ್ದರು."

ಜವಾಹರಲಾಲರ ತಂಗಿಯರಿಬ್ಬರೂ ಈ ಸಲ ಜೈಲಿಗೆ ಹೊರಟಿದ್ದರು. ಆನಂದಭವನದಲ್ಲಿದ್ದುದು ಸ್ವರೂಪರಾಣಿಯೊಬ್ಬಾಕೆಯೆ. ಕಮಲಾದೇವಿಯನ್ನು ಡಿಸೆಂಬರ್ ತಿಂಗಳಲ್ಲಿ ಮುಂಬಯಿಯಲ್ಲಿ ಬಿಟ್ಟು ಬಂದಿದ್ದರಷ್ಟೆ. ಕೆಲಕಾಲದ ತರುವಾಯ ಆಕೆಯು ಇನ್ನೂ ಅಸ್ವಸ್ಥತೆಯಿಂದ ನರಳುತ್ತ ಆನಂದಭವನಕ್ಕೆ ಬಂದಿದ್ದಳು.

ಜೈಲಿನೊಳಗಿದ್ದಾಗ ಜವಾಹರಲಾಲರಿಗೆ ಹೊರಗಿನ ಸಮಾಚಾರಗಳು ಸಕಾಲಕ್ಕಾಗಲಿ ಸ್ಪಷ್ಟವಾಗಿಯಾಗಲಿ ತಿಳಿಯುತ್ತಲಿರಲಿಲ್ಲ. ತಿಳಿದಷ್ಟರಿಂದ ತೃಪ್ತರಾಗಿ ದಿನಗಳನ್ನೂ ತಿಂಗಳುಗಳನ್ನೂ ಕಳೆಯುತ್ತಿದ್ದರು. ಏಪ್ರಿಲ್ ಬಂತು. 6ನೇ ತಾರೀಖಿನಿಂದ 13ನೇ ತಾರೀಖಿನವರೆಗೆ ರಾಷ್ಟ್ರೀಯವಾರ. ಆ ದಿನ ಎಲ್ಲೆಡೆಗಳಲ್ಲಿಯೂ ಜನರು 1919ನೆ ಇಸವಿಯಲ್ಲಾದ ಘಟನೆಗಳನ್ನು ಸ್ಮರಿಸಿದರು. ಇಲಾಹಾಬಾದಿನಲ್ಲಿ ಜನರದೊಂದು ದೊಡ್ಡ ಮೆರವಣಿಗೆ. ಸ್ವರೂಪರಾಣಿ ನೆಹರು ಆ ಮೆರವಣಿಗೆಯನ್ನು ಸೇರಿಕೊಂಡು ಮುಂದುಗಡೆಯಲ್ಲಿಯೆ ಇದ್ದರು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಪೋಲೀಸ್ ಅಧಿಕಾರಿಗಳು ಎದುರಾಗಿ ತಡೆದರು; ಯಾರೋ ಒಬ್ಬರು ಒಂದು ಕುರ್ಚಿಯನ್ನು ತಂದು ನಡುಬೀದಿಯಲ್ಲಿ ನಿಂತಿದ್ದ ಆಕೆಯನ್ನು ಕುಳ್ಳಿರಿಸಿದರು. ಪಕ್ಕದಲ್ಲಿಯೆ ಜವಾಹರಲಾಲರ ಕಾರ್ಯದರ್ಶಿಯೊಡನೆ ಇತರ ಆಪ್ತರೂ ನಿಂತಿದ್ದರು. ಪೋಲೀಸ್ ಅಧಿಕಾರಿಗಳು ಜನರ ಮೇಲೆ ಲಾಠಿಗಳನ್ನು ಬೀಸುವ ಮುನ್ನ ಕಾರ್ಯದರ್ಶಿಯನ್ನೂ ಜೊತೆಯಲ್ಲಿದ್ದವರನ್ನೂ ದಸ್ತಗಿರಿ ಮಾಡಿಬಿಟ್ಟರು. ಕೂಡಲೆ ಲಾಠಿಗಳ ಪ್ರಯೋಗಕ್ಕಾರಂಭ! ಜನರನ್ನು ಸಿಕ್ಕಿದಂತೆ ಹೊಡೆದರು. ಜವಾಹರಲಾಲರ ತಾಯಿಯವರನ್ನು ಕೂತಿದ್ದ ಕುರ್ಚಿಯಿಂದ ತಳ್ಳಿ ಕೆಳಕ್ಕೆ ಬಿದ್ದಕೂಡಲೆ ಬೆತ್ತದಿಂದ ತಲೆಯಮೇಲೆ ಬಾರಿಬಾರಿಗೂ ಬೀರಿದರು. ತಲೆಯಲ್ಲಿ ಗಾಯವಾಗಿ ರಕ್ತವುಕ್ಕಿ

ಕಾರಿತು; ಮೈಮೇಲೆಚ್ಚರ ತಪ್ಪಿತು. ಆ ವೇಳೆಗೆ ಜನರೂ ಗಾಯಗೊಂಡು ಬೀದಿಯಲ್ಲಿ ಅಲ್ಲಲ್ಲಿ ಬಿದ್ದಿದ್ದರು. ಪೋಲೀಸ್ ಅಧಿಕಾರಿಗಳು ಉಳಿದವರನ್ನು ಚದರಿಸುತ್ತ ಹೊಡೆಯುತ್ತ ಅಟ್ಟಿಸಿಕೊಂಡು ಓಡಿದರು. ಅಷ್ಟು ಹೊತ್ತೂ ಪ್ರಜ್ಞೆತಪ್ಪಿ ಸ್ವರೂಪರಾಣಿಯವರು ಬೀದಿಯಲ್ಲಿಯೆ ಅಸಹಾಯರಾಗಿ ಬಿದ್ದಿದ್ದರು. ಕೊನೆಗೆ ಪೋಲೀಸ್ ಅಧಿಕಾರಿಯೊಬ್ಬನು ಆಕೆಯನ್ನು ತನ್ನ ಮೋಟಾರಿನಲ್ಲೇರಿಸಿಕೊಂಡು ಆನಂದಭವನಕ್ಕೆ ಕರೆತಂದನು.

ಆ ಸಂಜೆ ಊರಲ್ಲೆಲ್ಲ ಕಾಡ್ಗಿಚ್ಚಿನಂತೆ 'ಜವಾಹರಲಾಲರ ತಾಯಿ-ಮೋತಿಲಾಲರ ಪತ್ನಿ—ಏಟನಿಂದ ಮೃತಿಪಟ್ಟರಂತೆ' ಎನ್ನುವ ಸಮಾಚಾರ ಹರಡಿತು. ಜನರಿಗೆ ಪ್ರಜ್ಞೆ ತಪ್ಪುವಷ್ಟು ದುಃಖವೂ ಆಕ್ರೋಶವೂ ಏರಿತು. ಅಹಿಂಸಾವ್ರತವೆಲ್ಲ ಮರೆತುಹೋಯಿತು. ರೋಷವಶರಾದ ಜನರು ಗುಂಪುಗುಂಪಾಗಿ ಸೇರಿ ಪೋಲೀಸ್ ಅಧಿಕಾರಿಗಳನ್ನು ಆಕ್ರಮಿಸಿದರು. ಗುಂಡುಗಳ ಬೀರಾಟ ನಡೆದು ಕೆಲವರ ಪ್ರಾಣಗಳು ಹಾರಿಹೋದವು.

ಈ ಸಂಗತಿ ನಡೆದ ಕೆಲವು ದಿನಗಳ ಅನಂತರ ಜವಾಹರಲಾಲರಿಗೆ ಸಮಾಚಾರ ತಿಳಿಯಿತು.

> "ದುರ್ಬಲೆಯೂ ವೃದ್ಧೆಯೂ ಆದ ನನ್ನ ತಾಯಿ ಗಾಯಗೊಂಡು ಬೀದಿಯಲ್ಲಿ ಬಿದ್ದಿದ್ದುದನ್ನು ಸ್ಮರಿಸಿದಾಗ ನನ್ನ ಮನಸ್ಸಿನಲ್ಲಿ ಮತ್ತಾವುದಕ್ಕೂ ಎಡೆಯಿಲ್ಲದಾಯಿತು. ನಾನೇ ಅಲ್ಲಿದ್ದಿದ್ದರೆ ಹೇಗೆ ವರ್ತಿಸುತ್ತಿದ್ದೆನೋ ಎಂತೋ! ನನ್ನ ಅಹಿಂಸಾ ವ್ರತಪಾಲನೆಯೆಷ್ಟುದೂರ ನಡೆಯುತ್ತಿತ್ತು? ಪ್ರಾಯಶಃ ಆಕೆಯ ಗಾಯವನ್ನು ಕಂಡಾಗ ಹನ್ನೆರಡು ವರ್ಷಗಳಿಂದ ಕಷ್ಟಪಟ್ಟು ಕಲಿತಿದ್ದ ಪಾಠವೆಲ್ಲವೂ ಮಾಯವಾಗುತ್ತಿತ್ತು. ಪ್ರಾಯಶಃ ಯಾವ ಪರಿಣಾಮವನ್ನೂ ಲೆಕ್ಕಿಸದೆ ಉನ್ಮತ್ತತೆಯಿಂದ ವರ್ತಿಸುತ್ತಿದ್ದೆನೇನೋ!"

ಸ್ವರೂಪರಾಣಿದೇವಿ ನಿದಾನವಾಗಿ ಚೇತರಿಸಿಕೊಂಡರು. ಮಗನನ್ನು ಬರೈಲಿ ಜೈಲಿನಲ್ಲಿ ಕಂಡಾಗ "ನನ್ಹಾ!* ನಮ್ಮ ವಾಲಂಟಿಯರ್ ಮಕ್ಕಳಂತೆ ನಾನೂ ನನ್ನ ಪಾಲಿನ ಏಟು ತಿಂದೆ!" ಎನ್ನುತ್ತ ಸಂತೋಷ

* ನನ್ಹಾ = ಪುಟ್ಟ; ಮಕ್ಕಳನ್ನು ಕರೆವ ಮುದ್ದುಮಾತು. ಜವಾಹರರನ್ನು ಮನೆಯಲ್ಲಿ ಕರೆಯುತ್ತಿದ್ದ ರೀತಿ.

ವನ್ನೂ ಹೆಮ್ಮೆಯನ್ನೂ ಬೀರಿದರು. ಆದರೆ ವಾಸ್ತವವಾಗಿ ಆಕೆಗೆ ಗುಣ ವಾಗಲೇ ಇಲ್ಲ. ಜಾಲಿಯನ್‍ವಾಲಾಬಾಗ್ ಸ್ಮಾರಕದಿನದಲ್ಲಿ ನಡೆದುದು ಆಕೆಯ ಆರೋಗ್ಯವನ್ನೇ ಕೆಡಿಸಿತ್ತು. ಹೊರಗೆ ಕಾಣದಂತಿದ್ದ ರೋಗ ಬರಬರುತ್ತ ಪ್ರಬಲವಾಗಲು ಆಸ್ಪದ ಸಿಕ್ಕಿತು.

## 5. ಬರ್ರೈಲಿ ಡೇರಾಡೂನ್ ಜೈಲುಗಳು

ಇರಾದತ್‍ಗಂಜಿನಿಂದ ಜವಾಹರಲಾಲರನ್ನೂ ಶೇರ್ವಾನಿಯವ ರನ್ನೂ ನೈನಿ ಜೈಲಿಗೊಯ್ದರಷ್ಟೆ. ಕೆಲವು ದಿನಗಳ ತರುವಾಯ ಜೈಲಿ ನೊಳಗೇ ವಿಚಾರಣೆಯೆಂಬುದು ನಡೆಯಿತು. ಇಬ್ಬರದೂ ಒಂದೇ ಬಗೆಯ ತಪ್ಪಿತ. ಆದರೆ ಶೇರ್ವಾನಿಯವರಿಗೆ 2 ತಿಂಗಳ ಕಠಿಣ ಸಜಾ+150 ರೂ. ದಂಡ, ಜವಾಹರಲಾಲರಿಗಾದರೆ 3 ವರ್ಷ ಕಠಿಣ ಸಜಾ+500 ರೂ. ದಂಡ ನಿಶ್ಚಯವಾಯಿತು. ಕೋರ್ಟಿನಲ್ಲೇ ಶೇರ್ವಾನಿಯವರು "ಇದೇತಕ್ಕೀಪಕ್ಷಪಾತ? ಕೋಮುವಾರು ಪಕ್ಷ ಪಾತವೋ!" ಎಂದು ಹಾಸ್ಯಪೂರ್ವಕವಾಗಿ ಕೇಳಿಬಿಟ್ಟರು.

ನೈನಿ ಜೈಲಿನಲ್ಲಿ ಒಂದೂವರೆ ತಿಂಗಳೋ ಆರು ವಾರಗಳೋ ಕಳೆದ ಕೂಡಲೆ ಜವಾಹರಲಾಲರನ್ನು ಬರ್ರೈಲಿ ಜೈಲಿಗೆ ಸಾಗಿಸಿದರು. ಆರೋಗ್ಯ ಕೆಟ್ಟಿದ್ದು ನಿತ್ಯವೂ ಜ್ವರ ಬರುತ್ತಿತ್ತು. ಹಾಗೆಯೆ ಬರ್ರೈಲಿ ಜೈಲಿನಲ್ಲಿ ಬೇಸಿಗೆಯ ತಿಂಗಳುಗಳು ಕಳೆದವು. ನಾಲ್ಕು ತಿಂಗಳಾದ ಮೇಲೆ ಪುನಃ ಜವಾಹರಲಾಲರನ್ನು ಅಲ್ಲಿಂದ ಕದಲಿಸಿ ಡೇರಾಡೂನ್ ಜೈಲಿಗೆ ಕಳುಹಿಸಿ ದರು. ಹಿಮವಂತನ ಒತ್ತಿನಲ್ಲಿರುವ ಆ ಜೈಲಿನಲ್ಲಿ ತಂಪಾಗಿಯೇನೋ ಇತ್ತು. ಅಲ್ಲಿಯೆ ಜವಾಹರಲಾಲರು ಹದಿನಾಲ್ಕುವರೆ ತಿಂಗಳುಗಳನ್ನು ಕಳೆಯಬೇಕಾಯಿತು.

ಅಸಹಯೋಗ ಚಳುವಳಿಯು ನಡೆಯುತ್ತಲೇ ಇತ್ತು. ಸ್ಪಷ್ಟ ವಾಗಿಯೂ ವಿವರವಾಗಿಯೂ ಸಮಾಚಾರ ತಿಳಿಯದಿದ್ದರೂ ಸ್ಥೂಲ ವಾಗಿಯಾದರೂ ಜೈಲಿನಲ್ಲಿ ದೊರಕುತ್ತಿದ್ದ ವಾರಪತ್ರಿಕೆಯಿಂದ ತಿಳಿ ಯುತಲಿತ್ತು. ಗುಜರಾಥ, ಕರ್ಣಾಟಕ ಪ್ರಾಂತಗಳಲ್ಲಿ ಕಂದಾಯ ಕೊಡದಿರುವ ಪ್ರಯತ್ನ ತಕ್ಕಮಟ್ಟಿಗೆ ನಡೆದಿತ್ತು. ನಾಯಕರೆಲ್ಲರೂ

ಸೆರೆಯಲ್ಲಿ ಸಿಕ್ಕಿದ ಮೇಲೆ ಉಳಿದವರು ಧೈರ್ಯವಹಿಸಿ ಆಂದೋಳನವನ್ನು ನಡೆಸುತ್ತಿದ್ದರು. ವರ್ತಮಾನ ಪತ್ರಿಕೆಗಳೆಷ್ಟೋ ನಿರ್ಬಂಧಕ್ಕೆ ಸಿಕ್ಕಿದ್ದ ಕಾರಣದಿಂದ ಸಮಾಚಾರವೆಂಬುದು ದೊರಕುವುದೇ ಬರಬರುತ್ತ ಕಷ್ಟವಾಯಿತು. ಆಸ್ತಿ ಪಾಸ್ತಿಗಳು ನಷ್ಟವಾದಾವೆಂಬ ಭಯದಿಂದ ನೆಮ್ಮದಿ ಕಂಡಿದ್ದ ಜನರು ಹಿಂದಾಗಿದ್ದರು. ಸರ್ಕಾರದವರು ಜೈಲುಗಳ ಹೊರಗೂ ಒಳಗೂ ಲಾಠಿ ಪ್ರಯೋಗವನ್ನೇ ಪ್ರೋತ್ಸಾಹಿಸುತ್ತ ಅಸಹಕಾರಿಗಳ ಧೈರ್ಯವನ್ನು ಮುರಿಯುವ ಪ್ರಯತ್ನದಲ್ಲಿದ್ದರು. ಜೈಲುಗಳ ಮುಖ್ಯಾಧಿಕಾರಿ ತನ್ನ ಕೈಕೆಳಗಿನವರಿಗೆ "ಸತ್ಯಾಗ್ರಹಿಗಳನ್ನೂ ರಾಜಕೀಯ ಬಂದಿಗಳನ್ನೂ ಕಠಿನ ರೀತಿಯಿಂದಲೇ ಕಾಣತಕ್ಕದ್ದು" ಎಂಬಾಜ್ಞೆ ಕೊಟ್ಟಿದ್ದನು. ಯಾವುದೋ ಒಂದು ಬಂದೀಖಾನೆಗೆ ನೈಟ್ಹುಡ್ ಬಿರುದು ಪಡೆದ ದೊಡ್ಡ ಮನುಷ್ಯನೊಬ್ಬನು ಬಂದು ಎಲ್ಲವನ್ನೂ ಸಮೀಕ್ಷಿಸಿ ಕಡೆಗೆ ಪುಸ್ತಕದಲ್ಲಿ "ಈ ಬಂದೀಖಾನೆಯ ಅಧಿಕಾರಿ ತನ್ನ ಆಡಳಿತವನ್ನು ಸಾಮರ್ಥ್ಯದಿಂದಲೂ ದಯಾದಾಕ್ಷಿಣ್ಯಗಳಿಂದಲೂ ನಿರ್ವಹಿಸುತ್ತಲಿದಾನೆ" ಎಂದು ಬರೆಯಲು ಸಿದ್ಧನಾದನಂತೆ. ಆಗಲಾ ಅಧಿಕಾರಿ "ಸ್ವಾಮಿ ಸ್ವಾಮಿ! ದಯಾದಾಕ್ಷಿಣ್ಯಗಳಿಂದಲೂ ಎಂಬುದನ್ನು ಬಿಟ್ಟು ಬಿಡಿ. ನನಗೊಳ್ಳೆಯದಾಗುವುದಿಲ್ಲ" ಎಂದು ಬೇಡಿಕೊಂಡನಂತೆ. ಆದರೆ ಆ ದೊಡ್ಡ ಮನುಷ್ಯನೊಪ್ಪದೆ ಆ ಮಾತುಗಳನ್ನು ಬರೆದೇ ಬರೆದನು. ಪರಿಣಾಮವೇನಾದುದೆಂದರೆ ಆ ಅಧಿಕಾರಿಗೆ ಯಾವುದೋ ಅಭುಕ್ತಮೂಲೆಗೆ ವರ್ಗ!

ಅದೇ ವೇಳೆಯಲ್ಲಿ ಲಂಡನ್ನಿನಲ್ಲಿ ಮೂರನೆ ಚಕ್ರಗೋಷ್ಠಿ. ಅದರ ಅಂಗಗಳಾಗಿಯೋ ಉಪಾಂಗಗಳಾಗಿಯೋ ಉಪಸಭೆಗಳು, ಅವುಗಳಲ್ಲಿ ಸದಸ್ಯರಾದವರಿಗೆ ಉಚಿತವಾದ ಸಮುದ್ರಯಾನ ಸೌಕರ್ಯಗಳು. ಎಷ್ಟೋ ಜನರು ವಿಲಾಯತಿಯಷ್ಟು ದೂರ ಸ್ವಂತ ವೆಚ್ಚವಿಲ್ಲದೆಯೆ ಪ್ರಯಾಣಮಾಡಿ ತಮ್ಮ ದೇಶಭಕ್ತಿಯನ್ನು ಮೆರೆಸಿದರು! ಸರ್ಕಾರದವರೊದಗಿಸಿದ ಪ್ರಯಾಣದ ವೆಚ್ಚ ಸಾಲದೆಂದು ಗೊಣಗುಟ್ಟಿದ ಪುಣ್ಯಶಾಲಿಗಳೂ ಆ ಗುಂಪಿನಲ್ಲಿದ್ದರಂತೆ! ಭಾರತರಾಷ್ಟ್ರ ರೂಪರೇಖೆಗಳನ್ನು ತಿದ್ದುವುದು ಈ ಗೋಷ್ಠಿಗಳ ಕೆಲಸ. ಮನೆಗೆ ಬೆಂಕಿ ಬಿದ್ದು ಉರಿಯು

ತ್ತಿದ್ದಾಗ ಇನ್‌ಷೂರೆನ್ಸ್ ಮಾಡಬೇಕೆಂದು ಕಚೇರಿಯನ್ನು ಹುಡುಕಿಕೊಂಡು ಹೊರಟಂತಿತ್ತು ಇವರ ಕೆಲಸ.

ಜವಾಹರಲಾಲರಿಗೆ ಜೈಲಿನಲ್ಲಿ ಸೇರಿದ ತರುವಾಯ ಕಾಂಗ್ರೆಸ್ ಪ್ರಯತ್ನಕ್ಕೆ ಕ್ಷಿಪ್ರತೆಯಿಂದ ಜಯಲಾಭವಾದರೆ ಕೆಲಸ ಕೆಟ್ಟೀತೆಂದು ಮೊದಮೊದಲು ತೋರಿತ್ತು. ಜನಸಾಮಾನ್ಯರು ಎಷ್ಟೋ ನಷ್ಟಗಳನ್ನು ಸಹಿಸಿ ಸಾಧಿಸಿದ ಗೆಲುವಿನ ಫಲಿತಾರ್ಥವು ಇತರರಿಗೆ ಸೇರೀತೆಂಬ ಚಿಂತೆ. ಆದರೆ 1932 ರಲ್ಲಿ ಸರ್ಕಾರದವರು ಮೊದಲಿನಿಂದಲೂ ಮೇಲ್ಗೈಯಾಗಿದ್ದರು; ಆಸ್ತಿಪಾಸ್ತಿಗಳನ್ನುಳ್ಳ ಜನರ ಬೆಂಬಲವನ್ನೂ ತಾಟಸ್ಥ್ಯವನ್ನೂ ಸಾಧಿಸಿದರು. ಕಾಂಗ್ರೆಸ್ ಗುಂಪಿನಲ್ಲಿ ನಾಯಕರಾಗಬಹುದಾದವರು ನಿರ್ಬಂಧದಲ್ಲಿ ಸಿಕ್ಕಿದಮೇಲೆ ಉಳಿದವರು ಸಾಧ್ಯವಾದಮಟ್ಟಿಗೂ ನಡೆಸುತ್ತಿದ್ದು 1932 ಸೆಪ್ಟೆಂಬರ್ ತಿಂಗಳಲ್ಲಿ ಮಹಾತ್ಮಾಜಿಯವರು ಉಪವಾಸವನ್ನಿಟ್ಟುಕೊಂಡಾಗ ಉಸಿರಿಲ್ಲದವರಂತಾದರು. ಎರಡು ವರ್ಷ ಕಠಿಣ ಸಜಕ್ಕೆ ಗುರಿಯಾಗಿ ತಿಂಗಳಿಗೊಮ್ಮೆ ಇಷ್ಟಮಿತ್ರರ ಸಂದರ್ಶನವನ್ನೂ ಪಕ್ಷಕ್ಕೊಮ್ಮೆ ಕಾಗದವನ್ನೂ ನಿರೀಕ್ಷಿಸಬಹುದಾಗಿದ್ದ ಜವಾಹರಲಾಲರ ಮನಸ್ಸಿನಲ್ಲಿ ಆಂದೋಳನದ ವಿಚಾರವೇ ವಿಶೇಷವಾಗಿತ್ತು. ಆದರೆ ದೇಶದ ಇತಿಹಾಸಕ್ಕೆ ಸೇರತಕ್ಕ ಆ ಭಾಗಗಳನ್ನು ಬಿಟ್ಟು ಜೈಲುಗಳಲ್ಲಿ ಆತನ ಚಿತ್ತವೃತ್ತಿಯನ್ನು ಮಾತ್ರ ಕಾಣತಕ್ಕವರು ನಾವು ಸದ್ಯ.

ನೈನಿ ಜೈಲಿನಲ್ಲಿ ಹಲಕೆಲವರ ಜೊತೆಯಿತ್ತು. ಬರ್ೈಲಿ ಬಂದೀಖಾನೆಯಲ್ಲಿಯೂ ಕೆಲವರು ಸಂಗಡಿಗರಿದ್ದರು. ಡೇರಾಡೂನಿಗೆ ಹೊರಟಾಗ ಗೋವಿಂದವಲ್ಲಭ ಪಂತರೂ ಆನಂದಸಿಂಗರೂ ಸ್ವಲ್ಪ ಕಾಲ ಮಾತ್ರ ಜೊತೆಯಲ್ಲಿದ್ದರು. 1933ನೆ ವರ್ಷದ ಎಂಟು ತಿಂಗಳ ಕಾಲವನ್ನು ಒಂಟಿಯಾಗಿಯೆ ಕಳೆಯಬೇಕಾಯಿತು.

ಬರ್ೈಲಿ ಜೈಲಿಗೆ ಮುಖ್ಯಾಧಿಕಾರಿ ಒಬ್ಬ ಇಂಗ್ಲಿಷ್ ಜಾತಿಯವನು. ಅಲ್ಲಿಂದ ಡೇರಾಡೂನಿಗೆ ಹೊರಡುವ ವೇಳೆಯಲ್ಲಿ ಆತನು ಜವಾಹರಲಾಲರ ಕೈಗೆ ಸಂಕೋಚದಿಂದ ಜರ್ಮನ್ ಭಾಷೆಯ ಚಿತ್ರಪತ್ರಿಕೆಗಳನ್ನು ಕೊಡುತ್ತ "ನೀವು ಜರ್ಮನ್ ಕಲಿಯುತ್ತಿರುವಿರಂತೆ. ನಿಮಗೆ ಇವು ಉಪಯೋಗವಾಗಬಹುದು" ಎಂದನು. ಅದನ್ನು ಸ್ಮರಿಸಿ ಜವಾ

ಹರಲಾಲರು "ಆತನನ್ನು ನಾನು ಹಿಂದೆಂದೂ ಕಂಡಿರಲಿಲ್ಲ; ಇತ್ತೀಚಿಗೂ ಕಂಡಿಲ್ಲ. ಆತನ ಹೆಸರನ್ನು ಕೂಡ ನಾನರಿಯೆ. ಇಷ್ಟು ಸಹಜವಾದ ದಾಕ್ಷಿಣ್ಯವನ್ನಾತ ತೋರಿದ್ದಕ್ಕಾಗಿ ನನ್ನಲ್ಲಿ ಕೃತಜ್ಞತೆ ಮೂಡಿ ಮನ ಕರಗಿತು" ಎಂದು ಬರೆದಿದ್ದಾರೆ.

"ನನ್ನ ಮಟ್ಟಿಗೆ ಹೇಳುವುದಾದರೆ ನಾನು ಅದೃಷ್ಟಶಾಲಿ. ನನ್ನ ದೇಶಬಂಧುಗಳೂ ಇಂಗ್ಲಿಷ್ ಜಾತಿಯವರೂ ನನ್ನಲ್ಲಿ ಗೌರವವನ್ನೇ ಕಾಣಿಸಿದ್ದಾರೆ. ನನ್ನನ್ನು ದಸ್ತಗಿರಿ ಮಾಡಿ ಜೈಲುಗಳಿಗೊಯ್ದ ಪೋಲೀಸಧಿಕಾರಿಗಳೂ ಜೈಲಿನಲ್ಲಿ ವಿಚಾರಿಸಿಕೊಂಡ ಹುದ್ದೆದಾರರೂ ನೌಕರರೂ ದಯಾದಾಕ್ಷಿಣ್ಯಗಳಿಂದ ವರ್ತಿಸಿರುತ್ತಾರೆ. ಇದರಿಂದ ಜೈಲಿನ ನಿರ್ಬಂಧದ ಹಿಂಸೆ ಅಷ್ಟು ಕ್ರೂರವಾಗಿ ಕಾಣಲಿಲ್ಲ. ಸ್ವಂತ ದೇಶೀಯರು ನನ್ನಲ್ಲಿ ಗೌರವ ತೋರುವುದು ಹೆಚ್ಚಲ್ಲ. ಇಂಗ್ಲಿಷ್ ಜಾತಿಯವರು ಆ ಬಗೆಯ ದಾಕ್ಷಿಣ್ಯವನ್ನು ಕಾಣಿಸಲು ಪ್ರಾಯಶಃ ಇಂಗ್ಲಂಡಿನಲ್ಲಿ ಶಿಕ್ಷಣಪಡೆದವನಾದುದರಿಂದ ತಮ್ಮಂತೆಯೇ ಸಭ್ಯರಾಶಿಗೆ ಸೇರಿದವನೆಂಬ ಭಾವನೆ ಕಾರಣವಿರಬಹುದು. ಇದನ್ನು ಸ್ಮರಿಸಿ ಇತರರೊಂದಿಗೆ ಹೋಲಿಸಿಕೊಂಡಾಗಲೆಲ್ಲ ಮನಸ್ಸಿನಲ್ಲಿ ಸಂಕೋಚವೂ ನಾಚಿಕೆಯೂ ತೋರುವುದು.

ಇಂತಹ ಅನುಕೂಲ್ಯಗಳಿದ್ದಾಗ್ಗೂ ಜೈಲೆಂಬುದು ಜೈಲೇ. ಕೆಲವು ವೇಳೆ ಸಹಿಸಲಸಾಧ್ಯವಾಗುತ್ತಿತ್ತು. ಅಸತ್ಯ, ಲಂಚಕೋರತನ, ಮೃಗವರ್ತನೆಗಳೇ ತುಂಬಿದ ಪರಿಸ್ಥಿತಿ. ಗಲೀಜೆನಿಸುವ ಬೈಗಳಗಳು ಅಥವಾ ಹೇಯವೆನಿಸುವ ದೈನ್ಯ. ಸೂಕ್ಷ್ಮ ಮನಸ್ಸುಳ್ಳವರಿಗೆ ಸದಾ ಹಿಂಸೆ! ಯಾವ ಸಣ್ಣ ಅಂಶಕ್ಕಾದರೂ ಚಿತ್ತಸ್ವಾಸ್ಥ್ಯ ನಷ್ಟವಾಗಬಹುದು. ಕಾಗದದಲ್ಲಿ ಬಂದ ಕೆಟ್ಟ ಸಮಾಚಾರವೋ ವರ್ತಮಾನಪತ್ರಿಕೆಯಲ್ಲಿ ಕಂಡ ದುಃಖದ ಸುದ್ದಿಯೋ ಚಿಂತೆಯನ್ನೂ ಆಕ್ರೋಶವನ್ನೂ ಹುಟ್ಟಿಸಿ ಕೆಲಕಾಲ ರೋಗಿಯಂತೆಯೇ ಪರಿಣಮಿಸುವುದು. ಹೊರಗಾದರೆ ಅಂತಹ ವೇಳೆಗಳಲ್ಲಿ ಏನಾದರೂ ಕೆಲಸವಿರುತ್ತದೆ; ಆ ಕೆಲಸದ ಯೋಚನೆಯಲ್ಲಿ ಈ ಚಿಂತೆ ಮರೆಯುವುದು. ಜೈಲಿನಲ್ಲಾದರೆ ಎಲ್ಲವನ್ನೂ ಮನಸ್ಸಿನಲ್ಲಿಯೇ ಇಟ್ಟುಕೊಂಡು ಪುನಃ ಪುನಃ ತಿರುವಿ ಹಾಕಿ ಕೊಳೆಸಬೇಕು. ಮನಸ್ಸಿಗೆ ರೋಗವಾಗಿ ದೃಷ್ಟಿಯೆ ಕೆಡುವುದು. ಜೈಲಿನಲ್ಲಿ ಕಾಹಿಲೆ ಬಿದ್ದರೆ ಈ ಕಾರಣದಿಂದ ಬಲುಸಂಕಟವಾಗುವುದು.

ಜೈಲಿನಲ್ಲಿರುವಾಗ ಕಾಯಕಷ್ಟವನ್ನೂ ಬುದ್ಧಿಯ ವ್ಯವಸಾಯವನ್ನೂ ಇಟ್ಟುಕೊಳ್ಳದಿದ್ದರೆ ಹಾನಿಯೆಂಬುದು ಸಿದ್ಧ. ಹಾಗೂ ಹೀಗೂ ನಾನು ತಕ್ಕಷ್ಟು ಶರೀರ ವ್ಯಾಯಾಮವನ್ನೂ ಓದುಬರಹಗಳನ್ನೂ ಇಟ್ಟುಕೊಂಡು

ನಿತ್ಯಕರ್ಮಗಳನ್ನು ಗೊತ್ತುಮಾಡಿಕೊಂಡು ಕ್ರಮವಾಗಿ ನಡೆಸಿದೆ. ಶುಚಿತ್ವವನ್ನೂ ಪಾಲಿಸಿಕೊಳ್ಳುವ ಅನುಕೂಲವಿದ್ದುದರಿಂದ ಸಂಜೆಯಾದ ಬಳಿಕ ಆಯಾಸ ಕಂಡವನಾಗಿ ಸುಖದಿಂದ ನಿದ್ದೆಮಾಡುತ್ತಿದ್ದೆ. ಹೀಗೆಯೇ ದಿನಗಳೊಂದೊಂದಾಗಿ ಕಳೆದುವು; ವಾರಗಳೂ ಹಾಗೆಯೆ, ತಿಂಗಳುಗಳೂ ಹಾಗೆಯೆ. ಒಂದೊಂದು ತಿಂಗಳು ಕಳೆಯುದೆ ಹಾಗೆಯೆ ನಿಂತಂತೆ ಮನಸ್ಸಿಗೆ ತೋರಿ ಹಿಂಸೆಯಾಗುತ್ತಿತ್ತು. ಆಗ ಬಲು ರೇಜಿಗೆಯಾಗಿ ಪ್ರತಿಯೊಂದಕ್ಕೂ ಪ್ರತಿಯೊಬ್ಬರ ಮೇಲೆಯೂ ಕೋಪ ತಾಳುತ್ತಿದ್ದೆ. ಸಂಗಡಿಗರ ಮೇಲೆ, ಜೈಲ್ ನೌಕರರ ಮೇಲೆ, ಹೊರಗಿನವರ ಮೇಲೆ, ಬ್ರಿಟಿಷ್ ಸಾಮ್ರಾಜ್ಯದ ಮೇಲೆ; ಎಲ್ಲಕ್ಕೂ ಹೆಚ್ಚಾಗಿ ನನ್ನ ಮೇಲೆಯೇ ಕೋಪಿಸಿಕೊಳ್ಳುತ್ತಿದ್ದೆ. ನನ್ನ ಅದೃಷ್ಟ; ಇಂತಹ ದೌರ್ಬಲ್ಯ ಸಮಯಗಳಿಂದ ಬೇಗನೆ ಪಾರಾಗಿ ಚೇತರಿಸಿಕೊಳ್ಳುತ್ತಿದ್ದೆ.

ಇಷ್ಟಮಿತ್ರರ ಸಂದರ್ಶನ ದಿನ ಜೈಲಿನಲ್ಲಿರುವಾಗ ಬಲು ಮುಖ್ಯ. ಆ ದಿನ ಬಂದೀತೇ ಎಂದು ಕಾಯುತ್ತ ದಿನಗಳನ್ನೆಣಿಸುತ್ತಿರುವಾಗ ಎಷ್ಟು ಯೋಚನೆ, ಎಷ್ಟು ಆಸೆ! ಸಂದರ್ಶನ ಮುಗಿದ ಕೂಡಲೆ ತದ್ವಿರೋಧಾವಸ್ಥೆ; ಜಗತ್ತೇ ಶೂನ್ಯವೆಂದಹಾಗಾಗುವುದು. ಆ ಸಂದರ್ಶನ ಸಮಯದಲ್ಲಿ ಯಾವ ಕಾರಣದಿಂದಲಾದರೂ ಉಲ್ಲಾಸಭಂಗವಾದರೆ ತರುವಾಯ ಅತಿಶಯವಾದ ಖಿನ್ನತೆ. ಆ ವೇಳೆಗಳಲ್ಲಿ ಜೈಲಿನ ಅಧಿಕಾರಿಗಳು ಅಲ್ಲಿಯೇ ಇರುತ್ತಿದ್ದರು; ಬರೈಲಿ ಜೈಲಿನಲ್ಲಿ ಆಯಧಿಕಾರಿಗಳಲ್ಲದೆ ಸಿ.ಐ.ಡಿ. ಯೊಬ್ಬಾತ ಪೆನ್ಸಿಲ್ ಕಾಗದ ಹಿಡಿದು ಆಡಿದ ಮಾತೆಲ್ಲವನ್ನೂ ಬರೆದಿಟ್ಟುಕೊಳ್ಳುತ್ತಿದ್ದನು. ಇದರಿಂದ ಬಲು ಹಿಂಸೆ ತೋರಿತು.

ಇಲಾಹಾಬಾದ್ ಜಿಲ್ಲಾ ಜೈಲಿನಲ್ಲಿ ನಮ್ಮ ಭಾವನನ್ನಿಟ್ಟಿದ್ದರು. ಅವರನ್ನು ಕಾಣಬೇಕೆಂದು ನಮ್ಮಮ್ಮ ಕಮಲೆಯನ್ನೂ ಇಂದಿರೆಯನ್ನೂ ಕರೆದುಕೊಂಡು ಹೊರಟದ್ದಾಗ ಯಾವ ತಪ್ಪಿತವೂ ಇಲ್ಲದೆ ಜೈಲಿನ ಅಧಿಕಾರಿ ಗೌರವ ಹೀನವಾದ ಮಾತುಗಳನ್ನಾಡಿ ಅವರನ್ನು ಹೊರಡಿಸಿದ್ದನು. ಇದನ್ನು ಕೇಳಿ ನನಗೆ ಬಹಳ ವ್ಯಥೆಯಾಯಿತು. ಜೈಲಿನಧಿಕಾರಿಗಳು ನಮ್ಮಮ್ಮನನ್ನಾರೀತಿ ಕಾಣಲಾಸ್ಪದವನ್ನು ಕೊಡಬಾರದೆಂದುಕೊಂಡು ನಾನು ಸಂದರ್ಶನಗಳೇ ಬೇಡವೆಂದು ಏಳು ತಿಂಗಳುಗಳನ್ನು ಕಳೆದೆ. ಆ ತರುವಾಯ ಮತ್ತೆ ಸಂದರ್ಶನಗಳನ್ನಿಟ್ಟುಕೊಂಡಾಗ ನಮ್ಮವರು ಬಂದ ವೇಳೆಯಲ್ಲಿ ನಾನು ಸಂತೋಷದಿಂದ ಹುಚ್ಚನಂತೆಯೆ ಆದೆ. ನನ್ನ ತಂಗಿಯ ಪುಟ್ಟ ಮಕ್ಕಳೂ ಆಗ ಬಂದಿದ್ದವು. ಆ ಮಕ್ಕಳಲ್ಲೊಂದು ಹಿಂದಿನ ಕಾಲದ ಆಟವನ್ನು ಮರೆಯದೆ ನನ್ನ ಭುಜದ ಮೇಲೇರಿಕೊಳ್ಳುವ ಚೇಷ್ಟೆಯ ಹಟ ಹಿಡಿದಾಗ ನಾನು ಅಳುವನ್ನು ತಡೆಯಲಾರದೆಹೋದೆ.

ಸಂದರ್ಶನಗಳಿಲ್ಲದಿದ್ದಾಗ ಕಾಗದಗಳನ್ನು ಆಸೆಯಿಂದ ನಿರೀಕ್ಷಿಸುತ್ತಿದ್ದೆ. ಅಂದುಕೊಂಡ ದಿನ ಕಾಗದ ಬಾರದಿದ್ದರೆ ಎಷ್ಟೋ ಕಳವಳ. ಕಡೆಗೂ ಕಾಗದ ಕೈಗೆ ಬಂದಾಗ ಅದನ್ನು ಬೇಗ ಬಿಚ್ಚಲು ಮನ ಬಾರದು. ಕಯ್ಯಲ್ಲೇ ಹಿಡಿದು ತಿರುಗಿಸಿ ಹಾಗೂ ಹೀಗೂ ನೋಡುತ್ತ ಒಡೆಯದೆಯೇ ಇಟ್ಟುಕೊಂಡು ಮನಸ್ಸಿನಲ್ಲಿ ಏನೇನನ್ನೋ ಭಾವಿಸಿಕೊಳ್ಳುತ್ತಿದ್ದೆ. ಅಹಿತವಾದ ಸುದ್ದಿಯೇನಾದರೂ ಇದೆಯೋ ಎಂತೋ ಎಂಬ ಶಂಕೆಬೇರೆ. ಕಾಗದ ಬರುವುದೆಂದರೆ ಜೈಲಿನಲ್ಲಿ ಬಲು ದೊಡ್ಡ ಸಂಗತಿ. ಸ್ತಬ್ಧವಾಗಿರುವೆಡೆಯಲ್ಲಿ ಏನೋ ಮುತ್ತಿಕೊಂಡು ಬಂದಂತಾಗಿ ಒಂದೆರಡು ದಿನಗಳ ಕಾಲ ಮಾಡುವ ಕೆಲಸದಲ್ಲಿ ಗಮನವೇ ಇಲ್ಲದಿರುತ್ತಿತ್ತು.

1933 ಜನವರಿಯಿಂದ ನಾನೊಬ್ಬೊಂಟಿಯಾದೆ. ಎಂಟು ತಿಂಗಳ ಕಾಲ ಡೇರಾಡೂಣ್ ಜೈಲಿನಲ್ಲಿ ಮಾತನಾಡಿಸುವುದಕ್ಕೆ ಯಾರೂ ಇಲ್ಲದಂತೆಯೆ ಕಳೆದೆ. ದಿನಕ್ಕೆ ಕೆಲವು ನಿಮಿಷಗಳಷ್ಟು ಹೊತ್ತು ಜೈಲ್ ನೌಕರನಾರಾದರೊಬ್ಬನೊಡನೆ ಮಾತೆಷ್ಟೋ ಅಷ್ಟು ಮಾತ್ರವೇ. ಇದನ್ನು ಏಕಾಂತ ನಿರ್ಬಂಧವೆನ್ನುವುದಕ್ಕಾಗದಿದ್ದರೂ ಅದರಂತೆಯೆ ಇತ್ತು. ಇಷ್ಟಮಿತ್ರರ ಸಂದರ್ಶನವನ್ನು ಪುನಃ ಇಟ್ಟುಕೊಂಡ ಕಾರಣದಿಂದ ಸ್ವಲ್ಪ ಮಾತ್ರ ಮನಸ್ಸು ಹಗುರಗೊಳ್ಳುತ್ತಿತ್ತು. ಹೊರಗಿನಿಂದ ಬಂದ ಹೂವುಗಳನ್ನೂ ಕೆಲವು ಫೋಟೋಗಳನ್ನೂ ಇಟ್ಟುಕೊಳ್ಳಲು ನನ್ನ ವಿಷಯದಲ್ಲಿ ಮಾತ್ರ ಅನುಮತಿಯನ್ನು ಕೊಟ್ಟಿದ್ದರು. ಹಾಗೆ ಇಟ್ಟುಕೊಳ್ಳುವುದು ಜೈಲ್ ನಿಯಮಗಳಿಗೆ ವಿರುದ್ಧ. ನನ್ನ ಮಿತ್ರನೊಬ್ಬನು ತಾನಿದ್ದೆಡೆಯಲ್ಲಿ ಹಲ ಕೆಲವು ಸಾಮಾನುಗಳನ್ನು ಒಂದು ಕ್ರಮದಲ್ಲಿಟ್ಟಿದ್ದುದನ್ನು ಕಂಡು ಜೈಲಿನ ಅಧಿಕಾರಿ ಅಕ್ಷೇಪಿಸಿ "ಭೋಗ್ಯ ವಸ್ತುಗಳನ್ನು ಚಿತ್ತಾಕರ್ಷಕ ರೀತಿಯಲ್ಲಿಟ್ಟು ಅಲಂಕಾರಮಾಡಕೂಡದು" ಎಂದಿದ್ದನು. ಆ ಭೋಗ್ಯ ವಸ್ತುಗಳಾದರೂ ಏನು? ಒಂದು ಬಾಚಣಿಗೆ, ಒಂದು ಬ್ರಷ್, ಎಣ್ಣೆಯ ಶೀಸೆ, ಮಸಿ ಕುಡಿಕೆ, ಟೂತ್ ಪೇಸ್ಟ್, ಟೂತ್ ಬ್ರಷ್!

ಜೈಲಿನಲ್ಲಿರುವಾಗ ಎಷ್ಟು ಅಲ್ಪ ವಸ್ತುವಾದರೂ ತನ್ನದೆಂಬ ಅಭಿಮಾನವೂ ಹೆಚ್ಚು, ಎಚ್ಚರಿಕೆಯೂ ಹೆಚ್ಚು. ಹೋದರೆ ಪುನಃ ಸಿಕ್ಕುವುದಿಲ್ಲವೆಂಬುದಲ್ಲದೆ ಅವುಗಳನ್ನು ಬಿಟ್ಟರೆ ಬೇರೇನೂ ಇರುವುದಿಲ್ಲವೆಂಬ ಆಲೋಚನೆ ಅದಕ್ಕೆ ಮೂಲ. ಜೈಲ್ ಹೊರಗಿರುವಾಗ ನಿರ್ಲಕ್ಷ್ಯದಿಂದ ಬಿಸಾಡುವ ವಸ್ತುವನ್ನು ಜೈಲಿನೊಳಗಿರುವಾಗ ಜೋಪಾನವಾಗಿ ಎತ್ತಿಟ್ಟುಕೊಂಡು ಕಾಪಾಡುತ್ತಿರುತ್ತೇವೆ. ಎತ್ತಿಟ್ಟುಕೊಂಡಿರಲು ಏನೂ ಇಲ್ಲದಿರುವಾಗಲೂ ಸ್ವಂತವಾದ ಆಸ್ತಿಯಾವುದಾದರೂ ಇರಬೇಕೆಂಬ ಚಾಪಲ್ಯ!

ಕೆಲವೇಳೆ ಶರೀರ ಸೌಖ್ಯಕ್ಕೋ ಉಲ್ಲಾಸಕರವಾದ ಸ್ಥಳ ದರ್ಶನಕ್ಕೋ ಮಿತ್ರರ ಸಂಗಕ್ಕೋ ಸರಸ ಸಲ್ಲಾಪಕ್ಕೋ ಮಕ್ಕಳೊಡನಾಟಕ್ಕೋ ಆಸೆ ಹುಟ್ಟಿ

ಬಲಗೊಳ್ಳುತ್ತಿತ್ತು. ವರ್ತಮಾನ ಪತ್ರಿಕೆಯಲ್ಲಿ ಚಿತ್ರವನ್ನೋ ಸಮಾಚಾರವನ್ನೋ ಕಂಡಾಗ ಹಿಂದಿನ ದಿನಗಳು ನೆನಪಾಗಿ ಎಲ್ಲವೂ ಅಸಹ್ಯವೆನಿಸುತ್ತಿತ್ತು. ದಿನವೆಲ್ಲ ಅಶಾಂತಿಯಲ್ಲಿಯೇ ಕಳೆಯುತ್ತಿತ್ತು."

ನಿತ್ಯವೂ ನೂಲುವುದರಿಂದ ಮನಸ್ಸಿಗೆ ಹಿತವಾಗುತ್ತಿತ್ತಂತೆ. ಜವಾಹರಲಾಲರು ಈ ಜೈಲ್ ವಾಸದಲ್ಲಿಯೆ ಓದುವುದನ್ನೂ ಬರೆಯುವುದನ್ನೂ ಹೆಚ್ಚಾಗಿಟ್ಟುಕೊಂಡರು. ಮಗಳಿಗೆ ಬರೆದೋಲೆಗಳ ರೂಪವಾಗಿ ಜಗತ್ಕಥಾವಲ್ಲರಿಯೆ ರೂಪಗೊಂಡಿತು. "ಆ ಕೆಲಸದಿಂದ ನನ್ನ ಬುದ್ಧಿಶಕ್ತಿಗೆ ರಕ್ಷೆಯಾದಂತಾಯಿತು. ಗತ ವೃತ್ತಾಂತ ವಿವರಗಳನ್ನು ಬರೆಯುತ್ತ ಅಲ್ಲಿಯೇ ಮನಸ್ಸನ್ನು ನಿಲ್ಲಿಸಿ ನನ್ನ ಪರಿಸ್ಥಿತಿಯನ್ನು ಅಷ್ಟು ಕಾಲ ಮರೆಯಬಲ್ಲವನಾದೆ." ಪುಸ್ತಕಗಳಲ್ಲಿ ಪ್ರಯಾಣಿಕರ ವೃತ್ತಾಂತಗಳು ದೊರೆತಾಗ ಮನಸ್ಸಿಗೆ ಹರ್ಷ. "ಪರ್ವತ ಹಿಮನದಿ ಮರುಭೂಮಿಗಳ ಚಿತ್ರಗಳಿದ್ದರಂತೂ ಬಲು ಹರ್ಷ. ಜೈಲಿನ ನಿರ್ಬಂಧದಲ್ಲಿರುವವನಿಗೆ ವಿಸ್ತಾರ ಪ್ರದೇಶಗಳೂ ಸಮುದ್ರಗಳೂ ಪರ್ವತಗಳೂ ಅಂದರೆ ಆಸೆ. ಆಲ್ಪ್ಸ್ ಹಿಮವತ್ಪ್ರಾಂತಗಳ ಚಿತ್ರಗಳಿದ್ದ ಪುಸ್ತಕಗಳು ಕೆಲವಿದ್ದವು ನನ್ನ ಬಳಿಯಲ್ಲಿ. ನನ್ನ ಬರಾಕಿನಲ್ಲಿ ಅತಿಯಾಗಿ ಸೆಕೆಯೆದ್ದಾಗ ಆ ಪುಸ್ತಕಗಳನ್ನು ಬಿಚ್ಚಿ ಹಿಮನದಿಗಳ ಚಿತ್ರಗಳನ್ನು ನೋಡುತ್ತಿದ್ದೆ."

"ಅಟ್ಲಾಸ್ ಎಂದರೆ ಹೆಚ್ಚು ಉತ್ಸಾಹ ಸಂಭ್ರಮಗಳು. ಕಂಡಿದ್ದ ಕಾಣದಿದ್ದ ಸ್ಥಳಗಳ ನೆನಪನ್ನೂ ಕನಸನ್ನೂ ಮನಸ್ಸಿನೆದುರಿಗೆ ತಂದು ನಿಲ್ಲಿಸುತ್ತಿತ್ತು. ಬಿಚ್ಚಿ ನೋಡಿದಾಗ ಮನಸ್ಸನ್ನು ಸೆಳೆವ ಆ ಬಣ್ಣಗಳೋ, ಆ ಗುರುತುಗಳೋ! ಚುಕ್ಕೆಗಳಾಗಿ ಕಾಣುವ ದೊಡ್ಡ ಪಟ್ಟಣಗಳನ್ನು ಕಂಡು ಕಂಬಳಿ ಹುಳುಗಳಂತೆ ಕಾಣುವ ಪರ್ವತಗಳನ್ನೂ ವಿಶಾಲ ನೀಲಿಮ ಪ್ರದೇಶಗಳಂತೆ ಕಾಣುವ ಸಾಗರಗಳನ್ನೂ ಸಮುದ್ರಗಳನ್ನೂ ದಾಟಿ ಎಲ್ಲವನ್ನೂ ಕಣ್ತುಂಬ ನೋಡುವ ಆಸೆ ಬಲವಾಗೆದ್ದು ಗಂಟಲನ್ನ ಮುಕಿದಂತಾಗುತ್ತಿತ್ತು. ಅಂತಹ ಸಮಯಗಳಲ್ಲಿ ವ್ಯಥೆಯಿಂದ ಅದನ್ನು ಮುಚ್ಚಿಟ್ಟು ನಮ್ಮ ಸುತ್ತಲಿದ್ದ ಬಣ್ಣಗೆಟ್ಟ ಗೋಡೆಗಳನ್ನು ನೋಡಿ ನಿತ್ಯ ಜೀವನ ಚಕ್ರದ ಕಡೆಗೆ ಮನಸ್ಸನ್ನು ಬಲವಂತದಿಂದ ತಿರುಗಿಸುತ್ತಿದ್ದೆವು."

ಡೇರಾಡೂನ್ ಜೈಲಿನಲ್ಲಿ ಜವಾಹರಲಾಲರಿದ್ದುದು 14½ ತಿಂಗಳುಗಳು. ಜೈಲ್ ಸಣ್ಣದು. ಜೈಲಿನ ಆವರಣದೊಳಗಿದ್ದರೂ ಕಟ್ಟಡದ

ಹೊರಗಿದ್ದ ಚಿಕ್ಕ ಲಾಕಪ್ಪೊಂದರಲ್ಲಿ ಜವಾಹರಲಾಲರನ್ನಿಟ್ಟಿತ್ತು. ಆ ಲಾಕಪ್ಪಿನೊಳಗೆ ಪದಚಾರಣಕ್ಕವಕಾಶವಿರಲಿಲ್ಲ. ಆದ್ದರಿಂದ ಕಾಲ್ನಡಿಗೆಗಾಗಿ ಬೆಳಿಗ್ಗೆ ಸಂಜೆಗಳಲ್ಲಿ ಗೇಟ್‌ಮುಂದೆ ಹಿಂದಕ್ಕೂ ಮುಂದಕ್ಕೂ ನೂರಡಿಯುದ್ದದ ಜಾಗಕ್ಕೆ ಬಿಡುತ್ತಿದ್ದರು. ಅಲ್ಲಿಂದ ಹಿಮವತ್ಪರ್ವತದ ಭಾಗಗಳು ಕಾಣುತ್ತಿದ್ದವು. ಅದೇ ದೊಡ್ಡ ನಿಧಿಯಾಯಿತು. ಆ ಪರ್ವತವನ್ನು ಕಂಡು ಸಂತೋಷಿಸಲು ದಿನಕ್ಕೆರಡುಹೊತ್ತು ಲಭ್ಯ. ಅಲ್ಲಿ ಪದಚಾರಣವನ್ನು ಎಂತಹ ಮಳೆ ಹುಯ್ಯುತ್ತಿದ್ದರೂ ಜವಾಹರಲಾಲರು ಬಿಡಲಿಲ್ಲ. ನಿತ್ಯವೂ ಅದನ್ನೇ ನೋಡಬೇಕೆಂಬ ಬೇಸರವೇ ಇಲ್ಲ. "ಸರ್ವತೋಭದ್ರವಾಗಿ ಅಚಲವಾಗಿದ್ದ ಆ ಪರ್ವತವು ಲಕ್ಷಾಂತರ ವರ್ಷಗಳ ಕಾಲದ ಅನುಭವದಿಂದ ಕೂಡಿದ್ದು ನನ್ನ ಮನೋವಿಕಾರಗಳನ್ನು ಆ ಎತ್ತರದಿಂದ ಕಂಡು ನಗುತ್ತ ಉದ್ವೇಗವನ್ನು ಶಮನಗೊಳಿಸುತ್ತಿತ್ತು." ಒಬ್ಬಾನೊಬ್ಬ ಚೀನೀ ಕವಿಯಂತೆ ಜವಾಹರಲಾಲರೂ ಸಹ ಈ ಅರ್ಥ ಕೊಡುವ ಪದ್ಯವನ್ನು ಮನಸ್ಸಿನಲ್ಲಿಯೇ ಹೇಳಿಕೊಳ್ಳಬಹುದಾಗಿತ್ತು :

'ದೂರದ ಆಕಾಶದಲ್ಲಿ ವಿಹಂಗ ಬಳಗಗಳು ಹಾರಿಹೋದವು, ಕಣ್ಣಿಗೆ ಕಂಡ ಒಂದೇ ಒಂದು ಮೇಘವೂ ಅಲೆಯುತ್ತ ಅದೃಶ್ಯವಾಯಿತು ; ಎತ್ತರದಲ್ಲಿ ತಲೆಯಿಟ್ಟುಕೊಂಡು ಕುಳಿತಿರುವ ಪರ್ವತದೆದುರಿಗೆ ನಾನೊಬ್ಬನೇ ಅದೆ ; ಪರ್ವತ ಕಂಡು ನನಗೆ ಬೇಸರವಿಲ್ಲ, ನನ್ನನ್ನು ಕಂಡು ಪರ್ವತಕ್ಕೂ ಬೇಸರವಿಲ್ಲ.'

"ಹದಿನಾಲ್ಕು ತಿಂಗಳ ಮೇಲೆ ಆ ಲಾಕಪ್ಪಿನಲ್ಲಿದ್ದೆನಾಗಿ ಅಲ್ಲಿಯ ಪ್ರತ್ಯಂಶವನ್ನೂ ಪುನಃ ಪುನಃ ಕಾಣುತ್ತಿದ್ದೆ. ನೆಲ ಗೋಡೆ ಚಾವಣಿಗಳಲ್ಲಿದ್ದ ಪ್ರತಿಯೊಂದು ಬಿರುಕು ಬಿಲ ಗೀಟು ಹಳ್ಳ ತಿಟ್ಟುಗಳೆಲ್ಲವೂ ಸ್ಪಷ್ಟ. ಮುಂದಿನ ಅಂಗಳದಲ್ಲಿ ಬಿದ್ದಿದ್ದ ಕಲ್ಲು ಗುಂಡುಗಳೂ ಚೂರುಗಳೂ ಮಿತ್ರರಂತೆ ಆದವು. ಅಲ್ಲಲ್ಲಿ ಸಂದುಗಳಲ್ಲಿ ತಲೆಯೆತ್ತಿ ಬಂದ ಹುಲ್ಲು ಹಸುರನ್ನು ಆದರದಿಂದ ನೋಡುವವನಾಗಿದ್ದೆ. ಅಲ್ಲಿದ್ದುದು ನಾನೊಬ್ಬನೇ ಅಲ್ಲ ಪ್ರಾಣಿ. ಕಣಜಗಳು, ಹಲ್ಲಿಗಳು, ಪತಂಗಗಳು ಇತ್ಯಾದಿ ಎಷ್ಟೋ !

ಬಂಧನದಲ್ಲಿ ಸಿಕ್ಕಿದಾಗ ಪ್ರಕೃತಿಯ ಸಂಭವಗಳನ್ನು ಹೆಚ್ಚು ವಿವರವಾಗಿಯೂ ಸೂಕ್ಷ್ಮವಾಗಿಯೂ ಕಾಣುತ್ತೇವೆ. ಋತುಗಳ ವ್ಯಾಪಾರಲಕ್ಷಣಗಳನ್ನು ಪರಿಶೀಲಿಸುವುದರಲ್ಲಿ ಎಷ್ಟೋ ಗಮನ. ಸುತ್ತಮುತ್ತ ಗಮನ ಹೆಚ್ಚಿ

ದಂತೆಲ್ಲ ನನ್ನೊಡನೆ ಆ ಸ್ಥಳದಲ್ಲಿದ್ದ ಜೀವ ಜಂತುಗಳನ್ನು ಕಾಣುವವನಾದೆ. ಏಕಾಂಗಿಯಾಗಿದ್ದೆನೆಂದು ಭಾವಿಸಿದ್ದವನ ಸುತ್ತಮುತ್ತ ನೂರಾರು ಪ್ರಾಣಿಗಳಿದ್ದ ಸಂಗತಿ ತಿಳಿಯಿತು. ನನ್ನ ತಂಟೆಗೆ ಅವು ಬರಲಿಲ್ಲ; ಅವುಗಳ ತಂಟೆಗೆ ನಾನೂ ಹೋಗಲಿಲ್ಲ. ಆದರೆ ತಗಣೆಗಳನ್ನೂ ಸೊಳ್ಳೆಗಳನ್ನೂ ನೊಣಗಳನ್ನೂ ಮಾತ್ರ ಶತ್ರುಗಳಂತೆ ಕಂಡು ಅವುಗಳೊಡನೆ ಯುದ್ಧ ಕ್ರೀಡೆಯನ್ನಿಟ್ಟುಕೊಂಡೆ. ನೂರಾರು ಕಣಜಗಳು ಆ ಗೋಡೆಗಳಲ್ಲಿದ್ದವು. ಒಂದು ಸಲ ದಾರಿತಪ್ಪಿ ಬಂದ ಒಂದು ಕಣಜ ಉದ್ದೇಶವಿಲ್ಲದೆ ನನ್ನನ್ನು ಕಚ್ಚಿತು. ಆಗ ನಾನು ಆ ಜಾತಿಯನ್ನೇ ನಾಶಗೊಳಿಸಲು ತೊಡಗಿದೆ. ಕಣಜಗಳಾದರೋ ತಮ್ಮ ಗೂಡುಗಳನ್ನು ಸಂರಕ್ಷಿಸಿಕೊಳ್ಳಲು ಅತಿ ಧೈರ್ಯಸಾಹಸಗಳಿಂದ ಹೋರಾಡಿದವು. ಆಗ ಸುಮ್ಮನಾದೆ. ಆ ತರುವಾಯ ಇಬ್ಬರೂ ಪರಸ್ಪರ ಗೌರವದಿಂದ ಇದ್ದುಬಿಟ್ಟೆವು.

ಬಾವಲಿಗಳೆಂದರೆ ನನಗಾಗದು; ಆದರೂ ಅವುಗಳನ್ನು ಸಹಿಸಬೇಕಾಗಿತ್ತು. ಸಂಜೆಯ ಮಬ್ಬಿನಲ್ಲಿ ಸದ್ದಿಲ್ಲದೆ ಹಾರಿಕೊಂಡು ತಿರುಗುತ್ತಿದ್ದವು. ಮುಖದ ಪಕ್ಕದಲ್ಲಿಯೇ ಬರುತ್ತಿದ್ದುದರಿಂದ ಯಾವ ಕ್ಷಣದಲ್ಲಾದರೂ ಹೊಡೆಯಬಹುದೆನ್ನಿಸುತ್ತಿತ್ತು. ಕೆಳಗೆ ಸಣ್ಣ ಬಾವಲಿಗಳಾದರೆ ಮೇಲ್ಗಡೆ ಆಕಾಶದಲ್ಲಿ ಹಾರಿಹೋಗುವ ಭಾರಿ ಬಾವಲಿಗಳ ತಂಡ.

ತಾಸುತಾಸಿಗೂ ಇರುವೆಗಳ ಓಡಾಟವನ್ನು ಕುತೂಹಲದಿಂದ ಕಾಣುತ್ತಿದ್ದೆ. ಸಾಯಂಕಾಲವಾದರೆ ಹಲ್ಲಿಗಳು ಎಚ್ಚರದಿಂದ ದೇಕುತ್ತ ಆಹಾರ ಜಂತುಗಳನ್ನೋ ಒಬ್ಬರಿನ್ನೊಬ್ಬರನ್ನೋ ಅಟ್ಟಿಕೊಂಡು ಓಡಾಡುತ್ತ ನಗು ಬರುವಂತೆ ಬಾಲಗಳನ್ನು ಅಲ್ಲಾಡಿಸುತ್ತಿದ್ದವು. ಕಣಜಗಳನ್ನು ಸಾಧಾರಣವಾಗಿ ಹಲ್ಲಿಗಳು ಹಿಡಿಯುತ್ತಿರಲಿಲ್ಲ. ಎರಡು ಸಲ ಮಾತ್ರ ಹಿಡಿದುದನ್ನು ಕಂಡಿದ್ದೆ. ಬಲು ಎಚ್ಚರಿಕೆಯಿಂದ ಹಲ್ಲಿಯು ತೆವಳಿ ಮುಂದುಗಡೆಯಿಂದ ಕಣಜವನ್ನು ಹಿಡಿಯಿತು; ಕೊಂಡಿಯ ಭಾಗವನ್ನು ತಪ್ಪಿಸಿಕೊಂಡದ್ದು ಉದ್ದೇಶಪೂರ್ವಕವೋ ಅಲ್ಲವೋ ಹೇಳಲಾರೆ.

ಅಳಿಲುಗಳೋ! ಸಮೀಪದಲ್ಲಿ ಮರಗಳೇನಾದರೂ ಇದ್ದರೆ ಗುಂಪು ಗುಂಪು. ಲಖನೌ ಜೈಲಿನಲ್ಲಿದ್ದಾಗ್ಗೆ ಬಲು ಧೈರ್ಯದಿಂದ ನಮ್ಮ ಹತ್ತಿರಕ್ಕೇ ಬಂದು ಬಿಡುತ್ತಿದ್ದವು. ಮೈ ಕೈ ಅಲುಗಾಡಿಸದೆ ಪುಸ್ತಕ ಹಿಡಿದು ಓದುತ್ತ ನಾನು ಕುಳಿತಿದ್ದಾಗ ಅಳಿಲು ಬಂದು ನನ್ನ ಕಾಲ ಮೇಲೆ ಹತ್ತಿ ಮೊಣಕಾಲ ಮೇಲೆ ಕುಳಿತು ಸುತ್ತಲೂ ದೃಷ್ಟಿ ಬೀರುವುದು; ಆಮೇಲೆ ನನ್ನ ಮುಖವನ್ನೂ ಕಣ್ಣನ್ನೂ ಪರೀಕ್ಷಿಸುತ್ತ ನೋಡಿ 'ಇದೇನೋ ಕಾಣೆ, ಮರವೂ ಅಲ್ಲ ಕೊಂಬೆಯೂ ಅಲ್ಲ' ಎಂದುಕೊಂಡು ಒಂದು ಕ್ಷಣಕಾಲ ಭಯದಿಂದ ನಿಶ್ಚೇಷ್ಟವಾಗಿ ಆ ತರುವಾಯ ಓಡಿಹೋಗುವುದು. ಕೆಲವೇಳೆ ಅಳಿಲ ಮರಿಗಳು ಮರ

ದಿಂದ ಬೀಳುತ್ತಿದ್ದವು; ತಾಯಿ ಹುಡುಕಿಕೊಂಡು ಬಂದು ಅವುಗಳನ್ನು ಉಂಡುಂಡೆಯಾಗಿ ಸುತ್ತಿ ಸುಖಾಶ್ರಯಕ್ಕೆತ್ತಿಕೊಂಡು ಹೋಗುತ್ತಿತ್ತು. ಒಂದೊಂದುವೇಳೆ ಅಂತಹ ಮರಿ ಅದಕ್ಕೆ ಸಿಕ್ಕುತ್ತಲೇ ಇರಲಿಲ್ಲ. ನನ್ನ ಜೊತೆಗಾರನೊಬ್ಬನು ಅಂತಹ ಮೂರು ಮರಿಗಳನ್ನೆತ್ತಿಕೊಂಡು ಸಾಕಿಕೊಳ್ಳಲಾರಂಭಿಸಿದನು. ಅಷ್ಟು ಪುಟ್ಟ ಆಕೃತಿಯುಳ್ಳವುಗಳಿಗೆ ಆಹಾರವನ್ನೆರೆಯುವುದು ಹೇಗೆಂದು ಯೋಚನೆಯಾಯಿತು. ಕಡೆಗೆ ಫೌಂಟೆನ್‌ಪೆನ್ನಿಗೆ ಶಾಯಿ ತುಂಬುವ ಕೊಳವೆಗೆ ಅರಳೆ ಮೆತ್ತಿ ಅದನ್ನು ಉಪಯೋಗಿಸಿದೆವು."

ಹೀಗೆಯೇ ಪಕ್ಷಿಗಳು, ಕೋತಿಗಳು. ಅವುಗಳ ಜೀವನವನ್ನು ಕಂಡು ಜವಾಹರಲಾಲರಿಗೆ ಕುತೂಹಲ ಕೌತುಕಗಳು.

"ಕೆಲವೇಳೆ ಬೇಡವ ಜಂತುಗಳು ಬರುತ್ತಿದ್ದವು. ಎಷ್ಟೋ ಚೇಳುಗಳು ನಮ್ಮ ಕೋಣೆಯಲ್ಲಿಯೆ ಇದ್ದವು. ಗುಡುಗು ಮಿಂಚು ಬಂದಕೂಡಲೆ ವಿಶೇಷವಾಗಿ ಕಾಣಿಸಿಕೊಳ್ಳುತ್ತಿದ್ದವು. ಹಾಸಿಗೆ ಮೇಲೋ ಪುಸ್ತಕದ ಮೇಲೋ ಅವುಗಳನ್ನು ನಾನು ಕಾಣುತ್ತಿದ್ದಾಗ್ಲೂ ಒಂದು ಸಲವಾದರೂ ನನ್ನನ್ನು ಚೇಳು ಕಚ್ಚದಿದ್ದುದಾಶ್ಚರ್ಯ. ಕಪ್ಪಾದ ಮೃಗದಂತಿದ್ದ ರಾಕ್ಷಸ ಚೇಳೊಂದು ಬಾರಿ ಸಿಕ್ಕಿತು. ಅದನ್ನು ಹಿಡಿದು ಒಂದು ಶೀಸೆಯಲ್ಲಿಟ್ಟು ನೊಣ ಮುಂತಾದ ಆಹಾರ ವಿಡುತ್ತಿದ್ದೆ. ತರುವಾಯ ಗೋಡೆಗೆ ದಾರದಿಂದ ಕಟ್ಟಿದೆ. ಹೇಗೋ ತಪ್ಪಿಸಿಕೊಂಡಿತು. ಪುನಃ ಅದರ ಸಹವಾಸ ಬೇಡ ಎಂದುಕೊಂಡು ಕೋಣೆಯೆಲ್ಲ ಹುಡುಕಿದರೂ ಸಿಕ್ಕಲಿಲ್ಲ. ಎಲ್ಲ ಭಾಗಗಳನ್ನೂ ಮೂಲೆಗಳನ್ನೂ ಗುಡಿಸಿಬಿಟ್ಟೆ. ಎಲ್ಲಿಯೋ ಅದೃಶ್ಯವಾಗಿತ್ತು.

ಸಮೀಪದಲ್ಲಿಯೆ ಮೂರು ನಾಲ್ಕು ಹಾವುಗಳು ಸಿಕ್ಕಿದವು. ಆ ಸುದ್ದಿ ಹೊರಗೆ ಬಿದ್ದು ವರ್ತಮಾನ ಪತ್ರಿಕೆಗಳಲ್ಲಿ ದೊಡ್ಡಕ್ಷರಗಳಲ್ಲಿ ಮೆರೆಯಿತು. ಹೊರಗಿನವರಿಗೆ ಗಾಬರಿ ಹುಟ್ಟಿತೇನೋ! ಆದರೆ ನನಗೆ ಅದು ವಿನೋದವಾಗಿಯೆ ಇತ್ತು. ಬಂದೀಖಾನೆಯ ಬೇಜಾರನ್ನು ಹೋಗಲಾಡಿಸಿದ್ದರಿಂದ ನನಗೆ ಗಾಬರಿಯಾಗಲಿಲ್ಲ. ಹಾವುಗಳೆಂದರೆ ನನಗಿಷ್ಟವೆಂದಲ್ಲ; ಭಯದಿಂದ ದಿಕ್ಕೆಟ್ಟವನಾಗುವುದಿಲ್ಲ. ಹಾವು ಕಚ್ಚುವುದೆಂದರೆ ನನಗೂ ಭಯವೇ; ಹಾವು ಕಂಡಾಗ ತಕ್ಕ ಆತ್ಮರಕ್ಷಣೆ ಮಾಡಿಯೇ ಮಾಡಿಕೊಳ್ಳುತ್ತೇನೆ. ಆದರೆ ಅವುಗಳನ್ನು ಕಂಡಾಗ ಅಸಹ್ಯವಿಲ್ಲ, ತೀವ್ರಭಯವಿಲ್ಲ. ಲಕ್ಷ್ಮೀ ಚೇಳುಗಳನ್ನು ಕಂಡರೆ ಮಾತ್ರ ನನಗಾಗುವುದಿಲ್ಲ. ಕಲ್ಕತ್ತೆಯ ಜೈಲಿನಲ್ಲಿದ್ದಾಗ್ಗೆ ಒಂದು ನಡುರಾತ್ರಿ ನನ್ನ ಪಾದದಮೇಲೇನೋ ಮಿಳಮಿಳನೆಂದು ಸಂಚರಿಸಿದ ಹಾಗಾಯಿತು; ದೀಪ ಹಿಡಿದು ನೋಡಿದರೆ ಹಾಸಿಗೆ ಮೇಲೊಂದು ಜರಿ. ತಕ್ಷಣವೇ ಹಾಸಿಗೆಯಿಂದ ಅನಾಮತ್ತಾಗಿ ಗೋಡೆವರೆಗೆ ಹಾರಿ ನಿಂತೆ.

ಜೈಲಿನೊಳಗಿದ್ದಾಗಲೇ ನಾನು ಪ್ರಾಣಿವರ್ಗದ ಸಹವಾಸವನ್ನು ಹೆಚ್ಚಾಗಿ ಗಮನಿಸಿದೆ."

ಜೀವಜಂತುಗಳನ್ನು ಈ ರೀತಿಯಲ್ಲಿ ಕಂಡು ತಮ್ಮ ಸ್ವವೃತ್ತಾಂತದಲ್ಲಿ ಅತಿ ಸ್ವಾರಸ್ಯವಾಗಿ ಬಣ್ಣಿಸುತ್ತ ಕೊನೆಗೆ ಜವಾಹರಲಾಲರು ಚಿತ್ತ ಚಾಟುಲ್ಯದಿಂದ ಬೇರೆಬೇರೆ ರಾಷ್ಟ್ರಗಳ ಗುರುತುಗಳನ್ನು ಕುರಿತು ಬರೆದಿದ್ದಾರೆ.

"ಬೇರೆಬೇರೆ ರಾಷ್ಟ್ರಗಳವರು ಬೇರೆಬೇರೆ ಪ್ರಾಣಿಗಳನ್ನು ತಮ್ಮ ಆಸೆಗೋ ಸ್ವಭಾವಕ್ಕೋ ಗುರುತಾಗಿಟ್ಟುಕೊಂಡಿದ್ದಾರೆ. ಅಮೆರಿಕದವರಿಗೂ ಜರ್ಮನರಿಗೂ ಹದ್ದು, ಇಂಗ್ಲಿಷರಿಗೆ ಸಿಂಹ ಅಥವಾ ಬುಲ್‌ಡಾಗ್, ಫ್ರೆಂಚರಿಗೆ ಹುಂಜ, ರಷ್ಯನ್ನರಿಗೆ ಕರಡಿ. ಆರಿಸಿಕೊಂಡ ಮೃಗದಂತೆ ಆ ಜನಗಳ ಗುಣಾವಗುಣಗಳು ಎಷ್ಟು ಮಾತ್ರ ಬೆಳೆಯುತ್ತವೆ? ಅವೆಲ್ಲವೂ ಇತರ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವ ಕ್ರೂರಮೃಗಗಳು. ಇಂತಹ ಕ್ರೂರಮೃಗಗಳನ್ನು ಮಾದರಿಯಾಗಿ ನೆನಸುತ್ತಿರತಕ್ಕವರು ಆಗಾಗ್ಗೆ ಜಗಳಗಂಟಿಗಳಾಗಿ ಗರ್ಜಿಸುತ್ತ ಪರರನ್ನು ಭಕ್ಷಿಸುವುದು ಆಶ್ಚರ್ಯವಲ್ಲ. ಹಸುವನ್ನು ಮಾದರಿಯಾಗಿಟ್ಟುಕೊಂಡ ಹಿಂದು ಮೃದುವರ್ತಿಯಾಗಿ ಹಿಂಸೆಯನ್ನೊಲ್ಲದಿರುವುದೂ ಆಶ್ಚರ್ಯವಲ್ಲ."

## 6. ಉಪವಾಸದ ಅಚ್ಚರಿ

ಡೇರಾಡೂನ್ ಜೈಲಿನಲ್ಲಿದ್ದಾಗ ಪತ್ರಗಳ ರೂಪದಲ್ಲಿ ಜಗತ್ಕಥೆಯನ್ನು ನಿತ್ಯವೂ ಒಂದೊಂದು ವಿಷಯವನ್ನಾಗಿ ಬರೆಯುತ್ತಿದ್ದರಷ್ಟೆ! ಅದನ್ನೋದುತ್ತಲಿರುವವರಿಗೆ ಸೆಪ್ಟೆಂಬರ್ 15ನೆ ತಾರೀಖಿನಲ್ಲಿ ಬರೆದಿರುವ ಪತ್ರವೆದುರಾದಾಗ ದಿಗ್ಭ್ರಾಂತಿ ಸಿದ್ಧ. ಪತ್ರಪ್ರಾರಂಭವೇ ಅದಕ್ಕೆ ಕಾರಣ.

"ಆಪಾದಮಸ್ತಕವಾಗಿ ನನಗೆ ತಳಮಳ ಹಿಡಿದಿದೆ. ಏನು ಮಾಡಬೇಕೆಂದು ಸ್ವಲ್ಪವೂ ತೋರದು. ಸುದ್ದಿ ಬಂದಿದೆ, ಭಯಂಕರವಾದ ಸುದ್ದಿ. ಬಾಪುಜಿ ಆಮರಣಾಂತ ನಿರಶನವನ್ನು ಸಂಕಲ್ಪಿಸಿರುವರಂತೆ. ನನ್ನ ಪ್ರಪಂಚ ಸಣ್ಣದು; ಆ ಸಣ್ಣ ಪ್ರಪಂಚದಲ್ಲಿ ಆತನೇ ಎಲ್ಲೆಲ್ಲಿಯೂ ತುಂಬಿಕೊಂಡಿರತಕ್ಕವನು—ನನ್ನ ಪ್ರಪಂಚವೇ ಕಂಪಿಸಿ ಉರುಳಿಕೊಳ್ಳುವಂತಿದೆ. ಎತ್ತ ನೋಡಿದರೂ ಶೂನ್ಯ, ಎಲ್ಲ ದಿಕ್ಕುಗಳಲ್ಲಿಯೂ ಅಂಧಕಾರ. ಮತ್ತೆ ಮತ್ತೆ ಆತನ ಆಕೃತಿಯೇ ಮನಸ್ಸಿನೆದುರಿಗೆ ನಿಲ್ಲುವುದು. ಸ್ವದೇಶದಿಂದ ಪಡುವಲಿಗೆ ಹೊರಡುತ್ತ ಜಹಜನ್ನೇರಿದಾಗ ನಾನು ಕಡೆಸಾರಿ ಕಂಡದ್ದು; ಕಳೆದ ವರ್ಷ. ಪುನಃ

ಆತನನ್ನು ನಾನು ಕಾಣುವುದೇ ಇಲ್ಲವೇ? ನನ್ನ ಮನಸ್ಸಿನಲ್ಲಿ ಶಂಕೆ ತೋರಿದಾಗ ಇನ್ನು ಯಾರ ಬಳಿಗೆ ಹೋಗಲಿ? ನನಗಿನ್ನು ಹಿತವನ್ನು ಹೇಳುವವರಾರು? ದುಃಖ ಬಂದಾಗ ಮೃದುವಚನಗಳನ್ನಿನ್ನಾರು ನನಗೆ ಹೇಳಿ ಸಮಾಧಾನಕೊಡ ತಕ್ಕವರು? ನಮ್ಮೆಲ್ಲರನ್ನೂ ಕಟ್ಟಿಕೊಂಡು ನಡೆಸುತ್ತ ಪೆನ್ನಿಧಿಯಂತಿದ್ದಾತನು ಇಲ್ಲದೆ ಹೋದರೆ ನಾವೆಲ್ಲರೂ ಏನು ಮಾಡಬೇಕು? ಹುಟ್ಟಿದ ಮಹಾನುಭಾವ ರನ್ನು ಮೃತ್ಯುಗರ್ಪಿಸುವ ಈ ದೇಶ ಪಾಪಿಷ್ಠದೇಶ! ಘನವಾದ ಸ್ವಾತಂತ್ರ್ಯ ವನ್ನು ಮರೆತು ಕಾಷ್ಠಾವ್ಯಸನಗಳನ್ನು ಕಟ್ಟಿಕೊಂಡು ಕಚ್ಚಾಡುವ ಈ ದೇಶ ಸ್ಥರು ಗುಲಾಮರು, ತುಚ್ಛಮನಸ್ಕರು!"

ಎಂದಿಗೂ ಎದೆಗೆಡದ ಧೀರಮೂರ್ತಿಯ ಈ ಉದ್ಗಾರವನ್ನು ಇಷ್ಟು ಕಾಲಾನಂತರದಲ್ಲಿ ಓದುವಾಗಲೇ ಕಕ್ಕಾಕ ಹಿಡಿಯುವುದು. ಜವಾಹರ ಲಾಲರನ್ನು ಆರೀತಿ ತಳಮಳಗೊಳಿಸಿದ ಸುದ್ದಿ ಯರವಾಡದಲ್ಲಿ ನಡೆದ ಸಂಗತಿ. ಮೂರನೆ ಚಕ್ರಗೋಷ್ಠಿ ಮುಗಿಯುವವೇಳೆಗೆ ಕೋಮು ವಾರು ಪೈಪೋಟಿಯಲ್ಲಿ ನ್ಯಾಯ ತೀರ್ಮಾನಕ್ಕೆ ತೊಡಗಿ ಬ್ರಿಟಿಷ್ ಪ್ರಧಾನಿ ಹರಿಜನರನ್ನು ಬೇರ್ಪಡಿಸಿದನು. ದೇಹದ ಅಂಗವನ್ನು ಕತ್ತರಿಸುವ ಇತ್ಯರ್ಥವಾಯಿತೆಂದು ಗಾಂಧೀಜಿಯವರದನ್ನು ಸಹಿಸ ಲಾರದವರಾಗಿ ಉಪವಾಸವಿದ್ದು ಜೀವವನ್ನು ಬಿಟ್ಟುಕೊಡುವುದೇ ಮೇಲೆಂದು ನಿಶ್ಚಯಮಾಡಿಕೊಂಡರು. ಆ ಸುದ್ದಿ ತಿಳಿದಕೂಡಲೆ ದೇಶ ವೆಲ್ಲ ಕಲ್ಲೋಲಗೊಂಡಿತು.

ಎರಡು ದಿನಗಳು ಜವಾಹರಲಾಲರಿಗೆ ದಿಕ್ಕೇ ಕಾಣದಾಯಿತು. ಪ್ರಿಯ ಬಾಪುಜಿಯನ್ನು ಪುನಃ ನೋಡುವುದಕ್ಕೇ ಆಗದೆಹೋದೀತೆಂಬ ಸ್ವಂತ ಕಳವಳವಲ್ಲದೆ ದೇಶಕ್ಕೆ ಬಾಪುಜಿಯ ಉಪವಾಸದಿಂದ ಏನು ಪ್ರಯೋಜನವಾದೀತೆಂಬ ಅಸಮಾಧಾನದ ತಳಮಳ. ಅಸಹಯೋಗದ ಕರ್ತವ್ಯಕ್ರಮವದರಿಂದ ಕೆಡುವುದೆಂಬ ಕೋಪ. ಯೋಚಿಸಿ ಯೋಚಿಸಿ ಕೋಪ ನಿರಾಶೆಗಳಲ್ಲಿಯೂ ಪ್ರೀತಿ ದುಃಖಗಳಲ್ಲಿಯೂ ಮನಸ್ಸು ಮುಳು ಗಿತು. ಏನುಮಾಡುವುದಕ್ಕೂ ತೋಚದಾಗಿ ಮನಸ್ಸು ಸಿಡುಕು ಸಿಡುಕಾಯಿತು. ಎರಡು ಹಗಲುಗಳೂ ರಾತ್ರಿಗಳೂ ಈ ಬಗೆಯಲ್ಲಿ ಕಳೆದ ಬಳಿಕ ಸ್ವಲ್ಪ ಸ್ವಲ್ಪವಾಗಿ ಶಾಂತಿಯು ಕಾಣಿಸಿಕೊಂಡು ಬೇರೂರಿ ಭದ್ರವಾಯಿತು. "ಒಳ್ಳೆ ಸಮಯಕ್ಕೆ ಸರಿಯಾಗಿ ಮಹತ್ಪರಿಣಾಮ

ವಾಗುವಂತೆ ವರ್ತಿಸುವ ಅತ್ಯದ್ಭುತ ಸಾಮರ್ಥ್ಯ ಬಾಪುವಿಗೆ ಮಾತ್ರವೇ ಉಂಟು. ಎಂತಹ ಸಂಭವವೆದುರಾದಾಗ್ಲೂ ನಾವೆಲ್ಲರೂ ಸಿದ್ಧರಾಗಿಯೂ ಸನ್ನದ್ಧರಾಗಿಯೂ ಇರತಕ್ಕದ್ದು ಕರ್ತವ್ಯ. ಜಗತ್ತೇ ಅಡ್ಡಿಯಾಗಿ ನಿಂತರೂ ಹಿಮ್ಮೆಟ್ಟುವುದೇತಕ್ಕೆ ?" ಎನ್ನಿಸಿತು. ಈ ಬಗೆಯ ಸಮಾಧಾನ ಪ್ರಾಪ್ತಿಯಾದ ಕೂಡಲೆ ಆಶ್ಚರ್ಯದ ಸಮಾಚಾರ ತಿಳಿಯಿತು. ಸಮಗ್ರ ಭಾರತವರ್ಷವೇ ಎಚ್ಚೆತ್ತು ನಿಂತು ಅಸ್ಪೃಶ್ಯತೆಯೆಂಬುದನ್ನು ತವಕ ದಿಂದ ಕಿತ್ತು ಬಿಸುಡುವ ಉದ್ಯಮ ಕೈಕೊಂಡ ಸಮಾಚಾರ. "ಆಹಾ! ಯರವಾಡ ಜೈಲಿನೊಳಗೆ ಕುಳಿತು ಈ ಪ್ರಾಣಿ ಹೊರಗಿನ ಕೋಟ್ಯಂತರ ಜನರ ಹೃದಯಗಳನ್ನು ತಲ್ಲಣಗೊಳಿಸುತ್ತಾನೆಯೇ! ಅಬ್ಬ!" ಎನ್ನಿಸಿತು.

ಆ ವೇಳೆಗೆ ಬಾಪುಜಿಯವರಿಂದ ತಂತಿ ಬಂತು "ಸಂಕಟ ತುಂಬಿದ ಈ ದಿನಗಳಲ್ಲೆಲ್ಲ ನಿನ್ನ ಆಕೃತಿಯೇ ನನ್ನ ಮನಸ್ಸಿನ ಮುಂದಿರುವುದು. ನಿನ್ನ ಅಭಿಪ್ರಾಯವೇನೆಂದು ತಿಳಿಯಲು ಅತಿ ಕಾತರನಾಗಿದ್ದೇನೆ. ಅದಕ್ಕೆ ಹೆಚ್ಚು ಬೆಲೆ ಕಟ್ಟುವೆನೆಂದು ನಿನಗೆ ತಿಳಿದೇ ಇದೆ. ಇಂದು* ವನ್ನೂ ಸರೂಪಳ ಮಕ್ಕಳನ್ನೂ ಕಂಡೆ. ಇಂದು ನೆಮ್ಮದಿಯಾಗಿದ್ದಾಳೆ, ದುಂಡಾಗುತ್ತಿದ್ದಾಳೆ. ಆರೋಗ್ಯದಿಂದಿದ್ದೇನೆ. ತಂತಿಯ ಜವಾಬನ್ನೇ ಕೊಡು, ಪ್ರೀತಿಯಿರಲಿ."

ಇದಿನ್ನೂ ಅದ್ಭುತವಾಯಿತು. ಘೋರವಾದ ಉಪವಾಸದ ಮಧ್ಯೆ ಸಾವಿರಾರು ಕೆಲಸಕಾರ್ಯಗಳನ್ನು ಕಟ್ಟಿಕೊಂಡಿದ್ದಾಗಲೂ ಇಂದಿರೆ ದುಂಡಾಗುತ್ತಿರುವ ಅಂಶಕ್ಕೆ ಗಮನವಿತ್ತು ಜೀವನದ ಪ್ರಕಾಶ ವನ್ನು ಅಲ್ಪಾಂಶಗಳಲ್ಲಿಯೂ ಮರೆಯದೆ ಕಾಣಿಸಿಕೊಡುವವನು!

ಉಪವಾಸದ ಮಹಿಮೆಯೂ ಆಗಲೆ ರೂಪುಗೊಳ್ಳುತ್ತಿತ್ತು. ಪುಣೆ ಯಲ್ಲಿ ರಾಷ್ಟ್ರನಾಯಕರೆಲ್ಲರೂ ಓಡೋಡಿ ಬಂದು ಸಮಾಧಾನ ಪ್ರಯತ್ನ ದಲ್ಲಿ ತಮ್ಮ ಸಾಹಸವೆಲ್ಲವನ್ನೂ ವೆಚ್ಚಮಾಡುತ್ತಿದ್ದರು. ಜವಾಹರ ಲಾಲರು ಬಾಪುಜಿಗೆ ಪ್ರತ್ಯುತ್ತರ ಕೊಡುತ್ತ "ನಿಮ್ಮ ತಂತಿಯಿಂದ ನನ್ನ

* ಇಂದು = ಇಂದಿರಾ ಪ್ರಿಯದರ್ಶಿನಿ, ಜವಾಹರಲಾಲರ ಮಗಳು ; ಸರೂಪ್ = ಹಿರಿಯ ತಂಗಿ ವಿಜಯಲಕ್ಷ್ಮಿಗೆ ಮನೆ ಹೆಸರು; ಆಕೆಯ ಮಕ್ಕಳು ಇಂದಿರೆಯೊಡನೆ ಆಗ ಪುಣೆಯಲ್ಲಿದ್ದರು. ವಿಜಯಲಕ್ಷ್ಮಿಯವರು ಯರವಾಡ ಜೈಲಿನಲ್ಲಿಯೆ ಇದ್ದರು.

ಮನಸ್ಸು ಸಮಾಧಾನಕ್ಕೆ ಬಂತು. ನಿಮ್ಮವರ್ಗದವರ ಉದ್ಧಾರಕ್ಕೆ ಎಷ್ಟು ಬೆಲೆಯನ್ನಾದರೂ ತೆರಬಹುದು. ಧಾರ್ಮಿಕ ದೃಷ್ಟಿಯಿಂದ ಹೇಗೆಂದು ನನಗೆ ತಿಳಿಯದು. ನಿಮ್ಮ ವಿಧಾನಗಳನ್ನು ಇತರರು ದುರುಪಯೋಗಪಡಿಸಿಕೊಂಡಾರೆಂಬ ಶಂಕೆಯಿದ್ದರೂ ಇಂದ್ರಜಾಲಿಕನಿಗೆ ನಾನೇನುತಾನೇ ಹೇಳಬಲ್ಲೆ? ಪ್ರೀತಿಯಿರಲಿ" ಎಂದರು.

ಆ ತರುವಾಯ ನಡೆದ ಸಂಗತಿಗಳು ದೇಶದ ಚರಿತ್ರೆಯಲ್ಲಿ ವಿಶದ ವಾಗತಕ್ಕವು. ಪುಣೆಯಲ್ಲಿ ಸಭೆಗಳೂ ಸಂಧಾನಗಳೂ ನಡೆದು ಎಲ್ಲರೂ ಸೇರಿ ಒಪ್ಪಂದವನ್ನು ರೂಪಗೊಳಿಸಿದರು. ಬ್ರಿಟಿಷ್ ಸರ್ಕಾರದವರೂ ಅದನ್ನು ಒಪ್ಪಿಕೊಂಡು ಹರಿಜನರನ್ನು ಇತರ ಹಿಂದುಗಳಿಂದ ಪ್ರತ್ಯೇಕಿಸುವ ಇತ್ಯರ್ಥವನ್ನು ತ್ಯಜಿಸಿದರು. ಗಾಂಧೀಜಿಯ ಪ್ರಾಣವುಳಿಯಿತು; ಹರಿಜನರ ಉದ್ಧಾರಕಾರ್ಯವು ಹುರುಪುಗೊಂಡಿತು. ಆದರೆ ಅಸಹಯೋಗದ ಪ್ರಯತ್ನಕ್ಕೆ ಈ ಸಂಗತಿಗಳೆಲ್ಲವೂ ಸಹಾಯವಾಗಲಿಲ್ಲ. ಮಹಾತ್ಮಾಜಿಯವರಿಗೆ ಜೈಲಿನಲ್ಲಿದ್ದಂತೆಯೆ ಹರಿಜನೋದ್ಧಾರ ಕರ್ತವ್ಯ ಪಾಲನೆಗಾಗಿ ಮಾತ್ರ ಅನುಕೂಲ್ಯಗಳೇರ್ಪಟ್ಟಿದ್ದವು; ಅದರಿಂದ ಜನರಿಗೆ ಉದ್ವೇಗ ಕಡಿಮೆಯಾದಂತೆಯೆ ಪರಿಣಮಿಸಿತು. ಸಿವಿಲ್ ಡಿಸ್ಲೊಬೀಡಿಯೆನ್ಸ್ ಎಂಬುದು ನಿಂತೇನೂ ಇರಲಿಲ್ಲ. ಹಾಗೂ ಹೀಗೂ ನಡೆಯುತ್ತಲೇ ಇತ್ತು.

1933ನೆ ವರ್ಷವಾರಂಭವಾಯಿತು. ಫೆಬ್ರುವರಿ ತಿಂಗಳಲ್ಲಿ ಇಲಾಹಾಬಾದಿನ ಜನರು ಪಂಡಿತ್ ಮೋತಿಲಾಲರ ಸ್ಮಾರಕಕ್ಕಾಗಿ ಸಭೆ ಸೇರುವ ಏರ್ಪಾಟಿಗೆ ಸರ್ಕಾರದವರು ಅಡ್ಡಿ ತೋರಿದರು. ಮಾರ್ಚ್ ತಿಂಗಳಲ್ಲಿ ಕಲ್ಕತ್ತೆಯಲ್ಲಿ ಕಾಂಗ್ರೆಸ್ ಸಭೆಯನ್ನು ಸೇರಿಸಲು ಕಾಂಗ್ರೆಸ್ ಭಕ್ತರು ಸಿದ್ಧರಾಗಿ ಪಂಡಿತ ಮದನಮೋಹನ ಮಾಲವೀಯರನ್ನು ಅಧ್ಯಕ್ಷರಾಗಿ ಗೊತ್ತುಮಾಡಿಕೊಂಡರು; ಜವಾಹರಲಾಲರ ತಾಯಿ ಸ್ವರೂಪರಾಣಿಯವರು ಅದಕ್ಕಾಗಿ ಕಲ್ಕತ್ತೆಗೆ ಹೊರಟರು. ಕಲ್ಕತ್ತೆಯನ್ನು ಸೇರುವ ಮೊದಲೆ ಪಂಡಿತ ಮಾಲವೀಯರನ್ನೂ ಸ್ವರೂಪರಾಣಿ ದೇವಿಯನ್ನೂ ಆಸಾನ್ಸೋಲ್ ಸ್ಟೇಷನ್ನಿನಲ್ಲಿಯೆ ದಸ್ತಗಿರಿ ಮಾಡಿದರು.

ಮೇ ತಿಂಗಳಲ್ಲಿ ಗಾಂಧೀಜಿ ಇಪ್ಪತ್ತೊಂದು ದಿನಗಳ ಉಪವಾಸ ವನ್ನಿಟ್ಟುಕೊಂಡರು. ಅದನ್ನು ಪ್ರಾರಂಭಿಸುವ ಮೊದಲು ಜವಾಹರ ಲಾಲರಿಗೊಂದು ಕಾಗದವನ್ನು ಬರೆದಿದ್ದರು. ಜವಾಹರಲಾಲರಿಗೆ ಈ ಉಪವಾಸ ವ್ರತಗಳ ಪ್ರಪಂಚದಲ್ಲಿ ಆದರವಿಲ್ಲದಿದ್ದರೂ ಗಾಂಧೀಜಿ ಯವರು ತಪಿಸುವುದಿಷ್ಟವಿಲ್ಲದಿದ್ದರೂ ಮಾಡಿದ ಸಂಕಲ್ಪವನ್ನು ಮುರಿಯ ಲೆತ್ನಿಸುವುದು ಅಯೋಗ್ಯವೆನಿಸಿತು. "ನನಗೆ ತಿಳಿಯದ ವಿಷಯಗಳನ್ನು ಕುರಿತು ನಾನೇನು ಹೇಳಲಿ? ಅಜ್ಞಾತವಾದ ಜಗತ್ತಿನಲ್ಲಿ ದಾರಿಕಾಣುವ ಪ್ರಯತ್ನದಲ್ಲಿ ನಾನು ಮುಗ್ಗರಿಸುತ್ತಲಿರುವವನು. ಎಂತಾದರೂ ನನ್ನ ಮನಸ್ಸೆಲ್ಲ ನಿಮ್ಮಲ್ಲಿಯೆ ಇರುವುದು" ಎಂಬ ಉತ್ತರ ಕೊಟ್ಟರು. ಉಪ ವಾಸ ಪ್ರಾರಂಭವಾದ ದಿನವೇ ಬಿಡುಗಡೆಯೂ ಆಯಿತು. ಅಸಹ ಯೋಗದ ಆಂದೋಳನವನ್ನು ಆರು ವಾರಗಳಕಾಲ ನಿಲ್ಲಿಸತಕ್ಕದೆಂದು ಆಗಿನ ಅಧ್ಯಕ್ಷ ಆಣೆಯವರು ಗಾಂಧೀಜಿಯವರ ಸಲಹೆಯಂತೆ ನಿರೂಪಿ ಸಿದ್ದರು. ಉಪವಾಸ ಮುಗಿದ ಬಳಿಕ ಪುಣೆಯಲ್ಲಿ ಕಾಂಗ್ರೆಸ್ ಪಕ್ಷ ದವರು ಸಭೆ ಸೇರಿ ಮುಂದಿನ ಕರ್ತವ್ಯವನ್ನು ಚರ್ಚಿಸುವ ಸಂದರ್ಭ ಕ್ಕಾಗಿ ಪುನಃ ಆರು ವಾರಗಳ ಕಾಲ ನಿಲ್ಲಿಸಲಾಯಿತು. ಸಭೆಯಲ್ಲಿ ನಿರ್ಣಯಗಳನ್ನೇನೋ ನಡೆಸಿ ಸರ್ಕಾರದವರೊಡನೆ ಸಂಧಿಪ್ರಯತ್ನ ವನ್ನು ಗಾಂಧೀಜಿಯವರು ಕೈಕೊಳ್ಳಬೇಕೆಂದು ನಿಶ್ಚಯಿಸಿದ್ದರು. ಸಾಮೂಹಿಕವಾದ ಅಸಹಕಾರೋದ್ಯಮವನ್ನು ನಿಲ್ಲಿಸಿ ವ್ಯಕ್ತಿಶಃ ನಡೆಸ ಬಹುದೆಂಬ ತೀರ್ಮಾನಕ್ಕೆ ಬಂದಿದ್ದರು.

ಆಗಸ್ಟ್ ತಿಂಗಳು ಮೊದಲನೆ ದಿನ ಗಾಂಧೀಜಿಯವರೇ ಪ್ರಾರಂಭಿಸಿ ರಾಸ್ ಎಂಬ ಗುಜರಾಥದ ಹಳ್ಳಿಯ ಕಡೆಗೆ ಹೊರಡಲನುವಾದರು. ದಸ್ತಗಿರಿಯಾಯಿತು; ಮೂರು ದಿನಗಳ ತರುವಾಯ ಬಿಡುಗಡೆಯೂ ಆಗಿ ಯರವಾಡ ಹಳ್ಳಿಯನ್ನು ಬಿಟ್ಟು ಪುಣೆಯಲ್ಲಿರಬೇಕೆಂಬ ಆಜ್ಞೆಯೂ ಸಂದಿತು. ಸಂದ ಅರ್ಧ ಗಂಟೆಯೊಳಗಾಗಿ ಗಾಂಧೀಜಿ ಆ ಆಜ್ಞೆಯನ್ನು ಮುರಿದು ದಸ್ತಗಿರಿಯಾಗಿ ಒಂದು ವರ್ಷ ಸಜವೆಂದು ಗೊತ್ತಾಯಿತು. ಆದರಂತೆ ಸೆರೆಮನೆ ಸೇರಿದ ಬಳಿಕ ಹಿಂದೆ ತಮಗೆ ಹರಿಜನ ಸಂಬಂಧ ವಾದ ಕೆಲಸ ನಡೆಸಲು ಕೊಟ್ಟಿದ್ದ ಅವಕಾಶ ಮಾಯಗೊಂಡಿತೆಂದು

ಪುನಃ ಉಪವಾಸವನ್ನು ಗೊತ್ತುಮಾಡಿಕೊಂಡು ಮೊದಲಿಟ್ಟರು. ಐದನೆ ದಿನ ಅದಕ್ಕಾಗಿ ಗಾಂಧೀಜಿಯನ್ನು ಆಸ್ಪತ್ರೆಗೊಯ್ದು ಮೂರು ದಿನಗಳ ಬಳಿಕ ಸರ್ಕಾರದವರು ಬಿಡುಗಡೆ ಮಾಡಿದರು. ಬಿಡುಗಡೆಯಾಗಿದ್ದರೂ ತಾವು ಬಂಧಿತರಾಗಿಯೇ ಇರಬೇಕಾದವರೆಂದು ಸ್ಪಷ್ಟಗೊಳಿಸಿ ಅವಧಿ ತೀರುವವರೆಗೆ ರಾಜಕೀಯ ಕರ್ತವ್ಯವನ್ನಿಟ್ಟುಕೊಳ್ಳುವುದಿಲ್ಲವೆಂದು ಗಾಂಧೀಜಿ ಪ್ರಕಟಿಸಿದರು.

ಈ ಘಟನೆಗಳು ವೇಗವೇಗವಾಗಿಯೆ ನಡೆದವು; ಅಷ್ಟು ಕಾಲವನ್ನೂ ಜವಾಹರಲಾಲರು ಜೈಲಿನಲ್ಲಿಯೆ ಕಳೆಯುತ್ತಿದ್ದರು. ಗಾಂಧೀಜಿಯವರು ಉಪವಾಸವನ್ನು ಪ್ರಾರಂಭಿಸಿದಾಗಲೆ ಅಸಹಯೋಗದ ಆಂದೋಳನವು ಮತ್ತಷ್ಟು ದುರ್ಬಲಗೊಳ್ಳುವುದೆಂದು ಮನಸ್ಸಿಗೆ ಭಾಸವಾಗಿತ್ತು. ಆ ಕಾರಣ ಜವಾಹರಲಾಲರಿಗೆ ಖಿನ್ನತೆ ತೋರಿತು; ಮನಸ್ಸಿನಲ್ಲಿ ಅನೇಕಾನೇಕ ವಿಚಾರಗಳು ಮೂಡಿದ್ದವು.

ಬಂಧನದ ಅವಧಿಯು ಸಮಾಪಿಸುತ್ತಲೂ ಬಂದಿತು. ಜೈಲಿನ ನಿಯಮಗಳಿಗನುಸಾರವಾಗಿ ವಿಧೇಯತೆಯಿಂದ ವರ್ತಿಸಿದ ಕೈದಿಗೆ ಸಲ್ಲಬೇಕಾದ ರಿಯಾಯತಿ ಜವಾಹರಲಾಲರಿಗೂ ಸಂದಿತ್ತು. ಒಟ್ಟಿನಲ್ಲಿ 3½ ತಿಂಗಳು ಕಡಿಮೆ. ಜೈಲಿನಿಂದ ಹೊರಗೆ ಬರುವುದೆಂದರೆ ಎಲ್ಲ ಕೈದಿಗಳಿಗೂ ಸಂಭ್ರಮ ಸಹಜ. ಮೊದಮೊದಲು ಜವಾಹರರಿಗೂ ಸಂಭ್ರಮವೇ ಹುಟ್ಟಿತು. ಹೊರಗೆ ಹೊರಟಮೇಲೆ ಮಾಡುವ ಕರ್ತವ್ಯವೇನೆಂಬ ಪ್ರಶ್ನೆಗೆ ಮಾತ್ರ ಸಮರ್ಪಕವಾದ ಉತ್ತರವಿಲ್ಲವಾಯಿತು. ಆ ಕಾರಣದಿಂದ ಸ್ವಲ್ಪಕಾಲ ಉತ್ಸಾಹವಡಗಿತ್ತು. ಆದರೆ ಸುಮಾರು ಎರಡು ವರ್ಷಕಾಲ ನಿಶ್ಚೇಷ್ಟರಾಗಿದ್ದವರಿಗೆ ಕಡೆಗೂ ಚಟುವಟಿಕೆಯಿಂದಿರುವ ಅವಕಾಶ ಪುನಃ ಸಂಭ್ರಮವನ್ನು ಬಲಪಡಿಸಿತು.

ಜುಲೈ ತಿಂಗಳಲ್ಲಿ ಶೋಕವಾರ್ತೆ ತಲಪಿತು. ಸೇನಗುಪ್ತರು ದೈವಾಧೀನರಾದ ಸುದ್ದಿ. ಬಂಗಾಳ ಪ್ರಾಂತಕ್ಕೆ ನಾಯಕರಾದ ಸೇನಗುಪ್ತರು ಜವಾಹರಲಾಲರಿಗೆ ಕೇಂಬ್ರಿಡ್ಜ್ ಕಾಲದಿಂದಲೂ ಪರಿಚಿತರು; ಪರಮಾಪ್ತರಲ್ಲಿ ಗಣ್ಯರಾಗಿದ್ದವರು. 1932ರಲ್ಲಿ ಯೂರೋಪಿನಿಂದ ಹಿಂತಿರುಗಿ ಬರುತ್ತಿದ್ದಾಗ ಜಹಜಿನಲ್ಲಿರುವಾಗಲೇ ಬ್ರಿಟಿಷ್ ಸರ್ಕಾರ

ದವರು ಆತನ ಬಂಧನವನ್ನು ಸಾಧಿಸಿದರು. ಬಂಧನ ಕಾಲದಲ್ಲಿ ಆತನ ಆರೋಗ್ಯವು ಕ್ರಮವಾಗಿ ದುರ್ಬಲಗೊಂಡಿತ್ತು. ಜುಲೈ ತಿಂಗಳಲ್ಲಿ ಆತನು ಅಸುಗಳನ್ನು ತೊರೆದಾಗ ಕಲ್ಕತ್ತೆಯಲ್ಲಿ ಉತ್ತರಕ್ರಿಯೆಗಳು ನಡೆದವು. ಬಂಗಾಳದ ಜನರೆಲ್ಲರೂ ಮುಕ್ತಕಂಠದಿಂದ ತಮ್ಮ ದುಃಖ ವನ್ನು ಕಾರಿದರು. ಸುಭಾಷಚಂದ್ರಬೋಸರಿಗೂ ಬಂಧನದಲ್ಲಿ ಆರೋಗ್ಯ ನಾಶವಾಗಿತ್ತು ; ಸ್ವಸ್ಥತೆಯನ್ನು ಸಂಪಾದಿಸಿಕೊಳ್ಳಲು ಯುರೋಪಿಗೆ ಹೊರಟಿದ್ದರು; ಬ್ರಿಟಿಷ್ ಸರ್ಕಾರದವರು ಅದಕ್ಕವಕಾಶ ಕೊಟ್ಟಿದ್ದರು. ಯುರೋಪಿನಲ್ಲಿಯೇ ಕಾಹಿಲೆಯಿಂದ ನರಳುತ್ತಿದ್ದ ಸಭಾಧ್ಯಕ್ಷ ವಿಠಲ ಭಾಯಿ ಪಟೇಲರೂ ಇದ್ದರು.

"ಎಷ್ಟುಮಂದಿ ಸೆರೆಮನೆಗಳ ಬಾಳಿನ ಪ್ರಯಾಸವನ್ನು ತಾಳ ಲಾರದೆ ವ್ಯಾಧಿಗ್ರಸ್ತರಾದವರು! ಎಷ್ಟುಮಂದಿ ಅವಿರತ ಕಾರ್ಯಭಾರ ದಿಂದ ಆರೋಗ್ಯ ನಷ್ಟಮಾಡಿಕೊಂಡವರು! ಕಳೆದ ಎರಡು ಮೂರು ವರ್ಷಗಳ ಸಡಗರದ ಬದುಕಿನಲ್ಲಿ ನೀರವವಾದರೂ ನಾನಾ ರೀತಿಯ ಘೋರ ಕಷ್ಟಗಳನ್ನೂ ನಷ್ಟಗಳನ್ನೂ ಎಷ್ಟು ಜನರು ಕಟ್ಟಿಕೊಂಡರು! ಇದರ ಅಂತ್ಯವೇನು?" ಎಂಬ ಚಿಂತೆ ಜವಾಹರಲಾಲರ ಮನಸ್ಸನ್ನು ಹಿಡಿಯಿತು. ಆ ಸಂದರ್ಭವನ್ನು ವಿವರಿಸುತ್ತ ಸ್ವಕೀಯ ವೃತ್ತಾಂತದಲ್ಲಿ ಸ್ವಂತ ಆರೋಗ್ಯರಕ್ಷೆಯನ್ನು ಪ್ರಸ್ತಾಪಿಸಿರುವರು.

> "ಆರೋಗ್ಯ ವಿಷಯದಲ್ಲಿ ನಾನು ಅದೃಷ್ಟಶಾಲಿ. ಕಾಂಗ್ರೆಸ್ ಕೆಲಸ ಕಾರ್ಯಗಳನ್ನು ಅತಿಭರದಿಂದ ನಡೆಸುತ್ತಿದ್ದಾಗ್ಗೂ ನನಗೆ ಆರೋಗ್ಯ ನಷ್ಟ ವಾಗಲಿಲ್ಲ. ಆನುವಂಶಿಕವಾದ ದಾರ್ಢ್ಯವೊಂದಾದರೆ ನಾನು ವಹಿಸಿದ ಎಚ್ಚ ರವೂ ಅದಕ್ಕಿನ್ನೊಂದು ಕಾರಣ. ಸಾಮಾನ್ಯವಾದ ಆಹಾರ, ತಕ್ಕಷ್ಟು ವ್ಯಾಯಾಮ,ಯಥೇಷ್ಟವಾದ ನಿರ್ಮಲವಾಯುಸೇವನೆಗಳಿಂದ ರೋಗಗಳನ್ನೂ ಬೊಜ್ಜನ್ನೂ ದೂರದಲ್ಲಿಡಬಲ್ಲವನಾದೆ.
>
> ಕಾಶ್ಮೀರಿ ಬ್ರಾಹ್ಮಣರೆಲ್ಲರಲ್ಲಿಯೂ ಸಾಮಾನ್ಯವಾಗಿರುವಂತೆ ನಮ್ಮ ಮನೆ ಯಲ್ಲಿಯೂ ಮಾಂಸ ತಿನ್ನುವ ಪದ್ಧತಿಯಿತ್ತು. ಅಷ್ಟು ಇಷ್ಟವಿಲ್ಲದಿದ್ದಾಗ್ಗೂ ಚಿಕ್ಕಂದಿನಿಂದ 1920ರವರೆಗೆ ನಾನೂ ಮಾಂಸ ಸೇವನೆ ಮಾಡುತ್ತಿದ್ದೆ. ಅಸಹ ಕಾರ ಮೊದಲಾದಾಗ ಅದನ್ನು ತ್ಯಜಿಸಿಬಿಟ್ಟೆ; ಯುರೋಪಿಗೆ ಹೋಗಿದ್ದಾಗ ಮಾತ್ರ ಪುನಃ ಭುಜಿಸಿದೆ. ಅದರಿಂದ ನನ್ನ ದೇಹಕ್ಕೆ ವಿರೋಧ ತೋರದಿದ್ದಾಗ್ಗೂ ಮಾಂಸ ಸೇವನೆಯಲ್ಲಿ ಯಾವುದೋ ಒಂದು ರೀತಿಯ ಒರಟುತನ ಕಾಣುತ್ತದೆ.

ಜೈಲಿನಲ್ಲಿ ನಿತ್ಯಜ್ವರ ತೋರಿಕೊಂಡಾಗ ನನ್ನಲ್ಲಿಯೇ ನನಗೆ ಬಹಳ ಅಸಮಾಧಾನ ಹುಟ್ಟಿತು. ಸಾವೆಂದರೆ ನನಗಂತಹ ಭಯವಿಲ್ಲ; ಆದರೆ ನಿದಾನವಾಗಿ ಕ್ಷೀಣಗೊಂಡು ದುರ್ಬಲನಾಗುವುದೆಂದರೆ ಭಯವಾಯಿತು. ಬಿಸಿಲಿಗೆ ನಿತ್ಯವೂ ಮೈಯೊಡ್ಡಿ ನನ್ನ ಆರೋಗ್ಯವನ್ನು ಪುನಃ ಪಡೆದೆ. ನನ್ನ ಜೊತೆಗಾರರು ಅಂಗಿಗಳನ್ನೂ ಶಾಲುಗಳನ್ನೂ ಧರಿಸಿಕೊಂಡಿದ್ದು ಚಳಿಯಿಂದು ನಡುಗುತ್ತಿದ್ದಾಗ ನಾನು ಸೂರ್ಯನ ಬಿಸಿಲಿಗೆ ಮೈಯೊಡ್ಡಿಕೊಂಡೇ ಉಲ್ಲಾಸಗೊಳ್ಳುತ್ತಿದ್ದೆ.

ವ್ಯಾಯಾಮಗಳಲ್ಲಿ ಶೀರ್ಷಾಸನವೆಂಬುದು ನನಗೆ ಅತಿ ಹಿತವೆನ್ನಿಸಿತ್ತು. ದೇಹಕ್ಕೆ ಒಳ್ಳೆಯದಾಗಿರಬಹುದು; ನನ್ನ ಮನಸ್ಸಿಗಂತೂ ಅತಿಹಿತಕರವಾಗಿತ್ತು. ತಲೆಕೆಳಕಾಗಿರುವ ವಿನೋದದಿಂದ ಖಿನ್ನತೆ ತಗ್ಗಿದ್ದಲ್ಲದೆ ವಿಕಾರಗಳಲ್ಲಿ ಸಹನೆಯೂ ಹೆಚ್ಚಿತು.

ಜೈಲುಗಳಲ್ಲಿರುವಾಗ ಮನಸ್ಸು ಚಿಕ್ಕದಾಗಿ ಖಿನ್ನತೆಗೆ ವಶವಾಗುವುದು ಸಾಮಾನ್ಯ; ಅನಿವಾರ್ಯ. ನನ್ನ ಆರೋಗ್ಯ ದಾರ್ಢ್ಯಗಳ ಸಹಾಯದಿಂದ ಅಂತಹ ವಿಹ್ವಲತೆಯನ್ನು ನಾನು ಬೇಗನೆ ಕಳೆಯಬಲ್ಲವನಾದೆ. ಇದುವರೆಗೂ ನನಗೆ ಕೆಟ್ಟ ತಲೆನೋವೆಂಬುದಿಲ್ಲ; ನಿದ್ರಾಲೋಪವೆಂಬುದೂ ಇಲ್ಲ. ಪ್ರಾಯಶಃ ಚಿತ್ತ ಸ್ವಾಸ್ಥ್ಯಕ್ಕೆ ಅವೇ ಉತ್ತಮ ಲಕ್ಷಣಗಳು. ಹೆಚ್ಚಾಗಿ ಓದುಬರಹಗಳನ್ನು ನಡೆಸುತ್ತಿದ್ದಾಗ್ಗೂ ನೇತ್ರಪಾಟವ ಕುಗ್ಗಿಲ್ಲ. ಎಂಟು ವರ್ಷಗಳ ಹಿಂದೆ ನೇತ್ರವೈದ್ಯನೊಬ್ಬನು ಪರೀಕ್ಷೆ ನಡೆಸಿ ಕ್ಷಿಪ್ರದಲ್ಲಿಯೆ ಕನ್ನಡಕ * ಗಳನ್ನೇರಿಸಬೇಕಾದೀತೆಂದಿದ್ದನು. ಆದರೂ ಕನ್ನಡಕಗಳಿಲ್ಲದೆಯೇ ನಾನು ಸುಸೂತ್ರವಾಗಿ ನಡೆಸಿಕೊಂಡು ಹೋಗುತ್ತಿದ್ದೇನೆ.

ಈ ಅಂಶಗಳಿಂದ ನಾನು ಸ್ವಸ್ಥಚಿತ್ತನೆಂದೂ ಅವಿಕಲನೆಂದೂ ಇತ್ಯರ್ಥವಾಗಬಹುದೇನೋ! ಆದರೆ ಸದಾ ಅವಿಕಲರಾಗಿರುವವರಲ್ಲಿ ನನಗಾವ ಆದರವೂ ಇಲ್ಲ."

ಆಗಸ್ಟ್ 23ನೆ ತಾರೀಖಿನ ದಿನ ಜವಾಹರಲಾಲರನ್ನು ಡೇರಾಡೂನಿನಿಂದ ನೈನಿ ಸೆಂಟ್ರಲ್ ಜೈಲಿಗೆ ಕರೆತಂದರು. ಆಗಲೆ ತಾಯಿಯವರು ಬಹು ಕಾಹಿಲೆಯಾಗಿದ್ದರೆಂದೂ ಲಖನೌ ಆಸ್ಪತ್ರೆಯಲ್ಲಿರುವರೆಂದೂ ತಿಳಿಯಿತು. ಅದಕ್ಕಾಗಿ 30ನೆ ತಾರೀಖಿನ ದಿನವೇ ಬಿಡುಗಡೆಯಾಯಿತು. ಇಲ್ಲದಿದ್ದರೆ ಸೆಪ್ಟೆಂಬರ್ 12ನೆ ತಾರೀಖಿಗೆ ಆಗಬೇಕಾಗಿತ್ತು. ಹದಿಮೂರು ದಿನ ಮುಂಚಿತವಾಗಿಯೇ ಬಿಟ್ಟುಕೊಟ್ಟಹಾಗಾಯಿತು.

* ಇತ್ತೀಚಿಗೆ ಜವಾಹರಲಾಲರು ಓದುಬರಹಗಳಿಗೆ ಕನ್ನಡಕಗಳನ್ನು ಪಯೋಗಿಸುವುದುಂಟು.

## 7. ಐದು ತಿಂಗಳ ಬಿಡುಗಡೆ

ಜೈಲಿನಿಂದ ಬಿಡುಗಡೆಯಾದಕೂಡಲೆ ಜವಾಹರಲಾಲರು ತಾಯಿಯವರನ್ನು ಕಾಣಲು ಲಖನೌ ನಗರಕ್ಕೆ ಹೊರಟರು. ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದು ನರಳುತ್ತಿದ್ದ ಸ್ವರೂಪರಾಣಿ ದೇವಿಯರೊಡನೆ ಕೆಲವು ದಿನಗಳನ್ನು ಮಾತ್ರ ಕಳೆದು ಗಾಂಧೀಜಿಯವರ ಬಳಿಗೆ ಹೋಗಲು ಸಿದ್ಧರಾದರು.

ಬಂಧನದಲ್ಲಿ ದೀರ್ಘಕಾಲ ಕಳೆದಿತ್ತು. ಆದುದರಿಂದ ಹೊರಗೆ ಬಂದಾಗ ಜಗತ್ತೇ ಬದಲಾಯಿಸಿದ್ದಂತೆ ಕಂಡಿತು. ಮಕ್ಕಳು ಬೆಳೆದು ದೊಡ್ಡವರಾಗಿದ್ದರು; ಮದುವೆಗಳು, ಜನನಗಳು, ಮರಣಗಳು ಸಂಭವಿಸಿದ್ದವು. ಎಲ್ಲೆಲ್ಲಿಯೂ ಹೊಸ ಮುಖಗಳು, ಹೊಸ ಯೋಚನೆಗಳು, ಹೊಸ ಮಾತುಕಥೆಗಳು. ಹೊಸ ಪರಿಸ್ಥಿತಿಗೆ ತಾವು ಹೊಸಬರಾದರೂ ಸ್ವಲ್ಪಕಾಲದ ಅನುಭವದಿಂದಲೂ ಸ್ವಂತ ಪ್ರಯತ್ನದಿಂದಲೂ ತಾವು ಹಳಬರಾಗಬಹುದಾಗಿತ್ತು. ಆದರೆ ಪುನಃ ಜೈಲಿಗೆ ಬೇಗನೆ ಹೋಗಬೇಕಾಗಬಹುದೆಂಬ ಶಂಕೆ ಬಲವಾಗಿತ್ತು; ಪ್ರಯತ್ನಪುರಸ್ಸರವಾಗಿ ಜಗತ್ಸಂಸಾರದಲ್ಲೇಕೆ ಪ್ರವೇಶಿಸಬೇಕೆನಿಸಿತು.

ಅತ್ತ ಗಾಂಧೀಜಿ ಮತ್ತೊಂದು ಉಪವಾಸವನ್ನು ಆಗಸ್ಟ್ ತಿಂಗಳಲ್ಲಿ ಪ್ರಾರಂಭಿಸಿರಲು ಸರ್ಕಾರದವರು 20ನೆ ತಾರೀಖಿನ ದಿನ ಆಸ್ಪತ್ರೆಗೆ ಸಾಗಿಸಿದರು. ಕೈದಿಯಾಗಿದ್ದರೂ ಹರಿಜನ ಸಂಬಂಧವಾದ ಕರ್ತವ್ಯಕಲಾಪಗಳಿಗೆ ಮಾತ್ರ ಅವಕಾಶವಿಲ್ಲದಿದ್ದಲ್ಲಿ ತಾವು ಜೀವಂತರಾಗಿರುವುದು ಅನವಶ್ಯವೆಂದೂ ಅನುಚಿತವೆಂದೂ ಆತನ ಸಂಕಲ್ಪ ಭಯಾನಕವಾಗಿಯೆ ಇತ್ತು. ಉಪವಾಸ ಸಾಗುತ್ತ ದೇಹದೌರ್ಬಲ್ಯ ಹೆಚ್ಚಿತು. ಹಿಂದಿನ ಉಪವಾಸಗಳಲ್ಲಿ ಮರಣವನ್ನೆದುರುನೋಡುವ ಯೋಚನೆಯಿರಲಿಲ್ಲ. ಈ ಸಲ ಗಾಂಧೀಜಿಯವರು ಜೀವಿಸಿರುವ ಇಷ್ಟವನ್ನೇ ಬಿಟ್ಟುಕೊಟ್ಟಿದ್ದರು. ಸಂಗಡಿಗರಿಗೆ ಕಡೆಯ ಮಾತುಗಳನ್ನು ಹೇಳಿ ತಮ್ಮದೆನಿಸಿದ್ದ ಹಲಕೆಲವು ವಸ್ತುಗಳನ್ನು ದಾನಮಾಡಿಬಿಟ್ಟರು. ಇನ್ನೇನು ಅಂತ್ಯವು ಸಮೀಪವಾಯಿತೆಂದುಕೊಳ್ಳಬೇಕಾಯಿತು. ಆದರೆ ತಮ್ಮ ಆಶ್ರಯದಲ್ಲಿರುವಾಗ ಗಾಂಧೀಜಿಯವರ ಪ್ರಾಣ ಮಾಯವಾಗು

ವುದು ಸರ್ಕಾರದವರಿಗಿಷ್ಟವಿರಲಿಲ್ಲ; ಆದುದರಿಂದ ಆಕಸ್ಮಿಕವಾಗಿ ಬಿಡುಗಡೆ ಮಾಡಿಬಿಟ್ಟರು. ಉಪವಾಸದ ಸುದ್ದಿ ಕೇಳಿದಕೂಡಲೆ ದೀನಬಂಧು ಆಂಡ್ರೂಸ್ ತನ್ನ ಪ್ರಯಾಣವನ್ನು ಮಧ್ಯದಲ್ಲಿ ಬಿಟ್ಟು ಗಾಬರಿಯಿಂದ ಹಿಂತಿರುಗಿ ತನ್ನ ಸಾಮರ್ಥ್ಯವಿಾರಿ ಮಾಡಿದ ಪ್ರಯತ್ನ ಕಡೆಗೆ ಫಲಿಸಿತು.

ಪುಣೆಯ ಪ್ರಯಾಣವನ್ನು ಜವಾಹರಲಾಲರು ಮೊದಲು ನಡೆಸಿ ಗಾಂಧೀಜಿಯನ್ನು ಕಂಡರು. ಇಬ್ಬರಿಗೂ ಪರಸ್ಪರವಾಗಿ ಪರಮಾನಂದವಾಯಿತು. ಕುಶಲಪ್ರಶ್ನೆಗಳಾದ ಬಳಿಕ ಪ್ರಕೃತ ಕರ್ತವ್ಯವೇನೆಂದು ನಿಶ್ಚಯಿಸಲು ತೊಡಗಿದರು. ಗಾಂಧೀಜಿಯವರೇನು ಮಾಡಬೇಕು? ಬಿಡುಗಡೆಯೇನೋ ಆಗಿತ್ತು. ಆದರೆ ವ್ಯಕ್ತಿ ಪರವಾದ ಅಸಹಯೋಗವಿನ್ನೂ ನಡೆಯುತ್ತಲೇ ಇತ್ತು. ಗಾಂಧೀಜಿ ಬಿಡುಗಡೆಯನ್ನು ಹೇಗೆ ಸ್ವೀಕರಿಸುವುದು? ಆಜ್ಞೆ ಮುರಿದು ಪುನಃ ಜೈಲಿಗೆ ಹೊರಟರೆ ಪುನಃ ಸರ್ಕಾರದವರೊಡನೆ ಘರ್ಷಣ, ಪುನಃ ಉಪವಾಸ, ಪುನಃ ಬಿಡುಗಡೆ—ಈ ಚಕ್ರಗತಿಯಾದರೆ ಫಲವೇನು? ಆದ್ದರಿಂದ ಪುನಃ ಉಪವಾಸವೇ ಆದಲ್ಲಿ ಆಮರಣಾಂತವಾಗಿಯೆ ನಡೆಯಬೇಕಾದುದೊಂದು ಪಕ್ಷ. ಎರಡನೆ ಪಕ್ಷವಾಗಿ ಶಿಕ್ಷೆಯೆಂದು ವಿಧಿಸಿದ್ದಷ್ಟು ಅವಧಿಯಲ್ಲಿ ಕೇವಲ ಹರಿಜನೋದ್ಧಾರ ಕರ್ತವ್ಯವನ್ನೇ ನಡೆಸುತ್ತ ಬಿಡುಗಡೆಯಾದರೂ ಸ್ವತಂತ್ರನಲ್ಲವೆಂದಿರುವುದು. ಮೂರನೆ ಪಕ್ಷ ಕಾಂಗ್ರೆಸ್ ಕೆಲಸಕಾರ್ಯಗಳನ್ನೆಲ್ಲ ಇತರರಿಗೆ ವಹಿಸಿಕೊಟ್ಟು ತಾವು ನಿವೃತ್ತರಾಗುವುದು. ಈ ಮೂರರಲ್ಲಿ ಯಾವುದು ಸೂಕ್ತವೆಂಬ ಚರ್ಚೆ ನಡೆಯಿತು. ಎರಡನೆಯ ಯೋಚನೆ ಮೇಲೆಂಬ ನಿರ್ಧರವಾಯಿತು.

ಗಾಂಧೀಜಿಯವರೊಡನೆ ಜವಾಹರಲಾಲರು ಇತರ ವಿಷಯಗಳನ್ನೂ ಚರ್ಚಿಸಿದರು. ಸಾಮಾಜಿಕ ನ್ಯಾಯಸ್ಥಾಪನೆಯ ಲಕ್ಷ್ಯದಲ್ಲಿ ಇಬ್ಬರಿಗೂ ಭೇದವಿದ್ದಂತೆ ಕಾಣುತ್ತಿತ್ತು. ಚರ್ಚೆ ನಡೆಸಿದಾಗ ತಾವು ಗೊತ್ತುಮಾಡಿಕೊಂಡಿದ್ದ ಲಕ್ಷ್ಯವೇ ಗಾಂಧೀಜಿಯವರಿಗೂ ಸೂಕ್ತವಾಗಿದ್ದ ಅಂಶ ಸ್ಪಷ್ಟವಾಯಿತು. ಬಲವಂತದಿಂದಲಾದರೂ ಆ ಲಕ್ಷ್ಯವನ್ನು ಸಾಧಿಸಲು ಜವಾಹರಲಾಲರು ಸಿದ್ಧರು; ಗಾಂಧೀಜಿಯವರಿಗೆ ಬಲವಂತ

ಬೇಡ, ಒಪ್ಪಿಗೆಯಿಂದಲೇ ಸಾಧಿಸುವ ರೀತಿ ಬೇಕು. ಇಷ್ಟುಮಾತ್ರವೇ ತಮ್ಮಿಬ್ಬರಿಗೂ ಅಂತರವೆಂಬುದನ್ನು ಸ್ಫುಟಗೊಳಿಸಿಕೊಂಡ ಬಳಿಕ ಜವಾಹರಲಾಲರಿಗೆ ಸಮಾಧಾನವಾಯಿತು. ಗಾಂಧೀಜಿಯನ್ನು ಬೀಳ್ಕೊಟ್ಟು ಮುಂಬಯಿಗೆ ಬಂದು ಅಲ್ಲಿ ಕೆಲವು ದಿನಗಳನ್ನು ಕಳೆದರು.

ಸಹೋದ್ಯೋಗಿಗಳನೇಕರು ಮುಂಬಯಿಯಲ್ಲಿದ್ದರು. ವಿಧವಿಧವಾದ ಅಭಿಪ್ರಾಯಗಳೂ ಅಭಿಮತಗಳೂ ಕುಣಿದಾಡುತ್ತಿದ್ದವು. ಅಭಿಪ್ರಾಯ ಭೇದವೆಂಬ ನೆಪದಿಂದ ಕರ್ತವ್ಯವಿಮುಖರಾಗಿದ್ದವರು ಕೆಲವರು ಗಾಂಧೀಜಿಯ ಮೇಲೂ ಕಾಂಗ್ರೆಸ್ ಮೇಲೂ ದೋಷಾರೋಪಣೆ ನಡೆಸಿದ್ದರು. ಇವರೆತ್ತಿದ ವಾದದ ನಾದ ದೊಡ್ಡದಾಗಿತ್ತು; ಹಾಯಾಗಿ ಕಾಲ ಕಳೆಯುತ್ತಿದ್ದವರು ಅಪಾರ ಕಷ್ಟನಷ್ಟಗಳನ್ನು ಸಹಿಸಿಕೊಂಡು ಕರ್ತವ್ಯ ಸಾಧನೆಗೈದಿದ್ದವರನ್ನು ದೂಷಿಸಿದಾಗ ಮನಸ್ಸಿಗೆ ರೇಜಿಗೆಯಾಯಿತು. ಪುಣೆಯಲ್ಲಿದ್ದಾಗ ಗಾಂಧೀಜಿಯವರೊಡನೆ 'ಸರ್ವೆಂಟ್ಸ್ ಆಫ್ ಇಂಡಿಯ' ನಿಲಯಕ್ಕೆ ಹೋಗಿದ್ದು ಲಿಬರಲ್ ಪಕ್ಷದವರ ಚಿತ್ತವೃತ್ತಿಯನ್ನು ಜವಾಹರಲಾಲರು ಕಂಡಿದ್ದರು. ಮುಂಬಯಿಯ ನಾನಾ ಬಗೆಯ ಜನರನ್ನೂ ಅವರಾಡುತ್ತಿದ್ದ ಮಾತುಗಳನ್ನೂ ಜವಾಹರಲಾಲರು ತಿಳಿದರು. ಉತ್ಸಾಹದಾಯಕವಾಗಿರಲಿಲ್ಲ.

ಲಖನೌ ಬಿಟ್ಟು ಒಂದು ವಾರ ಕಳೆದಿತ್ತು. ತಾಯಿಯವರ ಬಳಿಗೆ ಜವಾಹರಲಾಲರು ಹಿಂತಿರುಗಿ ಹೊರಟರು. ಸ್ವರೂಪರಾಣಿಯವರಿನ್ನೂ ಆಸ್ಪತ್ರೆಯಲ್ಲಿಯೇ ಇದ್ದರು. ಕಮಲಾದೇವಿ ಲಖನೌ ನಗರದಲ್ಲಿಯೇ ಇದ್ದುಕೊಂಡು ಸ್ವಂತ ನೆಮ್ಮದಿಯಿಲ್ಲದಿದ್ದಾಗ್ಯೂ ಆಕೆಯ ಶುಶ್ರೂಷೆ ಮಾಡುತ್ತಿದ್ದರು. ಲಖನೌ ತಲಪಿದ ಬಳಿಕ ಜವಾಹರಲಾಲರು ಅಲ್ಲಿಯೇ ಹದಿನೈದಿಪ್ಪತ್ತು ದಿನಗಳನ್ನು ಕಳೆದರು. ಆಸ್ಪತ್ರೆಗೆ ಬೆಳಗ್ಗೆ ಮತ್ತು ಸಂಜೆ ಹೋಗಿಬರುವ ಕೆಲಸ ವಿನಾ ಬೇರಾವ ತುರ್ತು ಕೆಲಸವೂ ಇಲ್ಲದೆ ವಿರಾಮವಿತ್ತು. ಆಗಲೆ "Whither India" ಎಂಬ ಹೆಸರಿಟ್ಟು ಕೆಲವು ಲೇಖನಗಳನ್ನು ಬರೆದು ಪತ್ರಿಕೆಗೆ ಕಳುಹಿಸಿದರು. ಪೃಥ್ವಿಯ ನಾನಾ ಭಾಗಗಳಲ್ಲಿ ನಡೆದಿದ್ದ ಘಟನೆಗಳ ಪರಿಣಾಮಗಳನ್ನೂ ಆ ಪರಿಸ್ಥಿತಿಯಲ್ಲಿ ಭಾರತವರ್ಷದ ಮುಂದಿನ ಗತಿಯೇನೆಂಬುದನ್ನೂ

ಸಮಾಲೋಚಿಸಿ ಬರೆದಿದ್ದರು. ಆ ಲೇಖನಗಳು ಎಲ್ಲೆಲ್ಲಿಯೂ ಪ್ರಕಟವಾದವು. ಇರಾನ್ ಮತ್ತು ಅಫ್ಘಾನಿಸ್ಥಾನದವರೂ ಅವುಗಳನ್ನು ತರ್ಜುಮೆ ಮಾಡಿ ತಮ್ಮ ದೇಶಗಳಲ್ಲಿ ಪ್ರಕಟಿಸಿಕೊಂಡರು.

ಆಸ್ಪತ್ರೆಯಲ್ಲಿದ್ದು ಸ್ವರೂಪರಾಣಿಯವರಿಗೆ ಬಲು ಬೇಸರವಾಗಿತ್ತು. ಅಲ್ಲದೆ ತಂಗಿ ಕೃಷ್ಣೆಯ ಮದುವೆಯೂ ನಿಶ್ಚಯವಾಗಿತ್ತು. ಎಷ್ಟು ಬೇಗನೆ ಪುನಃ ಜೈಲುಪ್ರಾಪ್ತಿಯಾಗುವುದೋ ಎಂತೋ ಎಂದಿದ್ದ ಸಂದರ್ಭ. ಆ ಕಾರಣದಿಂದ ಮದುವೆಯನ್ನು ಆದಷ್ಟು ಬೇಗನೆ ನಡೆಸುವ ನಿಷ್ಕರ್ಷೆಮಾಡಿ ಜವಾಹರಲಾಲರು ತಾಯಿಯನ್ನು ಕರೆದುಕೊಂಡು ಇಲಾಹಾಬಾದಿಗೆ ಬಂದರು. ಅಕ್ಟೋಬರ್ 23ನೆ ದಿನ ಗೊತ್ತಾಯಿತು. ಭಿನ್ನಜಾತಿ ವಿವಾಹವಾದುದರಿಂದ ಸಿವಿಲ್ ಕ್ರಮ ಜರುಗಿತು. ಅದಕ್ಕಿಂತಲೂ ವಿಚಿತ್ರವೆನ್ನಿಸಿದುದು ಜವಾಹರಲಾಲರು ಕಳುಹಿಸಿದ ಲಗ್ನಪತ್ರಿಕೆಗಳು. ಹಲಕೆಲವರು ಮಾತ್ರರನ್ನು ಕರೆಯುವ ನಿಶ್ಚಯವಾಗಿತ್ತು. ಅವರಿಗೆ ಕೊಡುವ ಆಹ್ವಾನ ಹಿಂದುಸ್ತಾನಿ ಭಾಷೆಯಾದರೂ ಇಂಗ್ಲಿಷ್ ಅಥವಾ ಲ್ಯಾಟಿನ್ ಲಿಪಿಯಲ್ಲಿತ್ತು. ಬೇಕಾಗಿಯೆ ಜವಾಹರಲಾಲರು ನಡೆಸಿದ ಪರೀಕ್ಷೆ. ಭಾಷೆಗಳ ಮತ್ತು ಲಿಪಿಗಳ ಇತ್ಯರ್ಥಕ್ಕಾಗಿ ವಾದವಿವಾದಗಳು ನಡೆಯುತ್ತಲಿದ್ದ ಪರಿಸ್ಥಿತಿಯಲ್ಲಿ ಈ ರೀತಿ ನಡೆಸಿ ಯಾರು ಯಾರು ಏನೆಂದಾರೋ ನೋಡೋಣವೆಂಬ ಕುತೂಹಲ. ಅನೇಕರಿಗೆ ಆ ಚರ್ಯೆ ಸರಿಬೀಳದಾಯಿತು. ಗಾಂಧೀಜಿಯವರಿಗೆ ಅದು ಸರಿದೋರಲಿಲ್ಲ. ಆದರೆ ಜವಾಹರಲಾಲರ ಉದ್ದೇಶ ಒಂದಾನೊಂದು ಪರೀಕ್ಷೆ ನಡೆಸುವಷ್ಟು ಮಾತ್ರ. ಇಂತಹ ಪರೀಕ್ಷೆಗಳನ್ನು ನಡೆಸಿ ತಮ್ಮ ಅಭಿಪ್ರಾಯವನ್ನು ಕಟ್ಟಿಕೊಳ್ಳುವುದು ವಿಹಿತವೆಂಬ ಚಿತ್ತವೃತ್ತಿ.

ಕೃಷ್ಣೆಯ ಮದುವೆ ನಡೆದ ಕಾಲಕ್ಕೆ ಯೂರೋಪಿನಲ್ಲಿ ವಿಠಲಭಾಯಿ ಪಟೇಲರು ತೀರಿಕೊಂಡರೆಂಬ ಸುದ್ದಿ ಬಂತು. ಅನುಭವಶಾಲಿಗಳಾಗಿದ್ದವರೊಬ್ಬೊಬ್ಬರಾಗಿ ಮೃತ್ಯುವಿನ ಪಾಲಾಗುತ್ತಿದ್ದರೆ ಹೇಗೆಂಬ ಚಿಂತೆ ಮನಸ್ಸಿಗೆ ತಟ್ಟಿತು. ಎಲ್ಲರೂ ವಿಠಲಭಾಯಿಯವರನ್ನು ಸ್ತೋತ್ರಗೈದರು. ವಿಶೇಷವಾಗಿ ಆತನನ್ನು ಸಭಾಶಿಷ್ಟಿಪಾಲಕನೆಂದು ಹೊಗಳಿ

ದರು. ಜವಾಹರಲಾಲರಿಗೆ "ಇದೇನು! ಆ ಶಿಷ್ಟಿಯನ್ನರಿತವರು ಬೇಕಾದಷ್ಟು ಮಂದಿ ಇರುತ್ತಾರೆ. ಯಾವುದೋ ಚಿಲ್ಲರೆ ಗುಣವನ್ನೆತ್ತಿ ಕೊಂಡು ಆ ಯೋಧನನ್ನು ಇವರೆಲ್ಲರೂ ಹೊಗಳುವುದರಲ್ಲಿ ವಿವೇಚನೆ ಯಿಲ್ಲ"ವೆನ್ನಿಸಿತು.

ಮದುವೆಯಾದ ತರುವಾಯ ಬನಾರಸ್ ಪ್ರಯಾಣ ಒದಗಿತು. ಅಲ್ಲಿಯ ಶಿವಪ್ರಸಾದಗುಪ್ತರು ಲಖನೌ ಜೈಲಿನಲ್ಲಿದ್ದಾಗ ವಾಯು ರೋಗಕ್ಕೆ ಗುರಿಯಾಗಿ ಬಿಡುಗಡೆಯಾಗಿ ತಮ್ಮ 'ಸೇವಾ ಉಪವನ' ವೆಂಬ ಗೃಹದಲ್ಲಿ ಹಾಸಿಗೆ ಹಿಡಿದಿದ್ದರು. ಚಿರಕಾಲದ ಮಿತ್ರರನ್ನು ಕಾಣಲು ಜವಾಹರಲಾಲರು ಹೊರಟರು. ಬನಾರಸ್ಸಿನಲ್ಲಿದ್ದಾಗ ಹಿಂದೀ ಸಾಹಿತ್ಯ ಸಂಘವೊಂದರ ಸದಸ್ಯರು ಜವಾಹರರನ್ನು ಕಂಡು ಹಿಂದೀ ಸಾಹಿತ್ಯವನ್ನು ಕುರಿತು ಮಾತುಕತೆ ಬೆಳಸಿದರು. ಜವಾಹರಲಾಲರು ತಮ್ಮ ಅಭಿಪ್ರಾಯವನ್ನು ಸಹಜರೀತಿಯಲ್ಲಿಯೆ ವ್ಯಕ್ತಪಡಿಸಿದರು. ಜನ ಸಾಮಾನ್ಯರಿಗಾಗಿ ತಕ್ಕ ಸುಲಭಶೈಲಿಯ ಪುಸ್ತಕಗಳು ಹೆಚ್ಚಬೇಕೆಂದೂ ಐರೋಪ್ಯ ಭಾಷೆಗಳ ಪುಸ್ತಕಗಳನ್ನು ಪರಿವರ್ತಿಸಿ ಜ್ಞಾನರಾಶಿಯನ್ನು ಜನರಿಗೆರೆಯಬೇಕೆಂದೂ ಹೇಳಿದರು. ಬಂಗಾಳಿ ಗುಜರಾಥಿ ಮರಾಠಿ ಭಾಷೆಗಳಲ್ಲಿ ನಡೆದಿರುವಷ್ಟು ಸಾಧನೆ ಹಿಂದೀ ಭಾಷೆಯಲ್ಲಿ ಪ್ರಾಯಶಃ ಆಗಿಲ್ಲವೆಂದೂ ನುಡಿದರು. ಬಂದಿದ್ದವರಲ್ಲೊಬ್ಬಾತನು ಈ ಸಂಭಾಷ ಣೆಯ ಸಾರಾಂಶವನ್ನು ಬರೆದು ಪತ್ರಿಕೆಗಳಿಗೆ ಕಳುಹಿಸಿದನು. ಕೂಡಲೆ "ಜವಾಹರಲಾಲರಿಗೇನು ಗೊತ್ತು? ಹಿಂದೀ ಭಾಷಾಪಾಂಡಿತ್ಯ ಲೇಶ ವಾದರೂ ಇಲ್ಲದಿರುವಾತ ಈ ರೀತಿ ನುಡಿಯಬಹುದೇ?" ಎಂದು ಟೀಕಾ ಪರಂಪರೆ ಪ್ರಾರಂಭವಾಯಿತು. ಸುಂಟರಗಾಳಿಯೆದ್ದು ಸುತ್ತಿಸುತ್ತಿ ಬೀಸಿದಂತೆ ಆ ಪರಂಪರೆ ರೇಗಿತು. ಜವಾಹರಲಾಲರಿಗೆ ಈ ವಾದ ವಿವಾದಗಳನ್ನು ಬೆಳೆಸುವ ಮನಸ್ಸಿರಲಿಲ್ಲ. ಆದಾಗ್ಯೂ ಸಾಹಿತಿಗಳು ಇನ್ನೂ ದುರ್ಬಲರಾದವರೆಂದುಕೊಳ್ಳಬೇಕಾಯಿತು. ವಿಮರ್ಶೆಯನ್ನು ತಾಳಿಕೊಳ್ಳಲಾರದವರು ದುರ್ಬಲರಲ್ಲದೆ ಮತ್ತೇನು?

ಬನಾರಸ್ಸಿನಲ್ಲಿದ್ದಾಗಲೇ ಇಂತಹ ಮತ್ತೊಂದು ಸಂದರ್ಭ ಹುಟ್ಟಿತು. ಅಲ್ಲಿಯೇ ಪಂಡಿತ ಮಾಲವೀಯರು ಸ್ಥಾಪಿಸಿರುವ ಹಿಂದು

ಯೂನಿವರ್ಸಿಟಿ ಇರುವುದು. ಮಾಲವೀಯರು ಜವಾಹರಲಾಲರನ್ನು ಅಲ್ಲಿ ಭಾಷಣ ಮಾಡಬೇಕೆಂದು ಕರೆದರು. ಭಾಷಣವನ್ನು ಕೇಳಲು ಸಾವಿರಾರು ಜನ ಬಂದಿದ್ದರು. ಭಾಷಣ ಮಾಡುತ್ತ ಜವಾಹರಲಾಲರು ಕೋಮುವಾರು ಜಗಳಗಳ ವಿಚಾರವನ್ನೆತ್ತಿಕೊಂಡು ಹಿಂದು ಮಹಾಸಭೆಯವರ ಕಲಾಪಗಳನ್ನು ಖಂಡಿಸಿದರು. ಮಹಾಸಭೆಯ ನಾಯಕರುಗಳು ಆಕ್ರೋಶಗೊಂಡು ಪತ್ರಿಕೆಗಳಲ್ಲಿ ಆ ಭಾಷಣವನ್ನೆತ್ತಿ ಯಥೇಷ್ಟವಾಗಿ ದೂಷಿಸಿ ವಿಹರಿಸಿದರು. ಆಗ ಜವಾಹರಲಾಲರು ಬಹುಕಾಲದಿಂದ ಮನಸ್ಸಿನಲ್ಲಿ ಅಡಗಿಸಿಟ್ಟುಕೊಂಡಿದ್ದ ತಮ್ಮ ಅಭಿಪ್ರಾಯವನ್ನು ವಿಶದವಾಗಿ ಬರೆದು ಪ್ರಕಟಿಸಿದರು. ಹಿಂದು ಪಕ್ಷವಾದರೂ ಮುಸ್ಲಿಂ ಪಕ್ಷವಾದರೂ ಕೋಮುವಾರು ಕಿತ್ತಾಟವೆಂಬುದು ಅಂತರಂಗದಲ್ಲಿ ರಾಜಕೀಯ ಸಾಮಾಜಿಕ ಘಟನೆಗಳಿಗೆ ವಿರೋಧಮಾತ್ರವೆಂದು ಸ್ಪಷ್ಟಗೊಳಿಸಿತ್ತು. ಪತ್ರಿಕೆಗಳಲ್ಲಿ ಆ ಲೇಖನ ಪ್ರಕಟವಾದಾಗ ಎರಡು ಪಕ್ಷಗಳವರೂ ತೆಪ್ಪನಾದರು. ಕೋಮುವಾರು ವೈಮನಸ್ಯಕ್ಕೇನು ಕಾರಣವೆಂಬ ನಿರ್ಧರ ಜವಾಹರಲಾಲರ ಮನಸ್ಸಿನಲ್ಲಿ ಸ್ಥಿರವಾದ ರೂಪ ಪಡೆಯಿತು.

ಮನೆಯ ಆಡಳಿತವನ್ನು ಕ್ರಮಗೊಳಿಸಲು ಜವಾಹರಲಾಲರಿಗೆ ಅದೇ ಸಮಯವಾಗಿತ್ತು. ತಾಯಿಯವರು ನಿದಾನವಾಗಿ ಗುಣಮುಖವಾಗುತ್ತಿದ್ದರು; ಗಾಬರಿ ಪಡಬೇಕಾದುದಿರಲಿಲ್ಲ. ಆದ್ದರಿಂದ ಜವಾಹರಲಾಲರು ಮನೆಯ ವೆಚ್ಚದ ಕಡೆಗೆ ಗಮನಕೊಟ್ಟರು. ಆದಾಯಕ್ಕಿಂತ ವೆಚ್ಚ ಹೆಚ್ಚಾಗಿಯೇ ಇತ್ತು. ವೆಚ್ಚವನ್ನು ತಗ್ಗಿಸಲು ಉಪಾಯವೂ ಕಾಣದಾಯಿತು.

"ಆದಾಯ ವೆಚ್ಚಗಳು ಸಮನಾಗಿ ತೂಗುವಂತೆ ನೆರವೇರಿಸುವ ಛಲವೇನೂ ನನ್ನಲ್ಲಿರಲಿಲ್ಲ. ಯಾವ ಆಸ್ತಿಪಾಸ್ತಿಯೂ ಇಲ್ಲದಿರುವ ಸ್ಥಿತಿಯನ್ನು ಅಂತರಂಗದಲ್ಲಿ ಬಯಸುತ್ತಿದ್ದೆ. ಆಸ್ತಿಪಾಸ್ತಿಗಳು ಉಪಯುಕ್ತವಾದವುಗಳೇ ಹೌದು; ಆದರೆ ದೂರ ಪ್ರಯಾಣ ಹೊರಡುವವನಿಗೆ ಹೆಚ್ಚು ಹೊರೆ ಹೇಗೋ ಹಾಗೆಯೇ! ನಷ್ಟವಾದೀತೆಂಬ ಭಯವಿರುವುದರಿಂದಲೇ ಆಸ್ತಿವಂತರು ದೊಡ್ಡ ಪ್ರಯತ್ನಗಳಿಂದ ದೂರದಲ್ಲಿರುತ್ತಾರೆ. ಸರ್ಕಾರದವರು ಎಂದು ತೋರಿದರೆ ಅಂದು ವಶಪಡಿಸಿಕೊಳ್ಳುವಂತಿರುವಾಗ ಆಸ್ತಿಪಾಸ್ತಿಗಳನ್ನೇಕೆ ಕಟ್ಟಿಕೊಳ್ಳಬೇಕು?

ಆದುದರಿಂದ ಇದ್ದುದನ್ನೂ ವಿಲೆ ಮಾಡಲು ನನ್ನಲ್ಲಿ ಇಷ್ಟ ಹುಟ್ಟಿತ್ತು. ನಮಗೆ ಬೇಕಾದಷ್ಟನ್ನು ಆಗಿಂದಾಗ್ಗೆ ಸಂಪಾದಿಸಿಕೊಳ್ಳಬಲ್ಲೆನೆಂಬ ಧೈರ್ಯವಿತ್ತು. ಆದರೆ ತಾಯಿಯವರಿಗೆ ಹಿಂದಿನಿಂದ ಅಭ್ಯಾಸವಾಗಿದ್ದ ನೆಮ್ಮದಿಯಲ್ಲಿ ಸ್ವಲ್ಪವೂ ಲೋಪವಾಗಬಾರದೆಂಬ ಚಿಂತೆಯೊಂದು, ನನ್ನ ಮಗಳ ವಿದ್ಯಾಭ್ಯಾಸ ಯೂರೋಪಿನಲ್ಲಿ ಸಮರ್ಪಕವಾಗಿ ನಡೆಯಬೇಕೆಂಬ ಇಷ್ಟಾರ್ಥವಿನ್ನೊಂದು ಅಡ್ಡಿಯಾಗಿತ್ತು. ನನಗಾಗಲಿ ನನ್ನ ಹೆಂಡತಿಗಾಗಲಿ ವಿಶೇಷವಾದ ಹಣ ಅವಶ್ಯವಿಲ್ಲ. ಇಬ್ಬರೂ ಹೀಗೆಯೇ ಯೋಚನೆ ಮಾಡಿದೆವು.

ತತ್ಕಾಲಕ್ಕೆ ನನ್ನ ಹೆಂಡತಿಯ ಆಭರಣಗಳನ್ನೂ ಮನೆಯಲ್ಲಿದ್ದ ಬೆಳ್ಳಿ ಪಾತ್ರೆಗಳನ್ನೂ ಇತರ ವಸ್ತುಗಳನ್ನೂ ಮಾರಲು ನಿಶ್ಚಯಿಸಿದೆವು. ತನ್ನ ಆಭರಣಗಳನ್ನು ಮಾರುವುದೆಂದರೆ ಕಮಲೆಗೆ ಅಷ್ಟು ಹಿತವಾಗಿ ಕಾಣಲಿಲ್ಲ. ವರ್ಷಗಟ್ಟಲೆ ಕಾಲ ಕಳೆದರೂ ಅವುಗಳೆಲ್ಲ ಬ್ಯಾಂಕಿನಲ್ಲಿಯೆ ಇದ್ದವು; ಕಮಲೆ ಧರಿಸುತ್ತಿರಲಿಲ್ಲ. ಆದರೆ ಮುಂದಿನ ಕಾಲದಲ್ಲಿ ಮಗಳಿಗೆ ಕೊಡಬೇಕೆಂದಿದ್ದಳು."

ಪುನಃ ಯಾವ ಕ್ಷಣದಲ್ಲಿ ದಸ್ತಗಿರಿಯಾದೀತೋ ಎಂಬ ಶಂಕೆಯಿದ್ದೇ ಇತ್ತು. ಕಾಂಗ್ರೆಸ್ ಸಂಬಂಧವಾದುದೆಲ್ಲವೂ ವಿಧಿಬಾಹಿರವೆನಿಸಿದ್ದುದಲ್ಲದೆ ಆರ್ಡಿನೆನ್ಸುಗಳ ಪ್ರಾಬಲ್ಯ ಪ್ರಭಾವಗಳು ರಂಜಿಸುತ್ತಲೇ ಇದ್ದವು. ಲಕ್ಷಾಂತರ ಜನರು ಬಂಧನದಲ್ಲಿದ್ದುದಲ್ಲದೆ ಜನರಿಗೆ ಸಾಮಾನ್ಯ ಸ್ವಾತಂತ್ರ್ಯಗಳೇ ಇರಲಿಲ್ಲ. ಜವಾಹರಲಾಲರನ್ನು ಎಲ್ಲೆಲ್ಲಿಗೋ ಕರೆಯುತ್ತಿದ್ದರು. ರಾಜಕೀಯ ಕರ್ತವ್ಯವೆಲ್ಲವನ್ನೂ ಬಿಟ್ಟುಕೊಟ್ಟು ಕ್ಷೇಮವಾಗಿರುವುದೆಂದರೆ ಸಹಿಸದು; ಆತುರಾತುರವಾಗಿ ಪುನಃ ಜೈಲಿಗೆ ನುಗ್ಗುವ ಇಷ್ಟವೂ ಇಲ್ಲ. ಹೀಗಿರುವಲ್ಲಿ ಜವಾಹರಲಾಲರು ಉದ್ದೇಶಪೂರ್ವಕವಾಗಿ ಆಜ್ಞಾಭಂಗಮಾಡದೆ ಇದ್ದು ಮಾತನಾಡುವ ಸಂದರ್ಭ ಬಂದಾಗ ಮಾತ್ರ ಮುಚ್ಚುಮರೆಯಿಲ್ಲದೆ ತಮ್ಮ ಅಭಿಪ್ರಾಯಗಳನ್ನು ವಿಸ್ತರಿಸಿ ಹೇಳುತಿದ್ದರು. ಜಬ್ಬಲ್ಪುರದಲ್ಲಿ ದೊಡ್ಡ ಸಭೆ ನಡೆಯಿತು; ದಿಲ್ಲಿಯಲ್ಲಿಯೂ ಜವಾಹರಲಾಲರ ಭಾಷಣಕ್ಕಾಗಿ ಪ್ರಚಂಡ ಸಭೆಯೇ ಸೇರಿತ್ತು. ಬಿರುಸಾದ ಭಾಷಣಗಳನ್ನು ಕೊಟ್ಟಿದ್ದರೂ ದಸ್ತಗಿರಿಯಾಗಲಿಲ್ಲ.

ತಾವು ಕಾಂಗ್ರೆಸ್ಸಿನ ಕಾರ್ಯದರ್ಶಿಯೆಂಬುದನ್ನು ಮರೆಯಲೂ ಇಲ್ಲ, ಮರೆಸಲೂ ಇಲ್ಲ. ಯುಕ್ತಪ್ರಾಂತದ ಕಾಂಗ್ರೆಸ್ ಸಭಿಕರಲ್ಲಿ

ಹೊರಗಿದ್ದವರು ಮಾತ್ರ ಸಮಾಲೋಚನೆಗಾಗಿ ಸಭೆ ಸೇರಿದರು. ಕಾನೂನನ್ನು ಭಂಗಗೊಳಿಸುವ ಕರ್ತವ್ಯವಾವುದನ್ನೂ ಇತ್ಯರ್ಥಮಾಡಿಕೊಳ್ಳದೆ ಇದ್ದಾಗ್ಗೂ ಆ ಸಭೆ ಮುಗಿದು ಅಲ್ಲಿಂದ ಗ್ರಾಮಾಂತರಗಳಿಗೆ ಹೊರಟವರನ್ನು ಸರ್ಕಾರದವರು ದಸ್ತಗಿರಿ ಮಾಡಿಯೇ ಮಾಡಿದರು. ವರ್ಕಿಂಗ್ ಕಮಿಟಿಯನ್ನೂ ಸೇರಿಸಬೇಕೆಂಬ ಯತ್ನವನ್ನು ಜವಾಹರಲಾಲರಿಟ್ಟುಕೊಂಡರು. ಆದರೆ ಗಾಂಧೀಜಿಯವರ ಬಿಡುಗಡೆಯಾದ ಬಳಿಕ ಕಾಂಗ್ರೆಸ್ ಕಮಿಟಿಗಳೂ ಕಚೇರಿಗಳೂ ಸಸ್ಪೆಂಡ್ ಆಗಿದ್ದವು. ಹೀಗಾಗಿ ಅಧ್ಯಕ್ಷನಿಲ್ಲ, ಕಚೇರಿಯಿಲ್ಲ, ಶಿಬ್ಬಂದಿಯಿಲ್ಲ. ಆದರೂ ಜವಾಹರಲಾಲರು ಆ ವರ್ಕಿಂಗ್ ಕಮಿಟಿಯನ್ನು ಜಬ್ಬಲ್ಪುರದಲ್ಲಿ ಗಾಂಧೀಜಿ ಬರುವ ವೇಳೆಗೆ ಸೇರಿಸಿದರು. ಗಾಂಧೀಜಿ ತಮ್ಮ ಸರ್ವ ಚೈತನ್ಯವನ್ನೂ ಹರಿಜನೋದ್ಧಾರ ಯಾತ್ರೆಗಾಗಿ ಉಪಯೋಗಿಸುತ್ತಿದ್ದ ಕಾಲ. ಸಭೆ ಸೇರಿದಾಗ ಪರಸ್ಪರವಾಗಿ ಭೇದಗಳೇ ತೋರಿದವು.

1934ನೆ ವರ್ಷವಾರಂಭವಾಯಿತು. ಇಲಾಹಾಬಾದ್ ಜಿಲ್ಲಾ ವಿಭಾಗದಲ್ಲಿ ಕಾಂಗ್ರೆಸ್ ಕೆಲಸಗಾರರ ದಸ್ತಗಿರಿಗಳು ನಡೆಯುತ್ತಲೇ ಇದ್ದವು. ಆ ಪ್ರಾಂತದ ಕಾರ್ಯದರ್ಶಿಯಾದ ರಫ್ಷಿ ಅಹ್ಮದ್ ಕಿದ್ವಾಯಿಗೂ ದಸ್ತಗಿರಿಯಾಯಿತು. 26ನೆ ತಾರೀಖು ಸಮೀಪವಾಯಿತು. ಅದೇ ಸ್ವಾತಂತ್ರ್ಯ ಸಂಕಲ್ಪವನ್ನು ಸ್ಮರಿಸಿಕೊಳ್ಳುವ ದಿನ. ವಿಸ್ತಾರವಾದ ಕಾರ್ಯಕ್ರಮವನ್ನಿಟ್ಟುಕೊಳ್ಳದಿದ್ದರೂ ಯಥೋಚಿತವಾಗಿ ಆ ದಿನವನ್ನು ನಡೆಸಬೇಕೆಂದು ಜವಾಹರಲಾಲರು ನಿಶ್ಚಯಿಸಿದರು. ಇಲಾಹಾಬಾದಿನಲ್ಲಿ ಯೋಗ್ಯರೀತಿಯಲ್ಲಿ ನಡೆಯುವಂತೆ ಪೂರ್ವಸಿದ್ಧತೆಗಳಾದವು.

ಅದಕ್ಕೆ ಮೊದಲು ಜವಾಹರಲಾಲರು ಬಂಗಾಳಕ್ಕೆ ಹೋಗಿ ಬರುವುದು ಉಚಿತವೆಂದು ಭಾವಿಸಿದರು. ಅಲ್ಲಿಯ ಮಿತ್ರರನ್ನೂ ಸಹೋದ್ಯೋಗಿಗಳನ್ನೂ ಕಾಣುವುದಲ್ಲದೆ ಅಸಾಧಾರಣವಾಗಿ ಕಷ್ಟನಷ್ಟ ಹಿಂಸೆಗಳನ್ನು ಸಹಿಸಿಕೊಂಡಿದ್ದ ಬಂಗಾಳದ ಜನರಲ್ಲಿ ತಮ್ಮ ಮೆಚ್ಚುಗೆಯನ್ನೂ ತೋರಿಕೊಡುವ ಇಷ್ಟವಿತ್ತು.

ಕಮಲಾದೇವಿಯ ಅಸ್ವಸ್ಥತೆಗೂ ಸರಿಯಾದ ಚಿಕಿತ್ಸೆ ನಡೆಯಬೇಕಾಗಿತ್ತು. ಕಲ್ಕತ್ತೆಯಲ್ಲಿ ಡಾಕ್ಟರುಗಳ ಅಭಿಪ್ರಾಯವನ್ನು ಕೇಳುವ

ಅಗತ್ಯವಿತ್ತು. ಜೈಲಿನಿಂದ ಹೊರಗಿದ್ದ ಹಲಕೆಲವು ದಿನಗಳಲ್ಲಿ ಒಬ್ಬರನ್ನೊಬ್ಬರು ಆಗಲುವುದಕ್ಕಿಷ್ಟವಿಲ್ಲದೆ ಆ ಪ್ರಯಾಣವನ್ನು ವಿಲಂಬಿಸಿತ್ತು. ಸ್ವಾತಂತ್ರ್ಯ ದಿನಾಚರಣೆಯ ವೇಳೆಗೆ ಹೇಗಾದರೂ ದಸ್ತಗಿರಿ ಸಿದ್ಧವೆನ್ನಿಸಿದ್ದುದರಿಂದ ಜನವರಿ 15ನೆ ತಾರೀಖಿನ ದಿನ ಜವಾಹರಲಾಲ್ ಕಮಲಾದೇವಿಯರಿಬ್ಬರೂ ಇಲಾಹಾಬಾದಿನಿಂದ ಕಲ್ಕತ್ತೆಗೆ ಪ್ರಯಾಣ ನಿಶ್ಚಯ ಮಾಡಿಕೊಂಡರು.

ಆಗಲೆ ಪ್ರಯಾಗದಲ್ಲಿ ಮಾಘಮೇಳ. ಸಾವಿರಾರು ಜನರು ಸಂಗಮ ಸ್ನಾನಕ್ಕಾಗಿ ಬಂದಿದ್ದರು. 15ನೆ ತಾರೀಖಿನ ಮಧ್ಯಾಹ್ನ ಜವಾಹರಲಾಲರು ತಮ್ಮ ಮನೆಯ ವರಾಂಡದಲ್ಲಿ ನಿಂತುಕೊಂಡು ಎದುರಿಗಿದ್ದ ರೈತರೊಂದಿಗೆ ಮಾತುಕಥೆ ನಡೆಸುತ್ತಿದ್ದರು. ಇದ್ದಕ್ಕಿದ್ದಂತೆಯೆ ಕಾಲುಗಳು ಕುಸಿದು ಬೀಳುವಂತಾಗಿ ಜವಾಹರರು ಪಕ್ಕದ ಕಂಭಕ್ಕೆ ಆನಿಕೊಂಡರು. ಬಾಗಿಲುಗಳು ಬಡಬಡನೆ ಬಡಿದುಕೊಂಡವು. ಸ್ವರಾಜ್ ಭವನದ ಚಾವಣಿಯಿಂದ ಹೆಂಚುಗಳು ಜಾರಿಕೊಂಡು ನೆಲಕ್ಕೆ ಬಿದ್ದವು. ಒಂದು ಕ್ಷಣವಾದಮೇಲೆ ಭೂಕಂಪವಿರಬೇಕೆಂದು ತಿಳಿಯಿತು. ಜವಾಹರಲಾಲರ ದೊಡ್ಡಮ್ಮ ದೂರದಿಂದಲೇ ಕೂಗಿ "ಜವಾಹರ್! ಮೈದಾನಕ್ಕೆ ಓಡು" ಎಂದುದನ್ನು ಲಕ್ಷ್ಯಮಾಡದೆ ಇದ್ದುಬಿಟ್ಟರು. ಎರಡು ಮೂರು ನಿಮಿಷಕಾಲ ಮಾತ್ರದ ಘಟನೆಯಾದರೂ ಪಕ್ಕದ ಬಿಹಾರ್ ಪ್ರಾಂತದಲ್ಲಿ ಎಂತಹ ಅನಾಹುತ ಸಂಭವಿಸಿತೆಂದು ಯಾರಿಗೂ ಆಗ ತಿಳಿಯಲಿಲ್ಲ.

16ನೆ ತಾರೀಖಿನ ದಿನ ಕಲ್ಕತ್ತೆ ಸೇರಿ ಅಲ್ಲಿಯ ಕರ್ತವ್ಯದಲ್ಲಿ ಇಬ್ಬರೂ ತೊಡಗಿದರು. ಕಮಲಾದೇವಿಗೆ ಕ್ಷಯವೆಂಬ ಶಂಕೆಯಿತ್ತು. ಪರೀಕ್ಷೆ ಮಾಡಿದ ಡಾಕ್ಟರರು ಮತ್ತೆ ಒಂದು ತಿಂಗಳ ತರುವಾಯ ಪರೀಕ್ಷೆ ಮಾಡಿ ನಿಷ್ಕರ್ಷೆ ಮಾಡಬೇಕೆಂದು ಹೇಳಿದರು. ಮೂರು ದಿನಗಳು ಮಾತ್ರ ಅಲ್ಲಿದ್ದುದು. ಆ ಮೂರು ದಿನಗಳಿಗೂ ಮೂರು ದೊಡ್ಡ ಸಭೆಗಳಲ್ಲಿ ಜವಾಹರಲಾಲರು ಭಾಷಣಮಾಡಬೇಕಾಗಿತ್ತು. ಗೋಪ್ಯರೀತಿಯಲ್ಲಿ ಹತ್ಯೆಗಳನ್ನು ನಡೆಸುವ ಮಾರ್ಗವನ್ನು ಖಂಡಿಸಿದ್ದಲ್ಲದೆ ಜವಾಹರಲಾಲರು ಬಂಗಾಳದ ಜನರನ್ನು ಬಂಧನದಲ್ಲಿರಿಸಿ ಹಿಂಸೆಗೊಳಿಸಿದ್ದ

ಸರ್ಕಾರೀ ವರ್ತನೆಯನ್ನೂ ತುಂಬಿದ ಹೃದಯದಿಂದ ಖಂಡಿಸಿದರು. ಆ ಭಾಷಣಗಳ ಸಂಬಂಧವಾಗಿಯೆ ಮುಂದಿನ ಶಿಕ್ಷೆ ಗೊತ್ತಾದುದು.

ಆ ವೇಳೆಗೆ ಬಿಹಾರ ಪ್ರಾಂತದಲ್ಲಿ ಭೂಕಂಪದಿಂದ ಸಂಭವಿಸಿದ್ದ ಘೋರ ಅನಾಹುತಗಳ ಸುದ್ದಿ ತಿಳಿಯಿತು. ಕಲ್ಕತ್ತೆಯಿಂದ ಹೊರಟ ಜವಾಹರಲಾಲರು ಕಮಲಾದೇವಿಯೊಡನೆ ಒಂದು ದಿನ ಮಾತ್ರ ಶಾಂತಿ ನಿಕೇತನಕ್ಕೆ ಹೋಗಿದ್ದು ರವೀಂದ್ರನಾಥರ ದರ್ಶನಮಾಡಿ ಇಲಾಹಾ ಬಾದಿಗೆ ಹಿಂತಿರುಗುತ್ತ ಪಾಟ್ನಾದಲ್ಲಿಳಿಯುವ ನಿಶ್ಚಯಮಾಡಿಕೊಂಡರು.

ಹದಿನೈದನೆ ತಾರೀಖಿನ ದಿನ ಬಿಹಾರಿನಲ್ಲಿ ಎರಡು ಮೂರೇ ನಿಮಿಷಗಳ ಹೊತ್ತು ಕಳೆಯುವುದರಲ್ಲಿ ಭೂಕಂಪದ ಅನಾಹುತ ನಡೆದು ಹೋಯಿತು. ಸಾವಿರಾರು ಕಟ್ಟಡಗಳು ತತ್ತರಿಸಿ ನೆಲಕ್ಕುರುಳಿದವು. ಭೂಗರ್ಭದೊಳಗಿಂದ ಮರಳಿನ ರಾಶಿಯೆದ್ದು ಪೈರುಪಚ್ಚೆಗಳ ಪ್ರದೇಶ ಗಳನ್ನು ಮುಚ್ಚಿತು; 110 ಡಿಗ್ರಿಯಷ್ಟು ಉಷ್ಣವುಳ್ಳ ಜಲರಾಶಿ ಒಳಗಿ ನಿಂದ ಉಕ್ಕಿಬಂತು. ಕಣ್ಣು ರೆಪ್ಪೆ ಮುಚ್ಚಿ ತೆರೆಯುವಷ್ಟರಲ್ಲಿ ಇಪ್ಪತ್ತು ಸಾವಿರ ಪ್ರಾಣ ನಷ್ಟವಾಗಿ ಹತ್ತು ಲಕ್ಷ ಮನೆಗಳು ಮುರಿದು ಅಪಾರ ವಾದ ಧ್ವಂಸವಾಗಿ ಹೋಯಿತು.

ಜವಾಹರಲಾಲರು ಪಾಟ್ನದಲ್ಲಿಳಿದು ಬಾಬು ರಾಜೇಂದ್ರ ಪ್ರಸಾದ ರನ್ನು ಕಂಡು ನಷ್ಟ ಪರಿಹಾರ ಪ್ರಯತ್ನದ ವಿಚಾರವಾಗಿ ಚರ್ಚಿಸ ಬೇಕೆಂದಿದ್ದರು. ಆಗ ತಾನೆ ರಾಜೇಂದ್ರ ಬಾಬುವಿಗೆ ಬಿಡುಗಡೆ ಯಾಗಿತ್ತು; ಬಿಡುಗಡೆಯಾದ ಕೂಡಲೆ ಆತನು ತನ್ನ ಆರೋಗ್ಯ ಸ್ಥಿತಿ ಯನ್ನು ಲಕ್ಷಿಸದೆ ಪರಿಹಾರೋಪಾಯಗಳನ್ನು ಕೈಕೊಂಡಿದ್ದನು. ಕಮಲಾ ದೇವಿಯ ಸೋದರನ ಮನೆಯಲ್ಲಿಳಿದುಕೊಂಬ ಯೋಚನೆಯಿತ್ತು; ಸ್ಟೇಷನ್ನಿನಿಂದ ಅಲ್ಲಿಗೆ ಹೋಗಿ ನೋಡಿದಾಗ ಮನೆ ನೆಲಸಮವಾಗಿತ್ತು. ಎಲ್ಲರಂತೆ ಮೈದಾನದಲ್ಲಿಯೆ ಆ ಕಾಲವನ್ನು ಇಬ್ಬರೂ ಕಳೆದರು. ಮರು ದಿನವೇ ಜವಾಹರಲಾಲರು ಮುಸ್ಸಫರಪುರಕ್ಕೆ ಹೋಗಿ ಸ್ಥಿತಿಗತಿಗಳನ್ನು ಕಣ್ಣಾರೆ ಕಂಡರು. ಅಲ್ಲಿಯೆ ಭೂಕಂಪದ ಪರಿಣಾಮ ಘೋರರೂಪ ತಾಳಿತ್ತು. ಪಟ್ಟಣ ಪಟ್ಟಣವೇ ಉರುಳಿಕೊಂಡಿತ್ತು; ಬೀದಿಗಳಲ್ಲಿ ಬಿದ್ದಿದ್ದ ಇಟ್ಟಿಗೆ ಮಣ್ಣುಗಳ ರಾಶಿಯನ್ನು ಎತ್ತಿ ಬಿಡಿಸಿದಾಗ ಹಾಗೆ

ಹಾಗೆಯೆ ಒರಗಿದ್ದ ಹೆಣಗಳು ಕಂಡವು. ನೋಡಿದಾಗ ಎಂತಹವರಿಗಾದರೂ ಭಯವಾಗುವಂತಿತ್ತು.

ಇಲಾಹಾಬಾದಿಗೆ ಹಿಂತಿರುಗಿದ ಕೂಡಲೆ ಜವಾಹರಲಾಲರು ಬಿಹಾರ ಜನರ ಸಹಾಯಕ್ಕಾಗಿ ದ್ರವ್ಯವನ್ನೂ ಇತರ ಪದಾರ್ಥವನ್ನೂ ಶೇಖರಿಸುವ ಪ್ರಯತ್ನದಲ್ಲಿ ಮಗ್ನರಾದರು. 26ನೆ ತಾರೀಖಿನ ದಿನದ ಆಚರಣೆಯನ್ನು ಆ ಸಂದರ್ಭದಲ್ಲಿ ಬಿಟ್ಟು ಬಿಡೋಣವೇ ಎಂಬ ಪ್ರಶ್ನೆ ಹುಟ್ಟಿತು. ಬಿಡಬಾರದೆಂದೇ ನಿರ್ಧರವಾಯಿತು. ಆಚರಣೆಯು ನಡೆದಾಗ ಪೋಲೀಸಧಿಕಾರಿಗಳಿಂದ ವಿರೋಧ ನಡೆಯುವ ನಿರೀಕ್ಷೆಯೇನೋ ಇತ್ತು; ಆದರೆ ಹೆಚ್ಚಾಗಿ ವಿರೋಧ ಕಾಣಿಸಲಿಲ್ಲ. ಭೂಕಂಪದ ಪರಿಣಾಮದ ವಿಚಾರವೇ ಎಲ್ಲರನ್ನೂ ಹಿಡಿದಿತ್ತು.

ಪ್ರಯಾಗದಲ್ಲಿ ಅದಕ್ಕಾಗಿಯೇ ಒಂದು ಕಮಿಟಿಯೇರ್ಪಟ್ಟಿತ್ತು; ಎಲ್ಲ ಬಗೆಯ ಜನರೂ ಆ ಕಮಿಟಿಯಲ್ಲಿದ್ದರು. ಕಮಿಟಿಯವರು ಜವಾಹರಲಾಲರನ್ನೇ ಅನಾಹುತ ನಡೆದಿದ್ದ ಸ್ಥಳಗಳನ್ನು ನೋಡಿಕೊಂಡು ಬರಲು ಕಳುಹಿಸಿಕೊಟ್ಟರು. ತಕ್ಷಣವೇ ಜವಾಹರಲಾಲರು ಹೊರಟು ಹತ್ತು ದಿನಗಳ ಕಾಲ ವಿಶ್ರಾಂತಿಯನ್ನೊಲ್ಲದೆ ಆ ಪ್ರದೇಶದಲ್ಲಿ ಸಂಚಾರ ಮಾಡಿದರು. ಬೆಳಿಗ್ಗೆ ಐದು ಗಂಟೆಯಿಂದ ರಾತ್ರಿ ಹನ್ನೆರಡರವರೆಗೆ ಅವಿರತವಾದ ಸಂಚಾರ. ಮೋಟಾರ್ ಸಾಧ್ಯವಾದಲ್ಲಿ ಮೋಟಾರ್, ದೋಣಿ ಸಾಧ್ಯವಾದಲ್ಲಿ ದೋಣಿ, ನಡಿಗೆಯೇ ಸಾಧ್ಯವಾದಾಗ ನಡಿಗೆ. ಪಟ್ಟಣಗಳಂತೂ ಹಾಳಿನ ರಾಶಿಗಳು; ರಸ್ತೆಗಳಿಗೇ ವಾಯುರೋಗ ಹಿಡಿದಂತಾಗಿ ವಕ್ರವಕ್ರವಾಗಿ ತಿರುಗಿದ್ದುದಲ್ಲದೆ ಮನೆಗಳ ಪಾಯಕ್ಕಿಂತ ಎತ್ತರವಾಗಿ ಎದ್ದಿದ್ದವು. ರಸ್ತೆಗಳಲ್ಲೆಲ್ಲ ಬಿರುಕುಗಳು; ಆ ಬಿರುಕುಗಳಿಂದಲೇ ನೀರೂ ಮರಳೂ ನುಗ್ಗಿಬಂದು ಜನರನ್ನೂ ದನಗಳನ್ನೂ ನುಂಗಿತ್ತು. ಇನ್ನು ಗ್ರಾಮಾಂತರ ಪ್ರದೇಶಗಳೋ! ಮೈಲಿಗಳ ಗಟ್ಟಲೆಯಾಗಿ ಮರಳಿನ ರಾಶಿ, ಜಲಸಮೂಹ, ಭಯಂಕರವಾದ ಡೊಗರುಗಳು, ಜ್ವಾಲಾಮುಖಿಯ ಮೂತಿಗಳಂತಿಹ ಮೂತಿಗಳು!

ಹೋದೆಡೆಯಲ್ಲೆಲ್ಲ ವಿಚಿತ್ರವಿಚಿತ್ರವಾದ ಸಂಗತಿಗಳು ಕಂಡಾಗ್ಯೂ ನಡೆದಿದ್ದ ಅಪಾರ ನಷ್ಟದೆದುರಿನಲ್ಲಿ ಪರಿಹಾರೋಪಾಯಗಳು ಮಾತ್ರವೇ

ಯೋಚನೀಯವಾಗಿದ್ದವು. ಸ್ಥಳೀಯರು ಅಸಹಾಯರಾಗಿದ್ದು ಬಿಟ್ಟರು; ಹೊರಗಿನವರು ಬಂದು ಎಚ್ಚರಕೊಡುವವರೆಗೂ ದಿಕ್ಕೆಟ್ಟವರಂತಿದ್ದು ದನ್ನು ಜವಾಹರಲಾಲರು ಗಮನಿಸಿದರು. ಮಾಂಘೀರ್ ಬಳಿಯಲ್ಲಿರು ವಾಗ ತಾವೇ ವಾಲಂಟಿಯರ್ ಉಡುಪನ್ನು ಧರಿಸಿ ಸನಿಕೆಯನ್ನು ಹೊತ್ತು ಹೊರಟು ಅಗೆದು ಮಕ್ಕರಿ ತುಂಬಿಸಿ ಅದನ್ನು ಹೊತ್ತು ಹಾಕಿ ದರು. ಇತರ ಮುಖ್ಯಸ್ಥರೂ ಸೇರಿ ಅಗೆದೆಡೆಯಲ್ಲಿ ಹೂತುಹೋಗಿದ್ದ ಬಾಲೆಯೊಬ್ಬಳ ಶವ ದೊರಕಿತು. ಆದರೆ ಸಂಚಾರ ಮುಗಿಸಿ ಬೇಗನೆ ಹಿಂತಿರುಗಿ ಬರಬೇಕಾಗಿತ್ತು.

ಸಂಚಾರ ಹೊರಡುವ ಮೊದಲೆ ಜವಾಹರಲಾಲರು ಭೂಕಂಪದ ಅನಾಹುತ ಸಂಬಂಧವಾಗಿ ಅಧಿಕಾರಿಗಳ ಕರ್ತವ್ಯ ಲೋಪವನ್ನು ವಿವರಿಸಿ ಅವರಲ್ಲಿ ದಕ್ಷತೆ ಸಾಲದೆಂದು ಹೇಳಿದ್ದರು. ಆ ಹೇಳಿಕೆಯಿಂದ ತಳಮಳ ವೇನೋ ಎದ್ದು ರೇಗಿತ್ತು. ಸಂಚಾರವನ್ನಿಟ್ಟುಕೊಂಡ ವೇಳೆಗೆ ಎಲ್ಲ ಪ್ರಾಂತಗಳಿಂದಲೂ ಬಿಹಾರಕ್ಕೆ ದ್ರವ್ಯ ಸಹಾಯವೂ ಜನ ಸಹಾಯವೂ ಕೈಗೂಡಿ ಬಂತು. ಬಿಹಾರ್ ಪ್ರಾಂತದ ಕಾಂಗ್ರೆಸ್ಸಿಗೆ ನಾಯಕರಾಗಿ ಎಲ್ಲ ಬಿಹಾರಿಗಳ ವಿಶ್ವಾಸಕ್ಕೂ ಪಾತ್ರರಾಗಿದ್ದ ರಾಜೇಂದ್ರ ಬಾಬುಗಳೇ ಕಷ್ಟನಿವಾರಣಾ ಸಮಿತಿಯ ಅಧ್ಯಕ್ಷರಾಗಿದ್ದರು. ಆ ಸಮಯಕ್ಕೆ ಆತ ನೊದಗಿದ್ದುದು ನಿಜವಾಗಿ ಬಿಹಾರ್ ಪ್ರಾಂತದ ಭಾಗ್ಯ.

ಸಂಚಾರ ಮುಗಿಸಿಕೊಂಡು ಪಾಟ್ಣಕ್ಕೆಬಂದ ರಾತ್ರಿ ಬಹಳ ಹೊತ್ತಿನವರೆಗೂ ಇತರರೊಡನೆ ಕರ್ತವ್ಯ ಕ್ರಮದ ಪ್ರಸ್ತಾಪ ನಡೆಸ ಬೇಕಾಗಿತ್ತು. ಬಿಹಾರ್ ಪ್ರಾಂತದ ವಿಪತ್ಕಾಲದ ಸಹಾಯಕ್ಕೆ ಸಾಕಾ ದಷ್ಟು ಜನ ಸಹಾಯವೊದಗಿತ್ತು. ಆದ್ದರಿಂದ ತಾವು ರಾಜಕೀಯ ಕರ್ತವ್ಯವೆಲ್ಲವನ್ನೂ ತ್ಯಾಗಮಾಡುವುದು ಜವಾಹರಲಾಲರಿಗೆ ಯೋಗ್ಯ ವಾಗಿ ತೋರಲಿಲ್ಲ.

ಇಲಾಹಾಬಾದಿಗೆ ಹಿಂತಿರುಗಿ ಬಂದುದು ಫೆಬ್ರುವರಿ 11ನೆ ತಾರೀ ಖಿನ ದಿನ. ಅವಿಶ್ರಾಂತರಾಗಿ ದುಡಿದು ಬಂದಿದ್ದ ಜಲಾಹರಲಾಲರ ಮುಖವನ್ನೂ ಕಣ್ಣುಗಳನ್ನೂ ಕಂಡು ಮನೆಯವರೆಲ್ಲರೂ ಇದೇನೆಂದು ಕೇಳಿದರು. ಅಷ್ಟು ಆಯಾಸಗೊಂಡಿದ್ದರೂ ಕಾಲನಷ್ಟ ಮಾಡಲಾಗ

ದೆಂದು ತಮ್ಮ ಸಂಚಾರದ ವರದಿಯನ್ನು ಬರೆಯಲಾರಂಭಿಸಿ ಸ್ವಲ್ಪ ದೂರ ಸಾಗಿಸುವುದರಲ್ಲಿ ನಿದ್ರೆಗೆ ಸೋತರು. ಒಟ್ಟಿಗೆ ಹನ್ನೆರಡು ಗಂಟೆ ಹೊತ್ತು ಮೈ ತಿಳಿಯದ ಗಾಢನಿದ್ರೆ ಮುತ್ತಿ ಹಿಡಿಯಿತು.

ಮಾರನೆದಿನ 12ನೆ ತಾರೀಖು ಮಧ್ಯಾಹ್ನ ಕಳೆದಿತ್ತು. ಜವಾಹರ ಲಾಲರೂ ಕಮಲಾದೇವಿಯೂ ಆಗ ತಾನೆ ಟೀ ಮುಗಿಸಿ ಕುಳಿತಿದ್ದಾಗ ಬಾಬು ಪುರುಷೋತ್ತಮದಾಸ ಟಂಡನ್ನರು ಬಂದರು. ಮೂವರೂ ಮಾತುಕಥೆಗಳನ್ನಾಡುತ್ತ ವರಾಂಡದಲ್ಲಿ ನಿಂತಿದ್ದಾಗಲೇ ಮೋಟಾರ್ ಬಂಡಿಯೊಂದು ಬಂದಿತು. ಒಳಗಿನಿಂದ ಪೋಲೀಸಧಿಕಾರಿ ಇಳಿದನು. ಏನೆಂದು ಜವಾಹರರಿಗೆ ವಿವರಿಸಬೇಕಾಗಿಯೇ ಇರಲಿಲ್ಲ. ತಾವೇ ಹೆಜ್ಜೆ ಮುಂದಿಟ್ಟು ಪೋಲೀಸಧಿಕಾರಿಯನ್ನು ಕುರಿತು "ಬಹುತ್ ದಿನೋಂಸೇ ಆಪ್‌ಕಾ ಇಂತಸ್ಸಾರ್ ಥಾ" ಎಂದರು. ಆ ಅಧಿಕಾರಿ ತನ್ನ ತಪ್ಪಿಲ್ಲ ವೆಂದು ಹೇಳುತ್ತ ವಾರಂಟ್ ತೋರಿಸಿದನು. ಕಲ್ಕತ್ತೆಯಿಂದ ಅರೆಸ್ಟ್ ವಾರಂಟ್ ಹೊರಟಿತ್ತು.

ಕೂಡಲೆ ಮೂರು ತಂತಿಗಳನ್ನು ಕೊಡಲು ಏರ್ಪಾಟು ಮಾಡಿದರು. ಪೂಜ್ಯ ಬಾಪುಜಿಗೆ "ವಿಶ್ರಾಂತಿ ಚಿಕಿತ್ಸೆಗಾಗಿ ಪುನಃ ಹೊರಡುತ್ತಿದ್ದೇನೆ; ಈ ಬಾರಿ ಕಲ್ಕತ್ತ. ಪ್ರೀತಿಯ ವಂದನೆಗಳು." ಬಿಹಾರ್ ಜನರ ಕಷ್ಟ ನಷ್ಟಗಳನ್ನು ತಮ್ಮ ಮೇಲಿಟ್ಟುಕೊಂಡಿದ್ದು ಶ್ರಮಿಸುತ್ತಿದ್ದ ರಾಜೇಂದ್ರ ಪ್ರಸಾದರಿಗೆ "ನಿಮ್ಮ ಪುಣ್ಯ ಕೆಲಸದಲ್ಲಿ ಸೇರಿಕೊಳ್ಳಲಾರದುದಕ್ಕಾಗಿ ಮನ್ನಿಸಬೇಕು. ಘನವಾದ ನಿಮ್ಮ ಕೆಲಸ ಕೈಗೂಡಲಿ; ಬಿಹಾರವು ಕಷ್ಟದಿಂದ ಪಾರಾಗಲಿ! ವಿಶ್ವಾಸವಿರಲಿ!". ಮಗಳಿಗೊಂದು ತಂತಿ "ಇನ್ನು ಸ್ವಲ್ಪಕಾಲ ನನ್ನ ಎರಡನೆ ಮನೆಗೆ ಹಿಂತಿರುಗುತ್ತಿದೇನೆ. ಪ್ರೀತಿಯ ಆಶೀರ್ವಾದಗಳು. ನಿಶ್ಚಿಂತೆಯಾಗಿ ಸುಖದಿಂದಿರುವವಳಾಗು".

ಜೈಲು ಬಿಟ್ಟು ಬಂದು ಐದು ತಿಂಗಳೂ ಹದಿಮೂರುದಿನಗಳೂ ಕಳೆ ದಿದ್ದವು. ಪುನಃ ಜೈಲು ಪ್ರಯಾಣ ಸಿದ್ಧವಾಯಿತು. "ಆದರೆ ನಿಜವಾಗಿ ಕಷ್ಟ ನನ್ನದಲ್ಲ. ಎಲ್ಲ ಸಮಯಗಳಲ್ಲೂ ನಡೆವಂತೆ ಈಗಲೂ ಕಷ್ಟವನ್ನೆಲ್ಲ ಹೊತ್ತುಕೊಂಡು ಸಹಿಸತಕ್ಕವರು ಮಹಿಳೆಯರು—ನಮ್ಮಮ್ಮ, ಕಮಲೆ ಮತ್ತು ನನ್ನ ತಂಗಿ" ಎಂದುಕೊಂಡರು.

## 8. ಆಲಿಪುರ ಡೇರಾಡೂನ್ ಜೈಲುಗಳಲ್ಲಿ

ದಸ್ತಗಿರಿಯಾದ ದಿನವೇ ಜವಾಹರಲಾಲರನ್ನು ಕಲ್ಕತ್ತೆಗೆ ಪ್ರಯಾಣ ಮಾಡಿಸಿ ಲಾಲ್ ಬಜಾರ್ ಪೋಲೀಸ್ ಸ್ಟೇಷನ್ನಿನಲ್ಲಿಟ್ಟರು. ಆ ಪೋಲೀಸ್ ಸ್ಟೇಷನ್ ಹೆಸರನ್ನು ಪ್ರಾಯಶಃ ದೇಶಭಕ್ತರೆಲ್ಲರೂ ಕೇಳಿರುತ್ತಾರೆ. ಜವಾಹರಲಾಲರಿಗಲ್ಲಿ ಪೋಲೀಸಧಿಕಾರಿಗಳು ಗುಂಪು ಗುಂಪಾಗಿದ್ದುದು ಕಂಡಿತು. ಎಲ್ಲೆಲ್ಲಿಯೂ ಸಾರ್ಜೆಂಟರೂ ಇನ್ಸ್ಪೆಕ್ಟರು ಗಳೂ ಐರೋಪ್ಯ ಜಾತಿಯವರೇ. ಜೈಲ್‌ಲಾರಿಯಲ್ಲಿ ಜವಾಹರರು ಕೋರ್ಟಿಗೆ ಹೊರಡಬೇಕಾದಾಗಲೆಲ್ಲ ಜೊತೆಯಲ್ಲಿ ಪೋಲೀಸ್ ಕಾನ್ ಸ್ಟೇಬಲ್ಲುಗಳು ಇದ್ದೇ ಇರುತ್ತಿದ್ದರು. ಬಿಹಾರ್ ಪ್ರಾಂತದ ಕಡೆಯಿಂದ ಬಂದು ಜೀವನಾರ್ಥವಾಗಿ ಸೇರಿಕೊಂಡಿದ್ದ ಆ ಕಾನ್ಸ್ಟೇಬಲ್ಲುಗಳಿಗೆ ಇದೆಲ್ಲವೂ ಪಾಪಿಷ್ಠ ಕೆಲಸವೆನಿಸಿತ್ತು. ಕೆಲವು ವೇಳೆಗಳಲ್ಲಿ ಅವರು ಕಣ್ಣೀರನ್ನು ತುಂಬಿಕೊಂಡಿದ್ದುದು ಜವಾಹರರಿಗೆ ಗೋಚರವಾಗು ತ್ತಿತ್ತು.

ಜನವರಿ 16,17,18ನೆ ದಿನಗಳಲ್ಲಿ ಜವಾಹರಲಾಲರು ಕಲ್ಕತ್ತೆ ಯಲ್ಲಿ ಕೊಟ್ಟಿದ್ದ ಭಾಷಣಗಳೇ ಈ ವಿಚಾರಣೆಗೆ ಕಾರಣ. ವಿಚಾರ ಣೆಯ ನಾಟಕ ನಡೆದು ಕಾರಾಗೃಹ ವಾಸ ಗೊತ್ತಾಗುವ ನಿರೀಕ್ಷೆ ಯಿದ್ದೇ ಇತ್ತು. ಬಿಡುಗಡೆ ದೊರಕಿದ್ದ ಐದೂವರೆ ತಿಂಗಳ ಕಾಲದಲ್ಲಿ ಆದಷ್ಟು ಕೆಲಸಕಾರ್ಯಗಳನ್ನು ನಡೆಸಲಾಯಿತೆಂಬ ವಿಶ್ವಾಸವಂತೂ ಇತ್ತು ಜವಾಹರರ ಮನಸ್ಸಿನಲ್ಲಿ. ತಾಯಿಯವರ ಕಾಹಿಲೆ ವಾಸಿ ಯಾಗುತ್ತಿತ್ತು, ಕೃಷ್ಣೆಯ ಮದುವೆ ಮುಗಿದಿತ್ತು, ಇಂದಿರೆಯ ಶಿಕ್ಷಣಕ್ಕೆ ಏರ್ಪಾಡಾಯಿತು, ಮನೆಯಾಡಳಿತವನ್ನು ಸರಿಪಡಿಸಿದ್ದಾಗಿತ್ತು. ರಾಜ ಕೀಯ ಪ್ರಯತ್ನದಲ್ಲಿ ಸಾಧ್ಯವಾದಷ್ಟು ಮಾತ್ರ ಉದ್ಯಮಿಸಿದ್ದೂ ಆಗಿತ್ತು. ಗಾಂಧೀಜಿಯೊಂದಿಗೆ ಪತ್ರವ್ಯವಹಾರವಲ್ಲದೆ ಕೋಮು ವಾರು'ಸಮಸ್ಯೆಯನ್ನು ವಿಮರ್ಶಿಸಿದ ಲೇಖನಗಳ ಪ್ರಕಟನೆಯೂ ನಡೆ ದಿತ್ತು. ಆದರೆ ಎರಡಂಶಗಳಲ್ಲಿ ಮಾತ್ರ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಕಮಲಾದೇವಿಯ ಆರೋಗ್ಯ ವಿಚಾರದಲ್ಲಿ ಚಿಂತೆಗೆ ಕಾರಣವಿತ್ತು; ಹೇಗೋ ಎಂತೋ ಎಂಬ ಶಂಕೆ ಬಲವಾಗಿತ್ತು. ಮತ್ತೊಂದಂಶ

ಕ್ಕಾಗಿಯೂ ಮನಸ್ಸಿನಲ್ಲಿ ವ್ಯಥೆ ತೋರಿತ್ತು. ಇಲಾಹಾಬಾದ್ ಜಿಲ್ಲಾ ವಿಭಾಗದಲ್ಲಿ ಸಂಚರಿಸಲಾಗದೆ ಹೋಯಿತು. ಧೈರ್ಯದಿಂದ ವರ್ತಿಸಿದ್ದ ಅನೇಕ ಸಹೋದ್ಯೋಗಿಗಳು ಅಲ್ಲಿದ್ದರು. ಅವರಿಗೆ ಬೆಂಬಲ ಸಹಾನುಭೂತಿಗಳನ್ನು ಕಾಣಿಸಲಾಗದೆ ಹೋಯಿತೆಂಬ ವ್ಯಸನ ತೋರಿತು.

ವಿಚಾರಣೆ ನಡೆದುದು ಪ್ರೆಸಿಡೆನ್ಸಿ ಕೋರ್ಟಿನಲ್ಲಿ. ಅದಕ್ಕಾಗಿ ಜವಾಹರರನ್ನು ಪ್ರೆಸಿಡೆನ್ಸಿ ಜೈಲಿನಲ್ಲಿಟ್ಟಿದ್ದು ವಿಚಾರಣೆ ವೇಳೆಗೆ ಸರಿಯಾಗಿ ಕೋರ್ಟಿಗೊಯ್ಯುತ್ತಿದ್ದರು. ಕೋರ್ಟಿನಲ್ಲಿ ಪರಿಚಿತ ಮುಖವೊಂದಾದರೂ ಕಾಣಲಿಲ್ಲ. ಎತ್ತನೋಡಿದರೂ ಪೋಲೀಸ್ ಸಿಬ್ಬಂದಿ ಅಥವಾ ಲಾಯರುಗಳ ಗುಂಪು. ಆ ಸಮಯದಲ್ಲಿ ತಾವು ಒಂಟಿಯಾದರೆಂಬ ಭಾವನೆ ಮನಸ್ಸಿನಲ್ಲಿ ಬಲಗೊಂಡು ಖಿನ್ನತೆ ತೋರಿತು. ಯಥಾಪ್ರಕಾರ ಡಿಫೆನ್ಸ್ ವಾದವೆಂಬುದಿಲ್ಲ; ಜವಾಹರಲಾಲರು ಒಂದು ಹೇಳಿಕೆಯನ್ನು ಮಾತ್ರ ಕೊಟ್ಟರು. ಫೆಬ್ರುವರಿ 16ನೆ ತಾರೀಖಿನ ದಿನ ತೀರ್ಪು ಶ್ರುತವಾಯಿತು. ಎರಡು ವರ್ಷಗಳ ಸಜ! ಇದು ಏಳನೆಯ ಸಲ ಸೆರೆಮನೆಯ ಪ್ರವೇಶ.

> " ಪುನಃ ಪೋಲೀಸ್ ವ್ಯಾನಿನಲ್ಲಿ ಸವಾರಿ. ಈ ಸಲ ಆಲಿಪುರದ ಜೈಲಿಗೆ. ದಾರಿಯಲ್ಲಿ ಮಷೀನ್ ಗನ್ನುಗಳನ್ನೂ ಆರ್ಮರ್ಡ್ ಕಾರುಗಳನ್ನೂ ಕಟ್ಟಿಕೊಂಡು ಹೊರಡುತ್ತಿದ್ದ ಸೇನಾ ಪಟಾಲಂಗಳು ಎದುರಾದವು. ವ್ಯಾನಿನ ಕಂಡಿಗಳಲ್ಲಿ ಇಣಿಕಿ ನೋಡಿದೆ, ಆರ್ಮರ್ಡ್ ಕಾರ್ ಮತ್ತು ಟಾಂಕುಗಳು ಎಷ್ಟು ವಿಕಾರವೆನ್ನಿಸಿತು. ಹಿಂದಿನ ಯುಗಗಳಲ್ಲಿ ಪೃಥ್ವಿಯ ಮೇಲೋಡಾಡುತ್ತಿದ್ದ ಪೆಡಂಭೂತಗಳ ನೆನಪಾಯಿತು.
>
> ಆಲಿಪುರದ ಸೆರೆಮನೆಯಲ್ಲಿ ಹತ್ತಡಿಯುದ್ದ ಒಂಭತ್ತಡಿಯಗಲವಿದ್ದ ಕೋಣೆ ನನ್ನದಾಯಿತು. ಮುಂದುಗಡೆ ಸಣ್ಣದಾದ ಅಂಗಣ; ಅದರ ಸುತ್ತಲೂ ಏಳಡಿಯೆತ್ತರದ ಗೋಡೆಯಿತ್ತು. ಗೋಡೆಯ ಹೊರಗಡೆ ಕಂಡರೆ ಸುತ್ತಲೂ ನಾನಾ ಬಗೆಯ ಕಟ್ಟಡಗಳ ಸಮೂಹ. ಕೆಲವು ಕಟ್ಟಡಗಳು ಗುಂಡು, ಕೆಲವು ಚೌಕ; ಕೆಲವು ಒಂದು ಮಹಡಿ, ಕೆಲವು ಎರಡು ಮಹಡಿ. ಒಂದೊಂದು ಒಂದೊಂದು ಎತ್ತರ. ಚಿತ್ರ ವಿಚಿತ್ರವ್ಯೂಹವಾಗಿತ್ತು. ನನ್ನ ಅಂಗಳದೆದುರಿನಲ್ಲಿಯೆ ಗೋಪುರಗಳಂತೆ ಎರಡು ಹೊಗೆಸೂರುಗಳು ಆಕಾಶಕ್ಕೆದ್ದಿದ್ದವು; ಕಪ್ಪಾದ ಹೊಗೆಯನ್ನು ಏಕಪ್ರಕಾರವಾಗಿ ಕಕ್ಕುತ್ತಿದ್ದವು. ಗಾಳಿ ಬೀಸಿದಾಗ ಆ ಹೊಗೆಯೆಲ್ಲ ನನ್ನ ಕಡೆಯೇ ಬರುತ್ತಿತ್ತು.

ನನ್ನ ಅಂಗಳದಲ್ಲಿ ಹಸುರೆಂಬುದಿರಲಿಲ್ಲ. ಎಲ್ಲವೂ ಗಾರೆ ಗಟ್ಟಿ. ಮನಸ್ಸಿಗೆ ತಂಪು ಕೊಡುವುದಾವುದೂ ಇರಲಿಲ್ಲ. ಇತರ ಅಂಗಳಗಳಲ್ಲಿ ಒಂದೆರಡು ಮರಗಳಿದ್ದವು. ಆದರೆ ಒಂದೆಲೆಯಾದರೂ ಇರಲಿಲ್ಲ. ಸ್ವಲ್ಪಕಾಲ ಕಳೆದ ಬಳಿಕ ಚಿಗುರು ತೋರಿತು; ಎಲೆಗಳು ತುಂಬಿಕೊಂಡವು. ಆ ಒಂದೆರಡು ಮರಗಳ ಹಸುರು ಬಣ್ಣದಿಂದ ಆಲೀಪುರದ ಬಂದೀಖಾನೆ ಕೂಡ ಸಂತಸ ಗೊಂಡಂತೆ ಕಂಡಿತು. ಅಲ್ಲಿಯೆ ಒಂದು ಹದ್ದು ಗೂಡು ಕಟ್ಟಿಕೊಂಡಿತು. ಮರಿ ಹದ್ದುಗಳು ಹೇಗೆ ಶಿಕ್ಷೆ ಪಡೆಯುತ್ತಿದ್ದವೆಂದು ಕುತೂಹಲದಿಂದ ಕಾಣುತ್ತಿದ್ದೆ.

ಸಾಯಂಕಾಲದಿಂದ ಪ್ರಾತಃಕಾಲದವರೆಗೂ ಬೀಗಮುದ್ರೆ. ಓದುವುದೂ ಬರೆಯುವುದೂ ಬೇಜಾರಾಗುತ್ತಿತ್ತು. ಅಂತಹ ವೇಳೆಗಳಲ್ಲಿ ಎದ್ದು ಆ ಸಣ್ಣ ಕೋಣೆಯಲ್ಲಿಯೆ ನಾಲ್ಕು ಹೆಜ್ಜೆ ಮುಂದಕ್ಕೆ ನಾಲ್ಕು ಹೆಜ್ಜೆ ಹಿಂದಕ್ಕೆ ಹಾಕುತ್ತ ಕಾಲ ಕಳೆಯುತ್ತಿದ್ದೆ. ಬೋನಿನೊಳಗೆ ಪಕ್ಕದಿಂದ ಪಕ್ಕಕ್ಕೆ ಸುಮ್ಮನೆ ತಿರು ಗಾಡುವ ಕರಡಿಯು ನೆನಪಾಯಿತು. ಇನ್ನೂ ಬೇಸರ ಹೆಚ್ಚಿದರೆ ಶೀರ್ಷಾಸನ ಹಾಕುತ್ತಿದ್ದೆ.

ಚಳಿಗಾಲ ಬೇಗನೆ ಕಳೆಯಿತು. ಬೇಸಿಗೆ ಬಂತು. ವ್ಯಾಯಾಮಕ್ಕೆ ಸ್ಥಳ ಸಾಲದೆ ನನ್ನ ಆರೋಗ್ಯ ಕೆಡುತ್ತ ಬಂತು. ದಿನೇ ದಿನೇ ಬಿಸಿಲಿನ ಬೇಗೆಯೂ ಏರಿತು. ಬೀಗ, ಬಾಗಿಲು, ಗೋಡೆ ಮುಂತಾದವುಗಳಲ್ಲಿ ಪರಮಾಸಹ್ಯ ಹುಟ್ಟಿತು. ಒಂದು ತಿಂಗಳಾದ ಮೇಲೆ ಅಂಗಳದ ಹೊರಗಡೆ ವ್ಯಾಯಾಮ ಮಾಡಿಕೊಳ್ಳಲು ಅಸ್ಪದಕೊಟ್ಟರು. ಇದರಿಂದ ಸ್ವಲ್ಪ ಮೇಲಾಯಿತು. ಜೈಲ್ವಾನೆ ಅಭ್ಯಾಸವಾಗಿತ್ತು. ನನ್ನ ಮನಸ್ಸಿನಲ್ಲಿಯೂ ಇತರ ಯೋಚನೆಗಳು ತುಂಬಿಕೊಂಡಿದ್ದವು. ಹೊರಗಿನ ಸಮಾಚಾರ ಬಲು ಅಸಮಾಧಾನವನ್ನುಂಟು ಮಾಡಿತು.

ಈ ಜೈಲಿನಲ್ಲಿ ನನಗೆ ವಾರಪತ್ರಿಕೆ ಮಾತ್ರವೇ ಸಿಕ್ಕುತ್ತಿತ್ತು. ವಾರವಾರದ ಸಾರಾಂಶವಾದರೂ ಮುಖ್ಯ ಸಂಗತಿಗಳನ್ನು ತಿಳಿಯಬಹುದಾಗಿತ್ತು. ಫ್ರಾನ್ಸ್ ಮತ್ತು ಆಸ್ಟ್ರಿಯ ರಾಷ್ಟ್ರಗಳಲ್ಲಿ ಜನಸ್ವಾಮ್ಯಕ್ಕೆ ಕೊಡಲಿಯೇಟುಗಳು ಬಿದ್ದಂತೆ ಘಟಿಸಿತ್ತು. ಹಿಂದುಸ್ತಾನದ ಆಡಳಿತ ವಿಚಾರವಾಗಿ ನಡೆದ ಚರ್ಚೆಗಳು ನಿರಂಕು ಶಾಧಿಕಾರವನ್ನೇ ಎತ್ತಿ ಕಟ್ಟುವಂತಿದ್ದವು. ಏಪ್ರಿಲ್ ತಿಂಗಳಲ್ಲಿ ಜೈಲಿನ ಅಧಿಕಾರಿ ಗಾಂಧೀಜಿಯವರು ಅಸಹಕಾರ ಚಳುವಳಿಯನ್ನು ನಿಲ್ಲಿಸಿದರೆಂಬ ಸುದ್ದಿಯನ್ನು ಸಂದರ್ಭವಶಾತ್ ಸೂಚಿಸಿದನು. ಅದನ್ನು ಕೇಳಿ ನನಗೆ ಬಲುವಾಗಿ ಆಶಾ ಭಂಗವಾಯಿತು."

ಆಶಾಭಂಗ ತೋರಿದಾಗ ಜವಾಹರಲಾಲರಿಗೆ ಪೂರಾ ವ್ಯಥೆಯಾ ಯಿತು. ಹೊರಗಡೆಯಿದ್ದಿದ್ದರೆ ಓಡಾಟದಲ್ಲಿ ಚಿಂತೆ ತಗ್ಗಬಹುದಾಗಿತ್ತು.

ಇದ್ದುದು ಬಂಧನದಲ್ಲಿ. ಆದುದರಿಂದ ಸರ್ವವೂ ನಷ್ಟವಾಗಿ ತಾವೊಬ್ಬರೇ ಆದರೆಂಬ ಖಿನ್ನತೆ ಬಲಗೊಂಡಿತು. ಕೆಲವು ದಿನಗಳನ್ನು ಕಳೆಯುವುದು ಅತಿ ಕಷ್ಟವಾಯಿತು. ಆಗ ಕಮಲಾದೇವಿ ಬಂದು ಕಂಡಳು; ಅದರಿಂದ ಮನಸ್ಸಿಗೆ ನೆಮ್ಮದಿ ತೋರಿತು. ಜಗತ್ತಿನಲ್ಲಿ ತಾವೊಬ್ಬರೇ ಆದರೆಂಬ ಭಾವನೆ ಹೋಯಿತು. "ಏನು ಸಂಭವಿಸಿದಾಗ್ಗೂ ನಾವಿಬ್ಬರೂ ಒಬ್ಬರಿಗೊಬ್ಬರುಂಟು" ಎಂದುಕೊಂಡರು.

ಮಹತ್ಪ್ರಯತ್ನ ನಿಂತುಹೋಯಿತೆಂಬ ವ್ಯಥೆ ಜವಾಹರಲಾಲರ ಮನಸ್ಸಿನಲ್ಲಿ ಉಕ್ಕಿದ್ದ ಪರಿಣಾಮದಿಂದ ಆರೋಗ್ಯ ಕೆಟ್ಟಿತ್ತು. ತೂಕ ತಗ್ಗಿತು. ಕಲ್ಕತ್ತೆಯ ಹವ ಹೊಂದಲಿಲ್ಲ. ಮೇ ತಿಂಗಳು 7ನೆ ತಾರೀಖಿನ ದಿನ ಸರ್ಕಾರದವರು ಜೈಲನ್ನು ಬದಲಾಯಿಸಿಕೊಡಲು ಸಿದ್ಧರಾಗಿ ಜವಾಹರಲಾಲರನ್ನು ಡೇರಾಡೂನ್ ಬಂದೀಖಾನೆಗೆ ವರ್ಗಾಯಿಸಿದರು.

ತಿಂಗಳಗಟ್ಟಲೆ ಬಂಧನದಲ್ಲಿದ್ದವರನ್ನು ಹೊರಕ್ಕೆ ಕರೆದುಕೊಂಡು ಬಂದರು. ಕಲ್ಕತ್ತೆಯಿಂದ ಡೇರಾಡೂನಿಗೆ ಪ್ರಯಾಣ. ಅಲ್ಲಿಗೆ ತಲಪಿದ ಬಳಿಕ ಜವಾಹರಲಾಲರನ್ನು ಹಿಂದಿನ ಸ್ಥಳದಲ್ಲಿಡಲಿಲ್ಲ. ದನ ಕಟ್ಟುತ್ತಿದ್ದ ಒಂದು ಕೊಟ್ಟಿಗೆಯನ್ನು ಇವರಿಗಾಗಿ ಸಿದ್ಧಗೊಳಿಸಿತ್ತು. ಚಿಕ್ಕ ವರಾಂಡವೊಂದಂಟಿಕೊಂಡಿತ್ತು; ಮುಂದೆ ಸುಮಾರು 50 ಅಡಿಯುದ್ದದ ಅಂಗಳ ಮಾತ್ರವಿತ್ತು. ಆ ಅಂಗಳದ ಸುತ್ತಲೂ ಹದಿನೈದಡಿಯುಷ್ಟೆತ್ತರದ ಗೋಡೆ ಹಾಕಿತ್ತು. ಪರ್ವತವನ್ನು ಕಾಣಬಹುದೆಂಬ ಆಸೆ ಬೆಳೆಸಿಕೊಂಡಿದ್ದ ಜವಾಹರಲಾಲರಿಗೆ ಈಗ ಅಷ್ಟುಮಾತ್ರವೂ ಇಲ್ಲವಾಯಿತು. ಜೈಲಿನ ಮುಂದುಗಡೆ ತಿರುಗಾಡಲು ಹಿಂದಿದ್ದ ಅವಕಾಶವೂ ಇಲ್ಲದೆ ಹೋಯಿತು. ಎಲ್ಲಿಯೋ ಎರಡು ಮೂರು ಮರಗಳ ತಲೆಗಳನ್ನು ಬಿಟ್ಟರೆ ಮತ್ತೇನೂ ಕಾಣುವಂತಿರಲಿಲ್ಲ.

ಇದರಿಂದ ಅಸಮಾಧಾನವು ಹೆಚ್ಚುವಂತೆಯೇ ಆಯಿತು. ಅಸಮಾಧಾನದಿಂದ ಅಸಹನವೂ ಉಂಟಾಯಿತು. ಅಂಗಳದಲ್ಲಿ ವ್ಯಾಯಾಮ ನಡೆಸಿಕೊಳ್ಳುವುದಕ್ಕೂ ಹಿಂದಿನಂತೆ ನಿತ್ಯಕ್ರಮವನ್ನಿಟ್ಟುಕೊಳ್ಳುವುದಕ್ಕೂ ಮನಸ್ಸೇ ಬಾರದಾಯಿತು. ಹಿಂದೆಂದೂ ಇಷ್ಟು ಖೇದ ತೋರಿರಲಿಲ್ಲ. ಏಕಾಂತಬಂಧನವೆಂಬುದು ಮನಸ್ಸನ್ನೂ ದೇಹವನ್ನೂ ಕ್ಷಯಿಸುವಂತೆ

ಕೊರಗನ್ನು ತಂದಿಟ್ಟಿತು. ಜಗತ್ತೇ ತಮ್ಮನ್ನೊಂಟಿಯಾಗಿ ಬಿಟ್ಟಂತೆ ತೋರುತ್ತಿತ್ತು.

"ಮಳೆಗಾಲ ಬಂತು. ಕುಂಭದ್ರೋಣ ವೃಷ್ಟಿ ಬಿತ್ತು. ಏಳು ದಿನಗಳಿಗೆ ಹನ್ನೆರಡು ಹದ. ಕೂಡಲೆ ಭೂಮಿಯ ವಾಸನೆ ಬದಲಾಯಿತು. ಉಷ್ಣ ತಗ್ಗಿ ಶರೀರಕ್ಕೆ ಸ್ವಲ್ಪ ಹಿತ ತೋರಿತು. ಆದರೆ ಮನಸ್ಸಿಗೂ ಕಣ್ಣಿಗೂ ಯಾವ ಹಿತವೂ ಇಲ್ಲದೆಯೇ ಇತ್ತು. ಅಂಗಳಕ್ಕಿದ್ದ ಕಬ್ಬಿಣದ ಬಾಗಿಲನ್ನು ಕಾವಲಿನವರು ತೆರೆದುಕೊಂಡು ಬಂದ ಕ್ಷಣದಲ್ಲಿ ಮಾತ್ರ ಹಚ್ಚನೆಯ ನೆಲದ ಮೇಲೆ ಜಲಕಣಗಳಂಟಿಕೊಂಡು ಕಾಂತಿಕೊಟ್ಟ ಚಿಗುರು ಕಂಡು ಮಿಂಚಿನಂತೆ ಕೂಡಲೆ ಮಾಯವಾಗುತ್ತಿತ್ತು. ಏಕೆಂದರೆ ಬಾಗಿಲನ್ನು ಪೂರ್ತಿ ತೆರೆಯುತ್ತಲೇ ಇರಲಿಲ್ಲ. ನಾನಿದ್ದಾಗ ಬಾಗಿಲನ್ನು ಸ್ವಲ್ಪ ಮಾತ್ರವೇ ತೆಗೆಯತಕ್ಕುದೆಂದು ಕಾವಲಿನವರಿಗೆ ಆಜ್ಞೆ. ಕ್ಷಣಕಾಲ ಮಾತ್ರ ಹಸುರನ್ನು ಕಾಣುವುದು ನನ್ನ ಮನಸ್ಸಿನ ನೋವನ್ನು ಇಮ್ಮಡಿಸಿತು. ಅದನ್ನು ತಪ್ಪಿಸಿಕೊಳ್ಳಲು ಬಾಗಿಲನ್ನು ತೆರೆದಾಗ ನೋಟವನ್ನು ಬೇರೆ ದಿಕ್ಕಿಗೆ ತಿರುಗಿಸುತ್ತಿದ್ದೆ."

ಮನಸ್ಸಿಗೆ ಇಷ್ಟು ಯಾತನೆಯಾಗಲು ಜೈಲಿನ ಪರಿಸ್ಥಿತಿ ಮುಖ್ಯವಲ್ಲ. ಕಮಲಾದೇವಿಯ ಅಸ್ವಸ್ಥತೆ ಬಲಗೊಂಡು ರೋಗಕ್ಕಿಟ್ಟುಕೊಂಡಿದ್ದ ವಿಹ್ವಲತೆಯೊಂದು ಕಡೆಯಿಂದಲೂ ರಾಜಕೀಯ ಕರ್ತವ್ಯ ಕಲಾಪಗಳೆಲ್ಲ ಹಾಳಾದುವೆಂಬ ವ್ಯಾಕುಲವಿನ್ನೊಂದು ಕಡೆಯಿಂದಲೂ ಮನಸ್ಸನ್ನು ಕೆಡಿಸಿದ್ದವು. ಡೇರಾಡೂನ್ ಜೈಲಿನಲ್ಲಿ ದಿನಪತ್ರಿಕೆಯೊಂದು ಸಿಗುತ್ತಿತ್ತು. ಪಾಟ್ನಾದಲ್ಲಿ ನಡೆದ ಎ.ಐ.ಸಿ.ಸಿ. ಸಭೆಯಲ್ಲಿ ಗಾಂಧೀಜಿಯವರು ಮಾಡಿದ ಭಾಷಣವನ್ನು ನೋಡಿ ಮತ್ತಷ್ಟು ವಿಷಣ್ಣರಾದರು. ಕಾಂಗ್ರೆಸ್ ಸಭಿಕರಲ್ಲಿ ಬೇರೆ ಬೇರೆ ಗುಂಪುಗಳೂ ಬೇರೆ ಬೇರೆ ಉದ್ದೇಶಗಳೂ ಪರಸ್ಪರ ಭೇದಗಳೂ ಆರಂಭವಾಗಿದ್ದವು. ವಿಧಿಗಳನ್ನೊಪ್ಪಿಕೊಂಡು ವರ್ತಿಸುವ ಗುಂಪು ರೂಪಗೊಂಡುದನ್ನು ಕಂಡು ಸರ್ಕಾರದವರು ಕಾಂಗ್ರೆಸ್ಸಿನ ಮೇಲಿಟ್ಟಿದ್ದ ನಿಷೇಧಾಜ್ಞೆಯನ್ನು ಕೊನೆಗಾಣಿಸಿದ್ದರು. ಆದರೆ ತತ್ಸಂಬಂಧವಾಗಿದ್ದ ಸೇವಾದಲ, ಕಿಸಾನ್ ಸಭೆ, ಖುದಾಯಿಖಿದ್ಮತ್ಗಾರ್ ಮುಂತಾದ ಅಂಗಗಳು ವಿಧಿಬಾಹಿರವಾಗಿಯೆ ಉಳಿದವು. ರೈತಾಪಿ ಜನರ ಕೂಟಗಳನ್ನೂ ಪಟ್ಟಣಗಳ ಕಾಮಗಾರ್ ಸಂಘಗಳನ್ನೂ ವಿರೋಧಿಸಿದ ಸಂಸ್ಥೆಗಳು ಹುಟ್ಟಿಕೊಂಡು ಪ್ರೋತ್ಸಾಹ

ವನ್ನೂ ಪಡೆದಿದ್ದವು. ಕೋಮುವಾರು ಗುಂಪುಗಳು ಪ್ರಬಲಿಸಿದಂತೆ ಕಾಣಲಾರಂಭವಾಯಿತು. ಕಾಂಗ್ರೆಸ್ ಧ್ಯೇಯಗಳಿಗೂ ಉದ್ದೇಶಗಳಿಗೂ ಚಂಡಗ್ರಹಣ ಹಿಡಿದಂತೆಯೆ ಆಯಿತು.

ಸರಹದ್ದಿನ ಪ್ರಾಂತದ ನಾಯಕ ಬಾದಶಾಹಖಾನರನ್ನು ಸರ್ಕಾರದವರು ನಿರ್ಬಂಧದಲ್ಲಿಟ್ಟದ್ದು ದಲ್ಲದೆ ಆತನ ಅನುಯಾಯಿಗಳ ಕೂಟವಾಗಿದ್ದ ಖುದಾಯಿ ಖಿದ್ಮತ್ಗಾರ್ ಗುಂಪನ್ನು ವಿಧಿಬಾಹಿರವೆಂದು ಪ್ರಕಟಿಸಿದ್ದರು. ಹಿಂದುಮಹಾಸಭೆಯ ಕಾರ್ಯದರ್ಶಿಯೊಬ್ಬನು ಸರ್ಕಾರದವರನ್ನು ಅದಕ್ಕಾಗಿ ಅಭಿನಂದಿಸಿದ ಸಂಗತಿ ತಿಳಿದ ಕೂಡಲೆ ಜವಾಹರಲಾಲರಿಗೆ ಅತಿ ಹಿಂಸೆ ತೋರಿತು. ಮಹಾಸಭೆಯುವರಾರೂ ಆ ಕಾರ್ಯದರ್ಶಿಯ ಹೇಳಿಕೆಯನ್ನು ಖಂಡಿಸದೆ ಇದ್ದುದು ಅಸಮಾಧಾನವನ್ನು ಹೆಚ್ಚಿಸಿತು. ಎಷ್ಟು ಘೋರವಾಯಿತೆಂದು ಜವಾಹರಲಾಲರ ಮನಸ್ಸು ತಳ್ಳಂಕಗೊಂಡಿತು. ಏನು ಮಾಡುವುದಕ್ಕೂ ಮನಸ್ಸಿಲ್ಲದೆ ಹಾಗೂ ಹೀಗೂ ಹೊರಳುತ್ತಲಿದ್ದು ಮಧ್ಯಾಹ್ನದ ಕಾವಿಗೆ ತೂಗಿದರು. ಆಗಲೇ ವಿಚಿತ್ರವಾದ ಸ್ವಪ್ನವಾಯಿತು! ಅಬ್ದುಲ್‌ಗಫ್ಫಾರ್‌ಖಾನರ ಸುತ್ತಮುತ್ತಿಕೊಂಡು ಅನೇಕರು ಆತನನ್ನು ಹೊಡೆಯಲು ಪ್ರಯತ್ನಿಸುತ್ತಿದ್ದ ಹಾಗೂ ಆತನ ಸಂರಕ್ಷಣೆಗಾಗಿ ತಾವು ಹೊಡೆದಾಡುತ್ತಿದ್ದ ಹಾಗೂ ಕನಸಿನಲ್ಲಿ ಕಂಡಿತು. ಎಚ್ಚರವಾಯಿತು; ಆದರೂ ಪರಮಾಯಾಸಗೊಂಡ ಸ್ಥಿತಿ. ಎದ್ದು ನೋಡಿದಾಗ ತಲೆದಿಂಬೆಲ್ಲವೂ ತಾವು ಕನಸಿನಲ್ಲಿಯೆ ಸುರಿಸಿದ್ದ ಕಣ್ಣೀರಿನಿಂದ ತೊಯ್ದಿತ್ತು. ಎಂದೂ ಅಳದಿದ್ದವನಿಗೆ ಈವತ್ತಿದೇನು! ಎನ್ನುವ ವಿಸ್ಮಯ ತೋರಿತು.

ಮನಸ್ಸಿನ ವ್ಯಾಕುಲವಿಷ್ಟು ಪ್ರಬಲಗೊಂಡಿದ್ದುದರಿಂದ ನಿದ್ದೆಯೂ ಕೆಟ್ಟಿತ್ತು. ಹಿಂದಿನ ಕಾಲದಲ್ಲಿ ನಿದ್ರೆಯನ್ನು ಸುಖವಾಗಿ ಅನುಭವಿಸುತ್ತಿದ್ದವರಿಗೆ ಈಗ ನಿದ್ರೆಯೂ ಭಂಗಪಟ್ಟಿತು. ಎಂತೆಂತಹ ಕನಸುಗಳೋ ಕನವರಿಕೆಗಳೋ ತೋರಿಕೊಂಡವು. ನಿದ್ದೆಯಲ್ಲಿಯೇ ಆಗಾಗ ಕೂಗಿಕೊಳ್ಳುತ್ತಿದ್ದರು. ಒಂದು ಸಲ ಯಾರೋ ತಮ್ಮ ಕುತ್ತಿಗೆ ಹಿಡಿದು ಹಿಸಿಕಿದಂತೆ ಕನಸುಬಿದ್ದು ಬಲವಾಗಿ ಕೂಗಿಕೊಂಡರು. ಇದ್ದ ಇಬ್ಬರು ಕಾವಲುಗಾರರು ಗಾಬರಿಪಟ್ಟು ಒಳಕ್ಕೆ ಬಂದು ಹಾಸಿಗೆ ಬಳಿ

ನಿಂತರು. ಆಗ ಕಣ್ಣು ತೆರೆದು ಜವಾಹರಲಾಲರು ಇದೇನೆಂದು ಚಕಿತ ರಾದರು.

ತರುವಾಯ ನಡೆದ ಸಂಗತಿಗಳಿಂದ ಜವಾಹರಲಾಲರ ಮನಸ್ಸಿನ ಕಳವಳ ಇನ್ನೂ ಉದ್ರಿಕ್ತವಾಯಿತು. ಕಾಂಗ್ರೆಸ್ ವರ್ಕಿಂಗ್ ಕಮಿಟಿ ಯವರು ಯಾವುದೋ ಹಿಂದಣ ಸಂಕಲ್ಪವೊಂದನ್ನೆತ್ತಿಕೊಂಡು ಹೊಸ ರೀತಿಯ ವ್ಯಾಖ್ಯಾನ ಕೊಟ್ಟಿದ್ದರು. ಕಾಂಗ್ರೆಸ್ ಸಭಿಕರಲ್ಲಿ ಅಭಿ ಪ್ರಾಯ ಸ್ವಾತಂತ್ರ್ಯವನ್ನು ಮುರಿದಂತೆಯೆ ಕಂಡಿತು ಆ ಬಗೆಯ ವಿಶದೀಕರಣ. ಇದನ್ನು ತಿಳಿದ ತರುವಾಯ ಜವಾಹರಲಾಲರು ತಮ್ಮ ದೃಷ್ಟಿಯನ್ನು ಗತಕಾಲಕ್ಕೆ ತಿರುಗಿಸಿ ವಿಚಾರಕ್ಕೆ ತೊಡಗಿದರು. ಸತ್ಯಾ ಗ್ರಹವಾರಂಭವಾದಂದಿನಿಂದ ತಾವೆಲ್ಲರೂ ನಡೆಸಿದ ಕಾರ್ಯಕಲಾಪ ಗಳೆಷ್ಟು ಮಾತ್ರ ಒಪ್ಪು? ಎಷ್ಟು ಮಾತ್ರ ತಪ್ಪು? ವಿಚಾರವನ್ನು ಮನಸ್ಸಿ ನಲ್ಲಿ ಮಾಡಿಕೊಳ್ಳುವುದಕ್ಕಿಂತ ಬರೆಯುತ್ತ ಮುಂದೆ ಸಾಗಿಸಿದರೆ ಸ್ಪಷ್ಟ ವಾದೀತಲ್ಲದೆ ಸದ್ಯಃಸ್ಥಿತಿಯಲ್ಲಿ ಮನಸ್ಸನ್ನು ನಿಯೋಗಿಸಿಡುವ ಕೆಲಸವೂ ಸಿದ್ಧವಾದೀತೆನ್ನಿಸಿತು. 1934ನೆ ಜೂನ್ ತಿಂಗಳಲ್ಲಿ ಬರೆಯಲು ಆರಂಭಿಸಿ ಮನಸ್ಸು ಬಂದಾಗಲೆಲ್ಲ ಬರೆಯುತ್ತ ಸಾಗಿಸಿದರು. ಮನಸ್ಸು ಬಾರ ದಿದ್ದಾಗ ಬರವಣಿಗೆಯೇ ಇಲ್ಲ. ಕೆಲವು ಸಲ ಒಂದೊಂದು ತಿಂಗಳ ಕಾಲವಾದರೂ ಒಂದು ಪಂಕ್ತಿಯನ್ನಾದರೂ ಮುಂದೆ ಬರೆಯಲಿಲ್ಲ. ಇತರರೋದಬೇಕೆಂಬಾಸೆಯಿಂದ ಬರೆಯಲಿಲ್ಲ. ಸ್ವಂತ ವಿಚಾರ ಸ್ಫುಟ ವಾಗಲೆಂದು ಬರೆದುಕೊಂಡುದು. ಅದೇ ಪ್ರಸಿದ್ಧವಾದ ಆಟೊಬಯಾ ಗ್ರಫಿ–ಸ್ವಕೀಯ ವೃತ್ತಾಂತವಾಗಿ ಪರಿಣಮಿಸಿತು. 1935 ನೆ ಅಕ್ಟೋ ಬರ್ ತಿಂಗಳಲ್ಲಿ ಕಡೆಯ ಮಾತುಗಳನ್ನು ಬರೆದು ಮುಗಿಸಿದ ಪುಸ್ತಕ.

ಜೂನ್ ತಿಂಗಳಲ್ಲಿ ಈ ಹೊಸ ಕೆಲಸವನ್ನಿಟ್ಟುಕೊಂಡು ಸ್ವಲ್ಪ ವಾದರೂ ಚಿತ್ತಸ್ವಾಸ್ಥ್ಯ ಪಡೆಯಲು ಪ್ರಯತ್ನಿಸುತ್ತಿರುವಲ್ಲಿ ಜುಲೈ ತಿಂಗಳು ಬಂತು. ಕಮಲಾದೇವಿಯ ರುಗ್ಣತೆ ಹೆಚ್ಚಿದ ಸಂಗತಿ ತಿಳಿ ಯಿತು. ಆ ತಿಂಗಳ ಕೊನೆಗೆ ಕಮಲಾದೇವಿಯ ಪ್ರಾಣಕ್ಕೇ ಅಪಾಯ ತೋರುವ ಹಾಗಿತ್ತು. ಆಗಸ್ಟ್ ತಿಂಗಳ 11ನೆ ದಿನದವರೆಗೆ ಜವಾಹರ ಲಾಲರು ತಪಿಸುತ್ತಿರಬೇಕಾಯಿತು. ಆ ದಿನ ಮಾತ್ರ ಅಧಿಕಾರಿಗಳು

ಪೋಲೀಸ್ ಪಹರೆಯಿಟ್ಟು ಜವಾಹರಲಾಲರನ್ನು ಇಲಾಹಾಬಾದಿಗೊಯ್ದರು. ಅಲ್ಲಿಯ ಜಿಲ್ಲಾ ಮ್ಯಾಜಿಸ್ಟ್ರೇಟ್ "ನಿಮ್ಮ ಪತ್ನಿಗೆ ಬಹಳ ಕಾಹಿಲೆಯಾಗಿರುವ ಪ್ರಯುಕ್ತ ಸ್ವಲ್ಪಕಾಲ ಮಟ್ಟಿಗೆ ನಿಮ್ಮನ್ನು ಬಿಡುಗಡೆ ಮಾಡಿರುತ್ತದೆ" ಎಂದು ತಿಳಿಸಿದನು. ದಸ್ತಗಿರಿ ನಡೆದು ಸರಿಯಾಗಿ ಆರು ತಿಂಗಳುಗಳು ಕಳೆದಿದ್ದವು.

## 9. ಹನ್ನೊಂದು ದಿನಗಳ ಬಿಡುಗಡೆ

ತುಂಬಿದ ಆರೋಗ್ಯವನ್ನು ಕಾಣಿಸುತ್ತಿದ್ದಾಕೆ ಕಮಲಾದೇವಿ. ದಿಲ್ಲಿಯಲ್ಲಿ ನಡೆದುದಲ್ಲವೆ ಆಕೆಯ ಮದುವೆ! ಅತಿ ಸಂಭ್ರಮದಿಂದ ಮೋತಿಲಾಲರು ಮದುವೆಗಾಗಿ ಸ್ಪೆಷಲ್ ಟ್ರೈನ್ ಗೊತ್ತುಮಾಡಿಕೊಂಡು ಇಷ್ಟಮಿತ್ರರೊಡನೆ ಹೊರಟು ವಿಜೃಂಭಣೆಯಿಂದ ನಡೆಸಿದ್ದರು. ತರುವಾಯ ಸೊಸೆಯನ್ನು ಕಂಡಾಗಲೆಲ್ಲ ಸಂತೋಷವನ್ನೂ ಹೆಮ್ಮೆಯನ್ನೂ ಪಟ್ಟು ಜವಾಹರಲಾಲರಿಗೆ ತಕ್ಕ ಹೆಂಡತಿಯೆಂದು ನಲಿದರು. ರೂಪವತಿಯಾಗಿದ್ದುದಲ್ಲದೆ ಆರೋಗ್ಯಭಾಗ್ಯವನ್ನೂ ಪಡೆದ ಕಮಲಾದೇವಿಗೆ ಆನಂದಭವನದಲ್ಲಿದ್ದಾಗ ಏನು ಕೊರತೆ? ಆ ಮನೆಗೆ ಯಜಮಾನಿಯಾಗಿಯೆ ಇದ್ದಳು. ಅತ್ತೆಯವರಿಗೆ ದೃಢವಾದ ಆರೋಗ್ಯವಿಲ್ಲದಿತ್ತು; ಆದ್ದರಿಂದ ಕಮಲಾದೇವಿಯೇ ಮಾವಂದಿರ ಇಷ್ಟದಂತೆ ಮನೆಗೆಲಸದ ವಿಚಾರಣೆ ನಡೆಸುತ್ತಿದ್ದರು.

ಸ್ವಭಾವದಲ್ಲಿ ಕಮಲಾದೇವಿ ಮಗುವಿನಂತೆ. ವಯಸ್ಸಾದರೂ ರೂಪದಲ್ಲಿ ವ್ಯತ್ಯಾಸವೇ ತೋರಲಿಲ್ಲ. ನೋಡುವುದಕ್ಕೆ ಸೂಕ್ಷ್ಮಪ್ರಕೃತಿಯ ಹುಡುಗಿಯಂತೆ ಕಾಣುತ್ತಿದ್ದಾಗ್ಗೂ ಆಕೆಯ ಮನಸ್ಸಿನಲ್ಲಿ ತುಂಬ ದಾರ್ಢ್ಯವೂ ಧೈರ್ಯವೂ ಇತ್ತು. ಮದುವೆಯಾದ ಮೂರು ನಾಲ್ಕು ವರ್ಷಗಳಲ್ಲಿ ಆನಂದಭವನದ ಜಗತ್ತಿನೊಳಗೆ ಗಾಂಧೀಜಿ ಕಾಲಿಟ್ಟರು; ಜಗತ್ತೇ ಬದಲಾಯಿಸಿತು. ಒರಟಾದ ಖಾದಿ ಸೀರೆಗಳು ಬಂದುದು ಮಾತ್ರವಲ್ಲ; ಪ್ರೀತಿಯ ಪತಿದೇವನು ಸದಾ ದೊಡ್ಡ ಕೆಲಸಗಳಲ್ಲಿ ಕಾಲ ಕಳೆಯುತ್ತ ಆಗಿಂದಾಗ್ಗೆ ಜೈಲಿಗೆ ಹೋಗುವ ಅಭ್ಯಾಸ ಮಾಡಿಕೊಂಡನು. 1920ರಿಂದ 1925ರವರೆಗೆ ಜವಾಹರಲಾಲರು ಯಾರೋ ಇತರರ

ಸ್ವತ್ತಿನ್ನುವಂತೆ ನಡೆಯಿತು. ಯೂರೋಪಿಗೆ ಹೋಗಿದ್ದಾಗ ಮಾತ್ರ ಸಮಾಧಾನ; ಜವಾಹರಲಾಲರು ಜೊತೆಯಲ್ಲಿದ್ದರು. ಈ ರೀತಿಯ ಕೊರಗು ಸಹಜವಾಗಿರಬಹುದಾಗಿದ್ದರೂ ಕಮಲಾದೇವಿಯೊಂದುಸಲವಾದರೂ ಅಡ್ಡಿಯಾಗಲಿಲ್ಲ; ಜವಾಹರಲಾಲರ ರಾಜಕೀಯ ಕಲಾಪಕ್ಕೆ ವಿಘ್ನವನ್ನೊಡ್ಡಲಿಲ್ಲ. ಪ್ರಬಲವಾಗಿ ಜನರನ್ನು ಆಕರ್ಷಿಸುತ್ತ ಪ್ರಚಂಡವಾಗಿ ಸಾಹಸದ ಕಾರ್ಯವನ್ನು ಕೈಗೊಳ್ಳುತ್ತ ಪೌರುಷಮೂರ್ತಿಯಂತೆ ಜವಾಹರಲಾಲರಿದ್ದಾಗ ಕಮಲಾದೇವಿ ಭಾರತೀಯ ಸ್ತ್ರಿಯೋಚಿತವಾದ ಸೌಶೀಲ್ಯ ಲಾವಣ್ಯಗಳಿಗಲ್ಲದೆ ದೃಢವಾದ ಆತ್ಮದಾನಕ್ಕೂ ಮೂರ್ತಿಯಂತಿದ್ದರು.

ಮದುವೆಯಾದ ವರ್ಷದಮೇಲೆ ಇಂದಿರೆ ಹುಟ್ಟಿದಳು. ತರುವಾಯ 1924ರಲ್ಲಿ ಗಂಡು ಮಗು ಹುಟ್ಟಿ ಮೂರು ದಿನಗಳಲ್ಲಿ ತೀರಿಕೊಂಡಿತ್ತು. ಆ ಬಳಿಕ ಕಮಲಾದೇವಿಗೆ ಮಗನಿಲ್ಲವೆಂಬ ಕೊರಗು ಅಂತರಂಗವನ್ನು ಕೊರೆಯುತ್ತಿತ್ತು. ಆದರೆ ಜವಾಹರಲಾಲರಲ್ಲಿ ಜೀವನವನ್ನು ಸಮರ್ಪಿಸಿದ ಧೀರ ಚೈತನ್ಯಕ್ಕೆ ಆ ಕೊರಗನ್ನು ಬೆಳೆಸಿಕೊಂಡು ಖಿನ್ನತೆಯನ್ನು ಕಾಣಿಸಿಕೊಡುವ ದೌರ್ಬಲ್ಯ ದೂರವಾಗಿತ್ತು.

ಎಷ್ಟುದಿನಗಳ ಬಿಡುಗಡೆಯೆಂದು ಜವಾಹರಲಾಲರಿಗೆ ತಿಳಿಯದು. ಅನಿಶ್ಚಿತವಾಗಿದ್ದುದರಿಂದ ಯಾವ ಕೆಲಸವನ್ನಿಟ್ಟುಕೊಳ್ಳುವಹಾಗೂ ಇರಲಿಲ್ಲ; ಯಾವ ಏರ್ಪಾಟನ್ನು ನಡೆಸುವಹಾಗೂ ಇರಲಿಲ್ಲ. ಕಮಲಾದೇವಿಯನ್ನು ನೋಡಿಕೊಳ್ಳುತ್ತಿದ್ದ ಡಾಕ್ಟರುಗಳು ಎಷ್ಟು ದಿನವೆಂದು ಹೇಳುವರೋ ಅಷ್ಟೆಂದು ಮಾತ್ರ ತಿಳಿದಿತ್ತು. ಎಲ್ಲವೂ ಸಂದಿಗ್ಧವಾಗಿತ್ತು. ಮನೆಗೆ ಬಂದು ಕಂಡಾಗ ಎಲ್ಲೆಲ್ಲಿಯೂ ಡಾಕ್ಟರುಗಳು, ನರ್ಸುಗಳು, ಬಂಧುಗಳು; ಆಗಿಂದಾಗ್ಗೆ ಬಂದುಹೋಗುವ ಇಷ್ಟಮಿತ್ರರು. ಒಂಟಿಯಾಗಿ ಕಾಲ ಕಳೆದಿದ್ದವರಿಗೆ ಏನೋ ದಿಗ್ಭ್ರಾಂತಿ ಹಿಡಿದಂತಾಯಿತು. ಆದರೆ ಆಹಾರಾದಿಗಳು ಹಿತವಾಗಿದ್ದವು; ಜೈಲಿನಲ್ಲಿದ್ದಂತಲ್ಲ. ಕಮಲಾದೇವಿಯ ಸ್ಥಿತಿಯೋ! ಜವಾಹರಲಾಲರ ಮಾತುಗಳನ್ನೇ ಗಮನಿಸಬೇಕು.

"ಅತಿ ದುರ್ಬಲೆಯಾಗಿ ತನ್ನ ರೋಗದೊಡನೆ ಕಾದಾಡುತ್ತ ಕಮಲೆ ಮಲಗಿದ್ದಳು. ತೀರಾ ಕೃಶವಾಗಿ ಹೋಗಿದ್ದಳು. ನನ್ನನ್ನು ಬಿಟ್ಟು ಹೊರಟೀ

ಹೋಗುವಳೋ ಎಂತೋ ಎಂಬ ಚಿಂತೆ ಮನಸ್ಸಿಗೆ ಬಲವಾಗಿ ಅಂಟಿಕೊಂಡಿತು. ನಮ್ಮ ಮದುವೆ ನಡೆದು ಹದಿನೆಂಟೂವರೆ ವರ್ಷಗಳು ಕಳೆದಿದ್ದವು. ಅಂದಿನಿಂದ ಸಂಭವಿಸಿದುದೆಲ್ಲವೂ ಸ್ಮರಣೆಯಲ್ಲಿ ಓಲಾಡಿತು. ನನಗಾಗ ಇಪ್ಪತ್ತಾರು ವರ್ಷ; ಕಮಲೆ ಹದಿನೇಳು ವರ್ಷ ವಯಸ್ಸಿನ ಹುಡುಗಿ, ಲೋಕ ವ್ಯಾಪಾರವನ್ನು ಸ್ವಲ್ಪವಾದರೂ ಅರಿಯದವಳು. ವಯಸ್ಸಿನಲ್ಲಿದ್ದ ವ್ಯತ್ಯಾಸವಲ್ಲದೆ ಮನಃಪರಿಣತಿಯಲ್ಲಿ ಇಬ್ಬರಿಗೂ ದೊಡ್ಡ ಅಂತರವಿತ್ತು. ಲೋಕದ ಪರಿಜ್ಞಾನವನ್ನು ನಾನು ಪಡೆದಿದ್ದಾಗ್ಯೂ ನನ್ನಲ್ಲಿ ಹುಡುಗತನವೇ ಇತ್ತು. ಕೋಮಲ ಸ್ವಭಾವದ ಈ ಹುಡುಗಿಯ ಮನಸ್ಸು ಎಷ್ಟು ಸೂಕ್ಷ್ಮವೆಂಬುದನ್ನೂ ಎಷ್ಟು ಎಚ್ಚರಿಕೆಯಿಂದ ಆ ಮನಸ್ಸಿನ ವಿಕಸನವನ್ನು ಗಮನಿಸತಕ್ಕುದೆಂಬುದನ್ನೂ ನಾನು ಚೆನ್ನಾಗಿ ತಿಳಿದಿದ್ದೆನೆಂದು ಹೇಳಲಾಗದು. ನಮ್ಮಿಬ್ಬರಿಗೂ ಸುಲಭ ಕೋಪವಿತ್ತು, ಸೂಕ್ಷ್ಮಗ್ರಾಹಿತನವಿತ್ತು, ಮಾನದೃಷ್ಟಿಯಿತ್ತು. ಸಣ್ಣ ಪುಟ್ಟ ಕಾರಣಗಳಿಂದ ಚಿಲ್ಲರೆ ಕಲಹಗಳನ್ನು ಆಡುತ್ತಿದ್ದಾಗ್ಯೂ ಬೇಗನೆ ಸಮಾಧಾನಗೊಳ್ಳುತ್ತಿದ್ದೆವು. ಪರಸ್ಪರ ವಿಶ್ವಾಸ ಪ್ರೀತಿಗಳು ದೃಢಗೊಂಡವು; ಪರಸ್ಪರ ಸಹನವೆಂಬುದು ನಿದಾನವಾಗಿ ಬೆಳೆಯಿತು. ಇಪ್ಪತ್ತೊಂದು ತಿಂಗಳ ತರುವಾಯ ನಮ್ಮ ಮಗಳು ಇಂದಿರೆ ಹುಟ್ಟಿದಳು.

ಮದುವೆಯಾದ ಕಾಲವೇ ರಾಜಕೀಯ ಪ್ರಗತಿಗೂ ಸಮಯವಾಯಿತು. ಹೋಂ ರೂಲ್ ಚಳುವಳಿ, ಪಂಜಾಬಿನ ಕ್ರೂರಕೃತ್ಯಗಳು, ಅಸಹಯೋಗದ ಪ್ರಭಾತಗಳಾಗಿ ನಾನು ಪ್ರತಿಯೊಂದರಲ್ಲಿಯೂ ಮುಳುಗಿ ಈಜಾಡುವವನಾದೆ. ಅನ್ಯಕಾರ್ಯಗಳಲ್ಲಿ ಮಗ್ನನಾಗಿ ಕಮಲೆಯ ವಿಚಾರದಲ್ಲಿ ಅಲಕ್ಷ್ಯದಿಂದಿದ್ದು ಬಿಟ್ಟೆ. ಪ್ರೀತಿಗೆ ಲೋಪವಿರಲಿಲ್ಲ; ಇನ್ನೂ ಬಲಗೊಳ್ಳುತ್ತಿತ್ತು. ನನಗೆ ಶಾಂತಿ ಸಮಾಧಾನಗಳನ್ನು ಕೊಡಲು ನನ್ನ ಹಿಂದೆ ಸದಾ ಸಿದ್ಧಳಾಗಿದ್ದಳೆಂದು ನಾನು ಭಾವಿಸಿಯೇ ಇದ್ದೆ. ನನಗೆ ಧೈರ್ಯವನ್ನು ತುಂಬುತ್ತಲೇ ಇದ್ದಳು. ಆದರೆ ಆಕೆಯ ಕೆಲಸ ಕಾರ್ಯಗಳಲ್ಲಿ ನಾನು ಸೇರಿಕೊಳ್ಳದೆ ದೂರದಲ್ಲಿರುತ್ತಿದ್ದೆ. ಅದರಿಂದ ಕಮಲೆ ಮನಸ್ಸಿನಲ್ಲಿ ಕೊರಗಿದ್ದಳು. ಎಲ್ಲವನ್ನೂ ಮರೆತವನಂತೆ ದೂರದಲ್ಲಿದ್ದುದಕ್ಕಿಂತ ಎದುರಿಗೇ ಏನಾದರೂ ನಾನಂದಿದ್ದರೆ ಅಷ್ಟು ಕೊರಗುತ್ತಿರಲಿಲ್ಲ.

ತರುವಾಯ ಪದೇ ಪದೇ ಅಸ್ವಸ್ಥತೆ ತೋರಲಾರಂಭಿಸಿತು; ನಾನು ಪುನಃ ಪುನಃ ಜೈಲಿಗೆ ಹೊರಟು ದೀರ್ಘಕಾಲಾವಧಿಗಳನ್ನು ಜೈಲುಗಳಲ್ಲಿಯೆ ಕಳೆದೆ. ಸಿವಿಲ್ ಡಿಸೊಬೀಡಿಯೆನ್ಸ್ ಪ್ರಾರಂಭವಾದ ಮೇಲೆ ಕಮಲೆಗೂ ಅಗ್ರಗಾಮಿಯಾಗುವ ಅವಕಾಶ ಸಿಕ್ಕಿತು. ಜೈಲುಪ್ರಾಪ್ತಿ ತನಗೂ ಆಯಿತೆಂದು ಸಂತೋಷಗೊಂಡಳು. ನಮ್ಮಿಬ್ಬರ ಆಪ್ತತೆ ಅದರಿಂದ ಹೆಚ್ಚಿತು. ಎಷ್ಟೋ

ಕಾಲಕ್ಕೊಮ್ಮೆ ಒಬ್ಬರನ್ನೊಬ್ಬರು ನೋಡಲು ದೊರೆಯುತ್ತಿದ್ದ ಅಲ್ಪಾವಕಾಶಕ್ಕಾಗಿ ನಾವು ಅಂತರಂಗದಲ್ಲಿ ತಪಿಸಿದೆವು. ಎಂದು ಆ ಸಮಯಬರುವುದೆಂದು ದಿನಗಳನ್ನೆಣಿಸುತ್ತಿದ್ದೆವು. ಒಬ್ಬರಿಗೊಬ್ಬರು ಹಳಬರಾಗಲೇ ಇಲ್ಲ; ಬೇಸರವನ್ನುಂಟು ಮಾಡಲೇ ಇಲ್ಲ. ಸ್ವಲ್ಪಕಾಲ ಮಾತ್ರ ಪರಸ್ಪರವಾಗಿ ಕಂಡರೂ ಅಷ್ಟು ಕಾಲವೂ ಉಲ್ಲಾಸಪೂರಿತವಾಗಿಯೆ ಇರುತ್ತಿತ್ತು. ಒಬ್ಬರಲ್ಲೊಬ್ಬರು ಹೊಸ ಅಂಶಗಳನ್ನು ಕಂಡುಕೊಳ್ಳುತ್ತಿದ್ದೆವು; ಆಗಲೂ ನಾವಿಬ್ಬರೂ ಹುಡುಗ ಹುಡುಗಿಯರ ಆಟದ ಪ್ರಜ್ಞೆಯನ್ನು ಬಿಡಲಾಗಲಿಲ್ಲ.

ಹದಿನೆಂಟು ವರ್ಷ ಸಂಸಾರಮಾಡಿದ್ದರೂ ಕಮಲೆ ಹುಡುಗಿಯಂತೆಯೆ ಕಾಣುತ್ತಿದ್ದಳು. ನವವಧುವಿನಂತೆ ಕಾಣುತ್ತಿದ್ದಳೇ ವಿನಾ ಅನುಭವ ಪಡೆದ ತಾಯಿಯಂತೆ ಕಾಣುತ್ತಿರಲಿಲ್ಲ. ಮದುವೆಯಾಗಿ ನಮ್ಮ ಮನೆಗೆ ಬಂದಾಗ ಹೇಗಿದ್ದಳೋ ಹಾಗೆಯೇ ಇದ್ದಳು. ನಾನಾದರೆ ಬದಲಾಯಿಸಿದ್ದೆ. ದೃಢಕಾಯನಾಗಿದ್ದು ಚಾಪಲ್ಯಚಾಟುಲ್ಯಗಳಿಂದ ಕೂಡಿದ್ದಾಗ್ಗೂ ನನಗೆ ವಯಸ್ಸಾದುದು ಕಾಣುತ್ತಿತ್ತು. ಇನ್ನೂ ಹುಡುಗತನವುಂಟೆಂದು ಇತರರು ನನಗೆ ಹೇಳುತ್ತಿದ್ದಾಗ್ಗೂ ನನ್ನ ರೂಪದಲ್ಲಿ ವಯಸ್ಸು ಪ್ರಕಟವಾಗುವ ಲಕ್ಷಣಗಳು ಬೆಳೆದಿದ್ದವು. ಹಣೆಗೆ ಮೇಲ್ಭಾಗ ಬೋಳಾಯಿತು, ಕೂದಲು ನರೆಯಿತು, ಕಣ್ಣುಗಳ ಸುತ್ತ ಕಪ್ಪುಗಟ್ಟಿತ್ತು, ಮುಖದಲ್ಲಿ ಗುರುತುಗಳು ಬಿದ್ದಿದ್ದವು. ಕಳೆದ ನಾಲ್ಕು ವರ್ಷಗಳ ಅನುಭವ ಮನವನ್ನು ಕೊರಗಿಸಿತ್ತು. ಹೀಗಾಗಿ ಕಮಲೆಗೂ ನನಗೂ ಎಷ್ಟೋ ಅಂತರ ಕಾಣುವಂತಾಯಿತು. ಇಂದಿರೆಯೊಡನಿದ್ದಾಗ ಇಂದಿರೆಯ ಅಕ್ಕನಂತೆ ಮಾತ್ರ ಕಾಣುತ್ತಿದ್ದಳು. ಇತ್ತೀಚೆಗೆ ಅಪರಿಚಿತರಲ್ಲಿ ಹೋದಾಗ ಕಮಲೆಯನ್ನು ಕಂಡವರು "ನಿಮ್ಮ ಮಗಳೇನು ಈಕೆ?" ಎಂದು ಕೇಳುತ್ತಿದ್ದರು.

ಹದಿನೆಂಟು ವರ್ಷಗಳ ಗೃಹಸ್ಥ ಜೀವನ! ಅವುಗಳಲ್ಲೆಷ್ಟುಕಾಲ ನಾನು ಜೈಲುಗಳಲ್ಲಿ ಕಳೆದದ್ದು? ಎಷ್ಟುಕಾಲ ಕಮಲೆ ಆಸ್ಪತ್ರೆಗಳಲ್ಲಿಯೂ ಚಿಕಿತ್ಸಾಲಯಗಳಲ್ಲಿಯೂ ಕಳೆದದ್ದು? ಈಗಲಾದರೂ ಏನು? ಮರಣವನ್ನು ದೂರದಲ್ಲಿರಿಸಲು ಆಕೆಯ ಪ್ರಯತ್ನ; ನಾನಿನ್ನೂ ಬಂದಿಯಾಗಿಯೆ ಇದ್ದು ಹಲಕೆಲವು ದಿನ ಮಾತ್ರ ಹೊರಗೆ ಬಂದಿದ್ದವನು. ತನ್ನ ಆರೋಗ್ಯವನ್ನು ಎಚ್ಚರದಿಂದ ಕಾಪಾಡಿಕೊಳ್ಳದೆ ಹೋದಳೆಂದು ನನಗೆ ಅಸಹನವೇ ಮೂಡಿತ್ತು. ಆದರೆ ಹೇಗೆ ತಾನೇ ನಾನು ಆಕ್ಷೇಪ ಮಾಡಬೇಕು? ಪರಮೋತ್ಸಾಹ ತುಂಬಿದ್ದವಳಿಗೆ ಸುಮ್ಮನಿರಲು ಸಾಧ್ಯವಿಲ್ಲ; ಇಷ್ಟಪೂರ್ತಿಯಾಗಿ ಕರ್ತವ್ಯ ನಡೆಸಲು ಸಾಕಾದಷ್ಟು ಶರೀರದಾರ್ಢ್ಯವಿಲ್ಲ. ಹೀಗಾಗಿ ಅತ್ತ ರಾಜಕೀಯ ಕರ್ತವ್ಯವನ್ನೂ ತೃಪ್ತಿಕರವಾಗಿ ಕಟ್ಟಿಕೊಳ್ಳಲಾರದೆ ಇತ್ತ ಚಿಕಿತ್ಸೆಯನ್ನೂ ಸಮರ್ಪಕವಾಗಿ ನಡೆಸಿಕೊಳ್ಳ

ಲಾರದೆ ಇದ್ದುಬಿಟ್ಟಳು. ಅಂತರಂಗದ ಉರಿ ದೇಹವನ್ನು ಸುಡುತ್ತ ಮುಕ್ಕುತ್ತ ಇದ್ದಿತು.

ಈಗ ನನ್ನನ್ನು ಬಿಟ್ಟು ಹೊರಡುವಳೆ? ನನಗೆ ಅತ್ಯಗತ್ಯವಾಗಿ ಬೇಕಾದಾಗ ಬಿಟ್ಟು ಹೊರಟಾಳೆ? ಈಗ ತಾನೆ ಒಬ್ಬರ ಮನಸ್ಸು ಇನ್ನೊಬ್ಬರಿಗೆ ತಿಳಿದ ಹಾಗಾಗಿತ್ತು; ಕೂಡಿದ ಜೀವನವಿಬ್ಬರಿಗೂ ಈಗಲೆ ನಿಜವಾಗಿ ಪ್ರಾರಂಭವಾಗಬೇಕಾಗಿತ್ತು. ಈಗ ನನ್ನನ್ನೊಂಟಿಯಾಗಿ ಬಿಟ್ಟು ತೆರಳುವಳೇ? ಒಬ್ಬರಿಗೊಬ್ಬರು ಎಷ್ಟು ಬೇಕು! ಇಬ್ಬರೂ ಒಟ್ಟಾಗಿದ್ದು ಮಾಡಬೇಕಾದ ಕೆಲಸ ಕಾರ್ಯವೆಷ್ಟಿತ್ತು!"

ಗಳಿಗೆಗಳಿಗೆಗೂ ದಿನದಿನಕ್ಕೂ ಈ ಬಗೆಯ ಚಿಂತೆಯನ್ನು ಮನದಲ್ಲಿ ಹೊತ್ತು ಕಮಲಾದೇವಿಯೊಡನೆ ಇದ್ದರು. ಇಷ್ಟಮಿತ್ರರೂ ಸಹೋದ್ಯೋಗಿಗಳೂ ಆಗಾಗ್ಗೆ ಬಂದು ಕಾಣುತ್ತಿದ್ದರು. ದೇಶದಲ್ಲಿ ನಡೆದಿದ್ದ ಸಂಗತಿಗಳನ್ನು ವಿವರಿಸಿಕೊಟ್ಟು ಜವಾಹರಲಾಲರ ಅಭಿಪ್ರಾಯವೇನೆಂದು ಕೇಳುತ್ತಿದ್ದರು. ಅಂತಹ ಪ್ರಶ್ನೆಗಳಿಗೆ ಉತ್ತರ ಹೇಳಲು ಜವಾಹರರಿಗೆ ಸಾಧ್ಯವಾಗಲಿಲ್ಲ. ಮನಸ್ಸು ಕಮಲಾದೇವಿಯ ಆಲೋಚನೆಯಲ್ಲಿ ಮುಳುಗಿಹೋಗಿತ್ತು. ಸಂಗತಿಯೇನೆಂದು ಪರಿಪೂರ್ಣವಾಗಿ ತಿಳಿದ ಹೊರತು ಅಭಿಪ್ರಾಯ ನಿರೂಪಣೆ ಮಾಡುವುದು ಅಯೋಗ್ಯ ಕೆಲಸವೆಂಬುದು ಬೇರೆ. ಇಷ್ಟೂ ಅಲ್ಲದೆ ಕಮಲಾದೇವಿಯ ಕಾಹಿಲೆಯ ಸಲುವಾಗಿ ಬಿಡುಗಡೆಯಾಗಿದ್ದ ಅವಕಾಶವನ್ನು ದುರುಪಯೋಗ ಮಾಡಿದಂತಾಗಬಾರದೆಂಬ ಎಚ್ಚರ ಬೇರೆ. ಆದುದರಿಂದ ಬಹಿರಂಗವಾಗಿ ಯಾವ ಹೇಳಿಕೆಯನ್ನೂ ಕೊಡಲಿಲ್ಲ. ಅಂತರಂಗದಲ್ಲಿಯೂ ನಿರ್ದಿಷ್ಟತೆ ಕಾಣಿಸಿಕೊಡುವ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ.

ಕಾಂಗ್ರೆಸ್ ಅನುಯಾಯಿಗಳಲ್ಲಿ ಸೋಷಿಯಲಿಸ್ಟ್ ಪಾರ್ಟಿಯೆಂಬುದೊಂದು ಹುಟ್ಟಿಕೊಂಡಿತ್ತು. ಜವಾಹರಲಾಲರ ಮಿತ್ರರಾದವರೇ ಅನೇಕರು ಅದನ್ನು ಸೇರಿದ್ದರು. ಜವಾಹರಲಾಲರೂ ಸೇರಿಕೊಂಡಾರೆಂಬ ನಿರೀಕ್ಷೆಯನ್ನು ಅವರಿಟ್ಟುಕೊಂಡಿದ್ದರು. ಆದರೆ ಸ್ವತಂತ್ರರಾಗಿದ್ದಾಗ್ಗೂ ಜವಾಹರಲಾಲರದನ್ನು ಆಕಸ್ಮಿಕ ರೀತಿಯಲ್ಲಿ ಸೇರುತ್ತಿರಲಿಲ್ಲ. ಅದೇ ಕಾಲದಲ್ಲಿ ದಿಲ್ಲಿಯ ಶಾಸನ ಸಭೆಗಳಿಗೆ ಚುನಾವಣೆಗಳು

ನಡೆಯುಬೇಕಾಗಿದ್ದವು. ಕಾಂಗ್ರೆಸ್ ಪಕ್ಷವೊಂದು ಚುನಾವಣೆಗೆ ಸಿದ್ಧವಾಗಿತ್ತು. ಅದಕ್ಕೆ ವಿರೋಧವಾಗಿ ಅನೇಕರು ಘೋಷಿಸುತ್ತಲಿದ್ದರು. ಚುನಾವಣೆಗಳ ಕಚ್ಚಾಟ ಕಿತ್ತಾಟ ಕೆರಳಿ ಕಮಲಾದೇವಿಯ ಅಸ್ವಸ್ಥತೆಯ ವಿಚಾರವನ್ನೂ ತಮ್ಮ ವಾಗ್ಯುದ್ಧಗಳಲ್ಲಿ ಎಳೆದಿಟ್ಟಿದ್ದರು. ಇದರಿಂದ ಜವಾಹರಲಾಲರಿಗೆ ಹಿಂಸೆಯೂ ಬೇಸರವೂ ಉಂಟಾಯಿತು.

"ಈ ಸಣ್ಣ ಸಣ್ಣ ಜಗಳಗಳನ್ನೂ ರೀತಿಗೆಡುತ್ತಿದ್ದ ರಾಜಕೀಯ ಕಲಾಪವನ್ನೂ ಕಂಡು ಅಸಹ್ಯ ಹಿಡಿಯಿತು. ನನಗೂ ಅವುಗಳಿಗೂ ಹೊಂದಿಕೆಯೇ ಕಾಣಲಿಲ್ಲ. ಸ್ವಂತ ಊರಾದ ಪ್ರಯಾಗದಲ್ಲಿ ನಾನು ಯಾರೋ ಯಃಕಶ್ಚನ ಪರದೇಶಿಯಂತೆ ಆದಹಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಸೇರಿಕೊಳ್ಳುವ ಕಾಲ ನನಗೂ ಬಂದರೆ ನಾನೇನು ಮಾಡಬೇಕಾದೀತೆಂಬುದನ್ನು ಭಾವಿಸಲಾರದಾದೆ.

ಕಮಲೆಯ ಸ್ಥಿತಿಯನ್ನು ವಿವರಿಸಿ ಗಾಂಧೀಜಿಗೆ ಕಾಗದ ಬರೆದೆ. ಹಾಗೆಯೆ ನನ್ನ ಮನಸ್ಸಿಗಾದ ಅಸಮಾಧಾನವನ್ನೂ ಕಾಣಿಸಿಕೊಟ್ಟೆ. ಆ ಕಾಗದವನ್ನೋದಿ ಗಾಂಧೀಜಿ ನೊಂದುಕೊಂಡರೆಂದು ತರುವಾಯ ತಿಳಿಯಿತು.

ದಿನವಾದ ಮೇಲೆ ದಿನ ಕಳೆಯಿತು. ಸರ್ಕಾರದವರಿಂದ ಏನಾದರೂ ನಿಷ್ಕೃಷ್ಟ ಸಂಗತಿ ತಿಳಿದೀತೆಂಬ ನಿರೀಕ್ಷೆಯಲ್ಲಿದ್ದೆ. ಆಗಿಂದಾಗ್ಗೆ "ನಾಳೆಯೋ ನಾಳಿದ್ದೋ ತಿಳಿಸಲಾಗುತ್ತದೆ" ಎಂದು ಹೇಳುತ್ತಿದ್ದರು. ನಾನು ಬಂದಾರಭ್ಯ ಕಮಲೆಗೆ ಸ್ವಲ್ಪ ಮೇಲಾಗಿತ್ತು. ಡಾಕ್ಟರರು ನಿತ್ಯವೂ ಸ್ಥಿತಿಯನ್ನು ಸರ್ಕಾರದ ಅಧಿಕಾರಿಗಳಿಗೆ ವರದಿಕೊಡುತ್ತಿದ್ದರು.

ಅಕ್ಟೋಬರ್ ತಿಂಗಳಲ್ಲಿ ಕಾಂಗ್ರೆಸ್ ಮುಂಬಯಿಯಲ್ಲಿ ಸಭೆ ಸೇರಬೇಕಾಗಿತ್ತು ; ನವೆಂಬರ್ ತಿಂಗಳಲ್ಲಿ ದಿಲ್ಲಿ ಶಾಸನ ಸಭೆಗೆ ಚುನಾವಣೆಗಳು ನಡೆಯುಬೇಕಾಗಿತ್ತು. ಅಂತಹ ಸಂದರ್ಭದಲ್ಲಿ ನಾನು ಬಿಡುಗಡೆಯಿಂದಿರುವುದು ಸರ್ಕಾರದವರಿಗೆ ಹಿತವಾಗಿ ತೋರಲಿಲ್ಲ. ಪುನಃ ಮೂರು ತಿಂಗಳು ಜೈಲಿನಲ್ಲಿಟ್ಟುಕೊಂಡಿದ್ದು ಬಿಡುಗಡೆ ಮಾಡಬಹುದೆಂದೋ ಜೈಲಿಗೊಯ್ಯದೆಯೆ ಇದ್ದಲ್ಲಿಯೆ ಯಾವುದಾದರೂ ನಿರ್ಬಂಧರಚನೆ ಮಾಡಬಹುದೆಂದೋ ನಿರೀಕ್ಷಿಸುತ್ತಿದ್ದೆ. ಅದನ್ನು ನಂಬಿಕೊಂಡು ಮನೆಯಲ್ಲಿದ್ದು ಬಿಡುವುದೇ ಸರಿಯೆಂದುಕೊಳ್ಳುವುದರಲ್ಲಿದ್ದೆ.

ಬಿಡುಗಡೆಯಾಗಿದ್ದ ಹನ್ನೊಂದನೆ ದಿನ. ಪೋಲೀಸ್‌ಕಾರ್ ಬಂತು ; ಬಂದಿದ್ದ ಅಧಿಕಾರಿ ವೇಳೆಯಾಯಿತೆಂದೂ ನೈನಿ ಜೈಲಿಗೆ ಆತನೊಂದಿಗೆ ನಾನು ಹೊರಡಬೇಕೆಂದೂ ತಿಳಿಸಿದನು. ನಾನೂ ಎಲ್ಲರನ್ನೂ ಬೀಳ್ಕೊಟ್ಟು ಹೊರಟೆ.

ಪೋಲೀಸ್ ಕಾರನ್ನೇರುತ್ತಿದ್ದ ಕ್ಷಣದಲ್ಲಿ ನಮ್ಮಮ್ಮ ರೋಗದಿಂದ ನರಳುತ್ತಿದ್ದರೂ ಎದ್ದು ಕೈಗಳನ್ನು ಚಾಚಿಕೊಂಡು ನನ್ನ ಕಡೆಗೋಡಿ ಬಂದಳು. ಆಗ ಕಂಡ ಆಕೆಯ ಮುಖವನ್ನು ನಾನು ಮರೆಯಲಾಗಲೇ ಇಲ್ಲ."

## 10. ನೈನಿ ಆಲ್ಮೋಡ ಜೈಲುಗಳಲ್ಲಿ

ಪುನಃ ನೈನಿ ಜೈಲಿಗೆ. ಹೊಸದಾಗಿ ಮತ್ತೊಂದು ಬಂಧನ ಕಾಲವನ್ನು ಪ್ರಾರಂಭಿಸಿದಂತಿತ್ತು. ಜೈಲಿನೊಳಕ್ಕೆ ಹೊರಗಿನಿಂದ: ಒಳಗಿನಿಂದ ಹೊರಕ್ಕೆ. ಮಗ್ಗದ ಲಾಳಿಯಂತೆಯೇ ಆದೆ ನಾನು! ಮನಸ್ಸನ್ನು ಸ್ಥಿಮಿತವಾಗಿಟ್ಟುಕೊಳ್ಳಲು ಕಷ್ಟವಾಯಿತು. ನೈನಿ ಜೈಲಿನಲ್ಲಿ ಹಳೆಯದಾಗಿ ಹಿಂದೆ ಅನುಭವವಾಗಿದ್ದೆಡೆಯಲ್ಲಿ ನನ್ನನ್ನಿಡುವರೆಂದಿದ್ದೆ. ಅಲ್ಲಿ ರಣಜಿತ್ ಪಂಡಿತರು ನೆಟ್ಟಿದ್ದ ಕೆಲವು ಹೂಗಿಡಗಳಿದ್ದವು; ವರಾಂಡವೂ ಸುಮಾರಾಗಿತ್ತು. ಆದರೆ ಅಲ್ಲಿ ಈಗ ಮತ್ತೊಬ್ಬನಿದ್ದನು. ವಿಚಾರಣೆಯಾಗಲಿ ತೀರ್ಮಾನವಾಗಲಿ ಇಲ್ಲದೆ ಬಂಧನಕ್ಕೊಳಗಾಗಿದ್ದನು. ಆತನೊಡನಿರಲು ನನಗೆ ಯೋಗ್ಯತೆ ಸಾಲದೆಂದು ನನ್ನನ್ನು ಬೇರೆಡೆಯಲ್ಲಿಟ್ಟರು. ಅಲ್ಲಿ ಹಸುರಾಗಲಿ ಹೂವಾಗಲಿ ಏನೂ ಇರಲಿಲ್ಲ.

ಎಲ್ಲಿದ್ದರೆ ತಾನೇ ಏನು! ನನ್ನ ಮನಸ್ಸೆಲ್ಲವೂ ಮತ್ತೆಲ್ಲಿಯೋ ನೆಲೆಸಿತ್ತಲ್ಲವೆ? ಅಲ್ಪಸ್ವಲ್ಪವಾಗಿ ಕಮಲೆಗಾಗಿದ್ದ ಮೇಲು ನನ್ನ ದಸ್ತಗಿರಿಯಿಂದ ಮಾಯವಾದೀತೆಂಬ ಶಂಕೆ ಬಲವಾಗಿತ್ತು. ಅಂತೆಯೆ ಸಂಭವಿಸಿದ್ದು ಕೂಡ. ಕೆಲದಿನಗಳ ಮಟ್ಟಿಗೆ ನಿತ್ಯವೂ ನನಗೆ ಡಾಕ್ಟರರ ವರದಿಯನ್ನು ತರಿಸಿಕೊಡುವ ಏರ್ಪಾಟಾಗಿತ್ತು. ಅದಕ್ಕೂ ದ್ರಾವಿಡ ಪ್ರಾಣಾಯಾಮ! ಡಾಕ್ಟರ್ ಪೋಲೀಸ್ ಕಚೇರಿಗೆ ತಿಳಿಸಿದ ಬಳಿಕ ಪೋಲೀಸಧಿಕಾರಿಗಳು ನನಗೆ ತಿಳಿಸುತ್ತಿದ್ದರು. ಜೈಲಿನಲ್ಲಿದ್ದ ಅಧಿಕಾರಿಗಳಿಗೂ ಡಾಕ್ಟರರೊಡನೆ ನೇರವಾಗಿ ಮಾತನಾಡಲು ಅವಕಾಶವಿರಲಿಲ್ಲ. ಈ ಬಗೆಯ ವರದಿಗಳು ಹದಿನೈದು ದಿನಗಳವರೆಗೆ ಹಾಗೂ ಹೀಗೂ ಬರುತ್ತಿದ್ದು ತರುವಾಯ ನಿಂತೇ ಹೋದವು. ಕಮಲೆಯ ದೇಹಸ್ಥಿತಿ ನಿತ್ಯವೂ ಕೆಡುತ್ತಿದ್ದರೂ ನನಗೆ ಸಮಾಚಾರ ತಿಳಿಯುವುದು ನಿಂತಿತು.

ತಿಳಿದರೆ ಕೆಟ್ಟ ಸುದ್ದಿ; ತಿಳಿಯದಿದ್ದಾಗ ಏನು ಸಮಾಚಾರವೋ ಹೇಗೋ ಎಂಬ ಕಳವಳ. ಹಗಲು ಹೊತ್ತು ಎಷ್ಟೋ ದೀರ್ಘವೆನ್ನಿಸುತ್ತಿತ್ತು; ರಾತ್ರಿಯಾದರೆ ಅದಕ್ಕಿಂತ ಕೇಡು. ಹೊತ್ತೆಂಬುದು ಸಾಗುವುದೇ ಇಲ್ಲವೆಂಬಂತಿತ್ತು. ಅಥವಾ ಸಾಗಿದರೂ ಅತಿ ನಿದಾನವಾಗಿ ಕಳೆಯುತ್ತಿತ್ತು. ಒಂದೊಂದು ಗಳಿಗೆಯೂ ಭಯಗೂಡಿದ ಭಾರವಾಗಿತ್ತು. ಇಂತಹ ಅವಸ್ಥೆಯನ್ನು

ನಾನೆಂದೂ ಅನುಭವಿಸಿರಲಿಲ್ಲ. ಮುಂಬಯಿ ಕಾಂಗ್ರೆಸ್ ಮುಗಿದಕೂಡಲೆ ನನ್ನ ಬಿಡುಗಡೆಯಾದೀತೆಂದು ಭಾವಿಸಿದ್ದೆ ; ಆಯೆರಡು ತಿಂಗಳುಗಳು ಅನಂತ ವಾಗಿ ಕಂಡವು.

ದಸ್ತಗಿರಿಯಾದ ಒಂದು ತಿಂಗಳಿಗೆ ಸರಿಯಾಗಿ ನನ್ನನ್ನು ಪೋಲೀಸಧಿಕಾರಿಯೊಬ್ಬನು ಕಮಲೆಯ ಬಳಿಗೆ ಕರೆದೊಯ್ದನು. ವಾರಕ್ಕೆರಡು ಸಲ ಈ ರೀತಿ ಕಮಲೆಯನ್ನು ಕಾಣಲು ನನಗೆ ಅವಕಾಶ ಕಲ್ಪನೆಯಾಗುವುದೆಂದು ಹೇಳಿದರು. ವಾರದಲ್ಲಿ ಮೂರುದಿನ ಕಳೆದು ನಾಲ್ಕನೆ ದಿನ ಕಾದಿದ್ದೆ ; ಯಾರೂ ಬರಲಿಲ್ಲ. ಐದನೆ ದಿನವಾಯಿತು ; ಆರನೆ ಏಳನೆ ದಿನಗಳೂ ಕಳೆದವು, ಕಾದು ಕಾದು ನನಗೆ ಪರಮಾಯಾಸವಾಯಿತು. ಪುನಃ ಕಮಲೆಯ ದೇಹಸ್ಥಿತಿ ತೀರಾ ದುರ್ಬಲಗೊಂಡಿತ್ತೆಂಬ ಸಮಾಚಾರ ತಿಳಿಯಿತು. ಅಂತಹ ಕಾಲದಲ್ಲಿ ವಾರಕ್ಕೆರಡು ಬಾರಿ ಕಮಲೆಯನ್ನು ಕಾಣಲು ಕರೆದುಕೊಂಡು ಹೋಗುತ್ತೇವೆಂದು ಹೇಳುವುದು ಎಂತಹ ಕುಚೋದ್ಯ !

ಸೆಪ್ಟೆಂಬರ್ ತಿಂಗಳು ಕೊನೆಯಾಯಿತು. ಆ ಮೂವತ್ತು ದಿನಗಳ ಪ್ರತಿಗಳಿಗೆಯೂ ನನಗೆ ನರಕವಾಗಿತ್ತು.

ಈ ಮಧ್ಯೆ ಅನೇಕರ ದ್ವಾರಾ ನನಗೆ ಸಂದೇಶ ತಲಪಿಸಿದ್ದರು. ಉಳಿದಿದ್ದ ಅವಧಿಯಲ್ಲಿ ನಾನು ರಾಜಕೀಯ ಕ್ಷೇತ್ರದಿಂದ ದೂರವಾಗಿರುವೆನೆಂದು ಪ್ರಮಾಣ ಮಾಡಿಕೊಟ್ಟಲ್ಲಿ ಕಮಲೆಯ ಬಳಿಯಲ್ಲಿರಲನುಕೂಲವಾಗುವಂತೆ ಬಿಡುಗಡೆಯಾಗುವುದೆಂಬ ಸಂದೇಶ. ರಾಜಕೀಯವಾದ ಆಲೋಚನೆಗಳು ನನ್ನ ಮನಸ್ಸಿನಲ್ಲಾಗ ಇರಲೇ ಇಲ್ಲ ; ಹನ್ನೊಂದು ದಿನಗಳ ಬಿಡುಗಡೆ ಕಾಲದಲ್ಲಿ ಕಂಡಿದ್ದ ರಾಜಕೀಯ ಕ್ಷೇತ್ರ ಮನಸ್ಸಿಗೆ ಹಿಂಸೆಯನ್ನೇ ಒಡ್ಡಿತ್ತು. ಆದರೆ ಪ್ರಮಾಣ ಮಾಡುವುದೋ ? ಪ್ರಮಾಣ ಕೊಟ್ಟು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಭಂಗಗೊಳಿಸಿ, ಘನೋದ್ದೇಶವನ್ನು ತ್ಯಾಗಮಾಡಿ, ಸಹೋದ್ಯೋಗಿಗಳಿಗೆ ದ್ರೋಹಗೈದು, ಆತ್ಮವಂಚನೆಯನ್ನು ಬುದ್ಧಿಪೂರ್ವಕವಾಗಿ ನಡೆಸಿಕೊಳ್ಳುವುದು ಹೇಗೆ ! ಏನನರ್ಥ ಸಂಭವಿಸಿದರೂ ಅದು ಮಾತ್ರ ಅಸಾಧ್ಯ. ದೇಹವನ್ನು ಕತ್ತರಿಸಿಕೊಟ್ಟು ಪ್ರಾಣವನ್ನು ಬಿಡುವುದು ಮೇಲು. ಕಮಲೆಯ ಸ್ಥಿತಿ ದಿನೇದಿನೇ ಕೆಡುತ್ತಿದ್ದಿತೆಂದೂ, ಆಕೆಯ ಬಳಿಯಲ್ಲಿ ನಾನಿದ್ದರೆ ಮೃತ್ಯುಮುಖಿಯಾಗಿದ್ದವಳು ಜೀವನಮುಖಿಯಾದಾಳೆಂದೂ ಹೇಳಿದರು. ಆಕೆ ಬದುಕಿಕೊಳ್ಳಬೇಕೆಂಬ ನನ್ನ ಆಸೆಗಿಂತ ನನ್ನ ಆತ್ಮಗೌರವ ಪ್ರತಿಷ್ಠೆಗಳು ಹೆಚ್ಚೇ ? ಧರ್ಮಸಂಕಟ ಈ ರೂಪವನ್ನು ತಾಳಿ ನನ್ನೆದುರಾಗಿದ್ದಿದ್ದರೆ ನನ್ನ ದುರವಸ್ಥೆ ಮಿತಿಮೀರುತ್ತಿತ್ತು. ಆದರೆ ಒಂದಂಶ ನನಗೆ ಧೈರ್ಯದಾಯಕವಾಗಿತ್ತು. ನಾನು ಅಂತಹ ಪ್ರಮಾಣ ಕೊಡುವ ಅಂಶವನ್ನು ಕಮಲೆಯೇ ಖಂಡಿಸುತ್ತಿದ್ದಳೆಂದು ನನಗೆ ವಿಶ್ವಾಸ

ವಿತ್ತು. ಪ್ರಮಾಣವನ್ನು ಕೊಟ್ಟಲ್ಲಿ ಆಕೆಯನ್ನು ಪ್ರಹರಿಸಿದಂತೆಯೆ ಪರಿಣಮಿಸುತ್ತಿತ್ತು.

ಅಕ್ಟೋಬರ್ ತಿಂಗಳ ಆರಂಭದಲ್ಲಿ ನನ್ನನ್ನು ಆಕೆಯ ಬಳಿಗೆ ಕರೆದೊಯ್ದರು. ತೀವ್ರ ಜ್ವರದ ಪರಿಣಾಮವಾಗಿ ಭ್ರಾಂತಿಗೊಂಡವಳಂತೆ ಮಲಗಿದ್ದಳು. ಸಮೀಪದಲ್ಲಿ ನಾನಿರಬೇಕೆಂಬ ಆಸೆ ಉತ್ಕಟವಾಗಿತ್ತು; ಬಿಡಲಾರದೆ ಬಿಟ್ಟುಬರಬೇಕಾಯಿತು. ಅಲ್ಲಿಂದ ಪುನಃ ಜೈಲಿಗೆ ಹೊರಡುವ ವೇಳೆ. ಆಗ ಧೈರ್ಯವಹಿಸಿ ಮುಗುಳ್ನಗೆ ಕಾಣಿಸಿ ಹತ್ತಿರವಾಗುವಂತೆ ಸಂಜ್ಞೆ ಮಾಡಿದಳು. ಬಾಯಿ ಬಳಿ ನನ್ನ ಕಿವಿ ಕೊಟ್ಟಾಗ 'ಇದೇನು ನೀವು ಸರ್ಕಾರಕ್ಕೆ ಪ್ರಮಾಣ ಕೊಡುವ ಸಮಾಚಾರ? ಕೊಡಬೇಡಿ' ಎಂದುಸಿರಿದಳು."

ಸ್ವಲ್ಪ ಮೇಲಾದರೆ ಕಮಲಾದೇವಿಯನ್ನು ಪ್ರಯಾಗದಿಂದ ಭೊವಾಲಿಗೆ ಕರೆದುಕೊಂಡು ಹೋಗುವ ನಿಶ್ಚಯಮಾಡಿತ್ತು. ಸೆಪ್ಟೆಂಬರ್ ಕಳೆದು ಅಕ್ಟೋಬರ್ ಬಂದಿದ್ದರೂ ಮೇಲು ಕಾಣಿಸಲಿಲ್ಲ. ಇನ್ನು ಕಾಲಹರಣ ಮಾಡಲಾಗದೆಂದೂ ದಿನದಿನವೂ ಕ್ಷಯಿಸುತ್ತಿರುವುದನ್ನು ನೋಡುತ್ತ ಸುಮ್ಮನಿರಲಾಗದೆಂದೂ ಯೋಚಿಸಿ ಹಿಮವತ್ಪ್ರಾಂತದ ಬಳಿ ಹಿತವಾದ ಹವಕ್ಕಾಗಿ ಭೊವಾಲಿಗೆ ಕರೆದೊಯ್ಯುವುದೇ ಸರಿಯೆಂದು ನಿರ್ಧರಿಸಿತ್ತು.

ಭೊವಾಲಿ ಪ್ರಯಾಣಕ್ಕೆ ಹಿಂದಿನ ದಿನ ಕಮಲಾದೇವಿಯನ್ನು ಕಾಣಲು ಜವಾಹರಲಾಲರಿಗೆ ಅವಕಾಶ ಕಲ್ಪನೆಯಾಯಿತು. ಆ ವೇಳೆಯಲ್ಲಿ ಬೀಳ್ಕೊಟ್ಟ ಬಳಿಕ ಜವಾಹರರ ಮನಸ್ಸಿನಲ್ಲಿ "ಪುನಃ ನಾನು ಆಕೆಯನ್ನು ಎಂದು ಕಾಣುವುದು? ಕಾಣುವೆನೋ ಅಥವಾ ವಿಧಿಯ ವಂಚನೆಗೊಳಗಾಗುವೆನೋ!" ಎಂಬ ತಳಮಳವಿತ್ತು. ಆದರೆ ಬೀಳ್ಕೊಟ್ಟ ಸಮಯದಲ್ಲಿ ಕಮಲಾದೇವಿ ಹರ್ಷಚಿತ್ತದಿಂದಿದ್ದ ಹಾಗೆ ಕಾಣಿಸಿತು. ಬಹುಕಾಲದ ಮೇಲೆ ಜವಾಹರರ ಮನಸ್ಸಿಗೆ ಸ್ವಲ್ಪ ನೆಮ್ಮದಿ ತೋರಿತು.

ನೈನಿ ಜೈಲಿನಲ್ಲಿ ಇನ್ನೂ ಮೂರು ವಾರಗಳನ್ನು ಕಳೆದ ತರುವಾಯ ಜವಾಹರಲಾಲರನ್ನು ಆಲ್ಮೋಡಾ ಜಿಲ್ಲಾ ಜೈಲಿಗೆ ವರ್ಗಾಯಿಸುವ ನಿಶ್ಚಯವಾಯಿತು. ಹೋಗುವ ದಾರಿಯಲ್ಲೆ ಭೊವಾಲಿ. ಪ್ರಯಾಣ ಮಾಡುತ್ತ ಪೋಲೀಸಧಿಕಾರಿಗಳು ಎರಡು ಮೂರು ಗಂಟೆಕಾಲ ಭೊವಾಲಿಯಲ್ಲಿ ನಿಂತು ಜವಾಹರಲಾಲರಿಗೆ ಕಮಲಾದೇವಿಯನ್ನು ಕಾಣಲು ಅವ

ಕಾಶ ಕೊಟ್ಟರು. ಕಮಲಾದೇವಿ ಗುಣಮುಖವಾಗಿದ್ದಂತೆ ಕಂಡಳು; ಉಲ್ಲಾಸವನ್ನು ಕಾಣಿಸಿದಳು. ಜವಾಹರಲಾಲರ ಮನಸ್ಸಿಗೆ ಸಮಾಧಾನವೂ ಹರ್ಷವೂ ತೋರಿತು. ಪ್ರಯಾಣಮಾಡಿದ್ದ ಹಾದಿಯಿಂದಲೇ ಗಿರಿ ಕಂದರಗಳನ್ನೂ ಪರ್ವತ ಶಿಖರಗಳನ್ನೂ ಕಂಡು ಹರ್ಷಮೂಡಿತ್ತು. ಇನ್ನುಳಿದಿದ್ದ ದಾರಿಯನ್ನು ಕಳೆಯುವಾಗ ಮನಸ್ಸು ಧೈರ್ಯದಿಂದಲೂ ಹಿಮವಂತನ ದರ್ಶನದಿಂದಲೂ ಪ್ರಫುಲ್ಲವಾಯಿತು.

"ಈ ಪರ್ವತಪ್ರಾಂತವನ್ನು ಪುನಃ ಕಂಡು ಬಹಳ ಹರ್ಷವಾಯಿತು. ಸುತ್ತಿಕೊಂಡು ಸುತ್ತಿಕೊಂಡು ಮೋಟಾರ್‌ಕಾರ್ ಮೇಲೆಮೇಲೇರುತ್ತಿರಲು ಹರ್ಷೋತ್ಸಾಹಗಳು ಹೆಚ್ಚಿದವು. ಕಂದರಗಳ ಘಾತ ಹೆಚ್ಚಿತು; ಶಿಖರಗಳೆಲ್ಲಿಯೋ ಮೇಘಮಧ್ಯೆ ಅದೃಶ್ಯವಾಗುತ್ತಿದ್ದವು. ದಾರಿಯಲ್ಲಿ ಸ್ವಲ್ಪ ದಿಕ್ಕನ್ನು ತಿರುಗಿದ ಕೂಡಲೆ ಹೊಸ ಹೊಸದಾದ ರಮಣೀಯ ದೃಶ್ಯ ಕಾಣುತ್ತಿತ್ತು. ಎಷ್ಟು ನೋಡಿದರೂ ನನಗೆ ತೃಪ್ತಿಯಾಗದಂತಿತ್ತು; ಹಸಿವೆಯಿಂದ ನರಳಿದವನಂತೆ ನೋಡಿ ನೋಡಿ ಪುನಃ ಬೇಕಾದಾಗ ಜ್ಞಾಪಕಕ್ಕೆ ತಂದುಕೊಳ್ಳಲಾಗುವಂತೆ ಸ್ಮೃತಿಪಥದಲ್ಲಿ ಆ ದೃಶ್ಯವನ್ನು ಖಚಿತಗೊಳಿಸಿಕೊಳ್ಳಲು ಯತ್ನಿಸಿದೆ...

ಪ್ರಯಾಣ ಮುಗಿಯುತ್ತ ದಾರಿ ತಿರುಗಿತು. ಆಕಸ್ಮಿಕ ರೀತಿಯಲ್ಲಿ ಮೋಡಗಳು ಚದರಿ ಮಧ್ಯೆ ದಾರಿಬಿಟ್ಟು ಹೊಸ ದೃಶ್ಯ ಕಾಣಿಸಿತು. ಆಶ್ಚರ್ಯದಿಂದಲೂ ಆನಂದದಿಂದಲೂ ನಾನುಸಿರಾಡುವುದನ್ನು ನಿಲ್ಲಿಸಿ ಕಂಡೆ. ವೃಕ್ಷಸಮೂಹವನ್ನು ಹೊತ್ತಿದ್ದ ಗಿರಿಪ್ರಾಂತದಿಂದಾಚೆಗೆ ದೂರದಲ್ಲಿ ಎತ್ತರವಾಗಿ ಹಿಮವಂತನ ಶಿಖರಗಳು! ಸ್ವಚ್ಛವಾದ ಬಿಳುಪಿನಿಂದ ರಂಜಿಸುತ್ತಿದ್ದ ಆ ಶಿಖರಗಳು ಗತ ಯುಗಯುಗಾಂತರಗಳ ಪುಣ್ಯಸಾರವನ್ನು ಹಿಡಿದೆತ್ತಿಕೊಂಡು ಭಾರತ ಭೂಮಿಯ ಕಾವಲಿಗಾಗಿದ್ದಂತೆ ಭಾಸವಾಯಿತು. ಎಷ್ಟು ಶಾಂತ, ಎಷ್ಟು ದೃಢ, ಎಷ್ಟು ಅಭೇದ್ಯ! ಕ್ಷಣಕಾಲ ಮಾತ್ರ ನೋಡುವುದರಿಂದಲೇ ಮನಸ್ಸಿನ ತಾಪವಿಳಿದು ತಂಪಾಯಿತು. ಸಣ್ಣ ಕಲಹಗಳೂ ಪಿತೂರಿಗಳೂ ಆಸೆಗಳೂ ಅಸತ್ಯಗಳೂ ಎಲ್ಲವೂ ನಾಚಿಕೆಗೊಂಡು ದೂರದಲ್ಲಿದ್ದಂತೆ ಕಂಡಿತು.

ಆಲ್ಮೋಡದ ಜೈಲ್ ಚಿಕ್ಕದು. ಬೆಟ್ಟದ ಭುಜದ ಮೇಲೆ ಕಟ್ಟಿತ್ತು. ನನಗಾಗಿ ಬಿಟ್ಟುಕೊಟ್ಟ ಬಿಡದಿ ಯಾರಾದರೂ ಪ್ರಭುವಿಗೆ ಯೋಗ್ಯವೆನ್ನುವಂತಿತ್ತು. ಕಚ್ಚಾನೆಲವಾದರೂ ಕೃಮಿಗ್ರಸ್ತವಾಗಿ ಆಗಾಗ್ಗೆ ಚೂರುಚೂರಾಗಿ ಬೀಳುತ್ತಿದ್ದ ಚಾವಣಿಯಾದರೂ ವಿಶಾಲವಾದ ತೊಟ್ಟಿ; ಹದಿನೈದು ಕಿಟಕಿಗಳನ್ನೂ ಒಂದು ಬಾಗಿಲನ್ನೂ ಗಾಳಿಗೆ ಬಿಟ್ಟಿತ್ತು. ಸಮೃದ್ಧಿಯಾದ ಗಾಳಿ. ಇಲ್ಲಿ ನಾನೊಬ್ಬನೇ ಸರ್ವಮಾನ್ಯದಾರನಾಗಿದ್ದೆ. ನನ್ನ ಜೊತೆಗೆ ಮೂವತ್ತೋ

ನಲವತ್ತೋ ಗುಬ್ಬಚ್ಚಿಗಳು ಮುರುಕು ಚಾವಣಿಯೊಳಗಡೆ ಗೂಡು ಕಟ್ಟಿಕೊಂಡಿದ್ದವು. ಆಗಾಗ್ಗೆ ಒಂದು ಮೇಘವ್ಯಾಕಾಶದಲ್ಲಲೆದಾಡುತ್ತ ನನ್ನನ್ನು ಕಾಣುವಂತೆ ಬಂದು ಇಪ್ಪತ್ತೆಂಟು ಕೈಗಳನ್ನು ಕಿಟಕಿಗಳ ಮೂಲಕ ಒಳಗೆ ಚಾಚುತ್ತಿತ್ತು.

ಸಾಯಂಕಾಲ ಸುಮಾರು ಐದು ಗಂಟೆಗೆ ನನ್ನ ಕಡೆಯ ಉಪಾಹಾರವಾಗುವ ವೇಳೆಗೆ ನನ್ನನ್ನು ಒಳಗಿಟ್ಟು ಹಾಕಿದ ಬೀಗವನ್ನು ಬೆಳಿಗ್ಗೆ ಏಳು ಗಂಟೆಗೆ ತೆಗೆಯುತ್ತಿದ್ದರು. ಹಗಲು ಹೊತ್ತು ತೊಟ್ಟಿಯೊಳಗಡೆಯೋ ಬಿಸಿಲಿಗೆ ಮೈಯೊಡ್ಡಿಕೊಂಡು ಪಕ್ಕದ ಅಂಗಳದಲ್ಲಿಯೋ ಕುಳಿತಿರುತ್ತಿದ್ದೆ. ಸುತ್ತಗೋಡೆಯ ತುದಿಯ ಮೇಲೊಂದು ಪರ್ವತಶಿಖರ ಕಾಣುತ್ತಿತ್ತು. ಮೇಲ್ಗಡೆ ನೀಲಿಮವರ್ಣಗೂಡಿ ವಿಶಾಲವಾಗಿ ಹಬ್ಬಿದ್ದ ಆಕಾಶದಲ್ಲಿ ಅಲ್ಲಲ್ಲಿ ಮೋಡಗಳು. ಆಶ್ಚರ್ಯಕರವಾದ ಆಕೃತಿಗಳನ್ನು ಧರಿಸುತ್ತಿದ್ದ ಮೋಡಗಳನ್ನೆಷ್ಟು ನೋಡಿದರೂ ಮನಸ್ಸಿಗೆ ಆಯಾಸವೆಂಬುದೇ ತೋರಲಿಲ್ಲ. ವಿಧವಿಧವಾದ ಮೃಗಗಳಂತೆ ಕಾಣುತ್ತಿದ್ದು ಕೆಲವೇಳೆ ಒಟ್ಟುಗೂಡಿ ವಿಸ್ತಾರ ಸಾಗರದಂತೆ ಶೋಭಿಸುತ್ತಿದ್ದವು. ಅಥವಾ ಸಮುದ್ರತೀರದಂತೆ ಕಂಡು ಬಂದು ದೇವದಾರುತರುಗಳ ಮಧ್ಯೆ ನುಸುಳಿ ಬೀಸುತ್ತಿದ್ದ ಗಾಳಿಯ ಶಬ್ದ ದೂರದಿಂದ ಕೇಳಿಬರುವ ಸಮುದ್ರದ ಘೋಷದಂತೆ ತೋರುತ್ತಿತ್ತು. ಒಂದೊಂದುಸಲ ಯಾವುದೋ ಮೇಘ ಘನಗೊಂಡ ಭೂತದಂತೆ ಗೋಚರವಾಗಿ ಧೈರ್ಯದಿಂದ ನಮ್ಮ ಮೇಲೆಯೇ ಬಂದು ಸಮೀಪಸ್ಥವಾದ ಬಳಿಕ ಮಂಜುಮಂಜಾಗಿ ಸುತ್ತಿಕೊಳ್ಳುತ್ತಿತ್ತು.

ಜವಾಹರಲಾಲರ ಅಂತರಂಗವೆಂತಹುದೆಂಬುದನ್ನು ಕಾಣಿಸಿಕೊಡುವ ಮಾತುಗಳಿವು. ಅವುಗಳನ್ನೋದುತ್ತ ಆಲ್ಮೋಡ ಜೈಲಿನಲ್ಲಿ ಸುಖವಾಗಿ ಕಾಲಹರಣ ಮಾಡಿದರೆಂದು ಹೇಳಿಕೊಳ್ಳಲಾಗದು. ನೈನಿ ಜೈಲಿನ ಬರಾಕುಗಳಿಗಿಂತ ಮನಸ್ಸಿಗೆ ಹಿತವಾಗಿದ್ದಷ್ಟುಮಾತ್ರವೇ. ವಾಸ್ತವವಾಗಿ ಕಮಲಾದೇವಿಯ ವಿಚಾರವಾಗಿ ಕಳವಳವಲ್ಲದೆ ದೇಶದಲ್ಲಿ ನಡೆಯುತ್ತಿದ್ದ ಘಟನಾವಳಿಗಳ ವಿಚಾರವಾದ ಚಿಂತೆ ಜವಾಹರಲಾಲರ ಮನಸ್ಸನ್ನು ಮುತ್ತಿ ವಶಮಾಡಿಕೊಂಡಿತ್ತು.

"ಅಹಿತವಾದ ಸುದ್ದಿ ತಿಳಿದಾಗ ಮನಸ್ಸು ಅಸ್ತವ್ಯಸ್ತವಾಗುತ್ತಿತ್ತು. ಆದರೆ ಗಿರಿಶೃಂಗಗಳ ಗಾಳಿ ತಂಪು ತಂದಿಟ್ಟು ಸಮಾಧಾನಪಡಿಸುತ್ತಿತ್ತು. ಪುನಃ ಆರೋಗ್ಯರೀತಿಯ ನಿದ್ರೆಯನ್ನು ಅನುಭವಿಸಬಲ್ಲವನಾದೆ. ನಿದ್ದೆ ಬಂದ ವೇಳೆಯಲ್ಲಿ ಎಷ್ಟೋ ಸಲ ನಿದ್ದೆಯೆಂಬುದೆಷ್ಟು ಅದ್ಭುತವೂ ಅಮೋಘವೂ ಆದು

ದೆಂದು ಭಾವಿಸುತ್ತಿದ್ದೆ. ನಿದ್ದೆ ಬಂದ ಬಳಿಕ ಪುನಃ ಏಕೆತಾನೇ ಎಚ್ಚರಗೊಳ್ಳ ಬೇಕು? ಒಂದು ವೇಳೆ ನಾನೆಚ್ಚರಗೊಳ್ಳದೆಯೇ ಇದ್ದರೆಂತು?

ಆದಾಗ್ಗೂ ಬಿಡುಗಡೆಯ ಅಪೇಕ್ಷೆ ಬಲವಾಗಿಯೆ ಇತ್ತು. ಮುಂಬಯಿ ಕಾಂಗ್ರೆಸ್ ಸಭೆ ಕೊನೆಗಂಡಿತ್ತು. ನವೆಂಬರ್ ತಿಂಗಳೂ ಬಂದು ನಡೆಯಿತು. ದಿಲ್ಲಿಯ ಅಸೆಂಬ್ಲಿಗೆ ಚುನಾವಣೆಗಳೂ ಆಗಿ ಹೋದವು. ಬಿಡುಗಡೆ ಬೇಗನೆ ಆದೀತೆಂಬ ನಿರೀಕ್ಷೆ ಮೂಡಿತ್ತು. ಆದರೆ ಸರಹದ್ದಿನ ಪ್ರಾಂತದಲ್ಲಿ ಬಾದಶಾಹ ಖಾನರನ್ನು ಹಿಡಿದು ಶಿಕ್ಷೆಗೆ ದೂಡಿದ ಸಮಾಚಾರ ಬಂತು. ಅಸ್ವಸ್ಥತೆಯಿಂದ ತಪಿಸುತ್ತಿದ್ದ ಸುಭಾಷಬಾಬು ತನ್ನ ತಂದೆಯನ್ನು ಕಡೆಯ ಸಾರಿ ಕಾಣುವುದಕ್ಕೂ ಸರಿಯಾದ ವೇಳೆಗೆ ಸರ್ಕಾರದವರು ಬಿಡದಾದರು. ಇನ್ನು ನನ್ನನ್ನು ಬೇಗನೆ ಬಿಡುಗಡೆ ಮಾಡಲಾರರೆಂಬುದು ಖಂಡಿತವಾಯಿತು.

ಆಲ್ಮೋಡ ಸೇರಿದ ಒಂದು ತಿಂಗಳಿಗೆ ನನ್ನನ್ನು ಭೊವಾಲಿಗೆ ಕರೆದು ಕೊಂಡು ಹೋದರು. ಅಂದಿನಿಂದ ಇಪ್ಪತ್ತು ದಿನಗಳಿಗೊಂದು ಸಲ ಕಮಲೆ ಯನ್ನು ಕಾಣಲು ಅವಕಾಶಕೊಟ್ಟಿದ್ದಾರೆ. ಅತ್ತ ಇಂಡಿಯದ ಕಾರ್ಯದರ್ಶಿ ಸರ್ ಸಾಮ್ಯುಯೆಲ್ ಹೋರ್ ವಾರಕ್ಕೊಂದು ಸಲ ಹೆಂಡತಿಯನ್ನು ನೋಡಲು ನನಗಾಸ್ಪದ ಕೊಟ್ಟಿದೆಯೆಂದು ಹೇಳುತ್ತಿದ್ದಾನೆ. ತಿಂಗಳಿಗೊಂದುಸಲವೆಂದಿದ್ದರೆ ದಿಟವಾಗಿರುತ್ತಿತ್ತು. ಸರ್ಕಾರದಮೇಲೆ ಆಕ್ಷೇಪಮಾಡಬೇಕೆಂಬ ಬುದ್ಧಿಯಿಂದ ಇದನ್ನು ನಾನು ಹೇಳುತ್ತಿಲ್ಲ. ಒಟ್ಟಿನಲ್ಲಿ ಸರ್ಕಾರದವರು ನನ್ನಲ್ಲಿ ದಾಕ್ಷಿಣ್ಯ ದಿಂದಲೇ ವರ್ತಿಸಿರುವರು. ಕಮಲೆಯನ್ನು ಕಾಣಲು ನನಗೊದಗಿಸಿರುವ ಅನು ಕೂಲ್ಯಕ್ಕಾಗಿ ನಾನು ಕೃತಜ್ಞನಾಗಿರುವೆನು. ನಾವಿಬ್ಬರೂ ಅನ್ಯೋನ್ಯವಾಗಿ ಮಾತನಾಡಿಕೊಳ್ಳಲು ಡಾಕ್ಟರುಗಳೂ ಅನುಕೂಲರಾಗಿದ್ದರು. ಈ ಸನ್ನಿವೇಶ ದಲ್ಲಿ ನಮ್ಮಿರ್ವರ ಆಪ್ತತೆ ಋಣಾನುಬಂಧಗಳು ಹೆಚ್ಚಿದವು. ಬಿಟ್ಟುಬರು ವುದು ಅತಿಸಂಕಟವಾಗುತ್ತಿತ್ತು. ಅಗಲುವುದಕ್ಕಾಗಿಯೆ ಪರಸ್ಪರವಾಗಿ ಕಂಡಹಾಗಾಯಿತು. ಅಗಲಿದ ಸಮಯದಲ್ಲಿ ಪುನಃ ನೋಡಲಾಸ್ಪದವೇ ಇಲ್ಲದೆ ಹೋದೀತೋ ಎಂತೋ ಎನ್ನಿಸುತ್ತಿತ್ತು."

ತಂಗಿ ಕೃಷ್ಣೆ ಮುಂಬಯಿಯಲ್ಲಿ ಸಂಸಾರ ಕಟ್ಟಿದ್ದಳು. ಅಸ್ವಸ್ಥತೆ ಯಿಂದ ಕೊರಗುತ್ತಿದ್ದ ಸ್ವರೂಪರಾಣಿದೇವಿ ಮುಂಬಯಿಗೆ ಹೋಗಿ ದ್ದರು. ಜನವರಿ ತಿಂಗಳಲ್ಲಿ ಆಕಸ್ಮಿಕವಾಗಿ ಆಕೆಗೆ ಪಾರ್ಶ್ವವಾಯು ಸಂಭವಿಸಿತು. ಸಮಾಚಾರ ಜವಾಹರಲಾಲರಿಗೆ ತಂತಿ ಮೂಲಕ ತಿಳಿದಾಗ ಯಾರೋ ಬಲವಾದ ಪೆಟ್ಟನ್ನು ಹೊಡೆದಂತೆಯೆ ಆಯಿತು. ಮುಂಬಯಿ ಬಳಿಯಲ್ಲೇ ಯಾವುದಾದರೂ ಬಂದೀಖಾನೆಗೆ ವರ್ಗವಾಗಿ

ತಾಯಿಯವರನ್ನು ಕಾಣುವ ಯೋಚನೆ ಬೆಳೆಯಿತು. ಆಕೆಗೆ ಸ್ವಲ್ಪ ಮೇಲಾದುದರಿಂದ ಅಂತಹುದೇನೂ ಘಟಿಸಲಿಲ್ಲ.

"ಫೆಬ್ರುವರಿ ಬಂತು. ವಸಂತಕಾಲ ಬರುತ್ತಲಿದೆಯೆಂದು ವನಸ್ಪತಿ ಸಮೂಹದಲ್ಲಿ ಮೆಲ್ಮಾತುಗಳಾಗುತ್ತಲಿವೆ. ಬುಲ್ಬುಲ್ ಮುಂತಾದ ಹಕ್ಕಿಗಳು ಪುನಃ ದರ್ಶನವಿತ್ತು ಇಂಚರಗೈಯಲಾರಂಭಿಸಿವೆ. ನೆಲದೊಳಗಿನಿಂದ ಯಾವುದೋ ಗೂಢರೀತಿಯಲ್ಲಿ ಸಣ್ಣ ಪುಟ್ಟ ಚಿಗುರು ಈ ವಿಚಿತ್ರ ಜಗತ್ತು ಹೇಗಿದೆಯೋ ನೋಡೋಣವೆಂದು ತಲೆಯೆತ್ತಿಕೊಂಡು ಏಳುತ್ತಲಿದೆ. ಗಿರಿ ಸಾನುಗಳಲ್ಲಿ ರಕ್ತರಾಶಿ ಚಲ್ಲಿದಂತೆ ಸೇವಂತಿಗೆಗಳು ಒಟ್ಟು ಗೂಡಿ ವಿಸ್ತಾರವಾಗಿ ಹಬ್ಬಿಕೊಂಡಿವೆ. ಜಗತ್ತೆಲ್ಲ ಶಾಂತಿ ಹರ್ಷಗಳನ್ನು ಬೀರುವಂತೆ ಕಾಣುತ್ತದೆ. ದಿನಗಳು ಕಳೆದಂತೆ ನಾನವುಗಳನ್ನೆಣಿಸುತ್ತ ಭೊವಾಲಿಗೆ ಯಾವಾಗ ಹೊರಡುವು ದೆಂದು ತವಕಪಡುತ್ತಿದೇನೆ."

ಮೇ ತಿಂಗಳಲ್ಲಿ ಡಾಕ್ಟರುಗಳು ಹೊಸ ನಿಶ್ಚಯ ಮಾಡಿದರು. ಕಮಲಾದೇವಿಯನ್ನು ಯೂರೋಪಿಗೆ ಕೊಟ್ಟು ಕಳುಹಿಸಿದರೆ ಮೇಲೆಂಬ ನಿರ್ಧಾರವನ್ನು ಸೂಚಿಸಿದರು. ತದನುಸಾರವಾಗಿ ಕಮಲಾದೇವಿ ಯೂರೋಪಿಗೆ ಹೊರಡಲನುವಾದರು. ಹತೀಸಿಂಗರೊಡನೆ ಕೃಷ್ಣೆ ಆ ಸಮಯಕ್ಕೆ ತನ್ನ ಎರಡುತಿಂಗಳ ಗಂಡು ಮಗುವನ್ನು ಕರೆದುಕೊಂಡು ಭೊವಾಲಿಗೆ ಬಂದಳು. ಸ್ವರೂಪರಾಣಿಯವರೂ ಅಲ್ಲಿಯೇ ಇದ್ದರು. ಆ ಗಂಡುಮಗುವನ್ನು ಕಂಡು ಕಮಲಾದೇವಿ ಅತ್ಯಾನಂದಗೊಂಡು ಕೃಷ್ಣೆಯನ್ನು ಕುರಿತು "ಇವನನ್ನು ನೀನು ಸರಿಯಾಗಿ ಬೆಳೆಸುತ್ತೀಯೋ ಇಲ್ಲವೋ ನನಗೆ ಸಂದೇಹ. ಯೂರೋಪಿನಿಂದ ಹಿಂತಿರುಗಿ ಬಂದು ನೋಡುತ್ತೇನೆ. ನೀನು ಸರಿಯಾಗಿ ಪೋಷಣೆ ಮಾಡದಿದ್ದರೆ ಎತ್ತಿ ಕೊಂಡು ಬಂದುಬಿಟ್ಟು ನಾನೇ ಸಾಕಿಕೊಳ್ಳುತ್ತೇನೆ ನೋಡಿಕೋ!" ಎಂದರು. ಹೊರಡುವ ದಿನ ಮಾತ್ರ ಜವಾಹರಲಾಲರಿಗೆ ಕಮಲಾ ದೇವಿಯನ್ನು ಕಾಣಲು ಆಸ್ಪದ ಕೊಟ್ಟರು.

ಆ ಸಮಯವನ್ನು ಬಣ್ಣಿಸುತ್ತ ಜವಾಹರಲಾಲರ ತಂಗಿ ತಿಳಿಸು ವುದಿಷ್ಟು—

"ಜವಾಹರರು ಬಂದರು. ಅತಿ ಸಂಕಟಕರವಾಗಿದ್ದ ಆ ದಿನ ಆತನ ಮನಸ್ಸಿನಲ್ಲಿ ಏನೇನು ಯೋಚನೆಗಳಿದ್ದವೋ ಹೇಳಲಾಗದು; ಆತನ ಮುಖ ವನ್ನು ನೋಡಿದಾಗಲೆಲ್ಲ ನನ್ನೆದೆಯೊಡೆವಂತಾಗುತ್ತಿತ್ತು. ತನ್ನ ಶೋಕವನ್ನು

ಜೀರ್ಣಿಸಿಕೊಳ್ಳಲು ಪ್ರಯತ್ನಿಸಿ ಗಂಭೀರಭಾವದಿಂದಿರುತ್ತಿದ್ದರೂ ಆತನ ಕಣ್ಣು ಗಳಲ್ಲಿ ವಿಷಾದವುಕ್ಕಿಬರುವಂತಿತ್ತು. ಕಡೆಯಕ್ಷಣ ಬಂತು. ಜವಾಹರಲಾಲ ಕಮಲೆಯರು ಧೀರತನದಿಂದ ಒಬ್ಬರನ್ನೊಬ್ಬರು ಕಂಡು ಮುಗುಳ್ನಗೆ ಕಾಣಿಸಿದರು. ತರುವಾಯ ಜವಾಹರರು ಅಮ್ಮನನ್ನೂ ನನ್ನನ್ನೂ ತಬ್ಬಿಕೊಂಡು ಕಣ್ಣೀರೆಲ್ಲವನ್ನೂ ಗಂಟುಕಟ್ಟಿಕೊಂಡು ಜೈಲುಖಾನೆಯ ಕಾರಿನ ಕಡೆ ಹೆಜ್ಜೆಯಿಟ್ಟರು. ಇಟ್ಟ ಹೆಜ್ಜೆಗಳಲ್ಲಿ ಹಿಂದಿದ್ದ ಚಟುಲತೆ ಮಾಯವಾಗಿತ್ತು; ಎರಡು ಘಳಿಗೆ ಹಿಂದಿದ್ದುದಕ್ಕಿಂತ ಈಗ್ಗೆ ಎಷ್ಟೋ ವಯಸ್ಸಾದವರಂತೆ ಹೆಜ್ಜೆಯಿಟ್ಟು ಕಾರನ್ನು ಪ್ರವೇಶಿಸಿದರು".

ಪುನಃ ಆಲ್ಮೋಡ ಜೈಲ್ವಾಸ. ಕಮಲಾದೇವಿಯನ್ನು ಕಾಣಲು ಹೊರಟಾಗ ಹೊರಗಿನ ಪರ್ವತಗಳನ್ನು ಕಾಣುವ ಅಲ್ಪಸಂಚಾರಸುಖವೆಂಬುದೂ ಇನ್ನು ಮುಂದೆ ಇಲ್ಲವಾಯಿತು. ಜಗತ್ತಿನಲ್ಲೆಲ್ಲ ಆಕಾಶ, ಮೋಡ, ಬೆಟ್ಟ, ಗಾಳಿಗಳು ಮಾತ್ರವೇ ತಮ್ಮ ಪಾಲಿಗುಳಿಯಿತು. ಒಬ್ಬರೇ ಕಾಲವನ್ನು ನೂಕಲು ಬರೆಯುವ ಕೆಲಸವನ್ನಿಟ್ಟುಕೊಂಡು ಕಮಲಾದೇವಿ ದೂರದಲ್ಲಿದ್ದಾಗ್ಗೂ ಆರೋಗ್ಯ ಪಡೆದಾಳೆಂಬ ಸಮಾಧಾನವನ್ನು ಮನಸ್ಸಿಗೆ ಬಲವಂತದಿಂದ ತಂದುಕೊಂಡರು.

ಹೇಗಿದ್ದರೂ ದೂರಯೂರೋಪಿಗಲ್ಲವೆ ಪ್ರಯಾಣ? ಜವಾಹರಲಾಲರನ್ನು ಅದಕ್ಕಾಗಿ ಬಿಡುಗಡೆಮಾಡಿ ಕಮಲಾದೇವಿಯೊಂದಿಗೆ ಹೊರಡಲಾಸ್ಪದವಾಗಿದ್ದಿದ್ದರೆ? ಕಡೆಗೆ ಮುಂಬಯಿವರೆಗಾದರೂ ಜೊತೆಯಲ್ಲಿ ಹೋಗಿಬಿಟ್ಟು ಬರುವುದಕ್ಕೂ ಆಸ್ಪದವಿಲ್ಲ.

ಮೇ ತಿಂಗಳಾಯಿತು. ಜೂನ್, ಜುಲೈ, ಆಗಸ್ಟ್ ತಿಂಗಳುಗಳೂ ಒಂದೊಂದಾಗಿ, ನಿದಾನವಾಗಿ ಸಾಗಿದುವು. ಪ್ರತಿಗಂಟೆಗೂ ಅರುವತ್ತು ನಿಮಿಷಕ್ಕೆ ಕಡಿಮೆಯಿಲ್ಲ. ಪ್ರತಿದಿನಕ್ಕೂ ಇಪ್ಪತ್ತನಾಲ್ಕು ಗಂಟೆಗಳಿಗೆ ಕಡಿಮೆಯಿಲ್ಲ. ಸೆಪ್ಟೆಂಬರ್ ಬಂತು. ಆಕಸ್ಮಿಕವಾಗಿ ಬಿಡುಗಡೆಯೆಂಬ ಸುದ್ದಿಯನ್ನು ಜೈಲಿನವರು ತಿಳಿಸಿದರು. ಬಿಡುಗಡೆಯಾದುದಕ್ಕೆ ಉಲ್ಲಾಸಗೊಳ್ಳುವಂತೆ ಮಾತ್ರ ಇರಲಿಲ್ಲ. ಕಮಲಾದೇವಿಗೆ ಸ್ವಾಸ್ಥ್ಯಕೆಟ್ಟು ಉತ್ಕ್ರಮಣಾವಸ್ಥೆಯಾದುದರಿಂದ ಗಡುವಿಗೆ ಮೊದಲೇ ಬಿಡುಗಡೆ! ಹೊರಗೆ ಬಂದ ಕೂಡಲೆ ಆತುರಾತರವಾಗಿ ವಿಮಾನವನ್ನೇರಿಕೊಂಡು ಯೂರೋಪಿಗೆ ಹೊರಡಬೇಕಾಯಿತು.

## 11. ಕಮಲಾನೆಹರು ಆಹುತಿ.

ಭೊವಾಲಿಯಲ್ಲಿದ್ದು ಕಾಲಕಳೆದಾಗ್ಯೂ ಕಮಲಾದೇವಿಗೆ ಆರೋಗ್ಯ ಲಾಭವಾಗದಿರಲು ಯೂರೋಪಿಗೆ ಪ್ರಯಾಣಮಾಡಿ ಅಲ್ಲಿ ಯಾವುದಾದರೂ ಶಾಂತವಾದ ಸ್ಥಳದಲ್ಲಿರುವುದು ಮೇಲೆಂದು ಡಾಕ್ಟರರು ಹೇಳಿದ್ದರಷ್ಟೆ. ಅದರಂತೆ ಕಮಲಾದೇವಿ ಹೊರಡಲು ಮನಸ್ಸನ್ನು ಬಲು ಕಷ್ಟದಿಂದ ಒಡಂಬಡಿಸಿಕೊಂಡರು. ಜವಾಹರಲಾಲರನ್ನು ಬಿಟ್ಟು ಹೊರಡುವುದೆಷ್ಟು ಕಷ್ಟವಾಗಿದ್ದಿತೋ! ಆದರೂ ಧೀರ ಸಂಕಲ್ಪ ಮಾಡಿ ಪ್ರಯಾಣಕ್ಕೆ ಸಿದ್ಧರಾದರು. ಗಾಂಧೀಜಿಯವರಿಗೆ ಕಾಗದ ಬರೆಯುತ್ತ "ಈಗ ನಾನು ಯೂರೋಪಿಗೆ ಹೊರಡಬೇಕಂತೆ. ನಿಮ್ಮ ಆಶೀರ್ವಾದ ಬಲವಿಲ್ಲದೆ ಹೊರಡಲಾರೆ. ಹೊರಡುವ ಮೊದಲು ನಿಮ್ಮ ಸಂದರ್ಶನ ಪ್ರಾಪ್ತಿಯಾದರೆ ಅದೇ ನನಗೆ ದೊಡ್ಡ ಭಾಗ್ಯ. ಮುಂಬಯಿಗೆ ನಾನು ಮಾಡುವ ಪ್ರಯಾಣದಲ್ಲಿ ಜೊತೆಯಾದರೂ ಸರಿಯೆ; ಜಹಜನ್ನೇರುವ ಮುನ್ನ ಮುಂಬಯಿಯಲ್ಲಿ ಕಂಡರೂ ಸರಿಯೆ. ಅಭಾಗಿನಿಯಲ್ಲಿ ವಿಶ್ವಾಸವಿರಲಿ" ಎಂಬ ಮನೋಗತವನ್ನು ಸ್ಪಷ್ಟಪಡಿಸಿದ್ದಳು. ಬಾಪುಜಿಯವರು ತಮ್ಮ ಕಾರ್ಯಕಲಾಪಗಳಲ್ಲಿ ಹೇಗೋ ಅವಕಾಶ ಕಲ್ಪಿಸಿಕೊಂಡು ಮುಂಬಯಿಯಲ್ಲಿಯೆ ಬಂದು ಕಂಡರು. ತನಗೆ ದೊರೆತಷ್ಟು ಹೊತ್ತಿನಲ್ಲಿ ಬಾಪುಜಿ ಬಳಿ ಕಮಲಾದೇವಿಯೊಂದು ಭಿಕ್ಷೆ ಬೇಡಿಕೊಂಡರು: "ಯೂರೋಪಿಗೆ ಹೋಗಿ ತಲಪಿದ ಬಳಿಕ ಏನಾದೀತೋ ಕಂಡವರಾರು? ನನ್ನಾಯುಸ್ಸಲ್ಲಿಯೇ ಪೂರ್ತಿಯಾಗುವುದಾದರೆ ತಾವೇ ಒಂದು ಕೆಲಸವನ್ನು ಕಟ್ಟಿಕೊಂಡು ಊರ್ಜಿತಗೊಳಿಸಬೇಕು. ಸ್ವರಾಜ್ ಭವನದಲ್ಲಿ ಪತಿದೇವನೊಡನೆ ಸಹಕರಿಸಿ ಒಂದು ಆಸ್ಪತ್ರೆಯನ್ನು ನಡೆಸುತ್ತಿದ್ದೆ. ನನ್ನ ತರುವಾಯವೂ ಆ ಆಸ್ಪತ್ರೆ ಚೆನ್ನಾಗಿ ನಡೆಯುವಂತೆ ತಾವೇ ವಹಿಸಬೇಕು." ಗಾಂಧೀಜಿಯವರು ಧೈರ್ಯಕೊಡುವ ಮಾತುಗಳನ್ನಾಡಿ ಆಕೆಯನ್ನು ಬೀಳ್ಕೊಟ್ಟರು.

ಜರ್ಮನಿಯಲ್ಲಿ ಷ್ವಾರ್ಟ್ಸ್‌ವಾಲ್ಡ್ ಪ್ರಾಂತ. ಬಾಡೆನ್‌ವೈಲರ್ ಎಂಬ ಸಣ್ಣ ಪಟ್ಟಣದಲ್ಲಿ ಕಮಲಾದೇವಿ ನೆಲೆಸಿದರು. ಜಗತ್ತಿಗೆ ದೂರವಾಗಿದ್ದ ಆ ಸ್ಥಳದಲ್ಲಿ ಶಾಂತಿಯೇನೋ ಇತ್ತು. ಆದರೆ ಮನಸ್ಸಿಗೆ

ಸಮಾಧಾನ ಸಾಧ್ಯವೇ? ಕಮಲಾದೇವಿಯ ಆರೋಗ್ಯಕ್ಕೆ ಮೇಲಾಗ ಲಿಲ್ಲ. ಬರಬರುತ್ತ ಸ್ವಾಸ್ಥ್ಯಕೆಟ್ಟಿತು. ಸೆಪ್ಟೆಂಬರ್ ತಿಂಗಳು ಬರುವ ವೇಳೆಗೆ ಇನ್ನಾಶೆಗಾಸ್ಪದವಿಲ್ಲವೆಂದುಕೊಳ್ಳುವ ಹಾಗಾಯಿತು. ಆಗ ಆಲ್ಮೋಡದ ಜೈಲಿನಿಂದ ಜವಾಹರಲಾಲರಿಗೆ ಬಿಡುಗಡೆಯಾಯಿತು; ಸ್ವಲ್ಪವಾದರೂ ತಡಮಾಡದೆ ಆಕಾಶ ವಿಮಾನದ ಪ್ರಯಾಣ ನಡೆಸಿ ಜವಾಹರಲಾಲರು ಬಾಡೆ೯ವೈಲರ್ ಸೇರಿ ಕಮಲೆಯನ್ನು ಕಂಡರು.

ಕಟ್ಟಕಡೆಗೆ ಇಬ್ಬರಿಗೂ ವಿಯೋಗಕಾಲ ಕಳೆಯಿತೆಂದು ದೇಶದ ಜನರೆಲ್ಲರೂ ಸಮಾಧಾನಗೊಂಡರು. ತಮ್ಮ ಶ್ರೇಯಸ್ಸಿಗಾಗಿ ನಾನಾ ಬನ್ನಬಟ್ಟು ಪರಸ್ಪರ ವಿಯೋಗವನ್ನೇ ರೂಢಿಯಾಗಿ ಅನುಭವಿಸುತಲಿದ್ದ ದಂಪತಿಗಳಿಗೆ ಭಗವಂತನು ಹಿತವನ್ನಾಚರಿಸಲೆಂದು ಅಂತಃಕರಣ ಪೂರ್ವಕವಾಗಿ ಪ್ರಾರ್ಥನೆಗೈದರು. ಜವಾಹರಲಾಲರು ಪಕ್ಕದಲ್ಲಿದ್ದ ಕಾರಣದಿಂದ ಕಮಲಾದೇವಿಯ ಮನಸ್ಸಿಗೆಷ್ಟೋ ಸಮಾಧಾನವಾಯಿತು. ದೇಹಸ್ಥಿತಿಯೂ ಉತ್ತಮಗೊಂಬ ಚಿಹ್ನೆಗಳೊಂದೊಂದಾಗಿ ಕಾಣಿಸಿ ಕೊಂಡವು. ಇಬ್ಬರಿಗೂ ಧೈರ್ಯ ಬಂತು.

1935ನೆ ವರ್ಷ ಕಳೆದು ಮುಂದಿನ ವರ್ಷ ಮೊದಲಾಯಿತು. ಜನವರಿ ತಿಂಗಳಲ್ಲಿ ಎರಡು ಮೂರು ದಿನಗಳಕಾಲ ಮಾತ್ರ ಜವಾಹರ ಲಾಲರು ಇಂಗ್ಲಂಡಿಗೆ ಹೋಗಿಬಂದರು. ದೂರ ಯೂರೋಪಿನಲ್ಲಿದ್ದ ರೇನು? ಜವಾಹರಲಾಲರನ್ನು ಅಲ್ಲಲ್ಲಿ ಆಹ್ವಾನಿಸಿಕೊಳ್ಳಬೇಕೆಂಬ ಜನ ರಿದ್ದೇ ಇದ್ದರು. ಬರ್ಲಿನ್ ನಗರದಲ್ಲಿದ್ದ ಭಾರತೀಯರೂ ಮಿತ್ರರೂ ಸೇರಿಕೊಂಡು ಕಾಂಗ್ರೆಸ್ ಜೂಬಿಲಿಯುತ್ಸವವನ್ನು ನಡೆಸುತ್ತ ಆ ಸಂದರ್ಭದಲ್ಲಿ ಬರಬೇಕೆಂದು ಅತ್ಯಾಸೆಯಿಂದ ಕರೆದರು. ಆಗ ಫೆಬ್ರು ವರಿ. ಕಮಲಾದೇವಿಯ ದೇಹಸ್ಥಿತಿ ಚನ್ನಾಗಿರಲಿಲ್ಲವಾದುದರಿಂದ ತಾವು ಬರಲಾಗುವುದಿಲ್ಲವೆಂದು ಜವಾಹರಲಾಲರು ಹೇಳಬೇಕಾಯಿತು. ಆ ತಿಂಗಳ ಮೂರನೆವಾರ ಕಳೆದು ನಾಲ್ಕನೆವಾರ ತಲೆ ಹಾಕಿತು. ದಿನೇ ದಿನೇ ಕಮಲಾದೇವಿಯು ಬಲಹೀನೆಯಾದಳು. ಜವಾಹರ ಲಾಲರೂ ಇಂದಿರೆಯೂ ಜೊತೆಯಲ್ಲಿಯೆ ಇದ್ದರು. 28ನೆ ತಾರೀಖು ಬಂತು; ಆದಿನ ಕಮಲಾದೇವಿ ನಿಟ್ಟುಸಿರುಬಿಟ್ಟು ಇಹಲೋಕದಿಂದ

ಹೊರಟೇ ಬಿಟ್ಟರು. ಪತಿದೇವನ ಸಮಾಧಾನಕ್ಕಾಗಿ ಮಾತ್ರ ಪ್ರಾಣವನ್ನು ಅಷ್ಟು ಕಾಲವೂ ಬಿಗಿಹಿಡಿದಿದ್ದು ಆದಿನ ದೈವಸಾನ್ನಿಧ್ಯ ಸೇರಿಕೊಂಡರು.

"ಕಮಲಾದೇವಿಗೆ ಮೇಲಾಗಿದೆ", "ಚಿಂತೆಗೆ ಕಾರಣವಿಲ್ಲ"—ವೆಂಬುದಾಗಿ ಬರುತ್ತಿದ್ದ ಸಮಾಚಾರ ವ್ಯತ್ಯಾಸಗೊಂಡು "ಉತ್ಕ್ರಮಣ ಸ್ಥಿತಿ"ಯೆಂಬ ರೂಪ ತಾಳಿ ಬಂತು. ಸ್ವಲ್ಪ ಹೊತ್ತಿನಲ್ಲಿಯೆ "ಕೊನೆಯಾಯಿತು" ಎಂಬುದೇ ಬಂತು. ಭಾರತದೇಶದ ಎಲ್ಲ ಜನರಿಗೂ ಸ್ವಂತ ಮಗಳೋ ಸೋದರಿಯೋ ಅನ್ಯಾಯುದ ಹಿಂಸೆಯನ್ನು ಬಹುಕಾಲ ಸಹಿಸಿಕೊಂಡಿದ್ದು ಪ್ರಾಣಗಳನ್ನು ಬಿಟ್ಟುಕೊಟ್ಟಂತೆಯೆ ಆಯಿತು. ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಸಾವಿರಗಟ್ಟಲೆಯಾಗಿ ನೆರೆದು ಜನರು ಮೋತಿಲಾಲರ ಮರಣವನ್ನು ಸ್ಮರಿಸಿ ಆ ಕಾಲದಿಂದ ಉದಾರ ಮನಸ್ಸಿನ ಆದರ್ಶವನ್ನು ಬೀರಿ ಧೀರೋದಾತ್ತತನದಿಂದ ವರ್ತಿಸಿದ್ದ ಜವಾಹರಲಾಲರಲ್ಲಿ ಹೆಮ್ಮೆಗೊಂಡು ಭಾರತಮಹಿಳೆಯರಿಗೆ ಆದರ್ಶಕೊಟ್ಟ ಕಮಲಾದೇವಿಗಾಗಿಯೂ ಜವಾಹರಲಾಲರಿಗಾಗಿಯೂ ಕೊರಗಿ ಕಣ್ಣೀರಿಟ್ಟರು.

ಅದಕ್ಕೆ ಮೊದಲೇ ಕಾಂಗ್ರೆಸ್ ಸಮ್ಮೇಳನಕ್ಕೆ ಜವಾಹರಲಾಲರೇ ಅಧ್ಯಕ್ಷರಾಗಬೇಕೆಂಬ ನಿರ್ಧರವಾಗಿತ್ತು. ಕಾಂಗ್ರೆಸ್ಸಿಗೆ ಆಗ 50 ವರ್ಷವಾಗಿತ್ತು ; ಜೂಬಿಲಿಯುತ್ಸವದ ಸಂದರ್ಭ. ದೇಶಸ್ಥರು ತಮಗೊಪ್ಪಿಸಿದ ಕರ್ತವ್ಯವನ್ನು ನಡೆಸಿಕೊಡಲು ಜವಾಹರಲಾಲರೊಪ್ಪಿಕೊಂಡಿದ್ದರು.

ಕಮಲಾದೇವಿ ಇನ್ನು ಮೇಲೆ ಇಹಲೋಕದಲ್ಲಿಲ್ಲವೆಂಬುದನ್ನು ಮಾತ್ರವೇ ಅಲ್ಲದೆ ಬದುಕಿದ್ದ ಕಾಲದಲ್ಲಿ ಸಹಿಸಿಕೊಂಡಿದ್ದ ಸಂಕಟಗಳನ್ನೂ ಸ್ಮರಣೆಯಲ್ಲಿ ತಂದುಕೊಳ್ಳದಿರುವುದು ಬಲು ಪ್ರಯಾಸವಾಯಿತು. ಆಗ ಜವಾಹರಲಾಲರ ಮನಸ್ಸಿನಲ್ಲಿ ತೋರಿಕೊಂಡ ಭಾವನಾತರಂಗಗಳನ್ನು ಊಹಿಸಿಕೊಳ್ಳುವ ಚಾಪಲ್ಯವನ್ನು ಅಡಗಿಸಿಕೊಳ್ಳುವುದೇ ನಮಗೆ ಯೋಗ್ಯ.

ಕೆಲಸ ಕಟ್ಟಿಕೊಂಡಾಗ ಕಾಲವಿಲಂಬಕ್ಕೆ ಅವಕಾಶ ಕೊಡತಕ್ಕವರೇ ಅಲ್ಲ. ವಿಮಾನವನ್ನೇರಿಯೇ ಮಾರ್ಚ್ ತಿಂಗಳಲ್ಲಿ ಭಾರತಕ್ಕೆ ಹಿಂತಿರುಗಿ ಪ್ರಯಾಗದಲ್ಲಿ ಉತ್ತರಕ್ರಿಯೆಗಳನ್ನು ಮುಗಿಸಿದರು. ಏಪ್ರಿಲ್ ತಿಂಗಳಲ್ಲಿಯೆ ಲಖನೌ ನಗರದಲ್ಲಿ ಕಾಂಗ್ರೆಸ್ ಸಭೆ. ಅಲ್ಲಿ

ಇಷ್ಟಮಿತ್ರರು ಮಾತ್ರರಲ್ಲದೆ ಪರಿಚಿತರು ಮಾತ್ರರಲ್ಲದೆ ಅಪರಿಚಿತರೂ ಕೂಡ ಜವಾಹರಲಾಲರನ್ನು ದರ್ಶಿಸಿದಾಗ ಉಕ್ಕಿಬಂದ ಕಣ್ಣೀರನ್ನು ಕಷ್ಟದಿಂದ ಅಡಗಿಸಿಕೊಂಡು ಹೇಗಾದರೂ ದುಃಖವನ್ನು ಮರೆಸಿ ಕೊಡುವ ಉದ್ದೇಶವನ್ನು ಕಾಣಿಸುವರು. ಲಖನೌ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಭಾಷಣ ಕೊಟ್ಟಾಗ ಜವಾಹರಲಾಲರ ಉದಾರ ಹೃದಯ ದಲ್ಲಿ ಈ ಬಗೆಯ ಘನ ವಿಶ್ವಾಸದಿಂದ ತೋರಿದ ಪರಿಣಾಮವೆಷ್ಟು ಗಂಭೀರವನ್ನೂ ಮೃದುತ್ವವನ್ನೂ ತಾಳಿತ್ತೋ ವ್ಯಕ್ತವಾಯಿತು.

"ನಿಮ್ಮೆಲ್ಲರ ವಾತ್ಸಲ್ಯವಿಶ್ವಾಸಗಳಿಂದ ನನಗೆಷ್ಟೋ ಸಮಾಧಾನವೂ ಧೈರ್ಯವೂ ಆಗುತ್ತಿದೆ. ಆದರೂ ಈ ದೊಡ್ಡ ಸಭೆಯಲ್ಲಿ ನಾನೊಂಟಿಗನಾದೆ ನೆಂಬ ಭಾವನೆಯಿದ್ದೇ ಇದೆ. ತಥಾಪಿ ನಾವು ವಿಶ್ರಾಂತರಾಗಲಾರೆವು. ವಿಶ್ರಾಂತಿಯ ಆಸೆ ಬೆಳೆಯಿಸುವುದು ದ್ರೋಹವಾದೀತು! ಈ ಲೋಕ ಬಿಟ್ಟು ಹೊರಟಿರುವವರು ನಮ್ಮ ಮೇಲೆ ಕರ್ತವ್ಯವನ್ನು ಹೊರೆಸಿ ಹೊರಟವರಲ್ಲವೆ? ವಿಶ್ರಾಂತರಾಗುವುದೆಂದರೆ ಅವರೆಲ್ಲರಿಗೂ ದ್ರೋಹ ಬಗೆದಂತೆ ಮಾತ್ರವಲ್ಲದೆ ನಮ್ಮ ಧರ್ಮಕ್ಕೆ ಚ್ಯುತಿಯನ್ನು ತಂದುಕೊಂಡಂತಾಗುವುದು, ನಾವು ಮಾಡಿದ ಪ್ರಮಾಣವನ್ನು ಮುರಿದಂತಾಗುವುದು, ನಮ್ಮನ್ನು ನಂಬಿಕೊಂಡು ಆಜೀವವೂ ವಿರಾಮ ಕಾಣದೆ ದುಡಿಯುತ್ತಿರುವ ಕೋಟ್ಯಂತರ ಬಡಪಾಯಿಗಳನ್ನು ವಂಚಿಸಿದಂತಾಗುವುದು! . . . . ನಾನೇನೋ ಆಯಾಸಗೊಂಡಿರುವೆ; ತಾಯಿ ಬಳಿಗೆ ಹಸುಳೆ ಬರುವಂತೆ ನಮ್ಮೆಲ್ಲರ ತಾಯಿನಾಡಿನ ಮಡಲಲ್ಲಿ ಸೇರಿ ಸಮಾಧಾನಗೊಳ್ಳಲು ನಾನು ಹಿಂತಿರುಗಿ ಬಂದೆ. ಆ ಸಮಾಧಾನವು ನನ್ನೆಡೆಗೆ ಪೂರ್ಣ ಪ್ರವಾಹರೂಪದಿಂದ ಬರುತ್ತಲಿದೆ; ಅನುಕಂಪ ಪ್ರೀತಿಗಳಿಂದ ಸಾವಿರಾರು ದೇಶಬಂಧುಗಳು ನನಗಾಗಿ ಕೈಗಳನ್ನು ಚಾಚಿದ್ದಾರೆ; ವಿಶ್ವಾಸ ಮಮತೆಗಳ ಮಾತುಗಳನ್ನು ಕೋಟ್ಯಂತರ ಹೃದಯಗಳು ನೀರವಾಗಿಯೆ ನನ್ನ ಮನಸ್ಸಿಗೆ ತಲಪಿಸುತ್ತಲಿವೆ. ಇದಕ್ಕಾಗಿ ಭಾರತದ ಸ್ತ್ರೀಪುರುಷ ಸಮೂಹ ವನ್ನು ನಾನು ಹೇಗೆ ತಾನೇ ಅಭಿವಂದಿಸಲಿ? ಮಾತಿಗೆ ಅಸಾಧ್ಯವಾದ ಗಾಢ ಭಾವವನ್ನು ಮಾತುಗಳಿಂದ ಹೇಗೆ ವ್ಯಕ್ತಪಡಿಸಲಿ?"

ಮತ್ತೆ ಜವಾಹರಲಾಲರು ರಾಷ್ಟ್ರಪತಿಯಾದರು.

ಯೂರೋಪಿನಿಂದ ಹಿಂತಿರುಗಿ ಬರುತ್ತಿದ್ದ ದಾರಿಯಲ್ಲಿ ನಡೆದ ಒಂದು ಸಂಗತಿಯನ್ನು ಇಲ್ಲಿಯೆ ವಿವರಿಸಿಕೊಳ್ಳಬಹುದು. ಇಟಲಿಯಲ್ಲಿ ಆ ವೇಳೆಗೆ ಮುಸ್ಸೊಲೀನಿ ಸರ್ವಾಧಿಕಾರಿಯಾಗಿದ್ದನು. ಆತನಿಗೆ

ಜವಾಹರಲಾಲರನ್ನು ಕಂಡು ಮಾತನಾಡಿಸುವ ಇಷ್ಟವಿತ್ತು. ಆತನ ಪರವಾಗಿ ಜವಾಹರಲಾಲರಿಗೆ ಸಂದೇಶವೂ ತಲಪಿತು. ಕಾಲಸ್ಥಿತಿ ಬೇರೆಯಾಗಿದ್ದಲ್ಲಿ ಮುಸ್ಸೊಲೀನಿ ಎಂತಹ ಮನುಷ್ಯನೋ ನೋಡೋಣ ವೆಂಬ ಕುತೂಹಲವನ್ನು ತೃಪ್ತಿಗೊಳಿಸಿಕೊಳ್ಳಬಹುದಾಗಿತ್ತು. ಆದರೆ ಮುಸ್ಸೊಲೀನಿ ಆ ಕಾಲದಲ್ಲಿ ಅಬಿಸಿನಿಯ ರಾಜ್ಯವನ್ನು ಮುತ್ತಿ ಇಟಲಿಯ ಸಾಮ್ರಾಜ್ಯ ಕಟ್ಟುತ್ತಿದ್ದನು. ತಮ್ಮೊಡನೆ ನಡೆದ ಮಾತು ಕಥೆಗಳನ್ನು ತಮಗನುಕೂಲವಾಗುವಂತೆ ವರದಿ ಕೆಡಿಸಲು ಐರೋಪ್ಯರು ಹಿಂಜರಿಯುವುದಿಲ್ಲವೆಂಬುದು ಅನುಭವಸಿದ್ಧವಾಗಿತ್ತು. ಸಾಮ್ರಾಜ್ಯ ವಿಸ್ತಾರಕ್ಕೆ ವಿರೋಧಿಗಳಾಗಿದ್ದುದರಿಂದ ಅದಕ್ಕೆ ಅವಕಾಶ ಕೊಡಬಾರದೆಂದಿತ್ತು ಮನಸ್ಸಿನಲ್ಲಿ. ಆದುದರಿಂದ ಕಾಣಲಾಗುವುದಿಲ್ಲವೆಂದು ಜವಾಹರಲಾಲರು ಸಂದೇಶಕ್ಕೆ ಮರುಮಾತನ್ನಾಡಿದರು.

ಜವಾಹರಲಾಲರು ಏರಿಕೊಂಡಿದ್ದ ವಿಮಾನ ರೋಮ್ ನಗರದಲ್ಲಿ ಒಂದು ರಾತ್ರಿ ನಿಂತಿತು. ಕೂಡಲೆ ದೊಡ್ಡ ಹುದ್ದೆದಾರನೊಬ್ಬಾತನು ಬಂದು ಜವಾಹರಲಾಲರನ್ನು ಕಂಡು "ಎಲ್ಲವೂ ಏರ್ಪಾಟಾಗಿದೆ. ತಾವು ಬಂದು ನಮ್ಮ ಡೂಚೆ (ಮುಸ್ಸೊಲೀನಿ) ಯವರನ್ನು ಕಾಣಬೇಕು" ಎಂದನು. "ಬರಲಾಗುವುದಿಲ್ಲವೆಂದು ಆಗಲೆ ಹೇಳಿದೆನಲ್ಲವೆ? ಈಗೇತಕ್ಕೆ ಪುನಃ ಕರೆಯುತ್ತೀರಿ?" ಎಂದರೆ ಆತನು ಏನೇನನ್ನೋ ಹೇಳಿ ಎಷ್ಟೆಷ್ಟೋ ಉಪಾಯ ಮಾಡಿ ಒಂದು ಗಂಟೆ ಕಾಲ ಕಳೆದರೂ ಜವಾಹರರೊಪ್ಪಲಿಲ್ಲ. ಮುಸ್ಸೊಲೀನಿಯ ರಾಷ್ಟ್ರನೀತಿಗೆ ಜವಾಹರಲಾಲರದು ಪರಮ ವಿರೋಧ. ಆರುಕೋಟಿ ರಾಷ್ಟ್ರಕ್ಕೆ ನಾಯಕ ಮುಸ್ಸೊಲೀನಿ; ನಲವತ್ತು ಕೋಟಿ ರಾಷ್ಟ್ರಕ್ಕೆ ಆಭರಣಪ್ರಾಯ ಜವಾಹರಲಾಲರು. ಮುಸ್ಸೊಲೀನಿ ತಾನಾಗಿಯೆ ಜವಾಹರಲಾಲರನ್ನು ಕಾಣಲಾಶಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಆರುಕೋಟಿ ರಾಷ್ಟ್ರ ಸ್ವತಂತ್ರವಾಗಿಯೂ ನಲವತ್ತು ಕೋಟಿ ರಾಷ್ಟ್ರ ಅಸ್ವತಂತ್ರವಾಗಿಯೂ ಇದ್ದ ತಲೆಕೆಳಗಿನ ಸಂದರ್ಭದಲ್ಲಿ ಸಹಜವಾದುದು ಕೃತ್ರಿಮವಾಗಿಯೇ ಕಾಣುತ್ತದೆ. ನಲವತ್ತು ಕೋಟಿ ರಾಷ್ಟ್ರದವರು ಸಣ್ಣ ರಾಷ್ಟ್ರದವರಲ್ಲಿ ಯಾಚಿಸಿದರೆ ಸಹಜವೋ ಕೃತ್ರಿಮವೋ?

ಆತ್ಮ ವೃತ್ತಾಂತವೆಂಬುದು ಆಲ್ಮೋಡ ಜೈಲಿನಲ್ಲಿದ್ದಾಗ ಕೊನೆ ಗಂಡಿತು. ಕಮಲಾದೇವಿ ಭೊವಾಲಿ ಬಿಟ್ಟು ಹೊರಟಮೇಲೆ ಕಡೆಯ ಅಧ್ಯಾಯವನ್ನು ಬರೆದುದಾಯಿತು. ಕಡೆಯ ಮಾತನ್ನು ಬಾಡೆನ್ವೈಲರಿನಲ್ಲಿದ್ದಾಗ ಅಕ್ಟೋಬರ್ 25ನೆ ದಿನ ಬರೆದು ಗ್ರಂಥರೂಪಕೊಟ್ಟು ಇಂಗ್ಲಂಡಿನಲ್ಲಿ ಮುದ್ರಣಕ್ಕೂ ಪ್ರಕಟನೆಗೂ ಏರ್ಪಾಟುಮಾಡಿದರು. ಆತ್ಮ ವೃತ್ತಾಂತವನ್ನು ಬರೆದು ಸಾಹಿತ್ಯ ರಚನೆ ಮಾಡುವ ಕೆಲಸದಷ್ಟು ಕೆಟ್ಟ ಕೆಲಸ ಬೇರೆ ಇರುವುದೋ ಇಲ್ಲವೋ! ಸಾಹಿತಿಗಳಿಗೆ ಅದರ ಸೂಕ್ಷ್ಮ ಸಂಕಟಗಳೂ ವಿಪತ್ತುಗಳೂ ಗೊತ್ತು. ಸಾಹಿತ್ಯ ರಚನೆಗಾಗಿ ಜವಾಹರಲಾಲರಾಗಲಿ ಗಾಂಧೀಜಿಯವರಾಗಲಿ ಆತ್ಮ ಕಥೆಗಳನ್ನು ಬರೆದವರಲ್ಲ; ಬರೆದ ಉದ್ದೇಶಗಳೇ ಬೇರೆ. ಆದರೂ ಪರಿಣಾಮದಲ್ಲಿ ಇಬ್ಬರೂ ವಿಶ್ವ ಸಾಹಿತ್ಯಕ್ಕೆ ಅಮೂಲ್ಯ ವಸ್ತುಗಳನ್ನೊದಗಿಸಿಕೊಟ್ಟಂತಾಯಿತು. ಜವಾಹರಲಾಲರ ಆತ್ಮವೃತ್ತಾಂತ ವಿವರವೆಂಬುದು ಇಂಗ್ಲಿಷ್ ಭಾಷೆಯ ಸಾಹಿತ್ಯ ದೃಷ್ಟಿಗೇ ಅದ್ಭುತವೆನ್ನಿಸಿತು. ರಾಜಕೀಯ ದೃಷ್ಟಿಯಿಂದಲೂ ಆ ಗ್ರಂಥ ಪ್ರಕಟನೆಯಿಂದ ಅದ್ಭುತವಾದ ಪರಿಣಾಮವೇ ನಡೆಯಿತು. 1936ರಲ್ಲಿ ಪ್ರಕಟವಾದ ಆ ಗ್ರಂಥವನ್ನು ಇಂಗ್ಲಂಡಿನ ಜನರು ಅತ್ಯಾದರದಿಂದ ಓದಿಕೊಂಡು "ಈಗ ಅರ್ಥವಾಯಿತು ನಮಗೆ ಇಷ್ಟು ವರ್ಷಗಳೂ ಅರ್ಥವಾಗದಿದ್ದುದು" ಎಂದುಕೊಂಡರು.

ಇಂಗ್ಲಂಡ್ ನಿವಾಸಿಗಳಿಗೆ ಬಹುಕಾಲದಿಂದ ಪೌರಸ್ತ್ಯ ಜನರೆಂದರೆ ವೇಷಧಾರಿ ದೆವ್ವಗಳೆಂದೇ ಭಾವನೆ ಬೆಳೆದಿತ್ತು. ಭಾರತೀಯರೆಂದರೆ ಗೋಪ್ಯ ಪಿತೂರಿ ನಡೆಸುವ ಮಾಯಾ ಮಂತ್ರಗಾರುಡಿಗಾರರೆಂದೇ ನಂಬಿಕೆ. ದೇಶದ ವಿಚಾರದಲ್ಲಿಯೂ ಹಾಗೆಯೆ ಕಟ್ಟು ಕತೆಗಳ ಕಂತೆಯನ್ನು ನೆಚ್ಚಿದ್ದರು. ಲಂಡನ್ನಿನಲ್ಲಿದ್ದಾಗ ಭಾರತೀಯನೊಬ್ಬನನ್ನು ಅಲ್ಲಿಯ ಮುದುಕಿಯೊಬ್ಬಳು ಕೇಳಿದಳಂತೆ "ನಿಮ್ಮ ದೇಶದ ತುಂಬ ವಜ್ರಗಳೂ ವಿಷ ಸರ್ಪಗಳೂ ಇರುವುದು ನಿಜವೇ?" ಎಂದು. ಅದಕ್ಕೆ ಪ್ರತ್ಯುತ್ತರವಾಗಿ ನಮ್ಮ ಜಾಣ "ಹೌದು. ಆದರೆ ನಾವೇನು ಮಾಡುವುದು? ಒಂದೊಂದು ವಜ್ರದ ಸುತ್ತಲೂ ಒಂದೊಂದು ವಿಷ

ಸರ್ಪ ಸುರುಳಿ ಸುತ್ತಿಕೊಂಡಿರುತ್ತದೆ" ಎಂದನಂತೆ. ಆ ಮುದುಕಿಯಂತೆಯೆ ಇಂಗ್ಲಂಡಿನ ಜನರಲ್ಲಿ ಮುಕ್ಕಾಲು ಪಾಲಿನವರು. ಗಾಂಧೀಜಿಯುವರಾದರೆ ಯತಿಗಳು, ಸಾಮಾನ್ಯರಲ್ಲ; ಆತನ ಮಾತುಗಳು ಅರ್ಥವಾದಂತೆ ಕಂಡರೂ ಆ ಜನರಿಗೆ ಅವುಗಳಿಂದ ಆಗಾಗ್ಗೆ ಕಕ್ಕಕಹಿಡಿಯುವುದು. ಜವಾಹರಲಾಲರಾದರೆ ತಮ್ಮಂತೆಯೇ ಇರುವವರು; ಸುಖದುಃಖಗಳನ್ನೂ ಸಂತೋಷ ವ್ಯಸನಗಳನ್ನೂ ಎಲ್ಲರಂತೆ ಅನುಭವಿಸಿ ಉಲ್ಲಾಸಕ್ಕೂ ಖಿನ್ನತೆಗೂ ಸಿಕ್ಕತಕ್ಕವರು. ಆದುದರಿಂದ ಆ ಜನರ ಮನಸ್ಸಿನಲ್ಲಿ ಆ ಪುಸ್ತಕವನ್ನೋದಿದಾಗ ಅಪೂರ್ವ ಪರಿಣಾಮ ಘಟಿಸಿತು.

ನೂರಾರು ಡೆಪ್ಯುಟೇಷನ್ನುಗಳಿಂದ ನಡೆಯದ ಕೆಲಸ ಈ ಗ್ರಂಥವೊಂದರಿಂದ ನಿರಾಯಾಸವಾಗಿ ನಡೆಯಿತು. ಇಂಗ್ಲಿಷಿನಲ್ಲಿದ್ದು ಇಂಗ್ಲಂಡಿನಲ್ಲಿ ಪ್ರಕಟವಾದ ಕಾರಣದಿಂದ ಪೃಥ್ವಿಯಲ್ಲೆಲ್ಲ ವ್ಯಾಪ್ತವಾಗಲವಕಾಶವಾಯಿತು. ಆ ಪುಸ್ತಕದಂತಹದಿನ್ನೊಂದಿಲ್ಲ. ಅಸಾಧಾರಣ ಪಟುತ್ವವುಳ್ಳ ಭಾಷೆಯಾದರೂ ಸೌಂದರ್ಯ ತುಂಬಿದ ರಚನೆ. ಸರಳವಾದ ವೃತ್ತಾಂತ, ಮೃದುವಾದ ಹಾಸ್ಯ, ಗಂಭೀರವಾದ ಭಾವ. ಆತ್ಮವೃತ್ತಾಂತವೆಂಬ ಹೆಸರಿರುವುದಾದರೂ ಭಾರತರಾಷ್ಟ್ರಕ್ಕೆ ಸಂಬಂಧಪಟ್ಟ ಅನೇಕಾನೇಕ ವಿಷಯಗಳ ಸ್ಫುಟವಿವರ ವಿಮರ್ಶೆಯೆಲ್ಲೆಲ್ಲಿಯೂ ಮನಃಪೂರ್ತಿಯಾಗಿರುವುದು. ನಿದಾರ್ಕ್ಷಿಣ್ಯವಾದ ವಿಮರ್ಶೆಯೊಂದಿಗೆ ಮಂದಬುದ್ಧಿಯುಳ್ಳವರೂ ಮರೆಯಲಾಗದ ವಾಕ್ಯಸಮೂಹಗಳು. ಸೊಗಸಾದ ವರ್ಣನೆಯೊಂದಿಗೆ ಪ್ರಚಂಡ ವ್ಯಂಗಪ್ರಯೋಗ. ಮತ್ತೊಬ್ಬರಿಗೆ ಕೊಡದೆ ತಾವೇ ಎತ್ತಿಟ್ಟುಕೊಂಡು ಓದಿ ಸುಖಿಸಿ ಸಂಸ್ಕಾರ ಹೊಂದುವ ಗ್ರಂಥ. ಶ್ರೀ ಶ್ರೀನಿವಾಸ ಶಾಸ್ತ್ರಿಗಳ ಚಿತ್ತವೃತ್ತಿಯನ್ನು ಪರೀಕ್ಷೆಗೈದು ಪದೇ ಪದೇ ಖಂಡಿಸಿರುವ ಗ್ರಂಥವಾದರೂ ಆ ಶಾಸ್ತ್ರಿಗಳು ಅದನ್ನೋದಿ ಪರವಶರಾದರು; ಪುನಃ ಪುನಃ ಓದಿ ತಲೆದೂಗಿ ಮೆಚ್ಚಿ ಹೆಮ್ಮೆಗೊಂಡರು. ಶತ್ರುಗಳೂ ಮೆಚ್ಚುವ ಪುಸ್ತಕ!

VI

## 1. ಮತ್ತೆ ರಾಷ್ಟ್ರಪತಿ

ಲಖನೌ ಕಾಂಗ್ರೆಸ್ 1936ನೆಯ ಏಪ್ರಿಲ್ ತಿಂಗಳಲ್ಲಿ ಸೇರಿದ ವೇಳೆಗೆ ಅಸಹಯೋಗವೆಲ್ಲ ನಿಂತಿದ್ದುದಲ್ಲದೆ ಗಾಂಧೀಜಿಯವರು ಕಾಂಗ್ರೆಸ್ಸಿನಲ್ಲಿ ಅಧಿಕಾರ ಸ್ಥಾನವೆಲ್ಲವನ್ನೂ ಬಿಟ್ಟುಕೊಟ್ಟಿದ್ದರು. ತಮ್ಮ ಕರ್ತವ್ಯವನ್ನು ಹರಿಜನ ಸೇವಾಸಂಘ ಮತ್ತು ಗ್ರಾಮೋದ್ಯೋಗ ಪುನ ರುಜ್ಜೀವನ ಸಂಘಗಳಲ್ಲಿ ನಿಶ್ಚಯಮಾಡಿಕೊಂಡು ಕೇವಲ ರಾಜಕೀಯ ಸಂಧಾನ ಪ್ರತಿಸಂಧಾನಗಳಿಂದ ದೂರವಾಗಿದ್ದರು. ಅವರ ಅನುಯಾಯಿ ಗಳಲ್ಲಿ ಸಮೀಪಸ್ಥರಾದವರು ನಿರ್ಮಾಣಾತ್ಮಕ ಕಾರ್ಯಕ್ರಮಗಳಲ್ಲಿ ತೊಡಗಿದ್ದರು. ಬೇರೆ ಕೆಲವರು ಶಾಸನಸಭೆಗಳಲ್ಲಿ ಪ್ರವೇಶಿಸುವ ಯೋಚನೆ ಮಾಡಿದ್ದರು. 1935ರಲ್ಲಿ ಹೊಸ ಶಾಸನವಾಗಿತ್ತು; ತದನು ಸಾರವಾಗಿ ಭಾರತರಾಷ್ಟ್ರದಲ್ಲಿ ಪ್ರಾಂತಸ್ವಾತಂತ್ರ್ಯವೆಂಬುದು ರೂಪ ಗೊಳ್ಳಬೇಕಾಗಿತ್ತು. ಪ್ರಾಂತಗಳ ಆಡಳಿತವನ್ನು ವಹಿಸಿಕೊಂಡು ನಿರ್ಮಾ ಣಾತ್ಮಕ ಕರ್ತವ್ಯಸಾಧನೆ ಮಾಡುವ ಇಷ್ಟ ಎಷ್ಟೋ ಕಾಂಗ್ರೆಸ್ ಸದಸ್ಯ ರಿಗೆ. ಕಾಂಗ್ರೆಸ್ಸಿನ ಒಳವ್ಯವಸ್ಥೆಯಲ್ಲಿಯೇ ಅತೃಪ್ತರಾಗಿ ಭಿನ್ನಭಿನ್ನ ವಾಗಿದ್ದ ಬೇರೆ ಪಂಗಡಗಳೂ ಕಕ್ಷಿಗಳೂ ಇದ್ದುವು. ಎಲ್ಲರಿಗೂ ಜವಾ ಹರಲಾಲರೇ ವಿಶ್ವಾಸಾರ್ಹರಂತೆ ಕಂಡಿತ್ತು.

ಲಕ್ಷ್ಯನಿರ್ದೇಶವೇನೆಂದು ಹಿಂದೆ ಜವಾಹರಲಾಲರು ಮನಸ್ಸಿನಲ್ಲಿ ತಪಿಸಿಯೇ ಇದ್ದರು. ಪೂರ್ಣ ಸ್ವರಾಜ್ ಎಂಬ ಮಂತ್ರವೇ ಅವರದು. ಸಮಾಜವ್ಯವಸ್ಥೆಯಲ್ಲಿ ಆರ್ಥಿಕವೇ ಮೂಲವೆಂದೂ ಆರ್ಥಿಕಸ್ಥಿತಿಯಲ್ಲಿ ನ್ಯಾಯ ನೆಲೆಸಿದ ಹೊರತು ಆವ್ಯವಸ್ಥೆಯೇ ಶಾಶ್ವತವಾದೀತೆಂದೂ ವಿವರಿಸಿದ್ದರು. ಇನ್ನೂ ಮುಂದೆ ಜಗತ್ತಿನಲ್ಲಿ ಭಾರತದ ಸ್ಥಾನವನ್ನು ಸ್ಪಷ್ಟವಾಗಿ ಕಂಡು ನಿರೂಪಿಸಿಯೂ ಇದ್ದರು. ಭಾರತರಾಷ್ಟ್ರವು ಪರಾ ಧೀನವಾಗಿರುವವರೆಗೆ ಇತರ ರಾಷ್ಟ್ರಗಳಿಗೂ ನೆಮ್ಮದಿಯಿಲ್ಲವೆಂಬುದನ್ನು ದೂರದೃಷ್ಟಿಯಿಂದ ವಿಶದಗೊಳಿಸಿ ಹೊರ ಜಗತ್ತಿನ ಸಹಕಾರ ತತ್ಕಾ ಲಕ್ಕೂ ಭವಿಷ್ಯಕ್ಕೂ ಎಷ್ಟು ಅವಶ್ಯವೆಂಬುದನ್ನು ಸ್ಫುಟವಾಗಿ ನುಡಿಯು ತ್ತಲೇ ಇದ್ದರು. ಭಾರತವೊಂದು ಸ್ವತಂತ್ರಗೊಳ್ಳುವುದಾದರೆ ಜಗತ್ತಿ

ನಲ್ಲೆಷ್ಟು ವ್ಯತ್ಯಸ್ತವಾದೀತೆಂಬುದು ಜವಾಹರಲಾಲರ ಮನಸ್ಸಿಗೆ ಸ್ಪಷ್ಟ. ಆದ್ದರಿಂದ ಭಾರತರಾಷ್ಟ್ರವೊಂದರ ಹಿತವನ್ನೇ ಪ್ರತ್ಯೇಕವಾಗಿ ತೆಗೆದಿಡಲಾಗುವುದಿಲ್ಲ. ಪೃಥ್ವಿಯಲ್ಲಿ ಭಾರತ್ ಎಂಬುದು ಅಭುಕ್ತಮೂಲೆಯಲ್ಲ; ಆಗಿರಲು ಸಾಧ್ಯವಿಲ್ಲ. ಜಗತ್ಸಂಸಾರವನ್ನು ಬಿಟ್ಟು ಬೇರೆಯಾಗುವ ಯೋಚನೆ ಅವಿವೇಕ. ಬ್ರಸ್ಸೆಲ್ಸ್ ನಗರದಲ್ಲಿ ಸಮ್ಮೇಳನ ನಡೆದ ಕಾಲದಿಂದ ಜವಾಹರಲಾಲರು ಈ ದೃಷ್ಟಿಯನ್ನು ಬೀರುತ್ತ ಘಟನೆಗಳನ್ನು ವಿಮರ್ಶಿಸುತ್ತ ಸಂಕುಚಿತಭಾವನೆಗಳನ್ನು ತಿದ್ದುತ್ತಲಿದ್ದವರು.

ರಾಜಕೀಯ ಕರ್ತವ್ಯ ಕಲಾಪಗಳನ್ನು ವಿಸ್ತರಿಸಿಕೊಳ್ಳುವುದು ಪ್ರಕೃತವಲ್ಲ. ಅತಿ ಸಂಕ್ಷೇಪವಾಗಿ ಅತಿ ಮುಖ್ಯಾಂಶಗಳನ್ನು ಸೂಚಿಸಿಕೊಳ್ಳಬಹುದು. ರಾಷ್ಟ್ರಪತಿಯಾದ ಜವಾಹರಲಾಲರು 1936 ನೆ ಸಾಲಿನಲ್ಲಿಯೂ ಪುನಃ 1937 ನೆ ಸಾಲಿನಲ್ಲಿಯೂ ನಡೆಸಿದ್ದೇನೆಂಬುದಕ್ಕೆ ಉತ್ತರ ಬೇಕಾದರೆ ದೇಶದ ಚರಿತ್ರೆಯನ್ನು ಆಶ್ರಯಿಸಬೇಕು. ಅವರ ಸ್ವಂತ ಜೀವನವೆಂಬುದು ರಾಷ್ಟ್ರಜೀವನದಿಂದ ಪ್ರತ್ಯೇಕವಾದುದಲ್ಲ; ಎಷ್ಟೋ ಬಗೆಯಲ್ಲಿ ಎರಡೂ ಒಂದೇ. ವ್ಯಕ್ತಿಯ ವೃತ್ತಾಂತವನ್ನು ಬೇರ್ಪಡಿಸಿಕೊಂಡು ಕಾಣುವ ಅಲ್ಪ ಪ್ರಯತ್ನ ನಮ್ಮದಾದರೂ ರಾಜಕೀಯಾಂಶಗಳನ್ನು ಸ್ವಲ್ಪವಾಗಿ ಸ್ಮರಿಸದೆ ಆಗುವುದಿಲ್ಲ.

ಲಖನೌ ಕಾಂಗ್ರೆಸ್ ಸಮ್ಮೇಳನ ಮುಗಿದ ತರುವಾಯ ಜವಾಹರಲಾಲರು ದೇಶದ ನಾನಾ ಭಾಗಗಳಲ್ಲಿ ಸಂಚಾರಮಾಡಿದರು. ಜಗತ್ತಿನ ಇತರೆಡೆಗಳಲ್ಲಿನ ಸಂಭವಗಳನ್ನು ಜ್ಞಾಪಕಕೊಟ್ಟು ಜಪಾನೀ ಜನರು ಮಂಚೂರಿಯವನ್ನು ಆಕ್ರಮಿಸಿದಾಗಲೂ ಇಟಲಿಯವರು ಅಬಿಸಿನಿಯವನ್ನು ಮುತ್ತಿದಾಗಲೂ ಹಿಂದಿನ ಲೀಗ್ ಆಫ್ ನೇಷನ್ಸ್ ಎಂಬುದು ಎಷ್ಟು ಅಪ್ರಯೋಜಕವಾಯಿತೆಂಬುದನ್ನು ವಿಸ್ತಾರಗೊಳಿಸಿದರು. ಪೂರ್ಣ ಸ್ವರಾಜ್ ಧ್ಯೇಯಕ್ಕನುಸಾರವಾಗಿ ಇಡಬೇಕಾದ ಹೆಜ್ಜೆಗಳೇನು? ಸಮಾಜದಲ್ಲಿ ನ್ಯಾಯ ನೆಲೆಸುವಂತೆ ಸೋಷಲಿಸ್ಮ್ ಅಥವಾ ಸಾಮ್ಯವಾದವೆಂಬುದನ್ನು ಎಷ್ಟುಮಾತ್ರ ಅನುಸರಿಸಬೇಕು? ಹೀಗೆ ವಿಚಾರ ವಿವರಮಾಡುತ್ತ ತಮ್ಮ ಸಂಚಾರದಲ್ಲಿ ಪ್ರಾಂತಗಳ ಕಾಂಗ್ರೆಸ್ ಕಚೇರಿಗಳ ಕೆಲಸಗಳನ್ನು ತನಿಖೆ ಮಾಡಿದರು. ಆಗಲೆ ಕೆಲವರು ಜವಾ

ಹರಲಾಲರ ರೀತಿಯೂ ಉದ್ದೇಶವೂ ಗಾಂಧೀಜಿಯವರ ಇಷ್ಟಕ್ಕೆ ವಿರೋಧವೆಂದುಕೊಂಡರು. ಹಲವರು ಬಾಪುಜಿಯನ್ನು ಕೇಳಿದರು "ನಿಮಗಿಬ್ಬರಿಗೂ ಪೈಪೋಟಿಯಂತಲ್ಲ? ಏನು ನಿಜಾಂಶ?"ವೆಂದು. "ಪೈಪೋಟಿಯೆ? ನಮ್ಮಿಬ್ಬರಲ್ಲಿ ಯಾರು ಯಾರನ್ನು ಹೆಚ್ಚಾಗಿ ಪ್ರೀತಿಸುತ್ತೇವೆಯೋ ಎಂಬ ಪೈಪೋಟಿ"ಯೆಂಬ ಉತ್ತರ ಬಂತು.

ಗಾಂಧೀಜಿಯವರೊಂದು ಹಳ್ಳಿಯಲ್ಲಿದ್ದುಬಿಟ್ಟರು. ಗಮನವೆಲ್ಲವನ್ನೂ ಗ್ರಾಮೋದ್ಯೋಗಕ್ಕೆ ಕೊಡುತ್ತಿದ್ದರು. ಮದರಾಸಿಗೆ ಪ್ರಯಾಣ ಮಾಡುತ್ತ ಜವಾಹರಲಾಲರು ಮಧ್ಯೆ ಪ್ರಯಾಣ ನಿಲ್ಲಿಸಿ ಆ ಹಳ್ಳಿಗೆ ಹೊರಟಿದ್ದರು. ಅಲ್ಲಿ ಎಲ್ಲರಿಗೂ ಮಲೇರಿಯ ಮುಂತಾದ ರೋಗಗಳು ಹಿಡಿದಿದ್ದವು. ಮೀರಾಬಾಯಿಗೇ ಅಸ್ವಸ್ಥತೆಯಾಗಿತ್ತು. ಮೊದಲು ಮೀರಾಬಾಯಿ ಕಣ್ಣಿಗೆ ಬೀಳಲು ಜವಾಹರಲಾಲರು "ಇದೇನು ನಿನ್ನ ಸಮಾಚಾರ? ಎಚ್ಚರ ತಪ್ಪಿ ವರ್ತಿಸಿ ಕಾಹಿಲೆ ಬರಮಾಡಿಕೊಂಡಿಯಂತೆ ನೀನು?" ಎಂದು ವಿನೋದವಾಗಿ ಆರಂಭಿಸಿದರು. "ಒಂದು ವಾರದಿಂದ ಎಚ್ಚರ ವಹಿಸಿಯೆ ಇದ್ದು ಎಚ್ಚರ ತಪ್ಪಿ ವರ್ತಿಸಿದ ಇತರರ ಪರಿಚರ್ಯೆಯಲ್ಲಿದ್ದೇನೆ" ಎಂದಳಾಕೆ. ಗಾಂಧೀಜಿ ಯಾರೋ ಕೆಲವು ರೋಗಿಗಳ ಉಪಚಾರ ನಡೆಸುತ್ತಲಿದ್ದು ಬಿಟ್ಟರು. ಜವಾಹರಲಾಲರೊಡನೆ ರಾಜೇಂದ್ರ ಪ್ರಸಾದರೂ ಸರದಾರ್ ವಲಬ್ಭಾಯಿಯೂ ಬಂದಿದ್ದು ಬಾಪುಜಿಯ ಸಮಯಕ್ಕಾಗಿ ಕಾದರು. ಬಾಪುಜಿ ಇವರ ಕಡೆಗೆ ತಿರುಗಲಿಲ್ಲ. ಆಗ ಸರದಾರ್ ವಲ್ಲಭ್ಭಾಯಿ "ನಿಮಗೀಗ ಸಮಯವಲ್ಲದಿದ್ದರೆ ನಾವು ಹೊರಡುವುದೇ ಮೇಲು" ಎನ್ನುತ್ತ ಗೆಳೆತನದ ತುಂಟಾಟದ ಮಾತನ್ನಾಡಿದರು. ನಸುನಗುತ್ತ ಗಾಂಧೀಜಿ ಇವರಕಡೆ ತಿರುಗಿ ಅಲ್ಲಿಯ ಕಷ್ಟವನ್ನು ವಿವರಿಸಿದರು. ಬೇರೆ ಕೆಲಸವನ್ನು ತಳ್ಳಿಟ್ಟು ಮಲೇರಿಯ ರೋಗಗ್ರಸ್ತರಾದವರ ಶುಶ್ರೂಷೆಯನ್ನು ಕಟ್ಟಿಕೊಂಡಿದ್ದ ಬಾಪುಜಿಯನ್ನು ಕುರಿತು ಜವಾಹರಲಾಲರು "ಹಿಂದೆ ಕನ್ಯೂಟ್‌ರಾಜನು ಸಮುದ್ರದ ಅಲೆಗಳನ್ನು ಹಿಂದಕ್ಕೆ ಸರಿಯಬೇಕೆಂದು ಆಜ್ಞೆ ಕೊಟ್ಟಂತೆಯೋ ಮತ್ತೊಬ್ಬರು * ಸಮುದ್ರವನ್ನು

* ಪಾರ್ಟಿಂಗ್ಟನ್ ಎಂಬ ಹೆಸರಿನ ಮುದುಕಿಯ ಕಥೆಯೊಂದುಂಟು. ಅದರ ಸೂಚನೆ ಇಲ್ಲಿ.

ಗುಡಿಸಿಬಿಡಲು ಸಿದ್ಧವಾದಂತೆಯೋ ಆಗಲಿಲ್ಲವೇ?” ಎಂದು ಕುಚೋದ್ಯವಾಗಿ ಕೇಳಿದ್ದಕ್ಕೆ ಗಾಂಧೀಜಿ “ಅದಕ್ಕೇ ನಿನ್ನನ್ನು ನಮ್ಮ ಕನ್ಯೂಟ್ ರಾಜನನ್ನಾಗಿಟ್ಟುಕೊಂಡಿರುವುದು! ಇತರರಿಗಿಂತ ಮೇಲಾಗಿ ನೀನು ನಡೆಸಿ ಕೊಟ್ಟೇಯೆ ಎಂಬ ಆಸೆಯಿಂದ” ಎನ್ನುತ್ತ ಹಾಸ್ಯದ ಉತ್ತರವನ್ನೇ ಬೀರಿದರು.

ಅಕ್ಟೋಬರ್ ತಿಂಗಳಲ್ಲಿ ಬನಾರಸ್ಸಿನಲ್ಲಿ ಹೊಸದಾದ ದೇವಾಲಯವೊಂದರ ಸ್ಥಾಪನೆಯಾಯಿತು. ಶಿವಪ್ರಸಾದಗುಪ್ತರು ದೀರ್ಘಕಾಲದ ಪ್ರಯತ್ನ ನಡೆಸಿ ಭಾರತಮಾತಾ ಮಂದಿರವನ್ನು ಸಿದ್ಧಗೊಳಿಸಿದ್ದರು. ಆ ಮಂದಿರದ ಆರಂಭೋತ್ಸವ ಗಾಂಧೀಜಿಯವರಿಂದಲೇ ನಡೆಯಿತು. ಜವಾಹರಲಾಲರೂ ಅಲ್ಲಿಗೆ ವೇಳೆಗೆ ಸರಿಯಾಗಿ ಬಂದಿದ್ದರು. ಪ್ರಾಯಶಃ ಈ ಮಂದಿರವೊಂದಕ್ಕೇ ಇತ್ತೀಚೆಗೆ ಜವಾಹರಲಾಲರು ಮನಃಪೂರ್ವಕವಾಗಿ ಬಂದುದು. ಆ ದೇವಾಲಯದಲ್ಲಿರುವ ಮೂರ್ತಿ ಹೊಸ ತೆರದ್ದು. ಭಾರತವರ್ಷದ ಬೊಂಬೆಯನ್ನೇ ನೆಲದ ಮೇಲೆ ಸಪ್ರಮಾಣವಾಗಿ ಕಟ್ಟಿದೆ. ದೇಶದ ನದೀ ಪರ್ವತಗಳನ್ನೂ ಮೈದಾನ ಪಟ್ಟಣಗಳನ್ನೂ ಸಮುದ್ರತೀರಗಳನ್ನೂ ತದ್ವತ್ತಾಗಿ ನೋಡಬಹುದು.

ಡಿಸೆಂಬರ್ ತಿಂಗಳು ಸಮೀಪವಾಗುತ್ತ ಅಧ್ಯಕ್ಷರ ಚುನಾವಣೆಯಾಗಬೇಕಾಗಿತ್ತು. ಪುನಃ ಜವಾಹರಲಾಲರನ್ನೇ ಎಲ್ಲರೂ ವರಿಸಿಕೊಂಡರು. ಆದರೆ ಹಿಂದಿನಂತೆ ಪಟ್ಟಣದಲ್ಲಲ್ಲ ಕಾಂಗ್ರೆಸ್ ಸೇರಿದ್ದು. ಯಾವುದೋ ಫೈಜ್‌ಪುರವೆಂಬ ಗ್ರಾಮದಲ್ಲಿ. ಕಾಂಗ್ರೆಸ್ ಮಹೋದ್ಯಮದಲ್ಲಿ ಅಧ್ಯಕ್ಷನಿರ್ಮಾಣಕರಾಗಿದ್ದ ಗಾಂಧೀಜಿಯವರದನ್ನೇ ನಡೆಸಬೇಕೆಂದು ಹೇಳಿದರು; ಕಾರ್ಯದರ್ಶಿ ನಿರ್ಮಾಣಕರಾಗಿದ್ದ ನೆಹರು ಅದರಂತೆ ನಡೆಸಿದರು. ಅಧ್ಯಕ್ಷರ ಮೆರವಣಿಗೆ ಈ ಸಾರಿ ಆರು ಜೊತೆ ಎತ್ತು ಕಟ್ಟಿದ ಬಂಡಿಯಲ್ಲಾಯಿತು.

ಆ ವೇಳೆಗೆ ದೇಶದಲ್ಲೆಲ್ಲ ಹೊಸ ಶಾಸನ ಸಭೆಗಳಿಗಾಗಿ ಪ್ರಾಂತಗಳಲ್ಲಿ ಚುನಾವಣೆಗಳು. ಪ್ರಾಂತಸ್ವಾತಂತ್ರ್ಯವೆಂಬುದನ್ನು ಕಟ್ಟಿಕೊಂಡು ಕಾಂಗ್ರೆಸ್ಸಿನವರೇ ಪರೀಕ್ಷೆಮಾಡಿ ಬಿಡುವ ಸಂಕಲ್ಪ ನಡೆದಿತ್ತು. ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷದವರಿಗೆ ಜಯವೊದಗುವಂತೆ ನೆರವೇರಿಸಿ

ಕೊಡುವುದು ಜವಾಹರಲಾಲರ ಕರ್ತವ್ಯ. 1935ನೆ ಸಾಲಿನಲ್ಲಿ ಶಾಸನ ರೂಪ ಪಡೆದ ಏರ್ಪಾಟು ಎಲ್ಲ ಬಗೆಗಳಲ್ಲಿಯೂ ವಿರೋಧನೀಯ ವಾದುದೇ ವಿನಾ ಅನುಸರಣೀಯವಲ್ಲವೆಂದಿದ್ದರೂ ಜವಾಹರಲಾಲರು ತಮ್ಮ ಕರ್ತವ್ಯವನ್ನು ಅತಿಶಯವೆಂಬಂತೆ ಪಾಲಿಸಿಕೊಟ್ಟರು.

"ನಾಲ್ಕು ತಿಂಗಳಕಾಲದಲ್ಲಿ ಸುಮಾರು 50,000 ಮೈಲಿ ಪ್ರಯಾಣ ಮಾಡಿದೆ. ಸಂಚಾರ ಸೌಕರ್ಯವೆಂಬುದೇ ಇಲ್ಲದ ಗ್ರಾಮಾಂತರ ಸ್ಥಳ ಗಳನ್ನೂ ಕಂಡೆ. ಎಲ್ಲ ಬಗೆಯ ವಾಹನಗಳನ್ನೂ ಉಪಯೋಗಿಸಿದೆ. ಏರೊ ಪ್ಲೇನ್, ರೈಲು, ಮೊಟಾರ್‌ಕಾರ್, ಮೊಟಾರ್‌ಲಾರಿ, ಕುದುರೆ ಬಂಡಿ, ಎತ್ತಿನ ಬಂಡಿ, ಬೈಸಿಕಲ್, ಆನೆ, ಒಂಟೆ, ಕುದುರೆ, ಜಹಜು, ದೋಣಿ, ಹರಿಗೋಲು ಗಳಲ್ಲದೆ ನಡಿಗೆ! ಜೊತೆಯಲ್ಲಿಯೆ ಮೈಕ್ರೊಫೋನ್ ಮುಂತಾದುವನ್ನೆತ್ತಿ ಕೊಂಡು ಹೊರಟು ದಿನಕ್ಕೆ ಹತ್ತು ಹದಿನೈದು ಸಭೆಗಳಲ್ಲಿ ಭಾಷಣ ಕೊಡು ತ್ತಿದ್ದೆ. ಕೆಲವು ಸಭೆಗಳಲ್ಲಿ ಲಕ್ಷಗಟ್ಟಲೆ ಜನಸ್ತೋಮ ಸೇರಿತ್ತು; ಸರಾಸರಿ ಯಾಗಿ ಇಪ್ಪತ್ತುಸಾವಿರ ಜನರ ಸಭೆಗಳೆನ್ನಬಹುದು. ನನ್ನ ಮಾತನ್ನು ದಿನ ವೊಂದಕ್ಕೆ ಒಂದು ಲಕ್ಷ ಜನರು ಮುಖತಃ ಕೇಳಿರಬೇಕು. ಒಟ್ಟು ಸುಮಾರು ಒಂದು ಕೋಟಿ ಜನರು ನನ್ನ ಮಾತುಗಳನ್ನು ಕೇಳಿರಬಹುದು; ಸಂಚಾರದಲ್ಲಿ ನನಗೆ ಜೊತೆಯಾಗಿದ್ದವರ ಸಂಖ್ಯೆಯೆ ಲಕ್ಷಗಟ್ಟಲೆಯಾಗಿರಬೇಕು.

ಆಸೇತುಹಿಮಾಚಲ ನಾನೀರೀತಿ ಓಡಾಡಿದೆ. ಜನರ ಪರಮೋತ್ಸಾಹ ವನ್ನು ಕಂಡಾಗ ನನಗೆ ವಿಶ್ರಾಂತಿಯೇ ಬೇಕಾಗಲಿಲ್ಲ. ಅಷ್ಟು ಆಯಾಸ ಪ್ರಯಾಸಗಳನ್ನು ನಾನು ಸೈರಿಸಿಕೊಂಡುದು ನನಗೇ ಆಶ್ಚರ್ಯವನ್ನುಂಟು ಮಾಡಿತು. ಎಲ್ಲೆಲ್ಲಿಯೂ ನವಚೈತನ್ಯ ಉದಯಿಸಿದಂತೆ ಕಂಡಿತು. ಚುನಾವಣೆಗೆ ಮಾತ್ರವೇ ಅಲ್ಲ ಕಾಂಗ್ರೆಸ್ ಪ್ರಚಾರ. ವೋಟುದಾರರಾಗಿದ್ದ ಮೂರುಕೋಟಿ ಜನರಲ್ಲಿ ಮಾತ್ರವೇ ಅಲ್ಲ ನಮ್ಮ ಆದರ ವಿಶ್ವಾಸಗಳು; ವೋಟುಗಳಿಲ್ಲದ ಇತರ ಕೋಟ್ಯಂತರ ಜನರಲ್ಲಿಯೂ ನಮಗೆ ಬಾಂಧವ್ಯವಿತ್ತು.

ಈ ಪ್ರಚಂಡ ಸಂಚಾರದಲ್ಲಿ ಮತ್ತೊಂದು ಪರಿಣಾಮ ನನ್ನ ಮುಟ್ಟಿಗಾ ಯಿತು. ಸಂಚಾರ ಮಾಡುತ್ತ ನನ್ನ ದೇಶದಲ್ಲಿಯೂ ನನ್ನ ಜನರಲ್ಲಿಯೂ ಹೊಸ ಹೊಸ ಅಂಶಗಳನ್ನೂ ಲಕ್ಷಣಗಳನ್ನೂ ಕಂಡೆ. ವೈವಿಧ್ಯವನ್ನು ಸಮೃದ್ಧಿ ಯಾಗಿ ಪಡೆದ ಮಾತೃಭೂಮಿಯ ಸಾವಿರಾರು ಮುಖಗಳನ್ನು ಕಾಣುತ್ತಿದ್ದರೂ ಎಲ್ಲೆಲ್ಲಿಯೂ ಎತ್ತೆತ್ತಲೂ ಭಾರತಭೂಮಿಯೆಂಬ ಮುದ್ರೆಯನ್ನು ತೋರುತ್ತ ಅದ್ಭುತವಾದ ಐಕ್ಯತೆಯನ್ನು ಬೀರುತ್ತಿತ್ತು. ನನ್ನನ್ನು ಅತಿ ವಿಶ್ವಾಸದಿಂದ ಕಂಡ ಕೋಟ್ಯಂತರ ಲೋಚನಗಳಲ್ಲಿ ತುಂಬಿದ್ದ ಗಾಢ ಪ್ರೀತಿಯನ್ನು ಕಂಡು

ಪುಳಕಿತನಾಗಿ ಆ ಪ್ರೀತಿಯನ್ನು ಕಾರಿದ ಮನಸ್ಸುಗಳ ಆಸೆಗಳೇನಿದ್ದಾವೆಂದು ತಿಳಿಯಲು ಯತ್ನಿಸಿದೆ. ಹೆಚ್ಚು ಹೆಚ್ಚಾಗಿ ಭಾರತ ಭೂಮಿಯನ್ನು ಕಂಡಂತೆಲ್ಲ ಆ ಕ್ಷೇತ್ರದ ಅಪರಿಮಿತ ರಮ್ಯತೆಯಲ್ಲಿಯೂ ವೈವಿಧ್ಯದಲ್ಲಿಯೂ ಎಷ್ಟು ಅಲ್ಪ ಭಾಗವನ್ನು ಮಾತ್ರ ನಾನು ಕಂಡಿದ್ದೆನೆಂದು ಮನದಲ್ಲಿ ಮೂಡಿತು. ಇನ್ನೂ ನೋಡಿ ತಿಳಿಯಬೇಕಾದ ಭಾಗವೆಷ್ಟು ಅಮೇಯವೆನ್ನಿಸುತ್ತಿತ್ತು. ದೇಶಮಾತೆ ಯನೇಕ ವೇಳೆ ನನ್ನನ್ನು ನೋಡಿ ಮುಗುಳ್ನಗೆ ನಕ್ಕಂತೆ ಕಂಡುಬರುತ್ತಿತ್ತು; ಅನೇಕ ವೇಳೆ ನನ್ನನ್ನು ನೋಡಿ ಅಪಹಾಸ್ಯಗೈದು ಕಣ್ಣೆದುರಿಗೆ ಮಾಯ ಗೊಂಡಂತೆ ಭಾಸವಾಗುತ್ತಿತ್ತು.

ಅಪರೂಪವಾದರೂ ಅವಕಾಶ ದೊರೆತಾಗ ಒಂದೊಂದು ದಿನ ವಿರಾಮ ವನ್ನಿಟ್ಟುಕೊಂಡು ಸಮೀಪದಲ್ಲಿದ್ದ ದೃಶ್ಯಗಳನ್ನು ಕಣ್ಣಾರೆ ಕಾಣಲು ಹೊರಡು ತ್ತಿದ್ದೆ. ಅಜಂತಾ ಚಿತ್ರಗಳನ್ನೂ ಮೊಹೆಂಜೊದರೋವನ್ನೂ ಹಾಗೆಯೆ ಕಂಡೆ. ಸ್ವಲ್ಪಕಾಲ ಮಾತ್ರ ಮನಸ್ಸನ್ನು ಕನಸಿಗೊಯ್ದು ಆ ಚಿತ್ರಗಳಲ್ಲಿ ಕಂಡ ಬೋಧಿ ಸತ್ವರ ಸಹವಾಸವನ್ನೋ ಅಪ್ಸರೆಯರ ರೂಪವನ್ನೋ ಭಾವಿಸಿಕೊಂಡು ಮನಸ್ಸಿ ನಲ್ಲಿ ಅದನ್ನೇ ತುಂಬಿಕೊಂಡೆನು. ಆಶ್ಚರ್ಯ! ಕೆಲದಿನಗಳ ತರುವಾಯ ಹೊಲಗಳಲ್ಲಿ ಕಳೆ ಕೀಳುತ್ತಲೋ ಬಾವಿಯಿಂದ ನೀರು ಸೇದುತ್ತಲೋ* ಇದ್ದ ಗ್ರಾಮ ಸ್ತ್ರೀಯನ್ನು ಕಂಡಕೂಡಲೆ ಅಜಂತಾ ಚಿತ್ರಗಳಲ್ಲಿ ತಮ್ಮ ರೂಪವನ್ನು ತೋರುವ ರಮಣಿಯರ ಸೊಗಸು ಪುನಃ ಹುಟ್ಟಿಬಂದಂತೆ ಕಾಣುತ್ತಿತ್ತು"

ಇದು ಅವರ ಸ್ವಂತ ಬರವಣಿಗೆ. ಆ ಸಂಚಾರದ ಪ್ರಭಾವ ಇತರರ ಮೇಲೆ ಹೇಗೆ ನಡೆಯಿತೆಂಬುದನ್ನು ಸುಲಭವಾಗಿ ವರ್ಣಿಸಲಾಗುವುದಿಲ್ಲ. ಆ ಸಂಚಾರದಲ್ಲಿ ಜವಾಹರಲಾಲರು ಅಲ್ಲಲ್ಲಿ ಕೊಟ್ಟ ಭಾಷಣಗಳನ್ನು ಸಂಗ್ರಹಿಸಿ ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದು ರಾಮಾನಂದ ಚಟರ್ಜಿ ಮುಂತಾದವರು ಬಯಸಿದಾಗ್ಯೂ ಇನ್ನೂ ಗ್ರಂಥರೂಪವಾಗಿ ದೊರೆತಿಲ್ಲ. ಎಲ್ಲೆಲ್ಲಿಯೂ ಕಾಂಗ್ರೆಸ್ ಪಕ್ಷಕ್ಕೆ ಚುನಾವಣೆಗಳಲ್ಲಿ ಬಹುಮತಸಿದ್ಧಿ ಯಾಗಿ ಏಳು ಪ್ರಾಂತಗಳಲ್ಲಿ ಮಂತ್ರಿಮಂಡಲಿಗಳು ಕಾಂಗ್ರೆಸ್ಸಿನ ಆಧೀನ

* ಕಾಲಿದಾಸನ ಮೇಘ ಸಂದೇಶವನ್ನೋದಿದ್ದರೆ ಯಾವುದೋ ಭಾಷಾಂತರದಲ್ಲಿ ಜವಾಹರಲಾಲರೋದಿರಬೇಕು. ಆದರೂ "ಭ್ರೂವಿಲಾಸಾನಭಿಜ್ಞೈಃ ಪ್ರೀತಿಸ್ನಿಗ್ಧೈರ್ಜ ನಪದವಧೂಲೋಚನೈಃ" ಎಂಬ ಪಙ್ತಿಗೆ ದೂರವಾದರೂ ರಂಜಕವಾದ ವ್ಯಾಖ್ಯಾನ ದಂತೆಯೆ ಈ ಮಾತುಗಳಿವೆಯೆಂದು ತೋರಬಹುದು.

ವಾಗಿ ನಡೆಯುವಂತಾಯಿತು. ಆ ಸಂಗತಿಗಳ ವಿವರ ಕೂಡ ಚರಿತ್ರೆಯಲ್ಲಿರಬೇಕಾದದ್ದೇ.

ರಾಷ್ಟ್ರಪತಿಯಾಗಿ ದೇಶದಲ್ಲಿ ಸಂಚಾರಮಾಡುತ್ತ ಬರ್ಮಾ ಮತ್ತು ಮಲಯಗಳಲ್ಲದೆ ಕಾಮರೂಪ ಅಥವಾ ಆಸ್ಸಾಂ ಪ್ರಾಂತದಲ್ಲಿ ಪ್ರಯಾಣ ನಡೆಸಿದ್ದರು. ಆ ಪ್ರಯಾಣವನ್ನು ಸ್ಮರಿಸುತ್ತ ಜವಾಹರಲಾಲರು ಬರೆದ ಹಲವು ಮಾತುಗಳನ್ನು ಕೇಳದೆ ಮುಂದೆ ಹೊರಡಲು ಮನಬಾರದು.

"ಒಂದು ಕಣಿವೆಯಿಂದ ಮತ್ತೊಂದು ಕಣಿವೆಗೆ ಹೊರಡುತ್ತ ರೈಲ್ ಬಂಡಿ ಯಾವುದೋ ಹುಳುವಿನಂತೆ ನಿದಾನವಾಗಿ ದೇಕುತ್ತಿತ್ತು. ಎರಡು ಪಕ್ಕಗಳಲ್ಲಿಯೂ ಘನವಾದ ಮರಗಳು ತುಂಬಿದ ಮಹಾರಣ್ಯ; ಪ್ರವೇಶ ಮಾಡುವುದಕ್ಕೆ ಅಸಾಧ್ಯವೆಂಬಂತೆ ಕಾಣುತ್ತಿದ್ದವು. ರೈಲು ಹೋಗುವುದಕ್ಕೆ ತಮ್ಮ ಮಧ್ಯೆ ಕಿರಿದಾದ ದಾರಿಯನ್ನು ಗೊಣಗುತ್ತ ಬಿಟ್ಟುಕೊಟ್ಟು ಕಂಬಿಗಳ ಅಂಚಿನವರೆಗೂ ಒತ್ತಿಕೊಂಡಿದ್ದಂತೆ ಆ ಅರಣ್ಯ ಕಾಣುತ್ತಿತ್ತು. ಆಕಾಶದಷ್ಟೆತ್ತರದಲ್ಲಿದ್ದುಕೊಂಡು ತಮ್ಮ ರಾಜ್ಯದ ಮಧ್ಯೆ ರೈಲ್ದಾರಿ ಹಾಕಿದ ಮಾನವ ಪ್ರಾಣಿ ಯಾರೆಂದು ಕೋಟಿ ಕಣ್ಣುಗಳನ್ನು ಬಿಟ್ಟು ತಿರಸ್ಕಾರ ಸೂಚಕವಾದ ದೃಷ್ಟಿ ಬೀರಿ ಕಂಡಂತೆ ಭಾವನೆಯಾಗುತ್ತಿತ್ತು. ಆ ಮಾನವ ಜಂತುವನ್ನು ನುಂಗಲು ತಮ್ಮ ಸಾವಿರ ಬಾಯಿಗಳನ್ನು ತೆರೆದುಕೊಂಡಿದ್ದಂತೆ ಕಾಣುತ್ತಿತ್ತು.

ಅರಣ್ಯವೆಂದರೂ ಪರ್ವತವೆಂದರೂ ನನಗೆ ಬಲು ಆಸೆ. ಈ ಮಹಾರಣ್ಯಗಳನ್ನು ಕಣ್ಣಾರೆ ಕಂಡು ಮುಗ್ಧನಾದೆ. ಆ ಅರಣ್ಯದ ಅಂಧಕಾರದಲ್ಲಿ ಎಷ್ಟು ಕೋಟಿ ಜೀವರಾಶಿಯಡಗಿರುವುದೋ ಎಂತೆಂತಹ ಗಭೀರ ಕ್ರಿಯೆಗಳು ನಡೆಯುತ್ತಿವೆಯೋ ಎಂದುಕೊಂಡೆ. ಯಥೇಷ್ಟವಾಗಿ ದಾನಕೊಟ್ಟು ಸೌಮ್ಯ ರೂಪದಿಂದಿರುವ ಪ್ರಕೃತಿಯೋ ರಾಕ್ಷಸ ಕೃತ್ಯಗಳನ್ನು ನಡೆಸುತ್ತ ಭೀಕರ ರೂಪದಿಂದಿರುವ ಪ್ರಕೃತಿಯೋ! ಪಟ್ಟಣಗಳಲ್ಲಿಯೂ ಇತರ ಮಾನವಾವಾಸಸ್ಥಳಗಳಲ್ಲಿಯೂ ನಡೆವುದಕ್ಕಿಂತ ಕಾನನದ ಕತ್ತಲೆಯಲ್ಲಿ ನಡೆವುದು ಕೀಳೇನು? ಅರಣ್ಯ ಮೃಗ ಕೊಲ್ಲುವುದು ಆಹಾರಕ್ಕಾಗಿ; ವಿನೋದಕ್ಕೆ ಬೇಟೆಯಾಡುವುದಿಲ್ಲ, ಕೊಲ್ಲುವ ಸಂತೋಷಕ್ಕೆ ಕೊಲ್ಲುವುದಿಲ್ಲ. ಅರಣ್ಯದಲ್ಲಿ ನಡೆವ ಕ್ರೂರ ಯುದ್ಧಗಳು ಒಬ್ಬರಿನ್ನೊಬ್ಬರೊಡನೆ ಮಾತ್ರ ನಡೆಸುವ ಹೋರಾಟಗಳು; ರಣಕೇಳಿಯೆಂಬ ಹೆಸರಿಟ್ಟು ಮನುಷ್ಯರು ನಡೆಸುವ ಸಾಮೂಹಿಕ ಹತ್ಯಗಳಲ್ಲ. ಬಾಂಬುಗಳನ್ನು ಬೀರಿಯೋ ವಿಷವಾಯು ಪ್ರಯೋಗಿಸಿಯೋ ಸರ್ವನಾಶಗೊಳಿಸುವುದಿಲ್ಲ. ಹೀಗೆ ಹೋಲಿಸಿ ನೋಡಿದರೆ ಕ್ರೂರ ಮೃಗಗಳಲ್ಲಿಯೇ ನ್ಯಾಯಮೂರ್ತಿ ಪಕ್ಷಪಾತ ನಡೆಸಬೇಕಾಗುವುದು"

1936—37ನೆ ವರ್ಷಗಳೆಲ್ಲ ನಿರಂತರ ಸಂಚಾರದಲ್ಲಿಯೆ ಕಳೆದ ಹಾಗಾಯಿತು. ದೇಶದ ನಾನಾ ಪ್ರಾಂತಗಳಲ್ಲಲ್ಲದೆ ಬರ್ಮ ಮತ್ತು ಮಲಯಗಳಲ್ಲಿಯೂ ಸಂಚಾರ ನಡೆದಿತ್ತು. ಆ ಪ್ರಯಾಣದಿಂದ ಹಿಂತಿರುಗಿ ಬಂದ ತರುವಾಯ ಜವಾಹರಲಾಲರೇ "ಮತ್ತೆ ಮನೆಗೆ" ಎಂಬ ಹೆಸರಿಟ್ಟು ಲೇಖನ ಬರೆದರು. ದಿನವನ್ನು ಹೇಗೆ ಕಳೆಯುವರೆಂಬುದಕ್ಕೆ ಮಾದರಿಯಂತಿದೆ.

"ಅಂತೂ ಬರ್ಮ ಮಲಯಗಳನ್ನು ಕಂಡು ಬಂದುದಾಯಿತು. ಭಾರಿ ಭಾರಿ ಕಡತದ ಕಟ್ಟುಗಳು ಸಿದ್ಧವಾಗಿದ್ದವು; ರಾಶಿ ಕಾಗದಗಳು ಕಾದಿದ್ದವು. ಎಷ್ಟೋ ಪ್ರಶ್ನೆಗಳೂ ಸಮಸ್ಯೆಗಳೂ ಪರಿಹಾರಕ್ಕಾಗಿ ಕುಣಿಯುತ್ತಿದ್ದವು. ಪತ್ರಿಕಾ ಪ್ರತಿನಿಧಿಗಳು ಸುತ್ತಲೂ ಮುತ್ತಿಕೊಂಡರು; 'ಇದಕ್ಕೇನು ಹೇಳುವಿರಿ? ಅದಕ್ಕೇನು ನಿಮ್ಮ ತೀರ್ಮಾನ? ಆ ಹೇಳಿಕೆ ನೀವು ನೋಡಿದಿರೋ? ಕಾಂಗ್ರೆಸ್ ಪಕ್ಷದವರು ಮಂತ್ರಿಮಂಡಲಿಗಳನ್ನು ರಚಿಸುತ್ತಾರೆಯೋ?—' ಇತ್ಯಾದಿ ಕೊನೆಯಿಲ್ಲದ ಪ್ರಶ್ನೆಗಳು. ದೇಶವನ್ನು ಬಿಟ್ಟು ಒಂದೂವರೆ ತಿಂಗಳಕಾಲ ಹೊರಪ್ರಯಾಣದಲ್ಲಿದ್ದೆನಾದುದರಿಂದ ಅವುಗಳ ವಿಷಯವಾಗಿ ಸಾಕಾದಷ್ಟು ಪರಿಜ್ಞಾನ ನನಗಿರಲಿಲ್ಲ; ಇಲ್ಲದಿದ್ದುದು ಮೇಲಾಯಿತು. ನನ್ನ ಮನಸ್ಸಿನಲ್ಲಿದ್ದುದು ರಂಗೂನ್ ಶ್ವೇದಗಾನ್ ಮಂದಿರದ ಗೋಪುರದ ಚಿತ್ರ; ಅಥವಾ ಮಲಯದ ತಾಳೆ ಮರಗಳ ದೃಶ್ಯ.

ಕಡತದ ಕಟ್ಟುಗಳನ್ನೂ ಕಾಗದಗಳನ್ನೂ ಮುಂದಿಟ್ಟುಕೊಂಡೆ. ಒಂದಾನೊಂದು ಶಾಲೆಯಲ್ಲಿ ಪೋಲೀಸಧಿಕಾರಿಗಳು ನುಗ್ಗಿ ಲಾಠಿಯಿಂದ ಅನೇಕರನ್ನು ಕೆಡಹಿದ್ದರು; ಸೆಣಬಿನ ಗಿರಣಿ ಕಾಮಗಾರಿಗಳ ಮುಷ್ಕರ ನಿಂತಿದ್ದರೂ ಅವರ ಸಂಕಟಗಳು ಪರಿಹಾರವಾಗಿರಲಿಲ್ಲ; ಬೆಂಕಿಪೆಟ್ಟಿಗೆ ಕಾರ್ಖಾನೆಯೊಂದರಲ್ಲಿ ದೀರ್ಘ ಕಾಲದಿಂದ ಮುಷ್ಕರ ನಡೆಸುತ್ತಿದ್ದ ಕೆಲಸಗಾರರ ಮೇಲೆ ಕಠೋರ ವರ್ತನೆ; ಡಿಟೆನ್ಯೂಗಳ ಕಷ್ಟ; ಕಾಂಗ್ರೆಸ್ ಕಮಿಟಿಯೊಂದು ಸಸ್ಪೆಂಡ್ ಆಗಿದ್ದು ತತ್ಸಂಬಂಧ ಆಕ್ಷೇಪ ಪ್ರತ್ಯಾಕ್ಷೇಪ ಪರಂಪರೆಗಳು; ಪ್ರಾಂತ ಸಭೆಗಳು ಹೊರಡಿಸಿದ್ದ ಆಜ್ಞೆ ನ್ಯಾಯವಾಗಿಲ್ಲವೆಂದು ಜಿಲ್ಲಾ ಕಮಿಟಿಗಳ ಹೇಳಿಕೆಗಳು—ಮಧ್ಯೆ ಬಂತು ವಿಘ್ನ! ಐವತ್ತು ರೈತರು ತಮ್ಮ ಕಷ್ಟಗಳನ್ನು ಹೇಳಿಕೊಳ್ಳಲು ಬಂದಿರುವರು. ಅವರನ್ನು ಮಾತನಾಡಿಸಬೇಕು; ಸಮಾಧಾನದಿಂದ ಕಳುಹಿಸಬೇಕು.

ಆಯಿತು. ಪುನಃ ಕಡತಗಳ ಕಟ್ಟು. ಕಿಸಾನ್ ಸಭೆಗಳನ್ನು ಕಟ್ಟಬೇಕೋ ಅಥವಾ ಅವರನ್ನು ಕಾಂಗ್ರೆಸ್ ಕಮಿಟಿಗಳಲ್ಲಿಯೆ ಸದಸ್ಯರಾಗಿರುವಂತೆ ಮಾಡ

ಬೇಕೋ? ಕಿಸಾನ್ ಸಭೆಗಳಿಗೂ ಕಾಂಗ್ರೆಸ್ ಕಮಿಟಿಗಳಿಗೂ ಎಂತಹ ಸಂಬಂಧವಿರಬೇಕು? ವೃತ್ತಿ ವಿಭಾಗಾನುಸಾರ ಪ್ರಾತಿನಿಧ್ಯಕ್ಕೆ ನಾನು ಒಪ್ಪುವೆನೇ?—ಬಂತು ತಂತಿ! ಯಾವುದೋ ತಾತ್ಕಾಲಿಕ ಚುನಾವಣೆಗೆ ನಿಂತಿದ್ದ ವರಣಾರ್ಥಿಯನ್ನು ಆರಿಸಿದ್ದಕ್ಕೆ ಆಕ್ಷೇಪ. ದೂರ ದಕ್ಷಿಣದಿಂದ ಟೆಲಿಫೋನ್ ಮಾತು. ಮಧ್ಯೆ ಬರುವ ಮಿತ್ರರು, ಪರಿಚಿತರು. ಹೇಳಲು ಯೋಗ್ಯವಾದ ವಿಷಯವಿಲ್ಲದೆ ಕಾಲಹರಣಮಾಡುವವರು. ಏನಾದರೂ ಯೋಗ್ಯವಾದ ಪ್ರಸ್ತಾಪ ತಂದವರಾದರೆ ಇನ್ನೂ ಹೆಚ್ಚು ಕಾಲ ಬೇಕಾಗಿ ಬರುವುದು. ಅಷ್ಟು ಹೊತ್ತೂ ಮನಸ್ಸಿನಲ್ಲಾಡತಕ್ಕುದು ಅಂತರಿಕ್ಷದಲ್ಲಿ ತೇಲಿಕೊಂಡಿದ್ದಂತೆ ಕಂಡ ಶ್ವೇದಗಾನ್ ಮಂದಿರದ ಗೋಪುರ, ಮಾಂಡಲೆಯ ರತ್ನಪ್ರಾಸಾದ, ಸೊಗಸಾದ ಬಟ್ಟೆಗಳನ್ನುಟ್ಟು ನಗುವನ್ನು ಬೀರುತ್ತ ನಡೆಯುವ ಬರ್ಮೀಯ ಸ್ತ್ರೀಪುರುಷರ ಚಿತ್ರಗಳು!

ಪುನಃ ಕೆಲಸಕ್ಕೆ ಮೊದಲು. ಲೆಕ್ಕಾಚಾರದ ಬಾಬುಗಳು; ಭ್ರಾಂತಿ ಹಿಡಿಸಿ ತೊಂದರೆ ಕೊಡುವ ಅರಣ್ಯದಂತೆಯೆ. ಶಿಸ್ತು ತಪ್ಪಿದ್ದಕ್ಕಾಗಿ ನಡೆದ ದಂಡನೆಯ ವರದಿಗಳು. ನಿಷ್ಠುರವೆನ್ನಬಹುದಾದರೂ ದಂಡನೆ ಅತ್ಯವಶ್ಯ. ಜನಸಾಮಾನ್ಯರ ಆಪ್ತತೆಗಾಗಿ ಗ್ರಾಮಾಂತರಗಳಲ್ಲೆಷ್ಟು ಮಾತ್ರ ಪ್ರಯತ್ನವಾಗಿದೆ? ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಮುಸ್ಲಿಂ ಜನರ ವಿಚಾರವೇನು? ನಾವು ಹೊಸದಾಗಿಟ್ಟುಕೊಂಡ ಕಾರ್ಯಕಲಾಪಗಳಿಗಾಗಿ ಅಭಿನಂದನೆ, ಖಂಡನೆ; ಶಾಸನ ಸಭೆಗಳಲ್ಲಿ ಪ್ರವೇಶಿಸಿರುವ ಸಭಿಕರು ತಮ್ಮ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಕೆಲಸವನ್ನೆಷ್ಟು ಮಾತ್ರ ಕಟ್ಟಿಕೊಂಡಿದ್ದಾರೆ?

ಎಷ್ಟು ಸೆಕೆ! ಬರೆಯುತ್ತಿರುವ ಕಾಗದ ಕಯ್ಯಿಗಂಟಿಕೊಂಡೇ ಬಿಡುವುದು! ಮಲಯದ ಸಮುದ್ರತೀರದಲ್ಲಿ ಅಲೆಗಳು ಭೂಮಿಯನ್ನು ತಟ್ಟುತ್ತ ತಾಳೆಮರಗಳು ತಲೆಗಳನ್ನು ಆಡಿಸುತ್ತ ಇದ್ದುದು ಎಷ್ಟು ಮನೋಹರ!

ಸಹೋದ್ಯೋಗಿಗಳೊಂದಿಗೆ ಉಪಸಭೆ ನಡೆಯಬೇಕು. ನೀರು ತಂತಿಗಳು! ಅನ್ಯದೇಶ ವಿಚಾರಗಳು. ಜಾಂಜಿಬಾರ್! ದೂರದೇಶದಲ್ಲಿಯ ಭಾರತೀಯರ ವಿಚಾರಗಳು. ಕಾಣಲು ಜನ ಬಂದರು; ಪುನಃ ಬೇರೆ ಜನ ಬಂದರು—ಹು! ನಾಶವಾಯಿತು! ಇಷ್ಟೊಂದು ಕೆಲಸವಿರುವಾಗ ಇಷ್ಟೊಂದು ಜನರೇಕೆ ವಕ್ರಿಸಬೇಕು! ಆದರೆ ಬಂದವರು ಪೂರ್ವ ಸಂಗಡಿಗರು, ಮಾತನಾಡಲು ತುರುತಾದ ವಿಷಯವಿಲ್ಲದಿದ್ದರೂ ಅಲಕ್ಷ್ಯಮಾಡಲಾಗದು. ಅಪರಿಚಿತರು! ಎಂತಹ ತುರುತು ವಿಷಯಕ್ಕಾಗಿ ಬಂದವರೋ ಎಂತೋ ಹೇಗೆ ಗಮನಿಸದಿರುವುದು? ರೈತರು—ಒಂದು ಒಳ್ಳೆ ಮಾತನ್ನಾಡಿದರೂ ಹೇಳದೆ ಅವರನ್ನು ಹೊರಡೆನ್ನಲಾದೀತೆ?

ಸರಹದ್ದಿನ ಪ್ರಾಂತದ ಸ್ಥಿತಿ. ಬಾಂಬು ಬೀರಾಟ, ಜನರನ್ನೆತ್ತಿಕೊಂಡು ಹೋಗಾಟ. ಮಧ್ಯೆ ಕೋಮುವಾರು ವೈಮನಸ್ಯ. ಮಕ್ಕಳ ಹಾಗೆ ಕಲಹಗಳನ್ನೇಕೆ ವಯಸ್ಕರೂ ಪ್ರಾಜ್ಞರೂ ಆಡುವುದು? ಇದೆಲ್ಲ ಏನು ಹುಡುಗಾಟ?

ಪಂಜಾಬಿನಲ್ಲಿ ಕಾಂಗ್ರೆಸ್ ಕೆಲಸ ಕುರಿತು ಒಂದು ಟಿಪ್ಪಣಿ ಬರೆಯಬೇಕು; ಮುಂಬಯಿಯಿಂದ ಬಂದ ಒಂದು ದೂರನ್ನು ಕುರಿತು ಬರೆಯಬೇಕು. ಹೊತ್ತು ಹಿಡಿಯುವುದು. ಮಧ್ಯೇ ತಮ್ಮ ಜಿಲ್ಲೆಗಳಿಗೆ ಬರಬೇಕೆಂದೋ ತಾವು ನಡೆಸಲಿರುವ ಸಭೆಗೆ ಬರಬೇಕೆಂದೋ ಆಹ್ವಾನ ತಂದವರೊಂದಿಗೆ ಮಾತುಕಥೆಗಳು.

ಕಾಂಗ್ರೆಸ್ಸಿನವರು ಮಂತ್ರಿಗಳಾಗಲೊಪ್ಪುವರೇ? ನಿಶ್ಚಯಿಸಲು ವರ್ಕಿಂಗ್ ಕಮಿಟಿ ಯಾವಾಗ ಸೇರುವುದು? ಇದೇಯೆ ಪ್ರಶ್ನೆ! ನನಗಿಂತ ಹೆಚ್ಚು ತಿಳಿದವರೋ ಜ್ಯೋತಿಷ್ಯ ಕಂಡವರೋ ಇನ್ನು ಕೆಲವು ದಿನಗಳಲ್ಲಿಯೆ ಸೇರುವುದೆಂದು ಹೇಳುತ್ತಿರುವರಂತೆ. ಆ ವಿಚಾರವನ್ನೇ ಮುಖ್ಯವಾಗಿ ನಾವು ಯೋಚಿಸುತ್ತಿರುವಂತೆ ಈ ಜನರ ಕಲ್ಪನೆ. ವಾಸ್ತವವಾಗಿ ನಾವು ಅದನ್ನೆಷ್ಟು ಅಲ್ಪ ವಿಚಾರವೆಂದು ಭಾವಿಸಿದ್ದೇವೆಂಬುದನ್ನು ತಿಳಿದರೆ ಈ ಜನರೆಲ್ಲ ಆಶ್ಚರ್ಯಪಟ್ಟಾರೇನೋ! ಅಂತಹವರು ನನ್ನ ಮನಸ್ಸಿನೊಳಗಿನದನ್ನು ತಿಳಿದರೆ ಇನ್ನೂ ಆಶ್ಚರ್ಯದಲ್ಲಿ ಸಿಕ್ಕಿಕೊಂಡಾರೇನೋ!

ಏಕೆಂದರೆ ನನ್ನ ಮನಸ್ಸು ಎದುರಿಗೆ ಮಾತನಾಡುತ್ತಿರುವವರ ಮುಖಗಳನ್ನೂ ಪೇರಿಸಿರುವ ಕಡತಗಳನ್ನೂ ದಾಟಿ ಆರು ವಾರಗಳ ಕಾಲ ನಾನೋಡಾಡಿದ್ದ ಸ್ಥಳಗಳ ನೆನಪಿನಲ್ಲಿ ಮುಳುಗಿದೆ. ಮಾಂಡಲೆಯ ರತ್ನಪ್ರಾಸಾದ ಹಿಂದಿನ ಕಾಲದಲ್ಲಿ ಹೇಗಿತ್ತು! ರಂಗೂನ್ ಮಂದಿರದ ಗೋಪುರ ಬಂದು ಕಂಡವರೆಲ್ಲರನ್ನೂ ಹೇಗೆ ಮೋಹಗೊಳಿಸುತ್ತದೆ! ಬರ್ಮ ಜನರ ಆತ್ಮವೇ ರೂಪವನ್ನು ತಾಳಿ ಆಕಾಶಕ್ಕೇರಿ ಬೆಳಗ್ಗಿನ ಬೆಳಕಿನಲ್ಲಿ ಬೆಳಗಿ ಸಂಜೆಯಲ್ಲಿ ಕಂಗೊಳಿಸುತ್ತಿರುವುದಲ್ಲವೇ?"

## 2. ಸೋದರಿಯರ ಸಹಮೃತ್ಯು

ಪರಿಶೀಲನಬುದ್ಧಿಯುಳ್ಳ ವಿದೇಶೀ ವಿದ್ವಾಂಸರೊಬ್ಬರು ಮುಂಬಯಿಯಲ್ಲಿದ್ದಾಗ "ಗಾಂಧೀಜಿಯ ತಾಯಿಯವರ ಚರಿತ್ರೆ ಪುಸ್ತಕ ಬೇಕು ನನಗೆ" ಎಂದು ಬಯಸಿ "ಅಂತಹ ಪುಸ್ತಕವಿಲ್ಲ"ವೆಂಬ ಉತ್ತರ ಬರಲು "ಇದೇನಿದು? ಆಕೆಯ ಚರಿತ್ರೆಯನ್ನೇ ಬರೆದಿಟ್ಟುಕೊಳ್ಳಲಿಲ್ಲವೇ ನೀವು? ಇದೇನೋ ಅತಿ ವಿಸ್ಮಯವಾಗಿದೆ" ಎಂದರಂತೆ. ಗಾಂಧೀಜಿ

ಯನ್ನು ಹೆತ್ತು ಬೆಳೆಸಿದ ಮಾತೆಗೆ ಮೊದಲು ನಮಸ್ಕಾರ ಸಲ್ಲಬೇಡವೇ? ಅಂತೆಯೆ ಜವಾಹರಲಾಲರನ್ನು ಮೆಚ್ಚುವವರು ಸ್ವರೂಪರಾಣಿಯನ್ನು ಮೊದಲು ಸ್ಮರಿಸಿ ನಮಿಸಬೇಕು.

ಒಡಹುಟ್ಟಿದ ಮೂವರು ಸೋದರಿಯರಲ್ಲಿ ಸ್ವರೂಪರಾಣಿ ಇತರರಿಗಿಂತ ಚಿಕ್ಕವಳು. ರೂಪಕ್ಕೆ ಹೆಸರಾದ ಕಾಶ್ಮೀರಿಗಳಲ್ಲಿಯೂ ಅತಿ ರೂಪವತಿಯಾಗಿ ಚಿತ್ರದಲ್ಲಿ ಕಂಡಂತೆ ಕಾಣುತ್ತಿದ್ದಳು. ಮೋತಿಲಾಲರನ್ನು ಮದುವೆಯಾದ ಮೇಲೆ ಅತ್ತೆಮನೆಯಲ್ಲಿಯೆ ಇರಬೇಕಾಯಿತು. ಮೋತಿಲಾಲರ ತಾಯಿಗೆ ಮೋತಿಲಾಲರಲ್ಲಿ ಅತಿಶಯ ಮಮತೆ; ಮೋತಿಲಾಲರ ಹೆಂಡತಿಯಲ್ಲಿ ಅಭಿಮಾನವಿದ್ದಾಗ್ಗೂ ಅತ್ತೆಯಾದಾಕೆ ಅತ್ತೆಯೇ. ಆಕೆಗೆ ಹೆದರಿಕೊಂಡು ಮನೆಯವರೆಲ್ಲರೂ ಇರಬೇಕಾಗಿದ್ದಾಗ ಸೊಸೆಯೂ ಅಷ್ಟೇ. ಅಜ್ಜಿಯನ್ನು ಸ್ಮರಿಸಿಕೊಂಡು ಬರೆಯುತ್ತ ಜವಾಹರಲಾಲರೇ "ಆಕೆ ತೀರಿಕೊಂಡು ಐವತ್ತು ವರ್ಷ ಕಳೆದಾಗ್ಗೂ ಕಾಶ್ಮೀರೀ ಗುಂಪಿನವರಿಗೆಲ್ಲ ಆಕೆಯ ಕೋಪವೆಷ್ಟೆಂದು ನೆನಪಿದೆ. ತನ್ನಿಷ್ಟಕ್ಕೆ ಅಡ್ಡಿಯಾದವರನ್ನು ಆಕೆ ಸುಮ್ಮನೆ ಬಿಡುತ್ತಿರಲಿಲ್ಲ" ಎನ್ನುವರು. ರೂಪಸೌಶೀಲ್ಯಗಳಿಂದ ವರ್ತಿಸುತ್ತಿದ್ದಾಗ್ಗೂ ಸೊಸೆಯಾದಾಕೆ ಅತ್ತೆಯವರಲ್ಲಿ ನಯಭಯಗಳಿಂದಿದ್ದು ಸ್ವಾತಂತ್ರ್ಯವಿಲ್ಲದೆಯೆ ಕೆಲಕಾಲ ಕಳೆಯಬೇಕಾಗಿತ್ತು.

ಮೋತಿಲಾಲರು ಯಜಮಾನರಾಗಿ ಪ್ರಯಾಗದಲ್ಲಿ ನೆಲೆಸಿದ ಬಳಿಕ ಸ್ವರೂಪರಾಣಿಯವರಿಗೆ ಸ್ವಾತಂತ್ರ್ಯ ಬಂತು. ತೌರುಮನೆಯಲ್ಲಿ ಕಡೆಯ ಮಗಳಾಗಿದ್ದು ಅತಿಶಯ ಲಾಲನೆಪಾಲನೆಗಳಿಂದ ಬೆಳೆದಿದ್ದವಳು ಗಂಡನ ಮನೆಯಲ್ಲಿಯೂ ಹಾಗೆಯೇ ಇದ್ದಳು. ದಂತದ ಭರಣಿಯಲ್ಲಿ ಅಮೂಲ್ಯಾಭರಣವನ್ನೆತ್ತಿಟ್ಟು ಕಾಪಾಡಿದ ಹಾಗೆ ಮೋತಿಲಾಲರಾಕೆಯನ್ನು ಕಾಪಾಡುತ್ತಿದ್ದರು. ಸ್ವರೂಪರಾಣಿಯ ಆರೋಗ್ಯ ಸೂಕ್ಷ್ಮರೀತಿಯದು; ಮನಸ್ಸೂ ಸೂಕ್ಷ್ಮರೀತಿಯದು. ಪರುಷವಾಕ್ಯವೆಂಬುದು ಆಕೆಗೆ ಸಾಧ್ಯವೇ ಅಲ್ಲ. ಇತರರ ಇಷ್ಟವನ್ನೇ ಅನುಸರಿಸಿಕೊಂಡಿದ್ದುದರಿಂದ ಇತರರು ಆಕೆಯ ಸುಖಸಂಪದಗಳನ್ನು ಮುಂದಾಗಿಯೇ ಯೋಚಿಸಿ ನಡೆಸಿಕೊಡುತ್ತಿದ್ದರು. ಸಕಲ ಸೌಭಾಗ್ಯಗಳೂ ಆಕೆ

ಯನ್ನು ಆಶ್ರಯಿಸಿದವು; ದೃಢವಾದ ಆರೋಗ್ಯಮಾತ್ರವಿಲ್ಲ. ಮೋತಿಲಾಲರ ಮನೆಯಲ್ಲಿ ಯಜಮಾನಿಯಾದವಳು ಇತರರನ್ನಾಳುವುದಕ್ಕೆ ಬದಲಾಗಿ ಇತರರು ಸ್ವಬುದ್ಧಿಯಿಂದ ಯಜಮಾನಿಯನ್ನು ಲಾಲಿಸಿ ಪಾಲಿಸುತ್ತಿದ್ದರು.

ಸ್ವರೂಪರಾಣಿಯವರ ಹಿರಿಯಕ್ಕ ಬೀಬಿ ಅಮ್ಮನೆಂಬ ಹೆಸರಿನಿಂದಲೇ ಮಕ್ಕಳಿಗೆ ಗೊತ್ತು. ಚಿಕ್ಕಂದಿನಲ್ಲಿಯೆ ಆಕೆಗೆ ವೈಧವ್ಯಪ್ರಾಪ್ತಿ. ಜಗತ್ತೆಲ್ಲವೂ ಕ್ರೂರಕಷ್ಟಗಳಿಂದ ತುಂಬಿದ ರಂಗಭೂಮಿಯಂತೆ ತಾರುಣ್ಯದಲ್ಲಿಯೆ ಕಂಡು ಬಂತು. ಸ್ವಭಾವಧೀರೆಯಾದಾಕೆ ಕಷ್ಟಗಳನ್ನು ಗೆದ್ದು ಜೀವನಯಾತ್ರೆ ನಡೆಸುವ ಮನೋಬಲವನ್ನು ಕಟ್ಟಿಕೊಂಡಳು. ಇಂಗ್ಲಿಷ್ ಮಾತೊಂದಾದರೂ ಬಾರದು. ಆದರೆ ಸಂಸ್ಕೃತದಲ್ಲಿ ಪರಿಶ್ರಮ ಪಡೆದು ರಾಮಾಯಣ ಭಾರತ ಪುರಾಣಗಳನ್ನು ಸಮಗ್ರವಾಗಿ ಅರಿತಿದ್ದಳು. ಸ್ವಂತ ಸಂಸಾರವೆಂಬುದಿಲ್ಲದಿದ್ದಾಕೆ ತನ್ನ ಬಂಧುವರ್ಗದಲ್ಲಿ ಯಾರಿಗೆ ಸಹಾಯಬೇಕಾಗಿದ್ದರೆ ಅವರ ಬಳಿಗೆ ಹೊರಟು ಎಲ್ಲರಿಗೂ ಉಪಕಾರವನ್ನು ಬೀರುತ್ತಿದ್ದಳು. ವೈಧವ್ಯ ನುಂಗಿದ ಬಳಿಕ ಆ ಧೀರೆ ಸನ್ಯಾಸವನ್ನು ಅವಲಂಬಿಸಿ ಮೋತಿಲಾಲರ ಮನೆಯಲ್ಲಿ ಆಗಾಗ್ಗೆ ಬಂದಿರುತ್ತಿದ್ದು ತಂಗಿಯ ಕೆಲಸ ಕಾರ್ಯಗಳನ್ನು ತಾನೇ ನಿರ್ವಹಿಸಿಕೊಡುತ್ತಿದ್ದಳು. ತಂಗಿಯ ಮಕ್ಕಳನ್ನೆತ್ತಿಯಾಡಿಸಿ ಅವರಿಗೆಲ್ಲರಿಗೂ ಚಿಕ್ಕಂದಿನಲ್ಲಿ ರಾಮಾಯಣ ಭಾರತ ಕಥೆಗಳನ್ನು ತಿಳಿಯ ಹೇಳಿ ಹಿಂದಿನ ಯುಗಗಳಲ್ಲಿ ಭಾರತದೇಶಮಾತೆಗೆ ಎಂತಹ ಮಹಾತ್ಮರೂ ವೀರಪುರುಷರೂ ವೀರಮಾತೆಯರೂ ಲಭಿಸಿದ್ದರೆಂಬುದನ್ನು ವಿವರಿಸಿ ಕೊಡುತ್ತಿದ್ದಳು.

ಜವಾಹರಲಾಲರು ಹುಟ್ಟಿದ ತರುವಾಯ ಸ್ವರೂಪರಾಣಿಯವರಾರೋಗ್ಯವಿನ್ನೂ ಸೂಕ್ಷ್ಮವಾಯಿತು. ಅತಿ ವಿದಗ್ಧರಾದ ವೈದ್ಯನಿಪುಣರ ಚಿಕಿತ್ಸೆಯನ್ನೊದಗಿಸಲು ಮೋತಿಲಾಲರು ಆಕೆಯನ್ನು ಯೂರೋಪಿಗೆ ಕರೆದುಕೊಂಡು ಹೊರಟರು. ಕೆಟ್ಟಕಾಯಿಲೆಯಿಲ್ಲವಾದರೂ ಆಕೆಗೆ ದಾರ್ಢ್ಯವೇ ಇಲ್ಲವಾಯಿತು. ತರುವಾಯ ಹುಟ್ಟಿದವರು ಇಬ್ಬರು ಹೆಣ್ಣುಮಕ್ಕಳು. ಹೆತ್ತ ಮಕ್ಕಳಲ್ಲೆಲ್ಲ ತಾಯಿಗೆ ಜವಾಹರರಲ್ಲಿ ಪ್ರಾಣ.

ಆ ಮಗನೇನು ಚೇಷ್ಟೆಮಾಡಿದರೂ ಎಷ್ಟು ದುಷ್ಟನಾಗಿ ಇತರರಿಗೆ ಕಂಡಾಗ್ಗೂ ಸ್ವರೂಪರಾಣಿಗೆ ಮಾತ್ರ ಆತನ ಮೇಲೆ ಕೋಪವಾಗಲಿ ಅಸಮಾಧಾನವಾಗಲಿ ಎಂದಿಗೂ ಇಲ್ಲ. ಜವಾಹರರಲ್ಲಿದ್ದಷ್ಟು ಪ್ರೇಮ ತಮ್ಮಲ್ಲಿಲ್ಲವಾಯಿತೆಂಬ ಭಾವನೆ ತಂಗಿಯರ ಮನಸ್ಸಿನಲ್ಲಿ ತೋರಿದಾಗ್ಗೂ ದುರ್ಬಲೆಯಾಗಿಯೂ ಅಸಹಾಯಳಾಗಿಯೂ ಕಂಡ ತಾಯಿಯಲ್ಲಿ ಅಸಮಾಧಾನವನ್ನು ಕಾಣಿಸಲಿಲ್ಲ. ಹೆಣ್ಣು ಮಕ್ಕಳಿಗೂ ಮೋತಿಲಾಲರು ಇಂಗ್ಲಿಷ್ ಜಾತಿಯ ಗವರ್ನೆಸ್ಸನ್ನು ಗೊತ್ತುಮಾಡಿ ಇಂಗ್ಲಿಷ್ ರೀತಿಯ ಶಿಕ್ಷಣವನ್ನೇ ಕೊಡಿಸಿದರು. ಹಾಗೆ ಬೆಳೆದ ಮಗಳ್ದಿಯರಿಬ್ಬರೂ ವೇಷ ಭೂಷಾಲಂಕಾರಗಳಲ್ಲಿ ಪ್ರಾಚೀನ ರೀತಿಯನ್ನು ತ್ಯಾಗಮಾಡಿದ್ದರು. ಸ್ವರೂಪರಾಣಿಗೆ ಇದರಿಂದ ಮನಸ್ಸಿನಲ್ಲಿ ಅಸಮಾಧಾನವಾದಾಗ್ಗೂ ಮಕ್ಕಳನ್ನು ಗದರಿಸುವ ಚರ್ಯೆಯೇ ಇಲ್ಲ. ಪ್ರಾಚೀನ ಸಂಪ್ರದಾಯ ಭಕ್ತಿ ಸ್ವರೂಪರಾಣಿಗೂ ಬೀಬಿ ಅಮ್ಮನಿಗೂ ಇತ್ತು; ಆದರೆ ಪಂಡಿತೆಯಾದ ಬೀಬಿ ಅಮ್ಮನ ಮನಸ್ಸು ವಿಶಾಲಗೊಂಡಿತ್ತು. ಆಕ್ಷೇಪಮಾಡದೆ ಅಸಮಾಧಾನಮಾತ್ರವನ್ನು ಸ್ವರೂಪರಾಣಿ ಕಾಣಿಸಿದರೆ ಕಾಣಿಸುತ್ತಿದ್ದರು; ಆಕ್ಷೇಪಮಾಡೆಂದು ತೊಂದರೆ ಮಾಡಿದರೂ ಬೀಬಿ ಅಮ್ಮ ಆಕ್ಷೇಪಿಸುವುದೂ ಇಲ್ಲ, ಅಸಮಾಧಾನಪಡುವುದೂ ಇಲ್ಲ.

ಆನಂದಭವನದಲ್ಲಿ ರಾಣಿಯಂತಿರುವ ಬದುಕು. ಬೇಕಾದರೆ ಜಗತ್ತನ್ನೇ ಎತ್ತಿ ಬಿಸಾಡುವಷ್ಟು ಬಲಿಷ್ಠನಾಗಿ ಕಂಡ ಯಜಮಾನ; ಅದ್ವಿತೀಯ ಧನಸಂಪಾದನೆಯೊಂದಿಗೆ ವಿಖ್ಯಾತಿಯ ಸಂಪಾದನೆ. ಸ್ವರೂಪರಾಣಿಗೇನುಬೇಕು? ಸೀರೆ ಕುಪ್ಪಸಗಳೋ ಒಡವೆಗಳೋ! ಬಯಸಿದ ಕ್ಷಣದಲ್ಲಿಯೆ ಬಳಿಗೆ ಬರುವಂತಿದ್ದರೆ ಅವುಗಳಿಗಾಗಿ ಬಯಕೆಯೇ ಬರುವುದಿಲ್ಲ. ಮುದ್ದು ಮಗ ಇಂಗ್ಲಂಡಿಗೆ ಹೋಗಿ ಬಹುಕಾಲ ದೂರದೇಶದಲ್ಲಿದ್ದ ಚಿಂತೆಯೂ ಕಳೆಯಿತು. ಆ ಮಗನ ಮದುವೆ ಅತಿ ವೈಭವದಿಂದ ನಡೆಯಿತು; ಆ ಮಗನಿಗೆ ತಕ್ಕ ಹೆಂಡತಿಯಾದ ಕಮಲಾದೇವಿ ತನಗೆ ತಕ್ಕ ಸೊಸೆಯೂ ಆದಳು. ಸುಖಸಂಪದಗಳ ತವರ್ಮನೆಯಲ್ಲಿ ಎಲ್ಲರ ಪ್ರೀತಿಗೌರವಗಳಿಗೂ ನೆಲೆಯಾಗಿದ್ದಾಕೆಗೆ ಹೊಸರೀತಿಯ ಹಿಂಸೆ ತೋರಿಕೊಂಡಂತಾಯಿತು. ತಂದೆಗೂ ಮಗನಿಗೂ ಅಭಿಪ್ರಾಯ ಭೇದ!

ಆ ಭೇದವೇನಿದ್ದಾಗ್ಗೂ ಇಬ್ಬರಲ್ಲಿ ಯಾರೊಬ್ಬರೂ ಸ್ವರೂಪರಾಣಿಯ ಮಾಧ್ಯಸ್ಥಕ್ಕೆ ಬರಲಿಲ್ಲ. ಆದರೂ ತಾಯಿಗೆ ಚಿಂತೆ; ಹಿಡಿದ ಚಿಂತೆಯನ್ನು ಸೊಸೆ ದೂರಮಾಡಿಡುವಳು. ಹೀಗಿರಲು ದರಿದ್ರನಾರಾಯಣ ದೇವರು ಅವತರಿಸಿ ಬಂದಂತೆ ಗಾಂಧೀಜಿ ಆನಂದಭವನಕ್ಕೆ ಬಂದರು. ಎಷ್ಟು ಘೋರರೂಪಿನವನೋ ಎಷ್ಟು ಉಗ್ರತಪಸ್ವಿಯೋ ಎಂದು ಭಾವಿಸ ಬಹುದಾಗಿತ್ತು. ಆದರೆ ಪ್ರತ್ಯಕ್ಷನಾದಾಗ ದೊಡ್ಡ ಹಸುಳೆಯನ್ನು ಕಂಡ ಹಾಗಾಯಿತು. ಗಂಭೀರವಾದ ಮಾತುಗಳನ್ನು ಮೃದುಮಧುರವಾಗಿ ನುಡಿಯುತ್ತ ಪ್ರಾತಃಕಾಲದ ಪಕ್ಷಿಕುಲದ ಕಲರವದಂತಹ ಹಾಸ್ಯ ಧ್ವನಿಯನ್ನು ಚಲ್ಲುತ್ತಲಿದ್ದ ಗಾಂಧೀಜಿಯನ್ನು ಕಂಡ ಮೇಲೆ ಸ್ವರೂಪ ರಾಣಿಗೆ ತನ್ನಿಷ್ಟದೇವತೆ ತನ್ನನ್ನೇ ಹುಡುಕಿಕೊಂಡು ಬಂದಂತೆ ಆಯಿತು. ತನ್ನ ಅಂತರಂಗದ ಇಂಗಿತವನ್ನಾತನೆಷ್ಟು ಬೇಗನೆ ತಿಳಿಯುವವನು! ತನಗೆ ಗೋಚರವಾಗದ ಮೊದಲೇ ಆತನಿಗೆ ಸ್ಪಷ್ಟವಾಗುತ್ತಿತ್ತಲ್ಲವೆ! ಇಂತಹ ದೇವತಾಸ್ವರೂಪನನ್ನು ತನ್ನ ಮುದ್ದುಮಗನು ಪ್ರೇಮಗುರುವಾಗಿ ಆರಿಸಿಕೊಂಡುದಕ್ಕಾಗಿ ಸ್ವರೂಪರಾಣಿಗೆ ಮಗನನ್ನು ಕಂಡಾಗಲೆಲ್ಲ ಹೆಮ್ಮೆಯುಕ್ಕಿ ಬರುವುದು; ಆ ಗುರುವನ್ನು ಕಂಡಾಗಲೆಲ್ಲ ಆತ ವಹಿಸಿದ ಕೆಲಸದಲ್ಲಿ ಸೇರಿಕೊಳ್ಳಲು ತಾನೆಷ್ಟು ದುರ್ಬಲೆಯೆನ್ನಿಸುವುದು.

ಗಾಂಧೀಯುಗವಾರಂಭವಾಯಿತು. ಆನಂದಭವನದ ರೀತಿಯೇ ಬದಲಾಯಿತು. ಆದರೆ ದಿವ್ಯವಾದ ಆನಂದಕ್ಕೆ ನೆಲೆಯಾಯಿತು. ಹೊರುವುದಕ್ಕೂ ಆಗಲಾರದಂತಹ ಒರಟು ಖಾದಿಯ ಸೀರೆಗಳನ್ನುಡುವಾಗಲೂ ಆನಂದಭವನದಲ್ಲಿ ಪರದೇಶೀ ವಸ್ತ್ರದಹನವಾದಾಗಲೂ ಸ್ವರೂಪರಾಣಿಗೆ ಅವೆಲ್ಲ ಮೋಕ್ಷಸಾಧನೆಯ ಮೆಟ್ಟಲುಗಳೆಂಬ ವಿಶ್ವಾಸವಿತ್ತು. ಇನ್ನೂ ಸ್ವಲ್ಪಕಾಲ ಕಳೆದ ಬಳಿಕ ಮೋತಿಲಾಲರೂ ಜವಾಹರಲಾಲರೂ ಜೈಲಿಗೆ ಹೊರಟರು. ಅದನ್ನು ಸಹಿಸಿಕೊಳ್ಳುವುದು ಕಷ್ಟವಾಯಿತು. ಆದರೇನು? ದುರ್ಬಲೆಯಾಗಿ ಕಂಡ ಮಾತ್ರದಿಂದ ಆಕೆಯ ಧೈರ್ಯಕ್ಕೆ ಕೊರತೆಯೇ! ಜೈಲ್ ಯಾತ್ರೆಯೆಂಬುದು ಮಗನಿಗೆ ಪುನಃ ಪುನಃ ಒದಗಿತು. ಹೆಣ್ಣು ಮಕ್ಕಳೂ ಜೈಲಿಗೆ ಹೊರಟರು. ಎಲ್ಲರೂ

ಹೊರಟಾಗ್ಗೂ ತಾನು ಮಾತ್ರ ಹಿಂದುಳಿಯಬೇಕಾಗಿತ್ತು; ಆ ಅಂಶ ವನ್ನು ಸ್ಮರಿಸಿದಾಗಲೆಲ್ಲ ತಾನೆಷ್ಟು ಸ್ವಾರ್ಥಿಯೆನ್ನಿಸುತ್ತಿತ್ತು.

ಮೋತಿಲಾಲರ ಮರಣ ಸಂಭವಿಸಿದಾಗ ಸ್ವರೂಪರಾಣಿಯವರಿಗೆ ದಿಕ್ಕೇ ತೋಚದಾಯಿತು. ಮನಸ್ಸಿಗೆ ಬಲವಾಗಿ ಮಂಕು ಹಿಡಿಯಿತು; ಬುದ್ಧಿಯ ಆಟವೇ ನಿಂತಿತು. ಆದರೆ ಆಗಲೂ ಭಗವಂತನು ದಯಾ ಮಯನಾಗಿಯೆ ಕಂಡು ಬಂದನು. ಎಲ್ಲ ಭಾರವನ್ನೂ ಹೊರಲು ಧೀರ ನಾದ ಪುತ್ರನಿದ್ದುದಲ್ಲದೆ ಸಮಾಧಾನ ಹೇಳಲು ಗಾಂಧೀಜಿಯವರೇ ಎಲ್ಲ ನೆಂಟರಿಗಿಂತ ಮುಂದಾಗಿದ್ದರು.

ಉಪ್ಪಿನ ಸತ್ಯಾಗ್ರಹವೆಂಬುದರಲ್ಲಿ ಅರ್ಧವಿರಾಮವಾದ ತರು ವಾಯ ಸ್ವರೂಪರಾಣಿಯವರು ಸುಮ್ಮನಿರಲಾಗಲಿಲ್ಲ. ಪ್ರಯಾಗದಲ್ಲಿ ನಡೆದ ಮೆರವಣಿಗೆಯಲ್ಲಿ ಸೇರಿ ಬೆತ್ತದೇಟನ್ನು ಸಹಿಸಿಕೊಂಡು ಮನಸ್ಸಿ ನಲ್ಲಿ ಸಮಾಧಾನಪಟ್ಟರು; ಪುನಃ ದಸ್ತಗಿರಿಯಾದಾಗಲೂ ಹೃದಯದಲ್ಲಿ ಸಂತೋಷಗೊಂಡರು. ಆದರೆ ಮೊದಲಿನಿಂದಲೂ ದುರ್ಬಲವಾದ ದೇಹ ಪ್ರಕೃತಿ. ಉಪಾಯವಾಗಿಯೆ ಕಾಲ ಕಳೆಯುತ್ತಿರಬೇಕಾಯಿತು.

1935ನೆ ಜನವರಿಯಲ್ಲಿ ಕಮಲಾದೇವಿ ಕಲ್ಕತ್ತೆಯಲ್ಲಿ ಚಿಕಿತ್ಸೆಗಾಗಿ ಹೋಗಿದ್ದಾಗ ಸ್ವರೂಪರಾಣಿ ಮುಂಬಯಿಯಲ್ಲಿದ್ದ ಕಿರಿಯ ಮಗಳ ಮನೆಗೆ ಹೊರಟಿದ್ದರು. ಪ್ರಯಾಗದಲ್ಲಿ ಒಂಟಿಯಾಗಿರುವುದಕ್ಕಿಂತ ವರ್ಧಾ ಆಶ್ರಮಕ್ಕೆ ಬಂದಿರುವುದು ಮೇಲೆಂದು ಗಾಂಧೀಜಿ ಬರೆದಿದ್ದರು. ವರ್ಧಾದಲ್ಲಿ ಕೆಲವು ದಿನಗಳಿದ್ದು ಮುಂಬಯಿಗೆ ಬಂದಿದ್ದರು. ಬಂದ ಇಪ್ಪತ್ತು ದಿನಗಳ ಬಳಿಕ ಆಕಸ್ಮಿಕವಾಗಿ ವಾಯುರೋಗ ಹಿಡಿಯಿತು. ಅದರಿಂದ ಚೇತರಿಸಿಕೊಳ್ಳಲು ಎರಡು ತಿಂಗಳು ಕಳೆಯಬೇಕಾಯಿತು.

ಕಮಲಾದೇವಿಯ ಐಹಿಕ ಜೀವನ ಕೊನೆಗಂಡಿತೆಂಬ ಸಮಾಚಾರ ತಿಳಿದ ಮೇಲೆ ಸ್ವರೂಪರಾಣಿಯವರು ಪ್ರಾಣವನ್ನು ಮಗನಿಗಾಗಿ ಮಾತ್ರ ಉಳಿಸಿಟ್ಟುಕೊಂಡಿದ್ದರು. ಜವಾಹರಲಾಲರಾದರೋ ನಾನಾ ಬಗೆಗಳಲ್ಲಿ ತಾಯಿಗೆ ಧೈರ್ಯ ಹೇಳುತ್ತ ಆಕೆಯ ಮನಸ್ಸು ಸಮಾಧಾನ ವಾಗಿರುವಂತೆ ಸದಾ ಪ್ರಯತ್ನಶೀಲರಾಗಿರುತ್ತಿದ್ದರು. ದೊಡ್ಡ ದೊಡ್ಡ ಕೆಲಸಗಳನ್ನು ಕಟ್ಟಿಕೊಂಡು ನಡೆಸುತ್ತಿರುವ ಮಗನಿಗೆ ತಾನು ಭಾರ

ವಾಗಿರಬಾರದೆಂಬ ಇಷ್ಟ ಸ್ವರೂಪರಾಣಿಯವರ ಮನಸ್ಸಿನಲ್ಲಿ ಬಲ ಗೊಳ್ಳುತ್ತಿತ್ತು.

1938ನೆ ವರ್ಷ. ಆನಂದಭವನದಲ್ಲಿ ತಾಯಿಯ ಬಳಿ ಎಲ್ಲರೂ ಸೇರಿದ್ದರು. ಒಂದು ತಿಂಗಳ ಕಾಲ ಎಲ್ಲರೂ ಒಟ್ಟಾಗಿದ್ದ ಕಾಲ ಕಳೆಯುತ್ತ ಬಂತು. ಕೃಷ್ಣೆ ಮುಂಬಯಿಗೆ ಹಿಂತಿರುಗಬೇಕೆಂದಾಗಲೆಲ್ಲ "ನಾಳೆ ಹೊರಡುವಿಯಂತೆ. ಈಗ ಸುಮ್ಮನಿರು" ಎನ್ನುತ್ತಿದ್ದರು. ಒಂದು ಸಂಜೆ ತಾಯಿಯೆದುರಿನಲ್ಲಿ ಜವಾಹರಲಾಲರೊಡನೆ ರಣಜಿತ್ ಪಂಡಿತರಲ್ಲದೆ ವಿಜಯಲಕ್ಷ್ಮಿ ಕೃಷ್ಣೆಯರಿಬ್ಬರೂ ಇದ್ದು ಮಾತನಾಡುತ್ತಲಿದ್ದರು. ತಾಯಿಯವರು ಉಲ್ಲಾಸದಿಂದ ಮಾತನಾಡುತ್ತಿದ್ದರು. ರಾತ್ರಿಯೂಟವಾದಾಗಲೂ ತರುವಾಯವೂ ಹರ್ಷಚಿತ್ತದಿಂದ ಮಾತನಾಡುತ್ತಲೇ ಇದ್ದು ರೋಗದಿಂದ ದೂರವಾಗಿದ್ದಂತೆ ಕಾಣಿಸಿದರು. ರಾತ್ರಿ ಹೊತ್ತಾದರೂ ಕುಳಿತು ಮಾತನಾಡುತ್ತಲೇ ಇದ್ದರು. ಆ ರಾತ್ರಿ ಹನ್ನೊಂದು ಗಂಟೆಯಾದ ಮೇಲೆ ವಿಜಯಲಕ್ಷ್ಮಿಯವರು ಲಖನೌ ರೈಲಿಗೆ ಹೊರಡಬೇಕಾಗಿತ್ತು. ರೈಲಿಗೆ ವೇಳೆಯಾಯಿತೆಂದು ವಿಜಯಲಕ್ಷ್ಮಿಯವರು ತಾಯಿಯನ್ನಪ್ಪಿಕೊಂಡ ಕ್ಷಣದಲ್ಲಿ ಸ್ವರೂಪರಾಣಿಯವರು ನಿಶ್ಚೇತನರಾಗಿ ನೆಲಕ್ಕೆ ಬೀಳುವಂತೆ ಕಂಡಿತು. ಜವಾಹರರೂ ಕೃಷ್ಣೆಯೂ ಎದ್ದುಬಂದು ಹಿಡಿದುಕೊಂಡು ಎತ್ತಿಕೊಂಡು ಹೋಗಿ ಹಾಸಿಗೆಯಲ್ಲಿ ಮಲಗಿಸಿದರು. ಆ ವೇಳೆಗಾಗಲೆ ಮೂರ್ಛಾವಸ್ಥೆ. ಡಾಕ್ಟರಿಗೆ ಹೇಳಿಕಳುಹಿಸಿತ್ತು; ಬಂದು ನೋಡಿದಾತನು "ಏನುಮಾಡುವ ಹಾಗೂ ಇಲ್ಲ. ಇನ್ನು ಕೆಲವು ಗಳಿಗೆಗಳಿಗೆ ಎಲ್ಲ ಮುಗಿದುಹೋಗುವುದು" ಎಂದು ಪಕ್ಕದಲ್ಲಿ ಸುಮ್ಮನೆ ನಿಂತುಕೊಂಡನು. ಏನು ಪ್ರಯತ್ನವನ್ನೂ ಮಾಡದೆ ಸುಮ್ಮನಿದ್ದ ವೈದ್ಯನಲ್ಲಿ ಕೃಷ್ಣೆಗೆ ಕೋಪ ಬರುವಂತಿತ್ತು. ಜವಾಹರಲಾಲರು ತಂಗಿಯರಿಬ್ಬರನ್ನೂ ಸಮಾಧಾನದಿಂದಿರುವಂತೆ ಸಂಜ್ಞೆಮಾಡಿ ಹಾಸಿಗೆ ಪಕ್ಕದಲ್ಲಿಯೆ ಕುಳಿತರು. ರಾತ್ರಿಯೆಲ್ಲ ಹಾಗೆಯೆ ಕಳೆಯಿತು. ಬೆಳಗ್ಗೆ ಐದುಗಂಟೆ ವೇಳೆಗೆ ಸ್ವರೂಪರಾಣಿಯವರ ಶ್ವಾಸದ ಪ್ರಯಾಸ ನಿಂತಂತೆ ಕಂಡಿತು; ಶಾಂತರಾಗಿದ್ದ ಹಾಗಿತ್ತು. ಆಗಲೆ ಜವಾಹರರು ತಂಗಿಯ ಕಡೆ ತಿರುಗಿ ಮೆಲ್ಲನೆ

“ ಅಮ್ಮನೂ ಹೊರಟುಹೋದಳು ” ಎಂದು ಕಣ್ಣೀರನ್ನು ಕಾಣಿಸಿದರು. ವಿಜಲಕ್ಷ್ಮಿಯವರು ದೊಡ್ಡಮ್ಮನಿಗೆ ಹೇಳಲು ಹೊರಟರು. ಕರ್ತವ್ಯವನ್ನು ನಡೆಸಲು ಜವಾಹರರು ಸಿದ್ಧರಾದರು.

ದೊಡ್ಡಮ್ಮನಿಗೆ ಸಮಾಚಾರ ಹೇಳಿದ್ದಾಯಿತು. ತನಗಿಂತಲೂ ಚಿಕ್ಕವಳಾದ ತಂಗಿ ಸತ್ತುಹೋಗಿ ತಾನು ಬದುಕಿರುವುದೇ ? ಏನೋ ನಂಬಲಾಗಲಿಲ್ಲ. ಆದರೂ ಚಿಕ್ಕಂದಿನಿಂದ ಕಷ್ಟಗಳನ್ನೆದುರಿಸಿ ಗೆದ್ದಿದ್ದ ಚೈತನ್ಯ ಆಕೆಯದು. ಆ ಹೊತ್ತು ನಡೆಯಬೇಕಾದ ಕ್ರಿಯೆಗಳಿಗೆ ಅಣಿಮಾಡಿಡುವ ಭಾರ ಆಕೆಯದೇ ಆಯಿತು. ಸ್ವರೂಪರಾಣಿಮಾತಾ ಇಹಲೋಕ ಯಾತ್ರೆಯನ್ನು ಮುಗಿಸಿದರೆಂದು ಹೊರಗೆ ತಿಳಿದಕೂಡಲೆ ಊರಿನ ಜನರೆಲ್ಲ ಬಂದರು. ಶವವನ್ನೊಯ್ಯುವ ವೇಳೆಗೆ ಮಧ್ಯಾಹ್ನವಾಯಿತು. ಒಂದು ತೊಟ್ಟು ಕಣ್ಣೀರನ್ನಾದರೂ ಬಿಡದೆ ಸ್ಥಿರಮನಸ್ಸಿನಿಂದ ಕೆಲಸ ಕಾರ್ಯಗಳನ್ನು ನಡೆಸಿ ದೊಡ್ಡಮ್ಮ ಮನೆ ಮುಂದಿನ ಅಂಗಳದಲ್ಲಿಯೇ ನಿಂತು ತಂಗಿಯ ದೇಹವನ್ನು ಹೊತ್ತುಹೋದುದನ್ನು ಕಾಣುತ್ತಿದ್ದಳು. ಎಲ್ಲರೂ ಹೊರಟಬಳಿಕ ಕೃಷ್ಣೆ ಬಂದು ತಬ್ಬಿಕೊಂಡು “ ಬೀಬಿಯಮ್ಮ, ಸ್ವಲ್ಪಹೊತ್ತಾದರೂ ಮಲಗಿಕೋ ಹೋಗಮ್ಮಾ” ಎಂದಳು. ಅದಕ್ಕೆ ಪ್ರತಿಯಾಗಿ ಕೃಷ್ಣೆಯನ್ನು ಸ್ಥಿರದೃಷ್ಟಿಯಿಂದಲೇ ನೋಡುತ್ತಿದ್ದು “ನೀನು ಹೋಗಿ ಸ್ನಾನಮಾಡಿ ಬಾ. ಏನಾದರೂ ಮಾಡಿಸಿಟ್ಟಿರುತ್ತೇನೆ ” ಎಂದುಬಿಟ್ಟಳು. ಆಕೆಯ ಮಾತಿಗಡ್ಡವಾಗ ಬಾರದೆಂದು ಕೃಷ್ಣೆ ಸ್ನಾನಮಾಡಿ ಬಂದು ಉಪಾಹಾರವನ್ನು ಸೇವಿಸಲು ಯತ್ನಿಸಿದಳು; ಆಹಾರ ಸೇರದಾಯಿತು. ದೊಡ್ಡಮ್ಮ ಹೇಗಿರುವಳೋ ಎಂಬ ಚಿಂತೆ ಮನಸ್ಸಿಗೆ.

ತಕ್ಷಣವೇ ಆಕೆಯನ್ನು ಕಾಣಲು ಹೊರಟರೆ ತನ್ನ ತಂಗಿ ಮಲಗಿದ್ದ ಸ್ಥಳದಲ್ಲಿಯೇ ಆಕೆ ಮಲಗಿದ್ದುದು ಕಾಣಿಸಿತು. ಕೃಷ್ಣೆ ಸಮೀಪಕ್ಕೆ ಹೋಗಿ “ಬೀಬಿಯಮ್ಮ ! ಸ್ವಲ್ಪ ಟೀಯನ್ನಾದರೂ ತೆಗೆದುಕೋ, ಏಳು” ಎಂದರೆ ಆದಕ್ಕೆ ಪ್ರತ್ಯುತ್ತರವಿಲ್ಲ. “ ಬೀಬಿ ಅಮ್ಮ, ನಮಗೆಲ್ಲರಿಗೂ ನೀನೇ ತಾಯಿಯಾಗಿರುವಿ. ಇನ್ನುಮುಂದೆ ನೀವೇ ಎಲ್ಲರ ತಾಯಿ. ನಮ್ಮನ್ನು ಬಿಡದಿರಮ್ಮ” ಎಂದು ಕೃಷ್ಣೆ ಅಳುತ್ತ .ಹೇಳಿದಳು. ಆಗ

ದೊಡ್ಡಮ್ಮ ಕೃಷ್ಣೆಯನ್ನು ತಬ್ಬಿಕೊಂಡು "ಬೇಟೀ, ನೀನು ಯಾವಾಗಲೂ ನನ್ನ ಮಗಳಂತೆಯೇ ಇದ್ದೀಯೆ. ನಿಮ್ಮಮ್ಮ ಹೊರಟುಹೋದಳು. ಇನ್ನು ಆಕೆ ಬರುವುದಿಲ್ಲ. ಆಕೆಗಾಗಿಯೆ ನನ್ನ ಜೀವವನ್ನು ಹೊತ್ತಿದ್ದೆ. ಇನ್ನು ನಾನೇತಕ್ಕೆ ಬದುಕಿರಬೇಕು? ನನ್ನ ಕೆಲಸವಾಯಿತು, ಬೇಟೀ! ನಾನೂ ಹೊರಡಬೇಕು" ಎಂದಳು. ಕೃಷ್ಣೆಗೆ ಏನು ಮಾತನಾಡುವುದಕ್ಕೂ ತೋರಲಿಲ್ಲ. ಸುಮ್ಮನೆ ಪಕ್ಕದಲ್ಲಿ ಕುಳಿತುಕೊಂಡು ಕಣ್ಣೀರನ್ನು ಅಡಗಿಸಿಕೊಂಡು ಆಕೆಯ ತಲೆಯನ್ನು ಸವರುತ್ತಲಿದ್ದಳು. ಸ್ವಲ್ಪ ಹೊತ್ತಾದ ಮೇಲೆ ನಿದ್ದೆ ಬಂದಹಾಗಿತ್ತು. ಶಬ್ದಮಾಡದೆ ಕೃಷ್ಣೆ ಅಲ್ಲಿಂದ ಎದ್ದು ಹೊರಗೆ ಬಂದು ಪುನಃ ಆಗಾಗ್ಗೆ ಹತ್ತಿರ ಹೋಗಿ ನೋಡುತ್ತಿದ್ದಳು. ಯಾವಾಗ ನೋಡಿದರೂ ಗಾಢನಿದ್ರೆಯಲ್ಲಿದ್ದಂತೆ ಕಾಣುತ್ತಿತ್ತು. ಕಡೆಗೆ ಗಾಬರಿಯಾಯಿತು. ಕೈಹಿಡಿದೆಬ್ಬಿಸುವ ಯತ್ನ ಮಾಡಿದರೆ ಎಲ್ಲ ಸ್ತಬ್ಧವಾಗಿತ್ತು. ತಕ್ಷಣವೇ ಕೃಷ್ಣೆ ತನ್ನಕ್ಕನಿಗೆ ತಿಳಿಸಿ ಕರೆದುಕೊಂಡು ಬಂದಳು. ಇಬ್ಬರೂ ನೋಡಿದರು. ಅಣ್ಣನಿನ್ನೂ ಮನೆಗೆ ಬಂದಿರಲಿಲ್ಲ; ತಾವೇ ಡಾಕ್ಟರಿಗೆ ಹೇಳಿಕಳುಹಿಸಿ ನಿಮಿಷಗಳನ್ನೆಣಿಸುತ್ತ ಇದ್ದರು.

ಸಾಯಂಕಾಲ ಏಳು ಗಂಟೆ ವೇಳೆಗೆ ಡಾಕ್ಟರೂ ಜವಾಹರಲಾಲರೂ ಬಂದರು. ತಾಯಿಯ ದೇಹದೊಡನೆ ಸ್ಮಶಾನಕ್ಕೆ ಹೊರಟಿದ್ದ ಜವಾಹರರಿಗೆ ಆ ಹೊತ್ತೆಲ್ಲ ಯಾವುದೋ ದೀರ್ಘ ದುಸ್ವಪ್ನದಂತಾಗಿ ಅತಿಶಯವಾದ ಶರೀರಾಯಾಸವಾಗಿತ್ತು. ಬಂದಕೂಡಲೆ ಡಾಕ್ಟರ್ ದೊಡ್ಡಮ್ಮನನ್ನು ಪರೀಕ್ಷಿಸಿ "ಈಕೆಗೂ ಅದೇ ವಾಯುಪ್ರಹಾರವಾಗಿಹೋಗಿದೆ!" ಎಂದನು.

ಪುನಃ ಆ ರಾತ್ರಿಯಲ್ಲಿಯೂ ಎಲ್ಲರೂ ಅಲ್ಲಿಯೆ ಕುಳಿತರು. ರಾತ್ರಿ ಹೇಗೋ ಕಳೆಯಿತು. ಅರುಣೋದಯದ ವೇಳೆಗೆ ಬಂತು. ಸ್ವರೂಪರಾಣಿಯವರು ಪ್ರಾಣ ಬಿಟ್ಟ 24 ಗಂಟೆಗಳಿಗೆ ಸರಿಯಾಗಿ ಬೀಬಿಯಮ್ಮನೂ ಪ್ರಾಣವನ್ನರ್ಪಿಸಿದಳು.

ಪುನಃ ಸ್ಮಶಾನಯಾತ್ರೆ. ಬೀಬಿಯಮ್ಮ ಸನ್ಯಾಸವನ್ನು ಸ್ವೀಕರಿಸಿದ್ದಾಕೆ. ಆದುದರಿಂದ ಜನರ ಗುಂಪು ಹಿಂದಿನ ದಿನಕ್ಕಿಂತ ಹೆಚ್ಚಾ

ಗಿಯೇ ಸೇರಿತು. ಬಡಬಗ್ಗರೆಲ್ಲರೂ ಮನೆಯ ಬಳಿ ಸೇರಿ ದೇವಿಯ ಕಡೆಯ ಸಂದರ್ಶನಕ್ಕಾಗಿ ತಪಿಸಿ ಕಣ್ಣೀರು ಸುರಿಸಿದರು. ಆಯುಸ್ಸನ್ನು ಬಡಬಗ್ಗರ ಬಂಧುವಾಗಿಯೇ ದೊಡ್ಡಮ್ಮ ಕಳೆದಿದ್ದಳು. ತಪಸ್ವಿನಿಯಾಗಿ ಐಹಿಕವನ್ನು ಪಾರಾದ ಪವಿತ್ರ ಪ್ರಾಣ. ಅಂತಹವರ ತಪಸ್ಸಿನ ಮಹಿಮೆಯಿಂದಲೇ ಭಾರತದ ಸೌಭಾಗ್ಯಸಿದ್ಧಿಯಾಗತಕ್ಕುದೆಂದು ಎಲ್ಲರ ಮನಸ್ಸಿನಲ್ಲಿಯೂ ದೃಢವಾಯಿತು.

ಸಮಾಚಾರ ತಲಪಿದ ಕೂಡಲೆ ಬಾಪುಜಿಯವರಿಂದ ತಂತಿ ಬಂತು "ತಂಗಿಯನ್ನಗಲಿರಲಾಗದ ಆಕೆಗೆ ಮೃತ್ಯುವೆಂಬುದು ಸುಖಾಶ್ರಯವಿತ್ತ ಸಖನಂತಾಯಿತು." ಅದಕ್ಕೆ ಉತ್ತರ ಕೊಡುತ್ತ ಜವಾಹರಲಾಲರು "ಆನಂದಭವನದಲ್ಲಿ ಬಂಧುಗಳೂ ಇಷ್ಟಮಿತ್ರರೂ ತುಂಬಿದ್ದಾರೆ; ಆದರೂ ಸ್ಮಶಾನದಂತೆ ಇದೆ. ನಾಳೆಯಾದರೆ ಇಲ್ಲಿ ಒಂದು ಪ್ರಾಣಿಯೂ ಇರುವುದಿಲ್ಲ. ಈ ರಾತ್ರಿಯೋ ನಾಳೆ ಬೆಳಿಗ್ಗೆಯೋ ನಾವೆಲ್ಲರೂ ಹೊರಡುವುದರಲ್ಲಿದ್ದೇವೆ. ಹದಿನೈದು ದಿನಗಳವರೆಗೆ ಹಿಂತಿರುಗಿ ಬರುವ ಯೋಚನೆಯಿಲ್ಲ. ಇನ್ನು ನಾನೊಬ್ಬನೇ ಇಲ್ಲಿರುವುದು ರುಚಿಸದಾಗಿದೆ.

ನೀವು ಹೇಳಿದ್ದು ವಾಸ್ತವ. ಬೀಬಿ ಅಮ್ಮ ತನ್ನ ಜೀವನ ಕರ್ತವ್ಯವನ್ನು ಮುಕ್ತಾಯಗೊಳಿಸಿದ್ದಳು. ಅಮ್ಮನಾಗಲಿ ದೊಡ್ಡಮ್ಮನಾಗಲಿ ಒಬ್ಬರನ್ನಗಲಿ ಮತ್ತೊಬ್ಬರು ಇರತಕ್ಕವರಲ್ಲ."

## 3. ಇತ್ತೀಚೆಗೆ ಮತ್ತೆರಡು ಜೈಲು

ಲಖನೌ ಕಾಂಗ್ರೆಸ್ ಮುಗಿದ ಬಳಿಕ ರಾಷ್ಟ್ರಪತಿಯಾಗಿದ್ದ ಜವಾಹರಲಾಲರಿಗೂ ವರ್ಕಿಂಗ್ ಕಮಿಟಿಯ ಇತರ ಸದಸ್ಯರಿಗೂ ಕೆಲವು ಅಭಿಪ್ರಾಯ ಭೇದಗಳು ಕಂಡಿದ್ದವು. ಭೇದಗಳಿದ್ದಾಗ್ಗೂ ಅವುಗಳನ್ನು ಹೆಚ್ಚು ಬೆಳೆಸದೆ ಉಭಯತ್ರ ಸೌಹಾರ್ದಸಮಾಧಾನ ವಿಶ್ವಾಸಗಳನ್ನೇ ನಡೆಸಿಕೊಂಡರು. ಆದರೂ ಜವಾಹರಲಾಲರ ಮನಸ್ಸಿನಲ್ಲಿ ತಾವು ಅಧ್ಯಕ್ಷರಾಗಿರುವುದರಿಂದ ಇತರರಿಗೆ ಅವ್ಯಕ್ತವಾದ ರೀತಿಯಲ್ಲಿ ಅಡ್ಡಿಯಾಗಬಹುದೆಂಬ ಶಂಕೆ ಹುಟ್ಟಿ ಬಲಗೊಳ್ಳುತ್ತಿತ್ತು. ಅಧ್ಯಕ್ಷತೆಯನ್ನು ಬಿಟ್ಟುಕೊಡುವ ಉದ್ದೇಶ ಹುಟ್ಟಿತ್ತು. ಗಾಂಧೀಜಿಗೆ ಕಾಗದ ಬರೆಯುತ್ತ

"ಯೂರೋಪಿನಿಂದ ಹಿಂತಿರುಗಿ ಬಂದಾರಭ್ಯ ವರ್ಕಿಂಗ್ ಕಮಿಟಿಯ ಸಭೆಗಳಲ್ಲಿ ನನಗೆ ಆಯಾಸಕಾಣುತ್ತಲಿದೆ. ಪ್ರತಿಸಲವೂ ನಾನು ವೃದ್ಧನೂ ದುರ್ಬಲನೂ ಆದಂತೆ ಮನಸ್ಸಿನಲ್ಲಿ ಪರಿಣಮಿಸುತ್ತಲಿದೆ. ಇತರ ಸದಸ್ಯರಿಗೂ ಹೀಗೆಯೇ ಇರಬಹುದು. ಇದರಿಂದ ನಡೆಯ ಬೇಕಾದ ಕರ್ತವ್ಯಕ್ಕೆ ಅಡ್ಡಿಯಾಗುವುದು" ಎಂದಿದ್ದರು. ಸ್ಪೈಯ್ನ್, ಅಬಿಸಿನಿಯ, ಚೀನ ಮುಂತಾದ ದೇಶವಿದೇಶಗಳಲ್ಲಿ ನಡೆದ ಘಟನಾವಳಿಗಳೂ ಜವಾಹರಲಾಲರ ಮನಸ್ಸಿನಲ್ಲಿ ಬಲವಾದ ಯೋಚನೆಗಳಿಗೆ ಆಸ್ಪದಕೊಟ್ಟವು. ಒಂದು ಸಂಸಾರದಂತಿರುವ ಜಗತ್ತಿನಲ್ಲಿ ಪರಾಧೀನವಾದ ರಾಷ್ಟ್ರವಾವುದಿದ್ದರೂ ಸರಿಯೆ ಇತರ ರಾಷ್ಟ್ರಗಳಲ್ಲಿ ತಳಮಳ ತೋರುವುದು ಖಂಡಿತವೆಂಬ ಭಾವನೆ ಜವಾಹರಲಾಲರ ಮನದಲ್ಲಿ. ದಳಿತ ರಾಷ್ಟ್ರಗಳೆಲ್ಲವೂ ಸ್ವತಂತ್ರಗೊಳ್ಳುವವರೆಗೆ ಜಗತ್ತಿಗೆ ಶಾಂತಿ ಸಮಾಧಾನ ಲಾಭವಾಗಲಾರದೆಂಬ ಮತ. ಭಾರತ ರಾಷ್ಟ್ರದಲ್ಲಿ ಪ್ರತಿ ಪ್ರಯತ್ನವೂ ಸ್ವಾತಂತ್ರ್ಯ ಸಾಧನೆಯ ಅಂಶವಾಗಿರಬೇಕಾದುದಲ್ಲದೆ ವಿಲಂಬವಾದಲ್ಲಿ ವಿಷಪಾನ ಮಾಡಿದಂತಾಗುವುದೆಂಬ ನಂಬಿಕೆ.

ಅಂತರಂಗದಲ್ಲಿ ಅಸಮಾಧಾನವಿದ್ದಾಗ್ಗೂ ಜವಾಹರಲಾಲರು ಲಖನೌ ಬಳಿಕ ರಾಷ್ಟ್ರಪತಿಯ ಕರ್ತವ್ಯವನ್ನು ನಡೆಸಿಕೊಟ್ಟರು; ಫೈಜ್‌ಪುರದ ತರುವಾಯವೂ ನಡೆಸಿಕೊಟ್ಟರು. ಈ ಮಧ್ಯೆ ಪ್ರಾಂತಗಳಲ್ಲಿ ಆಡಳಿತವನ್ನು ಕಟ್ಟಿಕೊಂಡಿದ್ದ ಕಾಂಗ್ರೆಸ್ ಪ್ರಮುಖರು ಹೊಸ ಕರ್ತವ್ಯಗಳನ್ನು ನಡೆಸಲೆಳಸಿ ಸ್ವಲ್ಪ ಕಾಲದಲ್ಲಿಯೇ ಪಂಜರಗಳಲ್ಲಿ ಸೇರಿಕೊಂಡಂತಾದರು. ಏಣಿಯನ್ನು ಹತ್ತುವ ಪ್ರಯತ್ನವನ್ನಿಟ್ಟುಕೊಂಡವರಿಗೆ ಮೇಲಿದ್ದವರು ಸ್ಥಳ ಬಿಡಲೊಲ್ಲದಿದ್ದಾಗಲೆ ಕೆಳಗಿದ್ದವರು ಕೆಳಕ್ಕೆಳೆಯುವವರಾದರೆ ಗತಿಯೇನು! ಏಣಿ ಮುರಿಯುವವರೆಗೆ ಎಂತಹ ಗತಿಯೋ ಆ ಗತಿಯೇ ರೂಢಿಯಾಗಿ ಹೋಯಿತು. ಗಾಂಧೀಜಿಗೆ ಕಾಗದ ಬರೆಯುತ್ತ ಜವಾಹರಲಾಲರು "ಹಳೆಯ ಪರಿಸ್ಥಿತಿಗೆ ಹೊಂದಿಕೊಳ್ಳಲು ನಮ್ಮ ಮಂತ್ರಿಮಂಡಲಿಗಳವರು ಯತ್ನಿಸುತ್ತಿದಾರೆ. ಕೆಲವು ವೇಳೆ ಅನಿವಾರ್ಯವಾಗಿ ತಾವು ನಡೆಸಿದ್ದನ್ನು ನ್ಯಾಯವೆಂದೇ ಸಮರ್ಥನ ಮಾಡುತ್ತಿದ್ದಾರೆ. ಇದನ್ನು ಸಹಿಸಿಕೊಂಡರೂ ಸಹಿಸಬಹುದು. ಎಷ್ಟೋ

ತ್ಯಾಗಮಾಡಿ ಎಷ್ಟೋ ತಪಸ್ಸನ್ನು ನಡೆಸಿ ಕಾಂಗ್ರೆಸ್ಸಿಗೆ ಸಂಪಾದಿಸಿಟ್ಟ ಜನವಿಶ್ವಾಸವು ಕುಗ್ಗುವುದಾದರೆ ಸಹಿಸಲಾಗುವುದಿಲ್ಲ. ಘನವಾದ ಕರ್ತವ್ಯವನ್ನು ಸಾಧಿಸತಕ್ಕವರು ಅಹನ್ಯಹನಿ ಕಾಲಕ್ಷೇಪಕ್ಕೆ ತೊಡಗಿದಂತಾಗಿದೆ"ಯೆಂದು ಬರೆದರು.

ಜವಾಹರಲಾಲರಲ್ಲಿ ಜನರಿಗೆ ಪ್ರೀತ್ಯಾದರಗಳು ಕಡಿಮೆಯಾದುವೆಂದಲ್ಲ. ವಾಸ್ತವವಾಗಿ ದಿನೇದಿನೇ ಆ ವಿಶ್ವಾಸವು ಹೆಚ್ಚುತ್ತಿತ್ತು. ಜನರ ವಿಶ್ವಾಸವನ್ನು ಕಂಡು ಮನಸ್ಸಿನಲ್ಲಿಯೆ ವಿಸ್ಮಯಗೊಂಡು 1937ನೆ ನವೆಂಬರ್ ತಿಂಗಳಿನ ಮಾಡರ್ನ್ ರಿವ್ಯೂ ಮಾಸಪತ್ರಿಕೆಗೆ ಸೋಜಿಗವೆನಿಸುವ ಲೇಖನವನ್ನು ತಾವೇ ಬರೆದಿದ್ದರು. ಚಾಣಕ್ಯನೆಂಬ ಹೆಸರಿನಿಂದ ರಾಷ್ಟ್ರಪತಿಯು ಬೀರಿದ ಬೆಡಗನ್ನು ವರ್ಣಿಸುತ್ತ, "ಈತನು ಕಾಲಚಕ್ರದಲ್ಲಿ ಹೇಗೆ ತಿರುಗುವನೋ ಎಚ್ಚರ ವಹಿಸಿರಬೇಕು" ಎಂಬ ಧ್ವನಿಯನ್ನು ತುಂಬಿ ಬರೆದಿದ್ದರು. ಆ ಪತ್ರಿಕೆಯ ಸಂಪಾದಕನಿಗೂ ಕೂಡ ಬರೆದವರು ಯಾರೆಂದು ತಿಳಿಯಲಿಲ್ಲ. ಜವಾಹರಲಾಲರೊಬ್ಬರಿಗೆ ಮಾತ್ರವೇ ಈ ಚರ್ಯೆ ಸಹಜವೆನಿಸುವುದು.

1937 ನೆ ವರ್ಷ ಮುಕ್ತಾಯಗೊಂಡು 1938 ನೆ ವರ್ಷ ನಡೆಯುತ್ತಿತ್ತು. ಜನವರಿ ತಿಂಗಳ ಆರಂಭದಲ್ಲಿಯೆ ತಾಯಿಯವರ ಅಸ್ವಸ್ಥತೆ ಹೆಚ್ಚಿತು. ಹತ್ತನೆ ತಾರೀಖಿನ ದಿನ ಆಕೆಯ ಜೀವನದಂತ್ಯವಾಗಿಹೋಯಿತು; ಮರುದಿನವೇ ದೊಡ್ಡಮ್ಮನೂ ಇಹಲೋಕವನ್ನು ತ್ಯಜಿಸಿ ಬಿಟ್ಟು ಹೊರಟರು. ಆ ತರುವಾಯ ಜವಾಹರರು ಸರಹದ್ದಿನ ಪ್ರಾಂತದಲ್ಲಿ ಸಂಚಾರವನ್ನಿಟ್ಟುಕೊಂಡು ಸ್ವಂತ ದುಃಖಗಳನ್ನು ಮನಸ್ಸಿನಿಂದ ದೂರವಾಗಿಟ್ಟರು. ಕೆಲಸಕಾರ್ಯಗಳಲ್ಲಿ ಅವಿರತವಾಗಿ ಮನಸ್ಸನ್ನು ನಿಲ್ಲಿಸಿದರು.

ಫೆಬ್ರವರಿಯಲ್ಲಿಯೆ ಹರಿಪುರದ ಕಾಂಗ್ರೆಸ್ ; ಸುಭಾಷಚಂದ್ರ ಬೋಸರು ಅಧ್ಯಕ್ಷತೆ ವಹಿಸಿಕೊಂಡರು. ಅತಿಯಾಗಿ ಆಯಾಸಪಟ್ಟಿದ್ದ ಜವಾಹರಲಾಲರಿಗೆ ಬಿಡುಗಡೆಯಾದಂತೆ ತೋರಿತು. ಮಾರ್ಚ್ ತಿಂಗಳಲ್ಲಿ ಆಯಾಸವನ್ನು ಕಳೆಯಲು ಹಿಮವತ್ಪ್ರಾಂತದ ಖಾಲಿ ಮತ್ತು ಗಹವಾಲ್ ಪ್ರದೇಶಗಳಲ್ಲಿ ಸಂಚಾರವನ್ನಿಟ್ಟುಕೊಂಡರು. ಖಾಲಿಯಲ್ಲಿ

ದ್ದಾಗ ಪ್ರಕೃತಿಯ ಮಡಲಲ್ಲಿ ವಿಶ್ರಾಂತಿಗೊಂಡು ಮನಸ್ಸಿನ ಚಿಂತೆಗಳನ್ನು ದೂರವಾಗಿಟ್ಟ ಉದ್ಯಮವನ್ನು ಜವಾಹರಲಾಲರ ಮಾತುಗಳಿಂದಲೇ ಕಾಣಬಹುದು.

“ಪ್ರಾತಃಕಾಲದಲ್ಲಿ ನಾನು ಗಾಳಿಗೆ ಮೈಯೊಡ್ಡಿ ನೆಲದ ಮೇಲೆ ಮಲಗುತ್ತಿದ್ದೆ. ಪರ್ವತಪ್ರಾಂತದ ತರುಣ ಸೂರ್ಯನ ಕೋಮಲ ಕಿರಣಗಳು ನನ್ನನ್ನು ತಬ್ಬಿಕೊಂಡಂತೆ ಪರಿಣಮಿಸುತ್ತಿತ್ತು. ಮಂಜುಗಡ್ಡೆಗಳ ಮೇಲೆ ಬೀಸಿಕೊಂಡು ಬಂದ ಮಾರುತ ಸೋಕಿದಾಗ ಸ್ವಲ್ಪ ಚಳಿದೋರಿ ಶರೀರ ನಡುಗಿ ದಂತಾಗುತ್ತಿತ್ತು ; ಆದರೆ ಸೂರ್ಯಕಿರಣಗಳು ನನ್ನ ಸಹಾಯಕ್ಕೆ ಬಂದು ಶಾಖವನ್ನೂ ನೆಮ್ಮದಿಯನ್ನೂ ಒದಗಿಸುತ್ತಿದ್ದವು.

ಕೆಲವೇಳೆಗಳಲ್ಲಿ ದೇವದಾರು ವೃಕ್ಷಗಳ ಅಡಿಯಲ್ಲಿ ಬಿದ್ದುಕೊಂಡು ಗಾಳಿಯುಸುರಿದ ನುಡಿಗಳನ್ನು ಗಮನಿಸುತ್ತಿದ್ದೆ. ಏನೇನನ್ನೋ ನನ್ನ ಕಿವಿಯಲ್ಲಿ ಆ ಮಾರುತವು ನುಡಿದು ನನ್ನ ಪ್ರಜ್ಞೆ ಮರೆಸಿ ಮನೋಜ್ವರವನ್ನು ಕಳೆಯುತ್ತಿತ್ತು. ಎಚ್ಚರ ತಪ್ಪಿದವನಂತಿದ್ದ ಆ ಸಮಯವನ್ನು ಜಾಣತನದಿಂದ ಹಿಡಿದು ‘ಲೋಕದಲ್ಲಿ ಮಾನವರ ಚರ್ಯೆಯೆಷ್ಟು ಅವಿವೇಕ! ನಿರಂತರವಾಗಿ ಜಗಳ ಕಾಯುವುದೇನು ! ಆಗ್ರಹ ದ್ವೇಷಗಳೇನು ! ಮತನಿಷ್ಠೆಯೆಂಬ ಉನ್ಮಾದವೇನು ! ರಾಜಕೀಯ ರಂಗದಲ್ಲಿ ನೀಚತನವೆಷ್ಟು! ಕ್ಷುದ್ರವಾದ ಆದರ್ಶಗಳ ಸಾಧನೆಯೇಕೆ? ಕಾಣೆಯಾ ಇವುಗಳನ್ನು? ಪುನಃ ಅವರನ್ನೇ ಸೇರಿ ಆಯುಷ್ಯವೆಲ್ಲವನ್ನೂ ವ್ಯರ್ಥಗೊಳಿಸುವುದೇಕೆ! ಇಲ್ಲಾದರೆ ಶಾಂತಿಯುಂಟು, ಸಮಾಧಾನವುಂಟು, ನೆಮ್ಮದಿಯುಂಟು. ಸಂಗಡಿಗರಾಗಿರಲು ಶುಭ್ರ ಫೇನರಾಶಿಗಳೂ, ಉನ್ನತ ಪರ್ವತಶೃಂಗಗಳೂ, ವಿಧ ವಿಧವಾಗಿ ಯಥೇಚ್ಛವಾದ ತರುಗುಲ್ಮಲತಾದಿಗಳೂ ಪುಷ್ಪನಿಚಯಗಳೂ ಇರುವುವಲ್ಲದೆ ಪಕ್ಷಿಸಂಕುಲವಿಂಪಾಗಿ ಗಾನಗೈಯ್ಯುತ್ತಲಿರುವುದಲ್ಲವೇ !’ ಎಂದು ಮೃದುಮಧುರವಾಗಿ ರಹಸ್ಯ ತಿಳಿಸಿದಂತೆ ಮಂದಾನಿಲ ನನ್ನ ಕಿವಿಯಲ್ಲುಸುರಿತು. ವಸಂತಕಾಲದ ಹಗಲಿನ ರಮ್ಯತೆಗೆ ಸೋತ ನಾನಾವ ಅಡ್ಡಿಯನ್ನೂ ತೋರದೆ ಕಿವಿಗೊಟ್ಟು ಕೇಳುತ್ತಿದ್ದೆ.

ಖಾಲಿಯಿಂದ ಸಾವಿರದೈನೂರಡಿಯೇರಿದರೆ ಬಿನ್ಸರ್. ಅಲ್ಲಿಗೇರಿ ಕಣ್ಣುಬಿಟ್ಟಾಗ ಕಂಡ ದೃಶ್ಯವನ್ನು ಎಂದೆಂದಿಗೂ ಮರೆಯಲಾಗದು. ಆರುನೂರು ಮೈಲಿ ವಿಸ್ತಾರದ ಹಿಮವತ್ಪ್ರದೇಶ! ತಿಬ್ಬತ್ತಿನಿಂದ ನೇಪಾಳದವರೆಗಿದ್ದ ವಿಭಾಗ. ಮಧ್ಯೆ ಸ್ತಂಭವಿದ್ದಂತೆ ನಂದಾದೇವಿ ಶಿಖರ. ಅಲ್ಲಿಯೇ ಬದರಿನಾಥ ಕೇದಾರನಾಥ; ದಾಟಿದರೆ ಕೈಲಾಸ ಮಾನಸಗಳು. ಎಷ್ಟು ಅದ್ಭುತವಾದ ದೃಶ್ಯ! ಅದರ ಗಾಂಭೀರ್ಯವನ್ನು ಕಂಡು ಮನಸ್ಸು ಅಳುಕಿದಂತಾ

ಯಿತು; ರೆಪ್ಪೆ ಮುಚ್ಚದೆ ಹಾಗೆಯೆ ನೋಡುತ್ತಿದ್ದೆ. ನೋಡುತ್ತ ನೋಡುತ್ತ ನನ್ನ ಮೇಲೆಯೇ ನನಗೆ ಕೋಪ ಹುಟ್ಟಿ ರೇಗಿತು. ದೇಶದಲ್ಲೆಲ್ಲಿಯೂ ಓಡಾಡಿ ದೂರ ದೇಶಗಳಲ್ಲಿಯೂ ಸಂಚಾರ ಬೆಳೆಸಿದ್ದ ನಾನು ನನ್ನ ಸ್ವಂತ ಪ್ರಾಂತದಲ್ಲಿಯೇ ಇದ್ದ ಈ ಘನ ಸೌಂದರ್ಯ ಸಮೂಹವನ್ನು ಇಷ್ಟು ಕಾಲವೂ ಕಾಣದೆ ಹೋದೆ. ದೇಶಸ್ಥರೆಷ್ಟು ಮಂದಿ ಇದನ್ನು ಕಂಡಿದ್ದಾರೆ? ಅಥವಾ ಕೇಳಿದ್ದಾರೆ? ಸಾವಿರಗಟ್ಟಲೆಯಾಗಿ ನೃತ್ಯಕ್ಕೋ ಜೂಜಿಗೋ ಸಿಪ್ಲ ಮುಸ್ಸೂರಿಗಳಿಗೋಡುವ ಬಿನ್ನಾಣಿಗರಿದನ್ನು ಸ್ಮರಿಸಿಕೊಳ್ಳುವುದೂ ಇಲ್ಲ!"

ಮನಶ್ಶಾಂತಿ ಪಡೆದು ಹಿಂತಿರುಗಿ ಬರಲು ಸ್ವದೇಶದ ಕಾರ್ಯರಂಗ ಮಾತ್ರವೇ ಅಲ್ಲ, ಅನ್ಯದೇಶಗಳ ಪರಿಸ್ಥಿತಿಯೂ ಕಾರಣವಾಯಿತು. ಚೀನವೋ ಅಬಿಸಿನಿಯವೋ ಸ್ಪೆಯ್ನ್ ಆಸ್ಟ್ರಿಯಗಳೋ ಯಾವುದರಲ್ಲಿ ಅನರ್ಥಗಳು ಘಟಿಸಿದಾಗ್ಗೂ ಜವಾಹರಲಾಲರಿಗೆ ಕಳವಳ ಸಹಜ ವಾಗಿಯೆ ಬಲಪಡುವುದು. ಯೂರೋಪಿನಲ್ಲಿ ಜರ್ಮನ್ ನಾಟ್ಸಿ ಪಕ್ಷ ದಿನೇ ದಿನೇ ಪ್ರಬಲಿಸುತ್ತಿತ್ತು. ಅಲ್ಲಿಯ ಸ್ಥಿತಿಗತಿಗಳನ್ನು ಕೂಲಂಕಷ ವಾಗಿ ತಿಳಿದ ಕಾರಣ ಅಲ್ಲಿಗೆ ಹೊರಟು ಎಚ್ಚರಿಕೆಯ ಮಾತುಗಳ ನ್ನಾದರೂ ಸಮಯದಲ್ಲಿ ನುಡಿಯುವ ಕರ್ತವ್ಯವನ್ನು ಕಂಡರು. ಸ್ವದೇಶದ ಪರಿಸ್ಥಿತಿಯನ್ನು ದೂರದಿಂದ ಕಂಡಾಗ್ಗ ಉತ್ತಮವಾದ ವಿವೇಚನೆ ಮನಸ್ಸಿನಲ್ಲಿ ನಡೆದೀತೆಂಬ ಭಾವನೆಯೂ ಇತ್ತು. ಆದುದರಿಂದ ಜವಾಹರ ಲಾಲರು ಮೇ ತಿಂಗಳ ಕೊನೆಯಲ್ಲಿ ಯೂರೋಪಿಗೆ ಹೊರಟರು.

ಜೂನ್ ತಿಂಗಳಿಂದ ನವೆಂಬರ್ ವರೆಗೆ ಐದು ತಿಂಗಳ ಕಾಲ ಯೂರೋಪಿನಲ್ಲಿ. ಸ್ಪೆಯ್ನಿನಲ್ಲಿಳಿದು ಅಲ್ಲಿ ವಿಪದ್ಗ್ರಸ್ತರಾಗಿದ್ದ ಜನರೊಡನೆ ಸೇರಿ ಅನುಕಂಪ ಕಾಣಿಸಿದರು. ಬಾರ್ಸಿಲೋನ ನಗರದಲ್ಲಿರುವಾಗ್ಗ ಮೇಲಿನಿಂದ ಬಾಂಬುಗಳ ವೃಷ್ಟಿಯಾಗುತ್ತಿತ್ತು; ಆ ಜನರೊಂದಿಗೆ ನೆಲಮಾಳಿಗೆಯಲ್ಲಿಯೂ ಇದ್ದು ಭ್ರಾತೃಭಾವವನ್ನೂ ಧೀರತೆಯನ್ನೂ ವ್ಯಕ್ತಗೊಳಿಸಿದರು. ತರುವಾಯ ಪ್ಯಾರಿಸ್ ಲಂಡನ್ ನಗರಗಳಲ್ಲಿ ಪುನಃ ಪುನಃ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದರು. ಫ್ಯಾಸಿಸ್ಮ್ ಮತ್ತು ನಾಟ್ಸಿಸ್ಮ್ ಎಂಬವುಗಳಿಂದ ಆಗುವ ಹಾನಿಯನ್ನು ಸೂಚಿಸಿ ಎಚ್ಚರಿಕೆ ಕೊಟ್ಟರು. ಜೆಕೊಸ್ಲೊವೇಕಿಯವನ್ನು ಕಂಡು ಅಲ್ಲಿಯ ಜನರಿಗೂ ಭಾರತೀಯ ಸೌಹಾರ್ದವನ್ನು ತಿಳಿಸಿದರು.

ಲಂಡನ್‌ನಗರದ ದೊಡ್ಡ ಚೌಕ ಟ್ರಫಾಲ್ಗರ್ ಸ್ಕ್ವೇರಿನಲ್ಲಿ ಸಾವಿರಾರು ಜನ ನೆರೆದು ಆಸೆಯಿಂದ ಜವಾಹರರ ಭಾಷಣ ಕೇಳಿದರು. ಚೇಂಬರ್ಲೇನ್ ಮಂತ್ರಿಮಂಡಲಿಯ ತಗಲೂಪಿತನವನ್ನು ಬಿಚ್ಚಿ ಹೇಳಿ ಇಂಗ್ಲಿಷ್ ಜನರಿಗೆ ಎಚ್ಚರಿಕೆ ಕೊಟ್ಟರು.

ನವೆಂಬರ್ ತಿಂಗಳಲ್ಲಿ ಸ್ವದೇಶಕ್ಕೆ ಜವಾಹರಲಾಲರು ಬಂದರು. ಬರುತ್ತ ದಾರಿಯಲ್ಲಿ ಮಿಶ್ರದೇಶದ ವಫ್ಡ್ ಪಕ್ಷದವರು ಅತ್ಯಾದರದಿಂದ ಸತ್ಕಾರ ನಡೆಸಿದರು. ಸಾಮ್ರಾಜ್ಯ ವಿರೋಧ ಸಾಧನೆಯಲ್ಲಿ ಭಾರತೀಯರಿಗೆ ಬಂಧುಗಳಂತಿರುವ ಇತರ ಜನ ಸಮೂಹದವರ ಸೌಹಾರ್ದವನ್ನು ಕಾಪಾಡಬೇಕೆಂಬುದು ಜವಾಹರಲಾಲರ ದೃಷ್ಟಿಯಲ್ಲಿ ಅವಶ್ಯವಾದ ಕರ್ತವ್ಯ. ಆ ಕಾರಣದಿಂದ ಕಾಂಗ್ರೆಸ್ಸಿನ ಪರವಾಗಿ ಚೀನಕ್ಕೆ ಚಿಕಿತ್ಸಕರ ಗುಂಪೊಂದು ಹೊರಟು ಸೇರಿತ್ತು. ಈಗ ಸ್ಪೈಯ್ನ್ ಜನರಿಗೆ ಆಹಾರ ವಸ್ತುಗಳನ್ನು ಕಳುಹಿಸಿಕೊಟ್ಟು ಸೌಹಾರ್ದ ಕಾಣಿಸಬೇಕೆಂದು ಜವಾಹರಲಾಲರು ವಿವರಿಸಿ ಅದರಂತೆಯೆ ನಡೆಸಿದರು.

ಯೂರೋಪೆಲ್ಲವೂ ಅಶಾಂತಿಯಿಂದ ತುಂಬಿ ಈಗಲೋ ಆಗಲೋ ಸ್ಫೋಟನವಾಗುವ ಸ್ಥಿತಿಯಲ್ಲಿತ್ತು. ಸ್ವದೇಶದಲ್ಲಿ ಕಾಂಗ್ರೆಸ್ ಮಂತ್ರಿಮಂಡಲಿಗಳು ಬೋನುಗಳೊಳಗೆ ಸಿಕ್ಕಿದಂತಿದ್ದು ಆದಷ್ಟು ಕೆಲಸವನ್ನು ಸಾಧಿಸುತ್ತಲಿದ್ದವು. ಕಾಂಗ್ರೆಸ್ಸಿನ ಅಧ್ಯಕ್ಷರಾದ ಸುಭಾಷಬಾಬುವಿಗೂ ಇತರ ಮುಖಂಡರಿಗೂ ಅಭಿಪ್ರಾಯ ಭೇದಗಳು ಬಲಗೊಳ್ಳುತ್ತ ಐಕ್ಯತೆಗೆ ಲೋಪ ತೋರುವಂತಿತ್ತು.

**1939**ನೆ ವರ್ಷ ಆರಂಭವಾಯಿತು. ಅಧ್ಯಕ್ಷ ಪದವಿಗೆ ಸುಭಾಷಚಂದ್ರಬೋಸರು ಪುನಃ ವೃತರಾದರು. ಕಾಂಗ್ರೆಸ್ ವಾರ್ಷಿಕ ಸಭೆ ತ್ರಿಪುರಿಯಲ್ಲಿ ನಡೆಯಬೇಕಾಗಿತ್ತು. ಮಧ್ಯೆ ಫೆಬ್ರವರಿಯಲ್ಲಿ ಜವಾಹರಲಾಲರಿಗೆ ಮಹತ್ವದ ಕೆಲಸವೊದಗಿತ್ತು. ಲೂಧಿಯಾನ ಪಟ್ಟಣದಲ್ಲಿ ಸೇರಿದ ಸಂಸ್ಥಾನ ಪ್ರಜಾರಾಶಿಯ ಪ್ರತಿನಿಧಿಗಳ ಸಮ್ಮೇಳನ; ಅದಕ್ಕೆ ಜವಾಹರಲಾಲರೇ ಅಧ್ಯಕ್ಷರು. ಅದನ್ನು ನಡೆಸಿಕೊಡುವ ವೇಳೆಗೆ ತ್ರಿಪುರಿಯಲ್ಲಿ ನಡೆಯಬೇಕಾದ ಕೆಲಸಗಳ ಯೋಚನೆ. ಅದೇ ವೇಳೆಗೆ ಗಾಂಧೀಜಿಯವರು ರಾಜಕೋಟ್ ಸಂಸ್ಥಾನದ ಸಂಬಂಧವಾಗಿ ಉಪ

ವಾಸವನ್ನಿಟ್ಟುಕೊಂಡರು. ತ್ರಿಪುರಿ ಸಮ್ಮೇಳನದಲ್ಲಿ ಐಕ್ಯತೆಯ ರಕ್ಷಣೆಯೆಲ್ಲವೂ ಜವಾಹರಲಾಲರನ್ನಾಶ್ರಯಿಸಿತು. ಆದಕ್ಕಾಗಿ ಜವಾಹರರು ಸಹಜ ರೀತಿಯಲ್ಲಿ ವ್ಯಕ್ತಪಡಿಸಿದ ಸಹನ ಧೈರ್ಯಗಳನ್ನಲ್ಲದೆ ಕೋಪವನ್ನೂ ದೇಶಭಕ್ತರಾದವರು ಮರೆತಿಲ್ಲ; ಮರೆಯುವ ಹಾಗೂ ಇಲ್ಲ. ಆ ಕಾಂಗ್ರೆಸ್ ಸಮ್ಮೇಳನದಲ್ಲಿ ಜವಾಹರಲಾಲರೇ ನಾಯಕರು.

ಅಲ್ಲಿಂದ ಮುಂದೆ ನಡೆದುದನ್ನು ಅತಿ ಸಂಕ್ಷೇಪವಾಗಿ ಮಾತ್ರ ಕಾಣಬಹುದು. ವಿಸ್ತಾರವಾಗಿ ತಿಳಿದ ಹೊರತು ಮನಸ್ಸಿಗೆ ಸಮಾಧಾನವಾಗುವುದಿಲ್ಲವೆಂಬುದು ನಿಜವಾದರೂ ದೇಶದ ಚರಿತ್ರೆಯಲ್ಲಿ ಕಾಣಬೇಕಾದ ಅಂಶಗಳವು. ವರ್ಕಿಂಗ್ ಕಮಿಟಿಯಲ್ಲಿ ಸುಭಾಷಬಾಬುವಿಗೂ ಇತರರಿಗೂ ಹೊಂದಿಕೆಯಾಗಲಿಲ್ಲ. ಆ ಇತರರು ಹದಿಮೂರು ಮಂದಿ; ಅವರೆಲ್ಲರೂ ಒಟ್ಟುಗೂಡಿ ರಾಜಿನಾಮೆ ಕೊಟ್ಟರು. ಜವಾಹರಲಾಲರು ತಮ್ಮ ರಾಜಿನಾಮೆಯನ್ನು ಪ್ರತ್ಯೇಕವಾಗಿಯೆ ಇತ್ತರು. ರಾಜಿನಾಮೆ ಕೊಟ್ಟ ನಾಯಕರುಗಳನ್ನು ದೂರದಲ್ಲಿಟ್ಟು ಬೇರೆಯವರನ್ನು ಗೊತ್ತು ಮಾಡಿಕೊಂಡಿರಲು ಸುಭಾಷಬಾಬುವಿಗಾಗಲಿಲ್ಲ; ಆದುದರಿಂದ ಅವರೇ ರಾಜಿನಾಮೆ ಕೊಟ್ಟು ಪ್ರತ್ಯೇಕವಾದ ಪಕ್ಷವನ್ನು ಕಟ್ಟಿದರು. ರಾಜೇಂದ್ರ ಪ್ರಸಾದರನ್ನು ತಾತ್ಕಾಲಿಕವಾಗಿ ಅಧ್ಯಕ್ಷಸ್ಥಾನದಲ್ಲಿಟ್ಟುಕೊಂಡು ಮುಂದುವರಿಸಬೇಕಾಗಿ ಬಂತು. ಅನುಭವಶಾಲಿಗಳು ಪುನಃ ತಮ್ಮ ಸ್ಥಳಗಳಿಗೆ ಬರುವಹಾಗಾಯಿತು.

ಏಪ್ರಿಲ್ ತಿಂಗಳಲ್ಲಿ ಜವಾಹರಲಾಲರು ಚೀನಕ್ಕೆ ಹೋಗಿ ಚಿಯಾಂಗ್ ಕೈಷೇಕ್ ಮುಂತಾದ ನಾಯಕರುಗಳ ಪರಿಚಯವನ್ನೂ ಆಪ್ತ ಮೈತ್ರಿಯನ್ನೂ ಕಟ್ಟಿ ಬಂದರು. ಜೂನ್ ತಿಂಗಳಲ್ಲಿ ಕಾಂಗ್ರೆಸ್ ಮುಖ್ಯಸ್ಥರು ಸಿಂಹಳಕ್ಕೆ ಹೋಗಿ ಬರುವಂತೆ ಜವಾಹರಲಾಲರನ್ನೇ ನಿಯೋಗಿಸಿದರು. ಆ ಕರ್ತವ್ಯವೂ ನಡೆಯಿತು. ಹೀಗಿರುವಲ್ಲಿ ಯೂರೋಪಿನಲ್ಲಿ ಯುದ್ಧಸನ್ನಾಹಗಳೆಲ್ಲೆಲ್ಲಿಯೂ ನಡೆಯುತ್ತಿದ್ದವು. ಆಗಸ್ಟ್ ತಿಂಗಳಲ್ಲಿ ವರ್ಕಿಂಗ್ ಕಮಿಟಿಯವರು ಯುದ್ಧ ಸಂಭವವಾದಲ್ಲಿ ತಮ್ಮ ಧರ್ಮವೇನೆಂಬುದನ್ನು ಪ್ರಕಟವಾಗಿ ಹೇಳಬೇಕಾದ ಸಂದರ್ಭ. ಆಗ ಜವಾಹರಲಾಲರ ಅಭಿಪ್ರಾಯವನ್ನೇ ಎಲ್ಲರೂ ಅಂಗೀಕಾರ ಮಾಡಿ

ದರು. ಬಾಪೂಜಿಯವರು ತಾವು ಬರೆದಿದ್ದುದಕ್ಕಿಂತ ಜವಾಹರಲಾಲರು ಬರೆದುಕೊಟ್ಟಿದ್ದು ಮೇಲಾಯಿತೆಂದು ಎಲ್ಲರಿಗೂ ತಿಳಿಯುವಂತೆ ಹರಿಜನ ಪತ್ರಿಕೆಯಲ್ಲಿ ವಿವರಿಸಿಟ್ಟರು.

ಸೆಪ್ಟೆಂಬರ್ ಮೂರನೆ ತಾರೀಖಿನ ದಿನ ಇಂಗ್ಲೆಂಡಿನವರು ಜರ್ಮನಿಯೊಡನೆ ಯುದ್ಧ ಪ್ರಾರಂಭವೆಂದು ಪ್ರಕಟಿಸಿದರು. ಭಾರತದ ವೈಸರಾಯಿ ಕೂಡಲೆ ಅದರಲ್ಲಿ ಭಾರತವನ್ನು ಸೇರಿಸಿಬಿಟ್ಟನು. ಪರಿಣಾಮವಾಗಿ ಏಳು ಪ್ರಾಂತಗಳಲ್ಲಿ ಕರ್ತವ್ಯನಿರತರಾಗಿದ್ದ ಕಾಂಗ್ರೆಸ್ ಮಂತ್ರಿಮಂಡಲಿಗಳವರು ರಾಜಿನಾಮೆಗಳನ್ನು ಕೊಟ್ಟರು. ಕಾಂಗ್ರೆಸ್ಸಿನವರು ಮುಂದೇನು ಮಾಡಬೇಕು? ಅತಿ ಜಟಿಲವಾದ ಸಮಸ್ಯೆಯಾಯಿತು. ಬ್ರಿಟಿಷ್ ಸರ್ಕಾರದವರಾದರೋ ಅಲಕ್ಷ್ಯ ಕಾಣಿಸಿ ಸರ್ವ ಪ್ರಯತ್ನದಿಂದಲೂ ಯುದ್ಧಸನ್ನಾಹದಲ್ಲಿ ತೊಡಗಿ ಪ್ರಾಂತಗಳಲ್ಲಿ ಗವರ್ನರುಗಳ ಇಷ್ಟಾನುಸಾರ ಆಡಳಿತ ನಡೆಯುವ ಏರ್ಪಾಟನ್ನು ಮೊದಲಿಟ್ಟರು.

ಎಲ್ಲರ ಮನಸ್ಸುಗಳಲ್ಲಿಯೂ ಗಾಂಧೀಜಿಯವರ ಧ್ಯಾನವೇ ಆಯಿತು. ಜವಾಹರಲಾಲರ ಮಾತುಕಥೆಗಳಲ್ಲಿಯೇ ಆಸಕ್ತಿ ಶ್ರದ್ಧೆಗಳು ತೋರಿದವು. 1940ನೆ ವರ್ಷವಾರಂಭವಾಯಿತು. ಮಾರ್ಚ್ ತಿಂಗಳಲ್ಲಿ ರಾಮಘರ್ ಕಾಂಗ್ರೆಸ್ ಸಮ್ಮೇಳನ ನಡೆದು ಮೌಲಾನಾ ಆಜ್ಞಾದರು ಅಧ್ಯಕ್ಷರಾದರು. ಮುಂದಿನ ಕರ್ತವ್ಯವನ್ನು ಎಲ್ಲರೂ ಗಾಂಧೀಜಿಯವರಿಗೊಪ್ಪಿಸಿದರು. ಆತನಾದರೋ ಆದಷ್ಟು ಸಂಧಾನ ಪ್ರಯತ್ನವನ್ನೂ ನಡೆಸಿ ಕಡೆಗೆ ಭಾಷಣ ಸ್ವಾತಂತ್ರ್ಯದ ಹಕ್ಕಿನ ಸಂಬಂಧವಾಗಿ ಕಾಯದೆಭಂಗವನ್ನು ನಿಶ್ಚಯಿಸಿದರು. ತಾವು ಸೂಚಿಸಿದವರು ಮಾತ್ರವೇ ಆ ಕರ್ತವ್ಯವನ್ನು ನಡೆಸತಕ್ಕುದೆಂದು ವಿಶದಗೊಳಿಸಿದರು.

ಅಕ್ಟೋಬರ್ ತಿಂಗಳಲ್ಲಿ ಮೊದಲಾಯಿತು. ಆಚಾರ್ಯ ವಿನೋಬಾ ಭಾವೆಯವರನ್ನು ಮೊದಲು ಗಾಂಧೀಜಿ ಆರಿಸಿದರು. ಕಾಯದೆ ಭಂಗದ ಕರ್ತವ್ಯವಾರಂಭವಾಯಿತು. ಎರಡನೆಯವರಾಗಿ ಗಾಂಧೀಜಿಯ ಆಜ್ಞೆಗೊಳಗಾದವರು ಜವಾಹರಲಾಲರೇ!

ಜವಾಹರಲಾಲರಿಗಿನ್ನೂ ಅವಕಾಶವಿತ್ತು. ಆ ಮಧ್ಯೆ ಗಾಂಧೀಜಿಯವರು ಉಪವಾಸವನ್ನಿಟ್ಟುಕೊಳ್ಳುವ ಸಂದರ್ಭವೊದಗಿತ್ತು. ಅದನ್ನು

ಕುರಿತು ಮಾತನಾಡಲು ಗಾಂಧೀಜಿಯ ಬಳಿಗೆ ಬಂದರು. ಗಾಂಧೀಜಿಯವರು ಉಪವಾಸ ಮಾಡಬೇಕೆಂದು ನಿಶ್ಚಯಿಸಿದ ಪಕ್ಷದಲ್ಲಿ ಅದಕ್ಕಡ್ಡಿ ಬರುವ ಮನೋಧರ್ಮ ಜವಾಹರಲಾಲರಲ್ಲಿರಲಿಲ್ಲ. ಹಿಂದೊಂದು ಸಂದರ್ಭದಲ್ಲಿ ಉಪವಾಸವಾರಂಭವಾದ ಬಳಿಕ ಅದನ್ನು ನಿಲ್ಲಿಸಲು ಪ್ರಯತ್ನಿಸಿದವರನ್ನು ಖಂಡಿಸಿದ್ದವರಲ್ಲವೆ! ಈ ಬಾರಿಯಿನ್ನೂ ಉಪವಾಸ ಮೊದಲಾಗಿರಲಿಲ್ಲ. ಜವಾಹರಲಾಲರು ತಮ್ಮ ವಿರೋಧವನ್ನು ತೋರಿ ಚರ್ಚಿಸಲು ಸಮಯವಾಗಿತ್ತು. ಬಾಪುಜಿಯ ಬಳಿಯಲ್ಲಿ ವಿರೋಧ ಕಾಣಿಸಿ ಚರ್ಚಿಸುವ ದಿಟ್ಟತನ ಜವಾಹರಲಾಲರಿಗಿದ್ದಂತೆ ಮತ್ತಾರಿಗೂ ಇಲ್ಲ. ನಿರ್ದಾಕ್ಷಿಣ್ಯವಾಗಿ ಮಾತನಾಡುವ ಪ್ರಕೃತಿ. ಗಾಂಧೀಜಿಯನ್ನು ಕಂಡಾಗ ಮಗು ತನ್ನ ತಂದೆಯನ್ನು ಕಂಡು ಮಾತನಾಡಿದಂತೆಯೆ ಜವಾಹರರ ರೀತಿ. "ಇಲ್ಲ, ಬಾಪು! ಸುಮ್ಮನೆ ನನ್ನನ್ನು ಹಾಗೆ ತಳ್ಳಿಡಲಾಗುವುದಿಲ್ಲ" ಎನ್ನುತ್ತ ವಿಶ್ವಾಸದಿಂದಲೂ ಧೈರ್ಯದಿಂದಲೂ ಜವಾಹರಲಾಲರಂದಾಗ ಇಬ್ಬರೂ ಕಿಲಕಿಲನೆ ನಕ್ಕರು. ಮಾತು ಮುಗಿದ ಮೇಲೆ ಜವಾಹರರು ಹೊರಡಲು ಸಿದ್ಧರಾದಾಗ ಪೂಜ್ಯ ಕಸ್ತೂರಿಬಾ ಬಂದು "ಒಂದು ಕ್ಷಣ ನಿಲ್ಲು, ಜವಾಹರ್! ಕುಂಕುಮವಿಟ್ಟು ಕಳುಹಿಸುತ್ತೇನೆ" ಎಂದರು. ಏಕಂದರೆ ಕ್ಷಿಪ್ರದಲ್ಲಿ ಜೈಲು ಸಿದ್ಧವೆಂಬುದೆಲ್ಲರಿಗೂ ತಿಳಿದಿತ್ತು. "ಬೇಡ. ಬಾ! ಹಾಗೇ ಇರಲಿ ಬಿಡಿ. ಅದರ ಅವಶ್ಯವೇ ಇಲ್ಲ" ಎಂದು ಮೃದುರೀತಿಯಲ್ಲೇ ಜವಾಹರರು ನುಡಿದರು. "ಆದರೆ ಪುನಃ ಯಾವಾಗ ಒಬ್ಬರನ್ನೊಬ್ಬರು ಕಾಣುತ್ತೇವೆಯೋ ದೇವರಿಗೇ ಗೊತ್ತು!" ಎಂದು ಕಸ್ತೂರಿಬಾ ಹೇಳಿದರು. ಅದಕ್ಕೆ ಪ್ರತಿಯಾಗಿ ವಿನೋದದ ತುಂಟತನವನ್ನು ಕಾಣಿಸುವಂತೆ "ಗೊತ್ತಿಲ್ಲ, ಬಾ! ದೇವರು ನಿದ್ದೆ ಮಾಡುತ್ತಿದಾನೆ" ಎಂದರು.

ಮೊದಲಿನಿಂದಲೂ ಜವಾಹರಲಾಲರು ಕಸ್ತೂರಿಬಾಯಿಗೆ ಮಗನಂತೆಯೆ. ಸ್ವರೂಪರಾಣಿಯವರು ತೀರಿಕೊಂಡ ತರುವಾಯ ಕಸ್ತೂರಿಬಾಯಿಗೆ ಜವಾಹರಲಾಲರು ಸ್ವಂತ ಮಕ್ಕಳಿಗಿಂತಲೂ ಹೆಚ್ಚು. ದೇವದಾಸಗಾಂಧಿಯಲ್ಲಿ ಒಂದುವೇಳೆ ಅಸಮಾಧಾನ ಕಾಣಿಸಿದರೂ ಕಾಣಿಸಿಯಾರು; ಜವಾಹರಲಾಲರಲ್ಲಿ ಕಾಣಿಸಲಿಷ್ಟವೇ ಬಾರದು.

ಗಾಂಧೀಜಿಯ ಆಶ್ರಮವನ್ನು ಬಿಟ್ಟು ಇಲಾಹಾಬಾದಿಗೆ ಪ್ರಯಾಣ ಮಾಡಿ ರೈಲ್ ಸ್ಟೇಷನ್ನಿನಲ್ಲಿಳಿಯುವ ವೇಳೆಗೆ ದಸ್ತಗಿರಿ. ಗೋರಖ ಪುರದಲ್ಲಿ ವಿಚಾರಣೆ; ನಾಲ್ಕು ವರ್ಷಗಳ ಕಾಲ ಸಜಾ! ತೀರ್ಪನ್ನು ಕೇಳಿದ ದೇಶೀಯರೂ ವಿದೇಶೀಯರೂ ನ್ಯಾಯವಲ್ಲದೆ ರೀತಿರಂಗಗಳೂ ಇಲ್ಲವೆಂದು ಖಂಡಿಸಿದರು. ಆದರೆ ಜವಾಹರಲಾಲರೆಂದರೆ ಬ್ರಿಟಿಷ್ ಸರ್ಕಾರದವರಿಗಷ್ಟು ಇಷ್ಟ!

ಪುನಃ ಡೇರಾಡೂರ್ ಜೈಲಿಗೆ. ಜೈಲು ಬಿಟ್ಟು ಹೊರಗೆ ಬಂದಿದ್ದುದು 5 ವರ್ಷಗಳ ಹಿಂದೆ. ಈಗ ಪುನಃ ಪ್ರಾಪ್ತಿಯಾದುದನ್ನು ಸಮಾಧಾನಚಿತ್ತದಿಂದ ಸ್ವೀಕರಿಸಿದುದೇ ಅಲ್ಲದೆ ಅಸಮಾಧಾನಗೊಂಡವರಿಗೆ ತಾವೇ ಸಮಾಧಾನ ಹೇಳತಕ್ಕವರಾದರು. ಅತಿಯಾಗಿ ವ್ಯಸನಗೊಂಡ ಕೃಷ್ಣೆಗೆ ಕಾಗದ ಬರೆಯುತ್ತ "ನೀವೀರ್ವರೂ ನನ್ನ ಸಜದ ಸುದ್ದಿ ಕೇಳಿದಾಗ ಬಹಳ ಕಳವಳಗೊಂಡಿರಂತೆ. ನನಗೇನೋ ಸಮಾಧಾನವಾಗಿಯೇ ಇದೆ. ಈ ಉನ್ಮತ್ತ ಜಗತ್ತಿನಲ್ಲಿ ಸಮಾಧಾನಚಿತ್ತನಿಂದಿರುವುದೇ ದೊಡ್ಡದಲ್ಲವೆ?........ನನ್ನ ವಿಷಯವಾಗಿ ನೀನು ಹೆಚ್ಚು ಚಿಂತಿಸಬಾರದು........ಬದುಕಿನಲ್ಲಿ ಬಂದುದಕ್ಕೆ ನಾವೊಗ್ಗಿಕೊಳ್ಳಬೇಕೇ ವಿನಾ ಇಲ್ಲದುದಕ್ಕೆ ತಪಿಸಬಾರದು." ಎಂದು ಬರೆದರು.

ಆದರೆ ನಾಲ್ಕು ವರ್ಷಗಳ ಸಜಾ ಎಂಬ ಸುದ್ದಿ ಕೇಳಿ ದೇಶದಲ್ಲೆಲ್ಲರೂ ತಲ್ಲಣಿಸಿದರು. ಪ್ರಾಯಶಃ ಬ್ರಿಟಿಷ್ ಸರ್ಕಾರದವರಿಗೂ ವಿಪರೀತವನ್ನು ನಡೆಸಲಾಯಿತೆಂದೆನ್ನಿಸಿತು. ದೇಶದ ಪರಿಸ್ಥಿತಿಯಂತೂ ನಿತ್ಯವೂ ಕೆಡುತ್ತಲಿತ್ತು. ವೈಸರಾಯಿಗೆ ತನ್ನ ಕರ್ತವ್ಯನಿರ್ವಾಹ ಕಷ್ಟವಾಗಿಯೆ ತೋರಿತು. ಎಂತೆಂತಹ ಸಂಧಾನಗಳನ್ನೋ ಆರಂಭಿಸಿದ್ದನು. ಆಗಲೆ ಜಪಾನೀ ಜನರು ವೇಗ ವೇಗವಾಗಿ ಪ್ರಬಲಗೊಂಡು ನೆರೆರಾಷ್ಟ್ರಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಆಗ ಚೀನಾ ರಾಷ್ಟ್ರದೊಂದಿಗೆ ಆಪ್ತತೆಯನ್ನು ಹೆಚ್ಚಿಸುವ ಅಗತ್ಯ ತೋರಿಬಂತು. ಪರಿಸ್ಥಿತಿ ಕೆಡುತ್ತ ಬರಲು ವೈಸರಾಯಿ ಸರ್ಕಾರದವರು ಉಪಾಯವಾಗಿ ಜವಾಹರಲಾಲರನ್ನು ಬಿಡುಗಡೆ ಮಾಡಿದರು.

ಬಿಡುಗಡೆಯಾದ ಬಳಿಕ (1942ರಲ್ಲಿ) ಚೀನೀ ರಾಷ್ಟ್ರ ಮುಖ್ಯ ಚಿಯಾಂಗ್ ಕೈಷೇಕರ ಭಾರತ ಸಂಚಾರದಲ್ಲಿಯೂ ಆ ತರುವಾಯ

ನಡೆದ ಕ್ರಿಪ್ಸ್ ಸಂಧಾನದಲ್ಲಿಯೂ ಜವಾಹರಲಾಲರು ಎಷ್ಟು ಮುಖ್ಯವಾದ ಭಾಗವನ್ನು ವಹಿಸಿದ್ದರೆಂಬುದು ಚರಿತ್ರೆಯ ವಿಷಯ. ಕ್ರಿಪ್ಸ್ ಸಂಧಾನ ಮುರಿದುಹೋದ ಬಳಿಕ ಸ್ಮರಣಾರ್ಹವಾದುದೆರಡೇ ಅಂಶಗಳು.

ಇಂದಿರಾ ಪ್ರಿಯದರ್ಶಿನಿಯ ಮದುವೆ ಮೊದಲನೆಯಂಶ. ಅಪೂರ್ವ ಶಿಕ್ಷಣವನ್ನು ಮಗಳಿಗೆ ತಂದೆಯೇ ಕೊಟ್ಟಿದ್ದರು; ಯೂರೋಪಿನ ವಿದ್ಯಾನಿಲಯಗಳಲ್ಲಿಯೂ ಶಿಕ್ಷಣ ನಡೆದಿತ್ತು. ವಯಸ್ಕಳಾದ ತರುವಾಯ ಇಂದಿರೆ ಫ಼ಿರೂಸ್ ಗಾಂಧಿಯನ್ನು ವರಿಸಿಕೊಂಡಳು. ಫ಼ಿರೂಸ್ ನೆಹರು ಮನೆಯಲ್ಲಿಯೆ ಇದ್ದಾತ; ಜವಾಹರಲಾಲರಿಗೆ ಕೆಲವೇಳೆ ಕಾರ್ಯದರ್ಶಿಯಂತೆಯೆ ಇದ್ದಾತ; ಯೂರೋಪಿನಲ್ಲಿ ಕಮಲಾದೇವಿ ರೋಗಗ್ರಸ್ತೆಯಾಗಿದ್ದ ಕಾಲದಲ್ಲಿ ಅತಿ ವಿಶ್ವಾಸದಿಂದ ಉಪಚರ್ಯೆ ಗೈದಿದ್ದಾತ. ಇಬ್ಬರಿಗೂ ಪ್ರೇಮವಂಕುರಿಸಿ ದೃಢಗೊಂಡಿತ್ತು. ಆದರೆ ಫ಼ಿರೂಸ್ ಜಾತಿಯಲ್ಲಿ ಪಾರ್ಸಿ; ಗಾಂಧೀ ಎಂಬ ಮನೆ ಹೆಸರನ್ನಿಟ್ಟುಕೊಂಡ ಗುಜರಾಥಿ. ಮಗಳ ಸೌಖ್ಯವನ್ನು ಬಯಸಿದ ತಂದೆ ಮೂರ್ಖವನ್ನು ಹಿಡಿದು ಮದುವೆಯನ್ನು ನಿಷೇಧಿಸಲಾದೀತೆ? ಇದರಮೇಲೆ ಜವಾಹರಲಾಲರಿಗೆ ಸ್ವಭಾವವಾಗಿ ಉದಾರಚಿತ್ತ.

ಮದುವೆಯ ಸಮಾಚಾರ ಅಲ್ಪಸ್ವಲ್ಪವಾಗಿ ಹೊರಗೆ ತಿಳಿದ ಸಂದರ್ಭದಲ್ಲಿ ಹಲಕೆಲವರು ಆಕ್ಷೇಪವನ್ನು ಸೂಚಿಸಿದರು. ಜವಾಹರಲಾಲರ ಕಿವಿಗೂ ಆಕ್ಷೇಪ ಬಿತ್ತು; ಕೃತ್ರಿಮರೀತಿಯ ಆಕ್ಷೇಪವನ್ನು ತಾವು ಸಮರ್ಥಿಸಲಾಗದೆಂದು ತಿಳಿಸಿದರು. ಆಕ್ಷೇಪಕರು ಬಾಪುಜಿ ಸಮೀಪಕ್ಕೂ ಹೊರಟರು; ಕಾಗದ ಬರೆದರು. ಗಾಂಧೀಜಿ ತಮ್ಮ ಹರಿಜನ ಪತ್ರಿಕೆಯಲ್ಲಿ ಪ್ರಸ್ತಾಪಿಸುತ್ತ ಪೂರ್ವೋತ್ತರವನ್ನು ತಿಳಿಸಿ ಈ ಮದುವೆಗೊಪ್ಪದಿದ್ದಲ್ಲಿ ಕ್ರೂರವರ್ತನೆಯಾಗಿ ಪರಿಣಮಿಸುವ ಅಂಶವನ್ನು ವಿವರಿಸಿಕೊಟ್ಟು ಆಕ್ಷೇಪಕರಿಗೆ ಸಮಾಧಾನ ಹೇಳಬೇಕಾಯಿತು.

ಕಮಲಾದೇವಿಯ ಆಯುಸ್ಸು ಮುಗಿದಾಗ ಹರಿಜನ ಪತ್ರಿಕೆಯಲ್ಲಿ ಆ ಸಂಗತಿಯನ್ನೆತ್ತಿ ಬರೆಯಲಾಸ್ಪದವಿಲ್ಲವೆಂದುಕೊಂಡಿದ್ದ ಗಾಂಧೀಜಿಯವರು ಇಂದಿರೆಯ ಮದುವೆಯನ್ನು ಕುರಿತು ಅದೇ ಪತ್ರಿಕೆಯಲ್ಲಿ ವಿಸ್ತಾರವಾಗಿ ಬರೆದುದು ಆಶ್ಚರ್ಯವೆಂದು ತೋರುವುದಿಲ್ಲವೆ? ಆದರೆ

ಆಶ್ಚರ್ಯರ್ಕ್ಕೆಡೆಯಿಲ್ಲ. ಮೋತಿಲಾಲರು ಮೃತರಾದಾಗಿನಿಂದ ನೆಹರು ಮನೆತನಕ್ಕೆ ಗಾಂಧೀಜಿಯವರೇ ಯಜಮಾನರು. ತಮ್ಮ ತನುಜರ ಮೇಲಿಲ್ಲದ ವಾತ್ಸಲ್ಯ ಜವಾಹರಲಾಲರಲ್ಲುಂಟು.

ಅಂತೂ ಇಂದಿರೆಯ ಮದುವೆಯಾದ ಬಳಿಕ ಜವಾಹರಲಾಲರಿಗೆ ಯಾವ ನಿರ್ಬಂಧವೂ ಇಲ್ಲದಾಯಿತು.

ಎರಡನೆಯಂಶ 'ಕ್ವಿಟ್ ಇಂಡಿಯ' ಸಂಕಲ್ಪ. ಗಾಂಧೀಜಿಯವರೂ ಇತರರೂ ಅದನ್ನು ವಿವರಿಸಿ ಕೊಡುವ ಮೊದಲೇ ಜವಾಹರಲಾಲರು ಅದನ್ನು ಘೋಷಿಸಿದ್ದರು. ಕ್ರಾಂವ್ವೆಲ್ಲನ ಮಾತುಗಳನ್ನೇ ಉದ್ಧರಿಸಿ ಬ್ರಿಟಿಷ್ ಸರ್ಕಾರದವರಿಗೂ ಇತರರಿಗೂ ತಿಳಿಯಲೆಂದು ಹೇಳಿದ್ದರು. "ಬಹುಕಾಲದಿಂದ ನೀವಿಲ್ಲಿ ತಿಷ್ಠೆ ಹಾಕಿದ್ದೀರಿ; ಅದರಿಂದ ಸತ್ಪರಿಣಾಮವಷ್ಟರಲ್ಲಿಯೇ ಇದೆ. ಹೊರಡಿ, ನಡೆಯಿರಿ, ನಿಮ್ಮ ಸಹವಾಸ ನಮಗಿನ್ನು ಬೇಡ. ದೇವರಾಣೆಗೂ ಬೇಡ, ಹೊರಡಿ!" ಇದೇ ಮುಖ್ಯವಾದುದರಿಂದ 1942ನೆ ಆಗಸ್ಟ್ ತಿಂಗಳ ಮೊದಲಲ್ಲಿ ಮುಂಬಯಿಯಲ್ಲಿ ಎ.ಐ.ಸಿ.ಸಿ. ಸಭೆ ಸೇರಿತು. ತತ್ಪರಿಣಾಮವಾಗಿ ತಂಡತಂಡವಾಗಿ ದಸ್ತಗಿರಿಗಳಾದವು.

ಬೆಳಿಗ್ಗೆ 5 ಗಂಟೆ ಸಮಯ; ಇನ್ನೂ ಬೆಳಕು ಹರಿದಿಲ್ಲ. ಕೃಷ್ಣೆ ಮನೆಗೆ ಯಾರೋ ಬಂದು ಬಾಗಿಲನ್ನು ತಟ್ಟಿದರು. ಈ ಅವೇಳೆಯಲ್ಲಿ ಪೋಲೀಸಧಿಕಾರಿಗಳಲ್ಲದೆ ಮತ್ತಾರೂ ಬರಲಾರರೆಂದುಕೊಂಡು ಕೃಷ್ಣೆ ಯೆದ್ದು ಕಾಣುವ ವೇಳೆಗೆ ಪೋಲೀಸಧಿಕಾರಿಗಳೇ ಬಂದಿದ್ದವರು. ಎರಡು ಮೂರು ದಿನಗಳಿಂದ ನಿದ್ದೆ ಕೆಟ್ಟಿದ್ದ ಜವಾಹರಲಾಲರಿಗೆ ಗಾಢನಿದ್ರೆ ಹತ್ತಿತ್ತು; ಬಲವಂತದಿಂದ ಎಚ್ಚರಿಸಿದಾಗ ಪ್ರಯತ್ನಪೂರ್ವಕವಾಗಿ ಕಣ್ಣು ತೆರೆಯಬೇಕಾಗಿತ್ತು. ಆದರೆ ದಸ್ತಗಿರಿಯೇನು ಹೊಸದೇ? ಪೋಲೀಸಧಿಕಾರಿಗಳೊಡನೆ ಹೊರಡಲು ಬೇಗನೆ ಅಣಿಯಾದರು. ಕೃಷ್ಣೆಯ ಪತಿ ಹತೀಸಿಂಗರನ್ನೂ ಆ ಸಮಯದಲ್ಲಿ ಪೋಲೀಸಧಿಕಾರಿಗಳು ದಸ್ತಗಿರಿಮಾಡಿ ಕರೆದೊಯ್ದರು. ಇಬ್ಬರನ್ನೂ ಒಟ್ಟಿಗೆ ಕರೆದುಕೊಂಡು ಹೊರಟಾಗ್ಗೂ ಹತೀಸಿಂಗರನ್ನು ಯರವಾಡ ಜೈಲಿಗೊಯ್ಯುದು ತಿಳಿಯಿತು. ಜವಾಹರಲಾಲರನ್ನೆಲ್ಲಿಗೆ ಸಾಗಿಸಿದರೋ ಯಾರಿಗೂ ತಿಳಿಯದಾಯಿತು.

1942ನೆ ಆಗಸ್ಟ್ ತಿಂಗಳಲ್ಲಿ ಊರೂರಿನಲ್ಲಿಯೂ ಸುದ್ದಿ ಹರಡಿದಾಗ ನಡೆದ ಸಂಗತಿಗಳು ಆ ಸ್ಥಳದವರಿಗೆ ಮರೆತಿರಲಾರದು. ಕೆಲಕಾಲ ಕಳೆದ ಮೇಲೆ ಗಾಂಧೀಜಿಯವರನ್ನು ಯಾವ ದೂರ ದೇಶಕ್ಕೂ ಒಯ್ಯದೆ ಪುಣೆಯ ಬಳಿಯಲ್ಲಿಯೇ ಇಡಲಾಗಿದೆಯೆಂದು ಸಮಾಚಾರ ತಿಳಿಯಿತು. ಜವಾಹರಲಾಲರೂ ವರ್ಕಿಂಗ್ ಕಮಿಟಿಯ ಇತರ ಸದಸ್ಯರೂ ಎಲ್ಲಿರುವರೆಂಬುದನ್ನು ರಹಸ್ಯವಾಗಿಟ್ಟರು. ಎಷ್ಟೋ ಕಾಲವಾದ ಮೇಲೆ ಅವರೆಲ್ಲರನ್ನೂ ಅಹಮದ್ ನಗರದ ಕೋಟೆಯಲ್ಲಿಟ್ಟಿರುವುದಾಗಿ ತಿಳಿಯಿತು. ಕಾರಣಾಂತರದಿಂದ ಮೊದಲು ಬಿಡುಗಡೆ ಹೊಂದಿದ ಡಾ|| ಸಯ್ಯದ್ ಮಹಮ್ಮೂದರು ಆ ನಿರ್ಬಂಧದಲ್ಲಿ ತಾವೂ ಜವಾಹರಲಾಲರೂ ಒಟ್ಟಿಗಿದ್ದ ರೀತಿಯನ್ನು ಸ್ವಲ್ಪ ಮಾತ್ರ ವಿವರಿಸಿದ್ದರು.

ಒಂದಂಶವನ್ನು ಮಾತ್ರ ಸ್ಮರಿಸಿಕೊಳ್ಳಬೇಕು. ಮೌಲಾನಾ ಅಜ಼ಾದ್, ಅಸಾಫ಼ ಅಲಿ, ಸಯ್ಯದ್ ಮಹಮ್ಮೂದ್, ಗೋವಿಂದವಲ್ಲಭ ಪಂತ್, ಶಂಕರರಾವ್ ದೇವ್, ಪ್ರಫುಲ್ಲ ಚಂದ್ರ ಘೋಷ್, ಪಟ್ಟಾಭಿ ಸೀತಾರಾಮಯ್ಯ, ಆಚಾರ್ಯ ಕೃಪಲಾನಿ, ನರೇಂದ್ರ ದೇವ್, ಹರಿ ಕೃಷ್ಣ ಮೆಹತಬ್ ಮತ್ತು ಸರ್ದಾರ್ ಪಟೇಲರು ಜವಾಹರಲಾಲರ ಜೊತೆಗಾರರು. ನಿರ್ಬಂಧದಲ್ಲಿದ್ದವರು ಸ್ವಾತಂತ್ರ್ಯ ದಿನಾಚರಣೆಯನ್ನೂ ಗಾಂಧೀ ಜಯಂತಿಯನ್ನೂ ಆಚರಿಸಿದಂತೆಯೇ ಜವಾಹರಲಾಲರ ಜಯಂತಿಯನ್ನೂ ಆಚರಿಸಿದರು. ತಮ್ಮ ಪಟ್ಟ ಜವಾಹರಲಾಲರಿಗೆಂದು ಮಹಾತ್ಮಾಜಿ ಹೇಳಿದ ಮಾತ್ರದಿಂದ ಆ ಆಚರಣೆ ನಡೆಯಲಿಲ್ಲ. ಅವರೆಲ್ಲರಿಗೂ ಅನುಭವಸಿದ್ಧವಾದ ವಿಷಯ; ಇಷ್ಟವಾದ ಭವಿಷ್ಯ; ಬುದ್ಧಿ ವಿಚಾರ ಶಕ್ತಿಗಳೂ ಸೂಚಿಸಿಕೊಟ್ಟ ಅಂಶ. ಇದನ್ನು ತಿಳಿದ ಕಾರಣದಿಂದಲೇ ಮಹಾತ್ಮಾಜಿಯವರ ನುಡಿಯೂ ಆ ರೀತಿಯಲ್ಲಿ ಪ್ರಕಟವಾಗಿತ್ತು.

ಪ್ರತಿಮಾನವನಿಗೂ ಅಂತಃಕರಣವೆಂಬುದಿದ್ದಂತೆ ಪ್ರತಿ ದೇಶದ ಜನ ಸಮೂಹಕ್ಕೂ ಉಂಟು. ಗಾಂಧೀಜಿಯವರೇ ಭಾರತದ ಅಂತಃಕರಣದ ಮೂರ್ತಿ. ಗಾಂಧೀಜಿಯವರು ನುಡಿದುದನ್ನು ಭಾರತೀಯರು ಕೇಳಿದಾಗ ತಮ್ಮ ಅಂತಃಕರಣವೇ ನುಡಿದಂತೆ ಪರಿಣಮಿಸುವುದು. ಭಾರತ

ಮಾತೆಯ ಅಂತಃಕರಣ ಸ್ವರೂಪವೆಂದು ಗಾಂಧೀಜಿಯನ್ನೊಪ್ಪಿಕೊಳ್ಳುವುದು ಆ ಕಾರಣದಿಂದ. ತಮ್ಮ ತರುವಾಯ ಜವಾಹರಲಾಲರೇ ನಾಯಕರೆಂಬುದನ್ನು ಗಾಂಧೀಜಿ ಪ್ರಕಟಗೊಳಿಸುವ ಮುನ್ನ ಭಾರತೀಯರೆಲ್ಲರ ಹೃದಯಗಳಲ್ಲಿ ಆ ಅಂಶ ಅಸ್ಪಷ್ಟವಾದರೂ ಮಿಡಿಯುತ್ತಿತ್ತು. ಚೀನೀ ವಿದ್ವಾಂಸನೊಬ್ಬನು ಹಲವು ಮಾತುಗಳಿಂದ ಪರಿಸ್ಥಿತಿಯನ್ನು ವರ್ಣಿಸುತ್ತ "ಭಗವದ್ವಾಕ್ಯವೆಂದು ಭಾವಿಸಿ ತಮ್ಮ ಅಂತಃಕರಣದ ನುಡಿಯನ್ನು ಗಾಂಧೀಜಿ ಕೇಳಿ ಅದನ್ನೇ ತಾವೂ ನುಡಿಯುತ್ತಾರೆ; ಅದನ್ನು ತಿಳಿದು ಜವಾಹರಲಾಲರು ಅದರಂತೆ ಘೋಷಣೆಗೆಯ್ಯುತ್ತಾರೆ; ಆ ಘೋಷಣೆಯನ್ನು ಪರಮ ವಿಶ್ವಾಸ ಭಕ್ತಿಗಳಿಂದ ಭಾರತೀಯ ಜನರು ಸ್ವೀಕರಿಸುತ್ತಾರೆ" ಎನ್ನುತ್ತ ಕಟ್ಟಿದ ವಾಕ್ಯಪರಂಪರೆ ವಾಸ್ತವವಲ್ಲವೆ?

# VII

## ಪುಣ್ಯ ಪಿಯ್ಯೂಷ ಪ್ರತಾಪ

ಲಾಹೋರ್ ಕಾಂಗ್ರೆಸ್ ನಡೆದಾಗ ಗ್ರಾಮವೃದ್ಧನೊಬ್ಬನು ಬಾಪುಜಿಯ ಬಿಡದಿಯೊಳಕ್ಕೆ ಬಂದು ಮಹಾದೇವ ಭಾಯಿಯೊಡನೆ ಮಾತನಾಡುತ್ತ ಸಂದರ್ಭವಶಾತ್ "ಇನ್ನೇನು ಮೋತಿಲಾಲರ ಮಗನಿಗೆ ಪಟ್ಟವಾಯಿತಲ್ಲ, ವೈಸರಾಯಿ ಲಾಟ್ ಸಾಹೇಬರು ಗಂಟುಮೂಟೆ ಕಟ್ಟಿಕೊಂಡು ಹೊರಟರೋ?" ಎನ್ನುತ್ತ ಹಾಲಹಸುಳೆಯಂತೆ ಕೇಳಿದನಂತೆ. ಆ ಗ್ರಾಮವೃದ್ಧನಿಗೆ ತೋಚಿದುದು ಹಾಗೆ.

ಮುಂದೆ ನುಗ್ಗುವ ಆತುರ ಜವಾಹರಲಾಲರಲ್ಲಿ ಮೊದಲು ಕಾಣಿಸುವ ಅಂಶ; ಕರ್ತವ್ಯಸನ್ನದ್ಧವಾದ ಉತ್ತಮೋತ್ತಮ ಜಾತಿಯ ಕುದುರೆ ಕಾಲಿನಿಂದ ನೆಲವನ್ನು ಕೆರೆಯುತ್ತ ಮೂಗಿನಿಂದ ಘುಸುಡಿಸುತ್ತ ಕ್ಷಣ ನಷ್ಟವಾದರೂ ಸಹಿಸದಿರುವಂತೆ. ಜವಾಹರಲಾಲರನ್ನು ಚನ್ನಾಗಿ ಬಲ್ಲವರೊಬ್ಬರು ಅಮೆರಿಕನ್ನರಿಗಾಗಿ ವಿವರಿಸುತ್ತ ಈ ಹೋಲಿಕೆಯನ್ನೇ ಎತ್ತಿ ಹಿಡಿದರು. ಸರ್ವೋತ್ಕೃಷ್ಟ ಯಜ್ಞ ತುರಗವೆಂದರೆ ಆ ಸಾಮ್ಯ ಸಮರ್ಪಕವಾದೀತು!

ಜವಾಹರಲಾಲರ ಸ್ವಭಾವ ಸಾಮರ್ಥ್ಯಗಳನ್ನು ಚನ್ನಾಗಿ ತಿಳಿದವರಾದರೂ ಆತುರಕ್ಕೆಡೆಗೊಟ್ಟೋ ಕೂಲಂಕಷ ವಿಚಾರ ಮಾಡಲಾರದೆಯೋ "ಈತನು ಭಾರತೀಯರಲ್ಲಿ ಸೇರಿಕೊಂಡಿರುವ ಇಂಗ್ಲಿಷರವನು" ಎಂದುಕೊಳ್ಳುವುದುಂಟು. ಇಂಗ್ಲಂಡಿನಲ್ಲಿ ಶಿಕ್ಷಾರ್ಥಿಯಾಗಿದ್ದಾಗಲೂ ಇಂಗ್ಲಿಷ್ ಹುಡುಗರಿಂದ ತಾವು ಯಾವುದೋ ಸೂಕ್ಷ್ಮರೀತಿಯಲ್ಲಿ ಪ್ರತ್ಯೇಕರಾದವರೆಂಬ ಪ್ರಜ್ಞೆಯಿತ್ತೆಂದು ಜವಾಹರಲಾಲರೇ ಹೇಳಿದಂಶವನ್ನು ಮರೆತಾಗ ಹಾಗೆ ಭಾವಿಸಬೇಕು. ತಮಗೂ ಜವಾಹರಲಾಲರಿಗೂ ಇರುವ ಅಂತರವನ್ನು ಕಂಡ ಕಾರಣದಿಂದಲೋ ಇಂಗ್ಲಿಷ್ ಜಾತಿಯಲ್ಲಿ ತಮಗಿರುವ ಮೆಚ್ಚುಗೆಯಿಂದಲೋ ಆ ಮಾತನ್ನಾಡಿಕೊಳ್ಳುವುದು ಸಹಜವಾಗಿರಬಹುದು; ಯದ್ಯಪಿ ಆ ಮಾತು ಯಥಾರ್ಥವಾಗಲಾರದು. ನೆಲಕ್ಕೆ ಬಿದ್ದು ಪ್ರಾಣ ಬಿಟ್ಟ ಜಿಂಕೆ ಕಣ್ಣುಬಿಟ್ಟು ನೋಡಿ

ದಾಗ ಜವಾಹರಲಾಲರ ಮನಸ್ಸಿಗಾದ ಪರಿಣಾಮ ಬಹುತರವಾಗಿ ಇಂಗ್ಲಿಷ್ ಜಾತಿಯವರಲ್ಲಿ ಕಾಣದ ಲಕ್ಷಣ. ಇತರ ದೃಷ್ಟಾಂತಗಳು ದುರ್ಲಭಗಳಲ್ಲ.

ಹಿಂದಿನ ಜೊತೆಗಾರರೊಬ್ಬರು "ತಮ್ಮ ಸಾಮರ್ಥ್ಯ ಪ್ರಭಾವಗಳ ಚಿಂತೆಯಲ್ಲಿಯೆ ಮುಳುಗಿ ವಿಚಿತ್ರ ಮಾಯಾ ಮೋಹಗಳಿಗೆ ತುತ್ತಾಗಿರ ತಕ್ಕವರು ಜವಾಹರಲಾಲರು; ಆದಕಾರಣದಿಂದ ಆತನ ವಿಷಯದಲ್ಲಿ ಎಚ್ಚರಿಕೆಯನ್ನು ಇತರರು ವಹಿಸತಕ್ಕದ್ದು ಅಗತ್ಯ"ವೆಂದು ನುಡಿದರು. ಅದನ್ನು ಪ್ರಸ್ತಾಪಿಸಿ ಜವಾಹರಲಾಲರೇ ಮುಚ್ಚುಮರೆ ಮಾಡದೆ ತಮ್ಮ ಅಂತರಂಗವನ್ನು ಬಿತ್ತರಿಸಿದ ಪರಿಯಿದು—

"ಚಿಲ್ಲರೆಯಂಶವೊಂದರಲ್ಲಿ ಮಾತ್ರ ನಮ್ಮಿಬ್ಬರಿಗೂ ಏಕಾಭಿಪ್ರಾಯ! ಜನ ಸಾಮಾನ್ಯರ ಮನೋಗತಕ್ಕೂ ನನ್ನ ಮನೋಗತಕ್ಕೂ ಹೆಚ್ಚಾದ ಅಂತರ ವುಂಟೆಂಬುದು ನಿಜ. ಆ ಅಂಶದಲ್ಲಿ ಯಾವ ಮೋಹವನ್ನೂ ನಾನು ಬೆಳೆಸಿ ಕೊಂಡಿಲ್ಲ.

ಯಾರ ಪ್ರತಿನಿಧಿ ನಾನೆಂದು ಹೇಳಿಕೊಳ್ಳಲು ನನಗೇ ಅನೇಕ ವೇಳೆ ನಿರ್ದಿಷ್ಟವಾಗಿ ತೋರುವುದಿಲ್ಲ. ಎಷ್ಟೋ ಜನರು ನನ್ನಲ್ಲಿ ವಿಶ್ವಾಸ ವಾತ್ಸಲ್ಯ ಗಳನ್ನು ಬೆಳೆಸಿದ್ದಾಗ್ಗೂ ನಾನು ಯಾರ ಪ್ರತಿನಿಧಿಯಾಗಿಯೂ ಇಲ್ಲ. ಪೌರಸ್ತ್ಯ ಪಾಶ್ಚಾತ್ಯಗಳೆರಡೂ ನನ್ನಲ್ಲಿ ವಿಚಿತ್ರವಾಗಿ ಮಿಶ್ರಣಗೊಂಡಿವೆ; ಯಾವೊಂದೆಡೆ ಯಲ್ಲಿಯೂ ನನಗೆಡೆಯಿಲ್ಲ. ನನ್ನ ಯೋಚನೆಗಳನ್ನೂ ಭಾವನೆಗಳನ್ನೂ ಪರೀ ಕ್ಷಿಸಿದಲ್ಲಿ ಅವುಗಳ ರೀತಿ ಪಾಶ್ಚಾತ್ಯ ರೀತಿಯೆನ್ನಬಹುದೇನೋ! ಪರಂತು ತನ್ನ ಎಲ್ಲ ಮಕ್ಕಳನ್ನೂ ತಬ್ಬಿಕೊಂಡಿರುವಂತೆ ಭಾರತವು ನನ್ನನ್ನೂ ತಬ್ಬಿಕೊಂಡು ಬಿಡಲಾರೆನೆನ್ನುತ್ತದೆ. ಭಾವನೆಯಲ್ಲಿ ಸ್ಥಿರಗೊಂಡ ಜನನಾಂತರ ಸೌಹಾರ್ದ ವೆಂಬ ಪರಂಪರೆಯ ರಾಶಿಯೆಷ್ಟೋ ನನ್ನ ಬೆನ್ನಂಟಿದಂತೆಯೆ ಇದೆ. ನೂರಾರು ಬ್ರಾಹ್ಮಣ ಜನ್ಮಾಂತರಗಳ ಅಸ್ಫುಟ ಸ್ಮರಣೆಯೆಲ್ಲಿಯೋ ಆಳವಾಗಿ ಅಂತರಂಗ ದಲ್ಲಿ ಅಡಗಿದೆ. ಆ ಪುರಾಕೃತವನ್ನು ತ್ಯಜಿಸಲಾರೆ; ಇತ್ತೀಚೆಗೆ ಪ್ರಾಪ್ತಿಯಾದು ದನ್ನೂ ಬಿಡಲಾರೆ. ಎರಡೂ ನನ್ನ ಜೀವದ ಅಂಗಗಳಾಗಿ ಪರಿಣಮಿಸಿವೆ. ಮೂಡಲಲ್ಲಿದ್ದರೂ ಪಡುವಲಲ್ಲಿದ್ದರೂ ಅದರಿಂದ ನನಗೆ ಹಿತವಾಗಿಯೆ ಇರು ತ್ತದೆ. ತಥಾಪಿ ನನ್ನ ಪಾಲಿನ ಕೆಲಸ ಕಾರ್ಯಗಳಲ್ಲಿಯೂ ಜೀವನದಲ್ಲಿಯೂ ನಾನೊಬ್ಬೊಂಟಿಗನಾಗಿದ್ದಂತೆಯೆ ಪ್ರಜ್ಞೆಗೆ ಅರಿಕೆಯಾಗುವುದು. ಪಡುವಣ ನಾಡುಗಳಲ್ಲಿ ನಾನು ಪರದೇಶಿಯೋ; ನಾನು ಪಾಶ್ಚಾತ್ಯನೆನಿಸಲಾರೆ. ಸ್ವಂತ ವಾದ ನಾಡಿನಲ್ಲಿಯೂ ಕೆಲವೇಳೆಗಳಲ್ಲಿ ದೂರದಾಗತನಂತೆ ಭಾಸವಾಗುತ್ತದೆ.

ದೂರದಲ್ಲಿ ಕಾಣುವ ಪರ್ವತವನ್ನು ಸಮೀಪಿಸಿ ಆರೋಹಣಗೈಯು ವುದು ಸುಕರವೆನ್ನಿಸುತ್ತದೆ; ಪರ್ವತ ಶೃಂಗವೂ ಬಾರೆಂದು ಸಂಜ್ಞೆಮಾಡು ತ್ತದೆ. ಸಮೀಪ ಸಾರಿದಾಗ ಮಾತ್ರ ಎಡರುಗಳು ಕಂಡುಬಂದು ಮೇಲಕ್ಕೇರಿ ದಂತೆಲ್ಲ ಪ್ರಯಾಸ ಹೆಚ್ಚುತ್ತ ಶಿಖರವೆಲ್ಲಿಯೋ ಮೇಘಮಂಡಲದಲ್ಲಿ ಅದೃಶ್ಯ ವಾಗುವುದು. ತಥಾಪಿ ಏರುವ ಪ್ರಯತ್ನ ಲಾಭವೇ ಯೋಗ್ಯ ಪ್ರಾಪ್ತಿ; ಪ್ರಯತ್ನದಲ್ಲಿಯೇ ಸಂತೋಷವುಂಟು, ತೃಪ್ತಿಯುಂಟು. ಪರಿಣಾಮಕ್ಕಿಂತಲೂ ಪ್ರಯತ್ನವೇ ಪ್ರಾಯಶಃ ಜೀವನದಲ್ಲಿ ಅರ್ಘ್ಯವಾದುದು. ಅನೇಕವೇಳೆಗಳಲ್ಲಿ ಸರಿಯಾದುದನ್ನು ತಿಳಿದುಕೊಳ್ಳಲು ಕಷ್ಟ; ತಪ್ಪಾದುದನ್ನು ತಿಳಿದುಕೊಳ್ಳಲು ಸುಲಭ. ತಪ್ಪೆಂದು ತಿಳಿದುದನ್ನು ತಪ್ಪಿಸಿಕೊಳ್ಳುವಷ್ಟೇ ಸಾಕು. ದೊಡ್ಡತನ ತುಂಬಿದ್ದ ಸಾಕ್ರೆಟೀಸನ ಮಾತುಗಳನ್ನು ವಿನೀತನಾಗಿ ಹೇಳಿಕೊಳ್ಳಬಹುದಾದರೆ ಇಷ್ಟನ್ನೇ ಹೇಳಿಕೊಂಡೇನು 'ಮರಣವೆಂಬುದೇನೋ ನಾನರಿಯೆ. ಒಳ್ಳೆ ಯದೇ ಆಗಿರಬಹುದು; ಅದನ್ನು ಕಂಡು ನನಗೆ ಅಂಜಿಕೆಯಿಲ್ಲ. ಆದರೆ ತನ್ನ ಪ್ರಾಕೃತವನ್ನು ವಂಚಿಸುವುದು ದೋಷವೆಂಬ ಪ್ರಜ್ಞೆಯಿದೆ. ತಪ್ಪೆಂದು ನಿರ್ಧರವಾದುದನ್ನು ತ್ಯಾಗಮಾಡಿ ಒಪ್ಪಾಗಿರಬಹುದೆಂದು ಮನಸ್ಸಿಗೆ ತಿಳಿದು ದನ್ನು ಆರಿಸಿಕೊಳ್ಳುವೆನು'."

ಅಸಹಯೋಗದ ಕರ್ತವ್ಯ ನೀತಿಯನ್ನು ಕಟ್ಟಿಕೊಂಡ ಬಳಿಕ ಮಾಂಸ ಸೇವನೆ ಉತ್ತಮವಲ್ಲವೆಂದು ಮನಸ್ಸಿಗೆ ತೋರಲಿದೇ ಮೂಲ ವಾಗಿರಬೇಕಲ್ಲವೆ! ತಲೆ ತಲಾಂತರಗಳಿಂದ ಮನೆಯಲ್ಲಿ ರೂಢಿಯಾಗಿ ದ್ದುದು, ತಮ್ಮ ದೇಹಪೋಷಣೆಗೂ ಹೊಂದಿಕೊಂಡಿದ್ದುದು. ಆದರೂ ತ್ಯಾಜ್ಯವೆನ್ನಿಸಿದುದಕ್ಕೆ ಬೇರೆ ಕಾರಣವೇನಿರಬಹುದು!

ಮಗಳಿಗೆ ತಂದೆ ಬರೆದೋಲೆಗಳ ಕೊನೆಯಲ್ಲಿ ಕಾಣುವ ಮಾತು ಗಳಿವು—

"ನಾನು ಸಾಹಿತಿಯಲ್ಲ. ಆದಾಗ್ಯೂ ಓದುಬರಹಗಳು ನನಗಿಷ್ಟ. ಸೆರೆ ಮನೆಯಲ್ಲಿ ನಾನು ಕಳೆದಿರುವ ಅನೇಕ ವರ್ಷಗಳ ಕಾಲವನ್ನು ಸಂತೋಷ ದಿಂದ ಕಳೆದೆನೆಂದು ಹೇಳಿಕೊಳ್ಳಲಾರೆನು. ತತ್ರಾಪಿ ಓದುತ್ತ ಬರೆಯುತ್ತ ಚಿತ್ತಕ್ಕೆ ಸಮಾಧಾನ ತಂದುಕೊಂಡೆನು. ನಾನು ಸಾಹಿತಿಯಂತೂ ಅಲ್ಲ; ಚರಿತ್ರಕಾರನೂ ಅಲ್ಲ. ಹಾಗಾದರೆ ನಾನೇನು? ನೇರವಾದ ಉತ್ತರಕೊಡಲು ಕಷ್ಟವಾದ ಪ್ರಶ್ನೆ. ಎಷ್ಟೋ ವಿಷಯಗಳಲ್ಲಿ ನಾನು ಕೈಹಾಕಿದ್ದೇನೆ; ಕಾಲೇಜಿ ನಲ್ಲಿ ಶಾಸ್ತ್ರವ್ಯಾಸಂಗವನ್ನಾರಂಭಿಸಿ ತರುವಾಯ ನ್ಯಾಯವಾದಿತ್ವವನ್ನು ಕಟ್ಟಿ ಕೊಂಡೆ. ಅನೇಕಾನೇಕ ಇಷ್ಟಾರ್ಥಗಳನ್ನು ಬೆಳೆಸಿ ಕಡೆಗೆ ಭಾರತದಲ್ಲಿ

ಅನೇಕರಿಗೆ ಕಸಬಾಗಿರುವುದನ್ನು ನಾನೂ ಇಟ್ಟುಕೊಂಡೆ. ಈಗ ನನ್ನ ಕಸಬೇನೆಂದರೆ ಜೈಲಿಗೆ ನುಗ್ಗುತ್ತಿರುವುದು."

ತಮ್ಮ ವಿಷಯವನ್ನು ತಾವೇ ಹೇಳಿಕೊಳ್ಳುವ ಸಮಯದಲ್ಲಿ ಸಹಜ ವಿನೀತರಾದವರು ಇನ್ನೂ ವಿನಯಕ್ಕಾಗಿ ತಪಿಸುವ ಅವಸ್ಥೆಯಲ್ಲಿ ದಿಟವೆಂಬುದಕ್ಕೆ ಸ್ವಲ್ಪ ಕೊರತೆಯೇ ಅನಿವಾರ್ಯ ಪರಿಣಾಮ. ಉತ್ಕೃಷ್ಟ ಜಾತಿಯಲ್ಲಿಯೇ ಉತ್ಕೃಷ್ಟ ವಿನಯವನ್ನು ಕಾಣಬೇಕಾದರೆ. ತಾವು ಸಾಮಾನ್ಯ ಜನರ ಪ್ರತಿನಿಧಿಯಾಗಲಾರರೆಂಬ ಅಂಶವನ್ನು ದ್ಯೋಷದಂತೆ ಹೇಳಿಕೊಂಡರು; ಇತರರು ತಮ್ಮನ್ನು 'Aristocratic'—ಶ್ರೇಷ್ಠಜಾತ ಲಕ್ಷಣಗಳಿಂದ ಲಕ್ಷಿತನೆಂದುದನ್ನು ಸೂಚಿಸಿ ಇತರರ ಕ್ಷಮೆಯನ್ನು ಬೇಡುವಂತೆ ಕಾಣಿಸಿಕೊಂಡರು. ಮೃದುತಮವಾದ ಈ ವಿನಯವನ್ನು ಮೆಚ್ಚುವುದರಲ್ಲಿ ಜವಾಹರಲಾಲರು ಯಥಾರ್ಥವಾಗಿ ಪೃಥ್ವಿಗೆಲ್ಲ ಸರ್ವೋತ್ಕೃಷ್ಟಜಾತರೆಂಬುದನ್ನು ಮರೆಯಲಾಗದು. ಇಡೀ ಮಾನವ ಸಮುದಾಯಕ್ಕೆಲ್ಲ ಅತ್ಯುತ್ತಮವೆನಿಸಿದ ಆರ್ಯಸಮೂಹದ ಅತಿ ಪ್ರಾಚೀನ ಶಾಖೆಯಲ್ಲಿಯೂ ಅತಿ ತೇಜಸ್ವಿ ಕುಲದಲ್ಲಿ ಜನ್ಮ. ಇತರ ದೇಶಗಳಲ್ಲಿ ಭೋಗಭಾಗ್ಯಗಳಿಗೋ ಪೌರುಷ ಪ್ರತಾಪಗಳಿಗೋ ಖ್ಯಾತಿವೆತ್ತವರು ಶ್ರೇಷ್ಠಜಾತರೆನಿಸಿದರೆ ಭಾರತದಲ್ಲಿ ಸಂಸ್ಕಾರ ತೇಜಸ್ಸುಗಳಿಗೆ ಖ್ಯಾತಿವೆತ್ತವರು ಶ್ರೇಷ್ಠರೆನಿಸಿದ ಕಾರಣದಿಂದ ವಿಮರ್ಶಾ ಬುದ್ಧಿಯುಳ್ಳವರು ಭಾರತೀಯ ಬ್ರಾಹ್ಮಣ ಗುಂಪನ್ನು ಪೃಥ್ವಿಗೆಲ್ಲ ಸರ್ವಶ್ರೇಷ್ಠ ಮಾನಿಷ್ಠ ಜಾತಿಯವರೆಂದು ಕರೆವರು. ಜವಾಹರರದು ಆ ಜಾತಿ. ಆದುದರಿಂದ ಪ್ರತ್ಯಂಶದಲ್ಲಿಯೂ ಮಾನಿಷ್ಠರಾಗಿ ಕಾಣುವುದು ಸಹಜ. ರಾಜಸ್ಥಾನದ ರಾಜಪುತ್ರವರೇಣ್ಯರು ಜವಾಹರಲಾಲರಿಗಿಂತ ತಮ್ಮ ವಂಶ ದೊಡ್ಡದೆಂದು ಹೇಳಲಾಗದು; ಇಂಗ್ಲಂಡಿನ ಲಾರ್ಡ್ ಗುಂಪಿನವರು ಹೇಳಲಾದೀತೆ? ಚಕ್ರಗೋಷ್ಠಿಗಳ ಕಾಲದಲ್ಲಿ ಲಾರ್ಡ್ ಸ್ಯಾಂಕಿ ಎಂಬ ಇಂಗ್ಲಿಷ್ ಶ್ರೀಮಂತನೊಂದು ಸಂದರ್ಭದಲ್ಲಿ "ಜವಾಹರಲಾಲರೂ ಇಲ್ಲಿಗೆ ಬಂದಿದ್ದರೆ ಚನ್ನಾಗಿರುತ್ತಿತ್ತು" ಎಂದನಂತೆ. ಇತರರಾದರೆ ಹಿಗ್ಗಬಹುದಾಗಿತ್ತು; ಅಥವಾ ಕ್ಷಮಾಪಣೆ ಕೇಳುವ ರೀತಿಯಲ್ಲಿ "ಬರಲಾಗದಿರುವುದರಿಂದ ಮನ್ನಿಸಿಕೊಡಬೇಕು" ಎನ್ನುತ್ತ ವಿನಯ ಕ್ಷುದ್ರತೆ ಕಾಣಿಸ

ಬಹುದಾಗಿತ್ತು. "ಲಾರ್ಡ್ ಸ್ಯಾಂಕಿಯ ಬಯಕೆಯನ್ನು ನಾನು ಸಲ್ಲಿಸಿಕೊಡಲಾಗುವುದಿಲ್ಲ" (I cannot oblige Lord Sankey) ಎಂದು ತಕ್ಷಣವೇ ಹೇಳಿಬಿಟ್ಟು ಜವಾಹರಲಾಲರು ತಮ್ಮ ಚಿತ್ತಕ್ಕೆ ಯಾವ ಮೋಹವೂ ಅಂಟಿಕೊಳ್ಳದಿರುವ ಅಂಶವನ್ನು ಅತಿ ಸಹಜರೀತಿಯಲ್ಲಿ ಬೀರಿದರು.

ತಮ್ಮ ಮನೋವ್ಯಾಪಾರದಲ್ಲಿ ಪಾಶ್ಚಾತ್ಯರೀತಿಯೇ ಹೆಚ್ಚಾಗಿ ಕಾಣುತ್ತದೆಯೆಂಬ ಅಂಶದ ಅರ್ಥಮಾಡುವಾಗ ಸುತ್ತಮುತ್ತಣ ಸ್ಥಿತಿಗತಿಗಳನ್ನು ಮರೆಯದಿದ್ದು ನಿರ್ಧರಿಸಿಕೊಳ್ಳಬೇಕು. ಸ್ವಭಾಷೆಯನ್ನೂ ಸ್ವಸಂಸ್ಕೃತಿಯನ್ನೂ ತಿಳಿದುಕೊಳ್ಳುವ ಮೊದಲೇ ಇಂಗ್ಲಿಷ್ ಭಾಷಾ ಸಂಸ್ಕೃತಿಗಳನ್ನು ರೂಢಿಸಿಕೊಂಡವರೆಲ್ಲರಿಗೂ ಅದೇ ಲಕ್ಷಣವಲ್ಲವೇ? ಇಂಗ್ಲಿಷ್ ಜಾತಿಯ ಹುಡುಗನನ್ನು ಬೆಳೆಸಿದಂತೆಯೇ ಮೋತಿಲಾಲರು ಜವಾಹರಲಾಲರನ್ನು ಬೆಳೆಸಿ ಇಂಗ್ಲಂಡಿನಲ್ಲಿಯೆ ಶಾಲೆಗೆ ಸೇರಿಸಿದಾಗ ಆ ಲಕ್ಷಣ ಅನಿವಾರ್ಯವಾಯಿತೋ ಇಲ್ಲವೋ? ಕಾಲಿದಾಸ ಬರೆದ ಶ್ಲೋಕವೊಂದನ್ನಾದರೂ ತಿಳಿಯದೆ ನಮ್ಮಲ್ಲೆಷ್ಟೋ ಮಂದಿ ಷೇಕ್ಸ್ ಪಿಯರ್ ಬರೆದ ನಾಟಕಗಳನ್ನು ಓದಿಕೊಳ್ಳುವ ಕೃತ್ರಿಮ ನಮಗೆ ಸಹಜವಾಗಿ ಕಾಣುವ ಕಾಲವಿದು. ಸಮುದ್ರವನ್ನು ಕಾಣದವರಾದರೂ ಇಂಗ್ಲಿಷ್ ಪದ್ಯಗಳನ್ನೋದುತ್ತಾ ವರ್ಣನೆಯನ್ನೋದಿ ಆನಂದಪಡುತ್ತೇವೆ! ಜವಾಹರಲಾಲರು ಸಮುದ್ರವನ್ನು ಕಾಣದವರಲ್ಲ; ಆದರೂ ಹಿಮವತ್ಪರ್ವತ* ಪ್ರಾಂತವನ್ನು ಸ್ಮರಿಸಿದಾಗಲೇ ದಿವ್ಯವಾದ ಆನಂದವನ್ನು ಅನುಭವಿಸುವರು. ಆ ಪ್ರದೇಶಗಳನ್ನು ನಮಗೆ ಜವಾಹರಲಾಲರು ವರ್ಣಿಸಿಕೊಟ್ಟಂತೆ ಜಾತ್ಯಾ ಇಂಗ್ಲಿಷ್ ಕವಿಗಳಾದವರೆಲ್ಲರೂ ವರ್ಣಿಸಿಕೊಟ್ಟಾರೆಯೆ? ನದೀಪರ್ವತಗಳನ್ನೂ ಮೇಘಮಾರುತಗಳನ್ನೂ ಕಂಡು ನಲಿವ ಜವಾಹರರ ಚಿತ್ತವೃತ್ತಿ ಅತ್ಯವಶ್ಯವಾಗಿ ಭಾರತೀಯವೆಂದೇ ನಿರ್ಣಯಿಸಿಕೊಳ್ಳಬೇಕು. ಕೃತ್ರಿಮ ಕಾರಣಗಳಿಂದ ಮೇಲುಗಡೆ ಮುಚ್ಚಿರುವ ಮುಸುಕನ್ನು ಎಳೆದಾಗ ಭಾರತೀಯತ್ವವೇ ಎದ್ದು

* ಉತ್ತಮ ವಿಮರ್ಶಕಾರರೆಲ್ಲರೂ ಕಾಲಿದಾಸನ ವಿಚಾರವಾಗಿ "ಹಿಮವಂತನಿಲ್ಲದೆ ಕಾಲಿದಾಸನಿಲ್ಲ" ಎಂದುದು ಜ್ಞಾಪಕಕ್ಕೆ ಬರಬಹುದು.

ಕಾಣುವುದು. ಅನೇಕಾನೇಕ ಸಂಖ್ಯೆಯ ಇತರ ಭಾರತೀಯರು ತಮ್ಮ ಹಾಗಿಲ್ಲದಿರುವುದರಿಂದ ತಮ್ಮಲ್ಲಿಯೇ ಸೊಟ್ಟನ್ನಿಟ್ಟುಕೊಂಡಂತೆ ಕಾಣುವುದಿಲ್ಲವೆ?

ತಾನು, ತನ್ನ ರೀತಿ, ತನ್ನ ಕೀರ್ತಿಯೆಂದು ತನ್ನಲ್ಲಿಯೆ ಕಲ್ಪನೆಗೆ ತೊಡಗುವುದು ಶಿಕ್ಷಣದಲ್ಲಿ ಎಲ್ಲರಿಗೂ ಸಾಮಾನ್ಯವಾಗಿ ತೋರಬೇಕಾದ ಪರಿಣಾಮ. ಸ್ವಂತ ಯೋಗ್ಯತಾಪರೀಕ್ಷೆಯಾಗುವುದಾದರೆ ಅದರಿಂದ ಮೇಲೇ ಬದೀತು. ಸ್ವಂತ ಪರೀಕ್ಷೆಯಲ್ಲದೆ ಸ್ವಂತ ಪ್ರತಿಷ್ಠೆ ಪ್ರಗಲ್ಭಗಳಿಗೆ ಆ ಚರ್ಯೆಯಲ್ಲಿ ಆಶ್ರಯ ದೊರೆತರೆ ತಲೆಬೀಗಿದಂತಾಗುವುದು; ತಲೆ ತಿರುಗಿದೆಯೆನ್ನುವ ರೋಗಕ್ಕೆ ಆರಂಭವಾಗುವುದು. ವಿಚಿತ್ರ ಮಾಯಾಮೋಹಗಳಿಗೆ ಜವಾಹರಲಾಲರು ವಶರಾಗಿಯೂ ಇಲ್ಲ; ಆಗುವಂತೆಯೂ ಇಲ್ಲ. ಆತನ ಸೂಕ್ಷ್ಮ ಮನೋವೃತ್ತಿಯಲ್ಲಿ ಮೊದಲು ಕಾಣತಕ್ಕುದನ್ನು ನಿರಹಂಕಾರವೆಂದರೆ ಮಾತ್ರ ಸಾಲದು; ನಿರಹಂಭಾವವೆಂದರೂ ಒಪ್ಪುವುದಿಲ್ಲ, ನಿರಹಂಪ್ರಜ್ಞೆಯೆನ್ನಬೇಕು. ತನ್ನನ್ನು ತಾನು ಮರೆತಾಗಲೇ ಯಾರ ಮನೋಭಾವವಾದಾಗ್ಲೂ ಮುಸುಕು ತೆರೆದಂತೆ ಕಾಣತಕ್ಕುದು. ಜವಾಹರಲಾಲರ ಮನೋಧರ್ಮವನ್ನು ಅಂತಹ ಸಮಯಗಳ ವರ್ತನೆಯಿಂದಲೇ ಗುರುತಿಸಬೇಕು. ವಾಸ್ತವವಾಗಿ ಸ್ವಂತ ಚಿಂತೆ ಜವಾಹರಲಾಲರ ಮನಸ್ಸಿಗೆ ಹಿಂಸೆಯಾಗಿಯೆ ಪರಿಣಮಿಸಿದ ಅಂಶ ಸ್ಪಷ್ಟವಾಗುತ್ತದೆ.

ದೃಷ್ಟಾಂತಗಳನ್ನು ಎತ್ತಿಕೊಂಡು ವಿಶದಗೊಳಿಸಿಕೊಳ್ಳುವ ಮುನ್ನ ಮೋತಿಲಾಲರೊಡನೆ ಜವಾಹರಲಾಲರನ್ನು ಹೋಲಿಸಿಕೊಂಡರೆ ಹೇಗೆ ಕಾಣುವುದು? ಗಂಭೀರದೊಂದಿಗೆ ಔದ್ಧತ್ಯವನ್ನೂ ಕಾಣಿಸಿಕೊಡುತ್ತಿದ್ದ ಮೋತಿಲಾಲರನ್ನು ಧೀರೋದ್ಧತರ ರಾಶಿಗೆ ಸೇರಿಸಬೇಕಾದೀತು; ಆತನಲ್ಲಿ ಅಹಂಭಾವವೆಂಬುದು ದರ್ಪಕ್ಕೆಡೆಗೊಟ್ಟಿತ್ತು. ಜವಾಹರಲಾಲರನ್ನು ಧೀರೋದಾತ್ತ ಧೀರಲಲಿತರ ರಾಶಿಯಲ್ಲಿ ಸೇರಿಸಬೇಕು. ಅಹಂ ಎಂಬುದು ಶೂನ್ಯಗೊಂಡ ಆತನ ಮನಸ್ಸಿನಲ್ಲಿ 'ನವಕುಸುಮಕೋಮಲ'ವೆಂದು ವರ್ಣಿಸಬಹುದಾದ ಸೌಕುಮಾರ್ಯ ತುಂಬಿರುವುದಲ್ಲದೆ ಮಾನದೃಷ್ಟಿ ಸೂಕ್ಷ್ಮವಾಗಿರುತ್ತದೆ. ನಾಟಿ ಆರಭಿರಾಗಗಳ ಗಂಭೀರ ಗರ್ಜನೆ

ಮೋತಿಲಾಲರದಾದರೆ ಬೇಗಡೆ ಬಿಲಹರಿಗಳ ಪೌರುಷ ಮಾಧುರ್ಯ ಜವಾಹರಲಾಲರದು.

'ಸಾಹಿತಿಯೂ ಅಲ್ಲ, ಚರಿತ್ರಕಾರನೂ ಅಲ್ಲ' ಎಂಬುದು ವಿನೋದಕ್ಕಾಗಿ ತಮ್ಮನ್ನು ತಾವೇ ಮೃದುಹಾಸ್ಯ ಮಾಡಿಕೊಂಡಮಾತು ಮಾತ್ರ. ಜವಾಹರಲಾಲರ ಸ್ವಭಾವದಲ್ಲಿ ಮೃದುತನ ಮಾಧುರ್ಯಗಳೇ ಅಸ್ತಿಭಾರದಂತಿರುವುದನ್ನೂ ಆ ಗುಣಗಳೆಷ್ಟು ಸೂಕ್ಷ್ಮರೀತಿಯಲ್ಲಿ ಆತನ ಅಂತಃಕರಣವನ್ನು ತುಂಬಿಕೊಂಡಿವೆಯೆಂಬುದನ್ನೂ ಕಾಣಲು ದೃಷ್ಟಾಂತಗಳೆಷ್ಟನ್ನೋ ಸೇಕರಿಸಬಹುದು. ಆದಾಗ್ಗೂ ರೈತಾಪಿ ಜನರ ಮಧ್ಯೆ ಹೊರಟ ಸಂದರ್ಭದಲ್ಲಿ ಅವಮಾನ ಖೇದಗಳು ತಮ್ಮ ಮನಸ್ಸನ್ನಾಕ್ರಮಿಸಿದ ಬಗೆಯನ್ನು ಆತನ ಮಾತುಗಳಿಂದಲೇ ತಿಳಿಯಬೇಕು.

"ಚಿಂದಿ ಚಿಂದಿಯಾಗಿ ಹರಿದ ಬಟ್ಟೆಗಳನ್ನು ಧರಿಸಿ ಕಡುಬಡವರಾಗಿಯೂ ಅತಿದೀನರಾಗಿಯೂ ಇದ್ದ ಆ ಗ್ರಾಮಸ್ಥರ ಮುಖಗಳು ಮಾತ್ರ ಆ ವೇಳೆಗೆ ಉದ್ದೀಪನಗೊಂಡಿದ್ದವು. ಯಾವುದೋ ದಿವ್ಯಘಟನೆ ನಡೆದೀತೆಂಬ ಆಸೆ ಹಳ್ಳಿಗಾರ ಹೆಂಗಸರಲ್ಲಿಯೂ ಗಂಡಸರಲ್ಲಿಯೂ ಹುಟ್ಟಿ ಅವರ ಕಣ್ಣುಗಳು ಹೊಳಪುಗೂಡಿದ್ದವು. ಅತಿ ದೀರ್ಘಕಾಲದಿಂದ ಭರಿಸಲಾರದೆ ಅನುಭವಿಸಿದ್ದ ದುಃಖ ಸಂಕಟಗಳು ಯಾವುದೋ ದಿವ್ಯ ಸಂಭವದಿಂದ ಮಾಯವಾಗಿ ತಮ್ಮ ಬಾಳಿನಲ್ಲಿ ಸುಖಸಮಾಧಾನಗಳು ತೋರಿಕೊಂಡಾವೆಂಬ ಆಸೆ ಅವರ ಮನಗಳಲ್ಲಿ ಹುಟ್ಟಿತ್ತು. ನಮ್ಮನ್ನು ಕಂಡಕೂಡಲೆ ತಮ್ಮ ವಿಶ್ವಾಸವೆಲ್ಲವನ್ನೂ ನಮ್ಮ ಮೇಲೆ ಸುರಿಸುತ್ತ ಪ್ರೀತಿಯಿಂದಲೂ ಆಸೆಯಿಂದಲೂ ತುಂಬಿದ ನೋಟವನ್ನು ಬೀರುತ್ತ ಯಾವುದೋ ಪರಮಮಂಗಲಕರವಾದ ಸುದ್ದಿಯನ್ನು ನಾವು ಹೊತ್ತು ತಂದು ಅವರೆಲ್ಲರನ್ನೂ ಸುಖಸಾಮ್ರಾಜ್ಯಕ್ಕೆ ಕರೆದೊಯ್ಯುವೆವೆಂಬ ನಂಬಿಕೆಯನ್ನು ಕಾಣಿಸಿದರು. ಅವರ ದುಃಸ್ಥಿತಿಯನ್ನೂ ಅಪಾರ ಕೃತಜ್ಞತೆಯನ್ನೂ ಕಂಡಾಗ ನನ್ನ ಮನಸ್ಸಿನಲ್ಲಿ ಅವಮಾನವೂ ಅವಮಾನದೊಡನೆ ಖೇದವೂ ಮುತ್ತಿಕೊಂಡಿತು. ಅರೆಬೆತ್ತಲೆಯಾಗಿ ನಿತ್ಯಕಷ್ಟವನ್ನು ಸಹಿಸಿಕೊಂಡು ನಾಡಿನ ಮಕ್ಕಳು ತಪಿಸುತ್ತಿರುವ ಘೋರಸ್ಥಿತಿಯೆದುರಿನಲ್ಲಿ ನನ್ನಂತಹ ಪಟ್ಟಣಿಗರು ನಡೆಸುತ್ತಿದ್ದ ನೆಮ್ಮದಿಯ ಜೀವನವನ್ನೂ ಕ್ಷುಲ್ಲಕವಾದ ರಾಜಕೀಯ ಪ್ರಸಕ್ತಿಗಳನ್ನೂ ಸ್ಮರಿಸಿ ಅವಮಾನಗೊಂಡೆ; ದೇಶದ ಅವನತಿಯನ್ನೂ ಸರ್ವವ್ಯಾಪ್ತ ದಾರಿದ್ರ್ಯವನ್ನೂ ಸ್ಮರಿಸಿ ವಿಷಾದದಲ್ಲಿ ಮುಳುಗಿದೆ. ಹೊಟ್ಟೆಗಿಲ್ಲದೆ ಬಟ್ಟೆಯಿಲ್ಲದೆ ನೆಲಕ್ಕೆ ಬಿದ್ದು ಅತಿದೀನಾವಸ್ಥೆಯಲ್ಲಿ ತೆವಳುವ ಮಾತೃಭೂಮಿಯ

ಚಿತ್ರ ಮನಸ್ಸಿಗೆ ಸ್ಫುಟವಾಯಿತು. ಅವಮಾನ ವಿಷಾದಗಳೊಂದಿಗೆ ಮನಸ್ಸಿನಲ್ಲಿ ಭಯವೂ ತೋರಿ ಅತಿಯಾಗಿ ಕಳವಳಗೊಂಡೆನು. ದೂರದಿಂದ ಬಂದವರು ನಾವು! ಆಕಸ್ಮಿಕವಾಗಿ ಕಂಡವರು ನಾವು! ಆದರೂ ನಮ್ಮಲ್ಲಿ ಅವರು ಕಾಣಿಸಿದ ಅಪಾರ ಭಕ್ತಿಯನ್ನು ಕಂಡು ನನ್ನ ಮನಸ್ಸಿನಲ್ಲಿ ಸಂಕಟವಾಯಿತು; ಕರ್ತವ್ಯದ ಘನತೆಯನ್ನು ನೆನಸಿ ಭಯವಾಯಿತು."

ಮುಂದೆಯೂ ತಮ್ಮನ್ನು ಕಂಡು ಸಾಮಾನ್ಯ ಜನರು ತೋರಿದ ವಿಶ್ವಾಸದೆದುರಿನಲ್ಲಿ "ನಾವೆಷ್ಟು ಸಣ್ಣವರೀ ಲೋಕದಲ್ಲಿ!" ಎಂದುಕೊಂಡವರಲ್ಲವೆ! ಈ ಸಂದರ್ಭದಲ್ಲಿ ಪ್ರಕಟವಾಗುವ ಸೌಕುಮಾರ್ಯಕ್ಕೆ ಹೃದಯದ ಆರ್ದ್ರತೆ ಮೂಲ. ಇತರರ ಕಷ್ಟವನ್ನು ಕಂಡಾಗ ಸಹಿಸಲಾರದ ಮೃದುತ್ವ. ದುರ್ಬಲರಾದವರಲ್ಲಿ ಅತಿಶಯವಾದ ಅನುಕಂಪ ತೋರುವುದಕ್ಕೂ ಅದೇ ಮೂಲ. ರೋಗಿಗಳನ್ನುಪಚರಿಸುವುದರಲ್ಲಿ ಜವಾಹರಲಾಲರು ಮೃದುಮಧುರ ರೀತಿಯಿಂದ ವರ್ತಿಸುವರೆಂದು ತಂಗಿ ಕೃಷ್ಣೆಯಲ್ಲದೆ ಇತರರೂ ಗುರುತಿಸಿರುತ್ತಾರೆ. ವ್ಯಾಧಿಪೀಡಿತರಾದವರನ್ನೋ ಮಕ್ಕಳನ್ನೋ ಆದರಿಸುವಾಗ ಕೋಮಲ ಹೃದಯವನ್ನು ಸಹಜವಾಗಿ ಹೊರುವ ತಾಯಂದಿರಿಗೂ ಸಹನಪರೀಕ್ಷೆಯಲ್ಲವೇ? ಕೋಮಲ ಮಾಧುರ್ಯ ತುಂಬಿದ ಜವಾಹರರ ಮನಸ್ಸಿನಲ್ಲಿ ಅವುಗಳಿಗೆ ಸಮನಾದ ಸಹನವೂ ನೆಲೆಸಿರುವುದು.

ಮಕ್ಕಳನ್ನು ಕಂಡರೆ ಅತಿ ವಿಶ್ವಾಸ. ಮಕ್ಕಳನ್ನು ಆಕರ್ಷಿಸಿ ಆಡಿಸುವುದರಲ್ಲಿ ಅತಿ ಸುಲಭ ಸರಲತೆ. ಜೈಲಿನಲ್ಲಿದ್ದುಕೊಂಡು ಇಷ್ಟ ಮಿತ್ರರ ಸಂದರ್ಶನ ಬೇಡವೆಂದಿದ್ದ ಕಾಲ ಕಳೆದಮೇಲೆ ಮನೆಯವರನ್ನು ಕಂಡಾಗ ಸಂತೋಷಿಸಿದರು; ಆದರೆ ತಂಗಿಯ ಪುಟ್ಟ ಮಗಳೊಬ್ಬಳು ಹಿಂದಿನಂತೆ ಭುಜವನ್ನೇರಿಕೊಳ್ಳುವ ಹಟ ಮಾಡಿದಾಗ ಜವಾಹರಲಾಲರು ಅಳುವನ್ನು ತಡೆಯಲಾರದೆ ಹೋದರು. ಇತ್ತೀಚೆಗೆ ರೈಲು ಪ್ರಯಾಣದಲ್ಲಿದ್ದಾಗ ಯಾವುದೋ ಸ್ಟೇಷನ್ನಿನಲ್ಲಿ ಸಣ್ಣ ಹುಡುಗನೊಬ್ಬನು ಪದ್ಯವನ್ನೊಪ್ಪಿಸಬೇಕೆಂದು ಸಿದ್ಧನಾಗಿ ಬಂದನು; ಅದನ್ನು ತಿಳಿದ ಕೂಡಲೆ ಅವನನ್ನು ಎದುರಿಗೆ ನಿಲ್ಲಿಸಿಕೊಂಡು ಪದ್ಯವನ್ನೋದಿಸಿ ಆ ಬಳಿಕ ಹೂಮಾಲೆ ಹಾಕಿ ಬೆನ್ನುತಟ್ಟಿ ಕೊಟ್ಟು ಕಳುಹಿಸಿದ ವೃತ್ತಾಂತವನ್ನು ಎಲ್ಲರೂ ಕಂಡಿರಬೇಕು. ಮಸ್ಸೂರಿಯಲ್ಲಿ ಮನೆ ಸುತ್ತ ಮೆರವಣಿಗೆ

ಹೊರಟು ರಾಷ್ಟ್ರೀಯ ಧ್ವಜ ಹಿಡಿದು ಹಾಡಿಸಿದ ದೃಶ್ಯವನ್ನು ಮರೆಯಲಾದೀತೆ? ಮಕ್ಕಳಲ್ಲಿ ಆದರವಿದ್ದಂತೆಯೆ ಜೀವ ಜಂತುಗಳಲ್ಲಿಯೂ ಆದರ ಕುತೂಹಲಗಳು. ಇರುವೆಗಳಾಗಲಿ ನೊಣಗಳಾಗಲಿ ಸಹವಾಸಿಗಳೆಂಬುದನ್ನು ಜವಾಹರಲಾಲರು ಮರೆಯುತಕ್ಕವರಲ್ಲ.

ಆಟಪಾಟಗಳಲ್ಲಿ ಸಹಜವಾದ ಆಸಕ್ತಿಯಿದ್ದರೂ ಅದನ್ನೇ ಅತಿಯಾಗಿ ಮಾಡಲಿಲ್ಲ. ಈಜುವುದರಲ್ಲಿ ಆಸೆಯಿದ್ದವರು ಈಜುವ ಛಾಂಪಿಯನ್ ಆಗಬೇಕೆಂದು ಜವಾಹರಲಾಲರೇನಾದರೂ ಆಸೆ ಕಟ್ಟಿದ್ದರೆ ಎಷ್ಟು ಆಭಾಸವಾಗುತ್ತಿತ್ತು! ಹೊಸ ಆಟವನ್ನು ಕಂಡಕೂಡಲೆ ಕಲಿತುಕೊಳ್ಳುವ ಕುತೂಹಲ; ಷಿಯಿಂಗ್ ಕಲಿತಹಾಗೆ. ಇಂಗ್ಲಂಡಿನಲ್ಲಿದ್ದಾಗ ಆಟಗಾರನ ಧರ್ಮವನ್ನು ಕಂಡಿದ್ದಕಾರಣ ಆಟದಲ್ಲಿ ಔದಾರ್ಯವೆಂಬುದು ಅಭ್ಯಾಸಕ್ಕೆ ಬಂದಿತೆಂದು ಬೇಕಾಗಿದ್ದಲ್ಲಿ ಹೇಳಿಕೊಳ್ಳಬಹುದು. ಸಾಹಸ ಪ್ರೀತಿಯೆಂಬುದೂ "ಜೂಜಾಡುವ ಸ್ವಭಾವ"ವೆಂದು ತಾವೇ ಆಡಿಕೊಂಡಿರುವ ಲಕ್ಷಣವೂ ಮೂಲತಃ ಒಂದೇ. ಪರಂತು ಜವಾಹರಲಾಲರಿಗೆ ಆಟದಲ್ಲಿಯೂ ಕೆಲಸದಲ್ಲಿಯೂ ಸಮಾನ ಶ್ರದ್ಧೆಗಳು; ಆಟವೆಂಬುದು ಕೆಲಸವಾಗಿಯೂ ಕೆಲಸವೆಂಬುದು ಆಟವಾಗಿಯೂ ಪರಿಣಮಿಸಿರುವುದು. ಕಾಲಧರ್ಮವನ್ನೋ ಮನಸ್ಸಿನ ಆಯಾಸವನ್ನೋ ಗಮನಿಸಿ ಕೆಲಸ ಮುಗಿದಾಗ ಆಟಕ್ಕೂ ಆಟ ಮುಗಿದಾಗ ಕೆಲಸಕ್ಕೂ ತೊಡಗುವರು. ಅಂತರವಿಲ್ಲದೆ ವಿಶ್ರಾಂತಿಯನ್ನೊಲ್ಲದೆ ಕೆಲವು ತಿಂಗಳ ಕಾಲ ಕೆಲಸವನ್ನು ನಡೆಸಿ ಹತ್ತುಜನರಿಂದಾಗತಕ್ಕಷ್ಟನ್ನು ಒಬ್ಬರೇ ಹೊತ್ತು ತರುವಾಯ ಪರ್ವತಪ್ರಾಂತಕ್ಕೋ ನದೀತೀರಕ್ಕೋ ಧಾವಿಸಿ ಅಲ್ಲಿ ನಿಶ್ಚಿಂತೆಯಾಗಿ ಪ್ರಕೃತಿಯೊಂದಿಗೆ ವಿಹರಿಸಬೇಕು! ಈ ಲಕ್ಷಣವನ್ನು ಗುರುತಿಸಿಟ್ಟುಕೊಂಡೇ ಮಹಾದೇವಭಾಯಿ "ಬದುಕಿರುವುದೇ ಸಂತೋಷವೆಂಬುದನ್ನು ಜವಾಹರಲಾಲರು ಜೊತೆಗಾರರಿಗೆಲ್ಲರಿಗೂ ಬೀರುತ್ತಿರುವವರು" ಎಂದುದು. ಸಿನೆಮದಲ್ಲಿ ಡಗ್ಲಾಸ್ ಫೇರ್ಬಾಂಕ್ಸ್ ತೋಳುಗಳನ್ನಂತರಿಕ್ಷಕ್ಕೆತ್ತಿ ಶ್ವಾಸವೆಳೆದು ಮೈಯುಬ್ಬಿ ಕ್ಷಣಮಾತ್ರ ನಟಿಸಿಕೊಟ್ಟ ಸಂತೋಷವನ್ನು ಕ್ಷಣಕ್ಷಣಕ್ಕೂ ಜವಾಹರಲಾಲರು ಸಂಗಡಿಗರಿಗೆ ಉಂಟುಮಾಡುವರು. "ಸಾಹಸಗೆಯ್ಯಲು ಜೀವನಕ್ಕಿಂತ

ಕ್ಷೇತ್ರ ಬೇಕೇ! ಪೃಥ್ವಿಯ ಮೇಲೆ ಬದುಕಿ ಬಾಳುವುದೇ ಸಾಹಸದ ಸ್ವಾರಸ್ಯ ತುಂಬಿದ ಆಟ"ವೆನ್ನುವರು.

ಆಟಗಾರತನದ ಧರ್ಮವನ್ನು ಚನ್ನಾಗಿ ಕಂಡು ಅನುಭವಿಸಬಲ್ಲ ಕಾರಣದಿಂದ ಜವಾಹರಲಾಲರು ಸೋಲೊದಗಿದಾಗ ಖಿನ್ನರಾಗುವುದಿಲ್ಲ; ನಿರಾಶೆಯು ಅವಿವೇಕಕ್ಕೂ ಉನ್ಮಾದಕ್ಕೂ ಆಸ್ಪದಗೊಡುವುದಿಲ್ಲ. ಲಾಠಿ ಬೀರುವುದು ಪೋಲೀಸಧಿಕಾರಿಗಳ ಕೆಲಸ; ಏಟು ತಿನ್ನುವುದು ದೇಶಪ್ರೇಮಿಗಳ ಕೆಲಸ. ಸರ್ಕಾರದವರ ಆಜ್ಞೆಗನುಸಾರವಾಗಿ ಸೋಟಾಗಳನ್ನು ಬೀಸಿ ವಿಧೇಯರಾಗಿ ವರ್ತಿಸಿದ ಪೋಲೀಸ್ ನೌಕರರಲ್ಲಿ ಅಸಮಾಧಾನ ಕಾಣಿಸಲು ಎಡೆಯಿಲ್ಲ. ಗಾಂಧೀಜಿಯವರಾದರೆ ಅಹಿಂಸಾ ಧರ್ಮಭಕ್ತರು; ಆ ಧರ್ಮಕ್ಕೆ ತಲೆಬಾಗಿದ್ದರೂ ಜವಾಹರಲಾಲರು ಶತ್ರುವನ್ನು ಪ್ರೀತಿಸುವಷ್ಟುದೂರ ವರ್ತಿಸತಕ್ಕವರಲ್ಲ. ಆಟದಲ್ಲಿ ಗೆಲ್ಲಲು ಪ್ರಯತ್ನಿಸುವುದು ಎದುರುಪಕ್ಷದವರಿಗೂ ಧರ್ಮವೆಂದೊಪ್ಪಿಕೊಂಡಂತೆ ಶತ್ರುಸ್ಥಾನದಲ್ಲಿರತಕ್ಕವರು ತಮ್ಮ ಕರ್ತವ್ಯವನ್ನು ನಡೆಸಬೇಕಾದುದು ಅವರ ಧರ್ಮವೆಂದೊಪ್ಪುವರು. ಆಟಗಾರನ ಈ ಬಗೆಯ ದೃಷ್ಟಿ ಜವಾಹರಲಾಲರಿಗೆ ಸಹಜವಾಗಿದ್ದಂತೆ ಕಾಣುವುದು.

ಆಟಗಾರನಾದವನಿಗೆ ಸಮಯ ಸ್ಫೂರ್ತಿಯಿರಬೇಕಷ್ಟೆ! ಅಂತಹ ಸಮಯಸ್ಫೂರ್ತಿ ಜವಾಹರಲಾಲರಲ್ಲಿ ಪದೇ ಪದೇ ಕಾಣುತ್ತಲಿರುವುದು. 1945ನೆ ವರ್ಷದಲ್ಲಿಯೆ ನಡೆದ ಸಂಗತಿ. ರೈಲುಗಳಲ್ಲಿ ಸ್ಥಳವೆಂಬುದಿಲ್ಲ; ಕೈಗೆ ದೊರೆತ ಆಸರೆಯನ್ನು ಹಿಡಿದು ಹೊರಗಡೆಯೆ ನಿಂತಿದ್ದು ಜನರು ಪ್ರಯಾಣಮಾಡುತ್ತಿದ್ದ ಸಮಯ. ರಾಜೇನ್ದ್ರಪ್ರಸಾದರೂ ಜವಾಹರಲಾಲರೂ ಒಂದು ಗಾಡಿಯಲ್ಲಿದ್ದರು; ರೈಲು ಯಾವುದೋ ಸ್ಟೇಷನ್ನಿನಿಂದ ಮುಂದೆ ಹೊರಡುವ ವೇಳೆಯಾಯಿತು. ಮುಂದಿದ್ದ ಗಾಡಿಯ ಬಳಿ ನೂಕುನುಗ್ಗಲು ಅಸಾಧ್ಯವೆನ್ನುವಂತೆ ರೇಗಿ ಯಾರೋ ಒಬ್ಬಾತ ಜ್ಞಾನತಪ್ಪಿ ನೆಲಕ್ಕೆ ಬಿದ್ದುಬಿಟ್ಟನು. ಗಲಾಟೆಯಾಯಿತು. ತಕ್ಷಣವೇ ಜವಾಹರಲಾಲರು ತಾವಿದ್ದೆಡೆಯಿಂದ ಹೊರಕ್ಕೋಡಿ ಬಂದು ಜನರ ಗುಂಪಿನಲ್ಲಿ ನುಗ್ಗಿ ಬಿದ್ದಿದ್ದಾತನನ್ನು ಎತ್ತಿಕೊಂಡು ಗಾಳಿಯಾಡಿಸಿದರು. ಪ್ರಜ್ಞೆ ತಿಳಿದ ಬಳಿಕ ಆ ಪ್ರಾಣಿ ಕಣ್ಣುಬಿಟ್ಟು ನೋಡುತ್ತಾನೆ: ಜವಾ

ಹರಲಾಲರೇ ಸ್ವಯಂ ತನ್ನನ್ನೆತ್ತಿಕೊಂಡಿದ್ದಾರೆ! ಅವಮಾನವೋ ಸಂತೋಷವೋ ಅಳುವೋ ಎಲ್ಲವೂ ಒಟ್ಟುಗೂಡಿ ಆತನನ್ನು ತದೇಕ ಕ್ಷಣದಲ್ಲಿ ಮುತ್ತಿಕೊಂಡುಬರಲು ಮಾತನಾಡಿ ತನ್ನಕೃತಜ್ಞತೆಯನ್ನು ಕಾಣಿಸುವುದಕ್ಕೂ ಆಗದೆಹೋಯಿತು. ಆ ಬಡಜೀವಕ್ಕೆ ಆ ಕ್ಷಣದಲ್ಲಿ ಪರಮಾತ್ಮ ಪ್ರತ್ಯಕ್ಷನಾದಂತೆ ನಡೆದು ಸತ್ತುಹುಟ್ಟಿ ಪುನರ್ಜನ್ಮಬಂದಷ್ಟು ಸಂಕಟ ಸಂತೋಷಗಳ ಮಿಶ್ರಣದ ಅನುಭವವಾಯಿತು. ಆ ಚಿತ್ತ ಭ್ರಾಂತಿಯನ್ನು ಸೂಕ್ಷ್ಮತೆಯಿಂದ ಗುರುತಿಸಿದ ಜವಾಹರಲಾಲರು ಆತನ ಬೆನ್ನುತಟ್ಟಿ ಧೈರ್ಯಕೊಟ್ಟು ಸ್ಟೇಷನ್ ಮಾಸ್ಟರನ್ನು ಕರೆಸಿ ಆತನ ಉಪ ಚರ್ಯೆಯ ಏರ್ಪಾಟನ್ನು ನಡೆಸಬೇಕೆಂದು ಹೇಳಿ ಸ್ವಸ್ಥಾನಕ್ಕೆ ಬಂದು ಬಿಟ್ಟರು.

1936 ರಲ್ಲಿ ನಡೆದ ಮತ್ತೊಂದು ದೃಷ್ಟಾಂತ. ದಿಲ್ಲಿಗೆ ಹೊರಡು ತ್ತಿದ್ದ ರೈಲು ಯಾವುದೋ ಸ್ಟೇಷನ್ನಿಗೆ ಅರುಣೋದಯಕ್ಕೂ ಮೊದಲಿನ ವೇಳೆಗೆ ಬಂದಿತು. ಅಂತಹ ಅವೇಳೆಯಲ್ಲಿಯೂ ಸ್ಟೇಷನ್ನಿನ ತುಂಬ ಜನರು ಗುಂಪುಗೂಡಿ ಗಲಾಟೆ ಬೆಳೆಸುತ್ತ ಒಬ್ಬರನ್ನೊಬ್ಬರು ನೂಕುತ್ತ ಲಿದ್ದರು. ಜವಾಹರಲಾಲರು ಆ ರೈಲಿನಲ್ಲಿರುವರೆಂಬುದು ಅದಕ್ಕೆ ಕಾರಣ. ಪ್ಲಾಟ್‌ಫಾರಂ ತುಂಬ ಒಬ್ಬರಿಗೊಬ್ಬರು ಗಂಟುಹಾಕಿಕೊಂಡ ಜನರ ಸಮೂಹ. ರೈಲು ನಿಂತಿತು; ಜಯಕಾರಗಳು ಸ್ಟೇಷನ್ ಛಾವಣಿ ಯನ್ನು ನಭೋಮಂಡಲಕ್ಕೆ ಹಾರಿಸುವಂತೆದ್ದವು. ಜವಾಹರಲಾಲರು ಕಿಟಕಿಯಿಂದ ಕಂಡರೆ ಕಾಣುವುದೇನು? ರೀತಿಯಿಲ್ಲ, ಕ್ರಮವಿಲ್ಲ; ಜನರ ಗುಂಪುಗಳು ಒದ್ದಾಡುತ್ತ ಗುದ್ದಾಡುತ್ತ ಯಾರಿಗೂ ಸ್ಥಳ ಬಿಡ ದಿದ್ದವು. ರೈಲಿನಿಂದ ಆ ಊರಿನಲ್ಲಿಳಿಯುವವರ ಪಾಡಂತೂ ಬಲು ಕಷ್ಟ ವಾಯಿತು. ಹೀಗಿರಲು ಯಾರೋ ಅಮೆರಿಕನ್ ಮಹಿಳೆಯೊಬ್ಬಾಕೆ ತನ್ನ ಚಿಕ್ಕ ಮಗಳೊಡನೆ ತನ್ನ ಗಾಡಿಯಿಂದಿಳಿದು ಮುಂದೆ ದಾರಿಗಾಣದೆ ಅಸಹಾಯಳಾಗಿ ಒಂದು ಮೂಲೆ ನಿಂತಳು; ರೈಲು ಹೊರಟುಹೋಗಿ ಜನರಾಶಿ ಕರಗುವವರೆಗೂ ಗತಿಯಿಲ್ಲವೆಂದುಕೊಂಡಳು. ಜವಾಹರ ಲಾಲರ ಕಣ್ಣಿಗೆ ಹೇಗೋ ಕಂಡಿತು. ತಕ್ಷಣವೇ ಗಾಡಿಯಿಂದಿಳಿದು ಆಕೆಯನ್ನು ತಮ್ಮ ಸಂಗಡ ಕರೆದುಕೊಂಡು ಹೊರಟು ಗೇಟ್ ದಾಟಿಸಿ

ಕೊಟ್ಟು ವೇಗವಾಗಿ ಹಿಂತಿರುಗಿ ಬಂದು ತಮ್ಮ ಗಾಡಿಯನ್ನೇರಿಕೊಂಡು ಕಿಟಕಿ ಬಾಗಿಲುಗಳನ್ನು ಬಿಗಿದರು. ಜನರ ಅಕ್ರಮ ವರ್ತನೆಗಾಗಿ ಆ ವೇಳೆಯಲ್ಲಿ ಮನಸ್ಸಿಗೆ ಅಸಮಾಧಾನ! ಜನರನ್ನು ಮಾತನಾಡಿಸುವುದಂತೂ ಇಲ್ಲ; ಮುಖವನ್ನು ಕೂಡ ಕಾಣಿಸದಾದರು.

ಹಳೆಯ ವೃತ್ತಪತ್ರಿಕೆಗಳನ್ನು ಬಿಚ್ಚಿ ಹುಡುಕಿದರೆ ಇಂತಹ ಸಂದರ್ಭಗಳು ಇನ್ನೂ ಕಂಡಾವು. ಕಷ್ಟಕಾಲ ಬಂದಾಗ ಕೈಲಾಗದವರಂತೆ ಕುಕ್ಕರಿಸುವ ಬಲಹೀನತೆಯೆಂಬುದಿದ್ದರೆ ಆಟಗಾರನೇ ಅಲ್ಲ. ಆಪತ್ಕಾಲದಲ್ಲಿ ಸಾಹಸ ಮಾಡುವ ದಕ್ಷತೆಯಿಲ್ಲದಿದ್ದರೆ ಆಟಗಳನ್ನಾಡಿದ ಲಕ್ಷಣವೇ ಇಲ್ಲ. "ಅಪಾಯವೆಂಬುದೇನು ಕಾಣಬೇಕು" ಎಂಬ ಕುತೂಹಲ ಕುದಿಯುತ್ತಿರುವ ಚೈತನ್ಯ ಜವಾಹರಲಾಲರದು. ಎಂತಹ ಸಮಯಕ್ಕಾದರೂ ಸಿದ್ಧನಾಗಿರಬೇಕು.

ಅದನ್ನು ತಾವೇ ಒಂದು ಮಾತಿನಲ್ಲಿ ಸ್ವಾರಸ್ಯವಾಗಿ ವ್ಯಕ್ತಗೊಳಿಸುತ್ತಾರೆ. 'ಅಪಾಯವೆಂಬುದು ಎಷ್ಟೋ ವೇಳೆಗಳಲ್ಲಿ ಹಿತವಾದ ಜೊತೆಗಾರ'ನಂತೆ (Danger is often a pleasant companion). ಅಪಾಯವನ್ನು ಕಾಣದೆಯೆ ತಪ್ಪಿಸಿಕೊಂಡು ದೂರವಾಗಿರುವುದು ಕ್ಷೇಮಕರವಾಗಿರಬಹುದಾದರೂ ಹೇಡಿತನದ ಲಕ್ಷಣ; ಅಪಾಯವನ್ನೆದುರುಹಾಕಿಕೊಂಡು ಆಟವಾಡುತ್ತ ಉತ್ಸಾಹ ಬೆಳೆಸುವುದು ಉತ್ತಮ ಧೀರತನದ ಲಕ್ಷಣ. ಈ ಬಗೆಯ ಧೀರತನ ಜವಾಹರಲಾಲರ ಸ್ವಭಾವದಲ್ಲಿ ಅತಿ ಸಾಮಾನ್ಯವೆನ್ನಬಹುದಾದ ಅಂಶ.

ಸ್ವಿಡ್ಸರ್ಲಂಡಿನಲ್ಲಿ ತಂಗಿ ಕೃಷ್ಣೆಯನ್ನು ಕರೆದುಕೊಂಡು ಬೆಟ್ಟಗಳನ್ನೇರುತ್ತ ಜಾರುತ್ತಲಿದ್ದಾಗ ಜೊತೆಗೂಡಿದ್ದ ಒಬ್ಬಾನೊಬ್ಬ ಯುವಕ ಬಿನ್ನಾಣಿಗನು ಸರಿಯಾದ ಪಾದರಕ್ಷೆಗಳನ್ನು ಧರಿಸದೆ ಕಷ್ಟಕ್ಕೊಳಗಾದನು. ಆಗ ಜವಾಹರಲಾಲರು ತಮ್ಮ ಚೀಲದಿಂದ ಬೇಕಾದುದನ್ನೆತ್ತಿ ಕೊಟ್ಟು ಅವನ ಕಷ್ಟ ಪರಿಹಾರ ಮಾಡಿದರು. ಸಮಯಕ್ಕೆ ಬೇಕಾಗುವ ಸಾಮಾನಿಲ್ಲದೆ ಜವಾಹರಲಾಲರು ಹೊರಡುವುದಿಲ್ಲ ಸಾಮಾನ್ಯವಾಗಿ. ಒಮ್ಮೆ ತಂಗಿ ಕೃಷ್ಣೆಯೊಡನೆ ಯಾವುದೋ ಮಂಜಿನ ಬೆಟ್ಟದ ಮೇಲೆ ಕುಳಿತಿದ್ದರು. ಹಿಂದುಗಡೆ ತರುಣರ ಗುಂಪೊಂದು. ಆ ಗುಂಪಿನವನೊಬ್ಬನು

ತಾನು ಸರಿಯಾಗಿ ಸ್ಥಳಮಾಡಿಕೊಂಡು ಕುಳಿತುಕೊಳ್ಳುವ ಯತ್ನದಲ್ಲಿ ಜವಾಹರಲಾಲರಿಗೆ ತಿಳಿಯದಂತೆ ಅವರನ್ನು ಕೆಳಕ್ಕೆ ತಳ್ಳಿಬಿಟ್ಟನು. ಆ ಬೆಟ್ಟದ ತಳದಲ್ಲಿ ಗಜಗುಂಡದಂತಹ ಭಯಂಕರ ಕೊರಕಲು; ಬೆಟ್ಟದ ಬೆನ್ನೆಲ್ಲವೂ ಮಂಜಿನಿಂದ ಕೂಡಿ ಬಲು ಜಾರುತ್ತಿತ್ತು. ಊರಿಕೊಳ್ಳಲು ಆಸರೆಯೇ ಇಲ್ಲ. ಜವಾಹರಲಾಲರು ತಿಳಿಯದೆ ಬಿದ್ದವರಾಗಿ ಜಾರಲು ಮೊದಲಿಟ್ಟು ಕ್ಷಣಕ್ಷಣಕ್ಕೂ ವೇಗವೇಗವಾಗಿ ಜಾರಿಕೊಂಡು ಬೀಳುತ್ತ ಹಳ್ಳದ ಅಂಚಿಗೆ ಬಂದಾಗ ಹೇಗೋ ಪರಮಪ್ರಯಾಸದಿಂದ ಪಕ್ಕಕ್ಕೆ ತಿರುಗಿ ದೇಹವನ್ನುರುಳಿಸಿ ದೈವವಶಾತ್ ಅಲ್ಲಿ ಸಿಕ್ಕಿದ ಕಲ್ಲಿಗೆ ಕಚ್ಚಿಕೊಂಡು ಅಪಾಯದಿಂದ ಪಾರಾದರು. ನಾರ್ವೆ ದೇಶದಲ್ಲಿಯೂ ಕಾಶ್ಮೀರದಲ್ಲಿಯೂ ನಡೆದ ಸಂಗತಿಗಳನ್ನಾಗಲೆ ಕಂಡುದಾಯಿತು.

ಆಟವನ್ನು ಕೆಲಸದಂತೆಯೂ ಕೆಲಸವನ್ನು ಆಟದಂತೆಯೂ ಕಾಣುವ ಚೈತನ್ಯಕ್ಕೆ ಸೋಮಾರಿತನವೆಂಬುದು ಬಲುದೂರ; ಕಷ್ಟಪಡುವುದರಲ್ಲಿಯೇ ಸಮಾಧಾನ. ಇದನ್ನು ಎಷ್ಟೋ ದೃಷ್ಟಾಂತಗಳಿಂದ ಕಂಡಿರಬಹುದಾದರೂ ಮತ್ತೊಂದು ದೃಷ್ಟಾಂತವನ್ನೂ ಕಾಣಬಹುದು. ಪ್ಯಾರಿಸ್ ನಗರವನ್ನು ತಂಗಿ ಕೃಷ್ಣೆಗೆ ತೋರಿಸಿಕೊಡುತ್ತಿದ್ದ ಕಾಲ. ಹಗಲೆಲ್ಲ ಕಾಣಲು ಎಷ್ಟು ರಾಶಿಯೋ ಅಷ್ಟೇ ರಾಶಿ ರಾತ್ರಿ ಹೊತ್ತೂ ಅಲ್ಲಿ ನೋಡತಕ್ಕದ್ದುಂಟು. ರಾತ್ರಿ ನಾಟಕಮಂದಿರಕ್ಕೆ ಹೋಗುವ ಆಶೆ ತಂಗಿಗೆ. ಹಗಲೆಲ್ಲ ನೋಡಬೇಕಾದ ಸ್ಥಳಗಳಿಗೆ ಅಣ್ಣ ನಡೆಸಿಕೊಂಡೇ ಹೊರಡುತ್ತಿದ್ದರು. "ನಡಿಗೆ ಬೇಡ, ಟ್ಯಾಕ್ಸಿ ಮಾಡಿಕೊಳ್ಳೋಣ"ವೆಂದರೆ "ರಾತ್ರಿ ನಾಟಕಮಂದಿರಕ್ಕೆ ಹೋಗುವ ಅಂಶವನ್ನು ಬಿಡುವುದಾದರೆ ಈಗ ಟ್ಯಾಕ್ಸಿ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ನಡೆಯಲೇಬೇಕು!" ಎನ್ನುತ್ತ ಹಗಲುಹೊತ್ತಿನಲ್ಲಿ ಎಷ್ಟು ದೂರವಾದರೂ ನಡೆಸಿಯೇ ನಡೆಸಿದರಂತೆ. ಸುಖಕ್ಕೂ ಸೋಮಾರಿತನಕ್ಕೂ ಸಮೀಪವೆಂಬ ಶಂಕೆ.

ಕೆಲಸವನ್ನು ಸರ್ವಾಂಗಸುಂದರವಾಗಿ ಪೂರ್ತಿಗೊಳಿಸಬೇಕಾದುದು ಹೇಗೋ ಆಟವಾಡುವಾಗಲೂ ಸುಂದರವಾಗಿ ಆಡಬೇಕು. ಕೃಷ್ಣೆಗೆ ಷಿಯಿಂಗ್ ಹೇಳಿಕೊಡುವ ಸಂದರ್ಭ. ಆರೇಳಡಿ ಉದ್ದದ

ಮರದ ಪಟ್ಟಿಗಳನ್ನು ಎಕ್ಕಡಗಳಂತೆ ತಗಲಿಸಿಕೊಂಡು ಜಾರುವ ಮಂಜಿನ ಮೇಲೆ ಸ್ಥಿರವಾಗಿ ನಿಂತಿರುವುದೇ ಮೊದಲ ಕಷ್ಟ. ಕೃಷ್ಣೆ ಎದ್ದು ನಿಂತು ಕೊಳ್ಳಲಾರದೆ ಬಿದ್ದು ಬಿಡುತ್ತಿದ್ದಳು. ಮನಸ್ಸಿಟ್ಟು ಪ್ರಯತ್ನಮಾಡು ತ್ತಿಲ್ಲವೆಂದು ತೋರಿತು ಜವಾಹರಲಾಲರಿಗೆ. ಇನ್ನೊಂದು ಬಾರಿ ನೋಡಿ ಕಡೆಗೆ "ನಿನಗೆ ಮನಸ್ಸಿಲ್ಲ; ಸುಮ್ಮನೆ ಹಾಸ್ಯವೆಂದು ತಿಳಿ ದೆಯೋ ಇದನ್ನು!" ಎಂದು ಕೋಪಗೊಂಡು "ಒಂದು ಲಕ್ಷ ವರ್ಷ ಗಳಾದರೂ ನೀನಿದನ್ನು ಕಲಿಯುವುದಿಲ್ಲ!" ಎಂದುಬಿಟ್ಟರಂತೆ. ಪುನಃ ಅಣ್ಣನನ್ನು ಕೇಳಲು ಅಂಜಿ ಕೃಷ್ಣೆ ಮತ್ತೊಬ್ಬನ ಸಹಾಯದಿಂದ ಕಲಿತಳಂತೆ.

ಕೆಲಸದಲ್ಲಿಯೂ ಆಟದಲ್ಲಿಯೂ ವಿಕಾರವೆಂಬುದು ಜವಾಹರ ಲಾಲರಿಗೆ ಅಸಹ್ಯ. ಸಾಮಾನ್ಯ ಜೀವನದಲ್ಲಿಯೂ ಅದೇ ಉತ್ಕೃಷ್ಟ ರೀತಿ ಅತಿ ಸಹಜವೆಂಬುದನ್ನು ಸಣ್ಣಪುಟ್ಟ ವಿಷಯಗಳಲ್ಲಿಯೂ ಕಾಣ ಬಹುದು; ಕಾಣದೆ ಇರಲಾಗುವುದೇ ಇಲ್ಲ. ಆಹಾರದಲ್ಲಿ ಪದಾರ್ಥ ಸಾಮಾನ್ಯವಾದರೂ ರೀತಿ ಮಾತ್ರ ಸೊಗಸಾಗಿರಬೇಕು; ಆಚ್ಛಾದನ ದಲ್ಲಿ ಒರಟಾದ ಖದ್ದರ್ ಆದರೂ ಉಡುವ ರೀತಿ ಮಾತ್ರ ಸೊಗಸಾಗಿರ ಬೇಕು. ಗಾಂಧಿ ಟೋಪಿಯನ್ನು ಧರಿಸುವ ರೀತಿಯೇ ಸಾಕು ದೃಷ್ಟಾಂತಕ್ಕೆ. ಈ ಲಕ್ಷಣಗಳು ಯಾವುದೋ ವಯ್ಯಾರ ವರ್ತಿಸಿ ಬೆಡಗು ಬೀರುವ ಚೇಷ್ಟೆಯಲ್ಲ; ಜವಾಹರಲಾಲರಿಗೆ ಅದು ಚೇಷ್ಟೆಯಲ್ಲ, ಅನಿ ವಾರ್ಯ ಜನ್ಮಲಕ್ಷಣ. ಇಂಗ್ಲಂಡಿನಲ್ಲಿ ವಿದ್ಯಾರ್ಥಿದಶೆಯಲ್ಲಿದ್ದಾಗ ಭೋಗ ಭಾಗ್ಯಗಳ ಸಂಬಂಧವಾಗಿ ಒಂದಾನೊಂದು ರೀತಿಯ ವರ್ತನೆಯನ್ನು ಸಂಗಡಿಗರೊಂದಿಗೆ ಒಪ್ಪಿಕೊಂಡಿದ್ದರು. ಜೀವನದಲ್ಲಿ ನ್ಯಾಯದಿಂದಲೂ ಸ್ವಪ್ರಯತ್ನದಿಂದಲೂ ಲಬ್ಧವಾದುದನ್ನು ಮನಃಪೂರ್ತಿಯಾಗಿ ಅನು ಭವಿಸಿ ಸುಖಿಗಳಾಗಲು ಅಡ್ಡಿಯೇನು? ಸುಖವನ್ನೊಲ್ಲದೆ ದುಃಖವನ್ನೋ ಕಷ್ಟವನ್ನೋ ಆರಿಸಿಕೊಂಡು ಸದಾ ವಿಷಣ್ಣರಾಗಿಯೋ ದೀನರಾ ಗಿಯೋ ಇದ್ದರೆ ಮಾತ್ರ ಪುಣ್ಯಲಾಭವೆಂದುಕೊಳ್ಳುವ ಪ್ಯೂರಿಟನ್ ಚಿತ್ತ ವೃತ್ತಿಗೆ ಇದು ಪರಮ ವಿರೋಧ. ಪ್ಯೂರಿಟನ್ ಮನೋಧರ್ಮ ವೆಂಬುದು ಸಂತೋಷವನ್ನು ಗಡೀಪಾರಾಗಿಡತಕ್ಕ ಜಾಡ್ಯ; ಸಂತೋಷ

ದಿಂದಿದ್ದರೆ ಪಾಪವೆಂದುಕೊಂಬ ವಿಚಿತ್ರ ಮನೋವ್ಯಾಧಿ. ಜವಾಹರ ರಾದರೆ ಜೀವನದಲ್ಲಿ ಸಂತೋಷವನ್ನು ಕಾಣುವವರು, ಹಾಸ್ಯವನ್ನು ತುಂಬುವವರು; ಸೊಗಸನ್ನೂ ಸೌಂದರ್ಯವನ್ನೂ ತಂದಿಟ್ಟುಕೊಂಡು ಆನಂದಪಡತಕ್ಕವರು. ಪೃಥ್ವಿಯೆಂಬುದೇ ಆಶ್ಚರ್ಯ ಸಮೂಹ, ಉತ್ಸಾಹಜನಕವಾದ ಕ್ಷೇತ್ರ; ಮಾನವ ಶಕ್ತಿಯೂ ಆಶ್ಚರ್ಯಕರ ವಾದುದು.

ಸಾಹಿತಿಯಲ್ಲವೆಂದು ಮೃದುಹಾಸ್ಯದಿಂದ ಹೇಳಿಕೊಂಡರು; ಆ ಮಾತನ್ನೂ ವಿನಯದಿಂದ ಸುಂದರವಾಗಿ ಆಡಿದರು. ಪ್ರತ್ಯಂಶದಲ್ಲಿಯೂ ಅಂದಚಂದಗಳನ್ನು ತುಂಬತಕ್ಕವರ ಮಾತುಕಥೆಗಳಲ್ಲಿ ಸೌಂದರ್ಯವಿಲ್ಲ ದಿರುವುದು ಸಾಧ್ಯವೇ? ಸಂಸ್ಕೃತ ಫಾರಸಿ ಸಾಹಿತ್ಯಗಳ ವ್ಯಾಸಂಗವಾಗ ಲಿಲ್ಲ. ಇಂಗ್ಲಿಷ್ ವ್ಯಾಸಂಗವೇ ಹೆಚ್ಚು; ಜೊತೆಗೆ ಫ್ರೆಂಚ್. ಸಾಹಿತ್ಯ ವಿದ್ವಾಂಸನ ಲಕ್ಷಣಗಳಲ್ಲೊಂದು ಅತಿ ಸಹಜ. ಸಂದರ್ಭಕ್ಕೆ ತಕ್ಕಂತೆ ಹಿಂದಿನ ಕವಿಗಳು ಬರೆದಿಟ್ಟ ಪದ್ಯಗಳನ್ನಾಡಿಕೊಳ್ಳುವುದು, ಅವುಗಳ ಸುಖಾನುಭವವನ್ನು ಮತ್ತೆ ಮತ್ತೆ ಮನಸ್ಸಿಗೆ ತಂದುಕೊಳ್ಳುವುದು ಸಾಧಾರಣ ಮನೋವ್ಯಾಪಾರದಲ್ಲಿಯೂ ನಿಜವಾದ ಸಾಹಿತ್ಯಪ್ರೇಮಿಗಳ ಚರ್ಯೆ ಅದು. ಸಂಗೀತ ಪ್ರೇಮಿಗಳು ಸದಾ ಮೂಲಗಿಕೊಳ್ಳುತ್ತಿರು ವಂತೆಯೇ. ಜವಾಹರಲಾಲರ ಮನೋವೃತ್ತಿಯಲ್ಲಿ ಸಂಗೀತ ಸಾಹಿ ತ್ಯಾದಿ ಲಲಿತ ಕಲೆಗಳಿಗೆ ಪ್ರಧಾನಸ್ಥಾನವುಂಟು. ಇಂಗ್ಲಿಷ್ ಭಾಷೆಯ ಸಾಹಿತ್ಯದ ಸುಖವನ್ನಾತನನುಭವಿಸುವಂತೆ ಸಾಹಿತ್ಯ ವಿದ್ವಾಂಸರೆಂಬು ವವರು ಕೂಡ ಅನುಭವಿಸುತ್ತಾರೆಯೋ ಇಲ್ಲವೋ ಸಂದೇಹ. ಓದುವುದ ರಲ್ಲಿ ಅದಮ್ಯವಾದ ಆಸಕ್ತಿ. ಎಲ್ಲ ವಿಷಯಗಳಲ್ಲಿಯೂ ಕುತೂಹಲ. ನೋಡಿದ ಪುಸ್ತಕ ಮನಸ್ಸನ್ನೆಳೆಯುವಂತಿದ್ದರೆ ಅದನ್ನು ಕೊಂಡು ಕೊಂಡು ಓದಬೇಕು.* ರಾಜಕೀಯ ಸಾಮಾಜಿಕ ವಿಷಯಕ

* ಓದಲಿಷ್ಟಬಂದ ಪುಸ್ತಕಗಳನ್ನು ಕೊಂಡುಕೊಳ್ಳುವ ದುಂದುಗಾರತನವೊಂದೇ ಈಗಿನ ತಮ್ಮ ಚರ್ಯೆಯಲ್ಲಿ ಉಳಿದಿರುವುದೆಂದು ತಾವೇ ಬರೆದಿದ್ದಾರೆ. ಮೂರನೆ ತರಗತಿಯ ರೈಲು ಪ್ರಯಾಣವನ್ನು ಜವಾಹರಲಾಲರು ಮಾಡುವುದು ಇಷ್ಟಪಟ್ಟ ಕಾರಣದಿಂದಲ್ಲ; ಹಣಸಾಲದ ಕಾರಣದಿಂದ.

ವಾದವುಗಳನ್ನು ಓದುವುದಂತೂ ಕರ್ತವ್ಯವೆನ್ನಬಹುದು. ಪದ್ಯಪುಸ್ತಕಗಳನ್ನೋ! ತಾವೋದಿದ್ದೇವೆಂದು ಹೇಳಿಕೊಳ್ಳುವ ಹೆಮ್ಮೆಯನ್ನು ಪೋಷಿಸುವುದಕ್ಕಲ್ಲ; ತಾವೇ ಅನುಭವಿಸಿ ಆನಂದಿಸುವುದಕ್ಕೆ. ಪದ್ಯಗಳನ್ನೊಪ್ಪಿಸುವುದು ಇಂದಿಗೂ ಆತನಿಗೆ ಇಷ್ಟ. ಸಂದರ್ಭೋಚಿತವಾದುದನ್ನು ಎತ್ತಿಹೇಳಿದಾಗ ಸಾಹಿತ್ಯ ವ್ಯಾಸಂಗಿಗಳು ಅಚ್ಚರಿಗೊಂಡು 'ಎಲ್ಲಿತ್ತು ಈ ಪದ್ಯ?'ವೆಂದುಕೊಳ್ಳಬೇಕು! ಸಾಹಿತ್ಯಪ್ರೇಮವೆಂಬುದು ಜವಾಹರಲಾಲರಲ್ಲಿ ಜನ್ಮಸಿದ್ಧ ಲಕ್ಷಣ; ಪರಿಶುದ್ಧವೂ ಪರಿಪೂರ್ಣವೂ ಆದ ಆಸಕ್ತಿ; ವೇಷಕ್ಕೋ ನಟನೆಗೋ ಅಲ್ಲ. ತನ್ನನ್ನೋ ಇತರರನ್ನೋ ವಂಚಿಸುವ ವೇಷವಾದರೂ ನಟನೆಯಾದರೂ ಜವಾಹರಲಾಲರಿಗೆ ಅಸಹ್ಯವಿಕಾರವೆನಿಸುವುದು; ಅಂತಹುದನ್ನು ಜ್ವಲಿಸಿಬಿಡುವ ಕೋಪ ಅಥವಾ ಧ್ವಂಸಮಾಡುವ ವ್ಯಂಗ್ಯಹಾಸ್ಯ ಉಕ್ಕಿಬರುವುದು.

ಪದ್ಯರಾಶಿಯಲ್ಲಿ ಮಾನವ ಚೈತನ್ಯವನ್ನು ಕುಗ್ಗಿಸುವಂತಹುದಾದರೆ ಜವಾಹರಲಾಲರಿಗಿಷ್ಟವಿಲ್ಲ. ಹಾಗೆಯೆ ಹಾಡು ಯಾವುದಾದರೂ ಅರಣ್ಯರೋದನದಂತಿದ್ದರೆ ಇಷ್ಟವಿಲ್ಲ. ಉತ್ಸಾಹ ತುಂಬಿ ಚೈತನ್ಯವನ್ನು ವೃದ್ಧಿಗೊಳಿಸುವಂತಿದ್ದರೆ ಇಷ್ಟ. ಆದರೆ ಯಾರ ದುರದೃಷ್ಟವೋ ಅಥವಾ ಸೌಭಾಗ್ಯವೋ ಅತಿಸಹಜರೀತಿಯಲ್ಲಿ ಸೌಂದರ್ಯೋಪಾಸಕನಾಗಿರತಕ್ಕಾತನು ತನ್ನ ಅಸಾಧಾರಣ ಚೈತನ್ಯವನ್ನು ರಾಜಕೀಯಕ್ಕಾಗಿ ವಿನಿಯೋಗಿಸಿದನು; ಕಲಾ ಜಗತ್ತಿನಲ್ಲಿ ಆ ಚೈತನ್ಯ ಕಂಡರೆ ದಾರಿತಪ್ಪಿ ಬಂದಂತೆ ಮಾತ್ರ. ಓದುವುದೂ ಬರೆಯುವುದೂ ಜೈಲುಗಳಲ್ಲಿ ಅಥವಾ ರೈಲ್ ಪ್ರಯಾಣದಲ್ಲಿ! ಮನಃಪೂರ್ತಿಯಾಗಿ ನಿದ್ದೆಗೂ ಅದೇ ಸಮಯ! ಆದಾಗ್ಗೂ ಆಗಾಗ್ಗೆ ಅಲ್ಲಲ್ಲಿ ಆ ಚೈತನ್ಯ ಕಲಾಸೌಂದರ್ಯವನ್ನು ಸವಿಯುವುದು; ತಾಜ್‌ಮಹಲ್ಲನ್ನೋ ಅಜಂತಾ ಚಿತ್ರಗಳನ್ನೋ ಕಂಡು ಉತ್ಸಾಹಗೊಂಡು ನಲಿಯುವುದು. ಮಾನವಚರ್ಯೆ ಸೋಕದ ಪ್ರಕೃತಿಯ ಸಂಪರ್ಕಕ್ಕಾಗಿ ಪದೇ ಪದೇ ಪರಿತಪಿಸುವುದು. ಮುಂಬಯಿಯಲ್ಲಿ ಒಂದು ಸಲ ಮಾತ್ರ ಉದಯಶಂಕರರ ನಾಟ್ಯವನ್ನು ಕಾಣುವ ಅವಕಾಶವಾಯಿತು. ನಾಟಕವನ್ನೋ ಚಲಚ್ಚಿತ್ರವನ್ನೋ ಅನುಭವಿಸುವ ಆಸ್ಪದ ದೊರೆತರೆ ತಮ್ಮ ಸರ್ವಚೈತನ್ಯವನ್ನೂ ಒಡ್ಡಿ

ಸುಖಿಸುವವರೆಂದು ತಂಗಿ ಕೃಷ್ಣೆಯೊಮ್ಮೆ ವ್ಯಕ್ತಪಡಿಸುತ್ತಾಳೆ. ಸಂಗೀತ ಸುಖಕ್ಕೆ ಅವಕಾಶವೆಲ್ಲಿಯದು? ಆದರೂ ಯಾವ ಸಂಗೀತಭಕ್ತನೂ ಹೇಳಲಾಗದಂತಹ ವಾಕ್ಯದಿಂದ ಹಾರ್ಮೋನಿಯಮ್ಮಿನ ಅವಾಂತರ ವನ್ನು ಖಂಡಿಸಿರುವರು. "ಸ್ವರಾಜ್ ಪ್ರಾಪ್ತಿಯಾದ ತಕ್ಷಣವೇ ಅತ್ಯ ಗತ್ಯವಾಗಿ ನಡೆಸಬೇಕಾದ ಕೆಲಸಗಳನ್ನಿಟ್ಟುಕೊಂಡಾಗ ಮೊದಲು ಈ ಘೋರವಾದ್ಯದ ನಾಶವಾದೀತೆಂಬ ಆಸೆಯನ್ನಿಟ್ಟುಕೊಂಡು ಇನ್ನೂ ನಾನು ಬದುಕಿದ್ದೇನೆ" ಎನ್ನುತ್ತಾರೆ.

ಸರ್ವಾಂಗಸುಂದರವಾಗಿರಬೇಕೆಂಬ ಇಷ್ಟವೆಲ್ಲರಿಗೂ ಇರಬಹುದು; ಕಲೋಪಾಸಕನಿಗೂ ಅದೇ ಇಷ್ಟವಾದರೂ ಬಲವತ್ತಮವಾದುದು; ಸ್ವಲ್ಪಮಾತ್ರ ವಿಕಾರವಾದರೂ ಸಹಿಸುವುದಿಲ್ಲ. ಅಪಸ್ವರವೋ ಅಪಶ್ರು ತಿಯೋ ಹೊರಟರೆ ಸಂಗೀತಾಭಿಮಾನಿಗೆ ಕರ್ಣಕಠೋರವೆನಿಸುವುದಿ ಲ್ಲವೇ? ಹಾಗೆಯೇ ಜವಾಹರಲಾಲರಿಗೂ ಕೂಡ ಕೆಲಸಮಾಡುವುದರಲ್ಲಿ ಸರ್ವಸಮರ್ಪಕವಾಗಿ ನಡೆಯದಿದ್ದರೆ ಸಹಿಸಲಾಗುವುದಿಲ್ಲ. ಆ ಅಸಹನೆ ಉತ್ಕಟವಾದಾಗ ಕೋಪ ತೋರುವುದು. ಯೂರೋಪಿನಲ್ಲಿ ತಮ್ಮ ಸಂಗಡ ಇದ್ದಾಗ ಕೃಷ್ಣೆಯನ್ನು ಸೋಮಾರಿತನಕ್ಕೆ ಬಿಡದೆ ತಮ್ಮ ಸೆಕ್ರೆ ಟರಿ ಅಥವಾ ಕಾರ್ಯದರ್ಶಿಯಾಗಿ ನಿಯೋಗಿಸಿಟ್ಟರು. ಕೃಷ್ಣೆಗೆ ಭಯ ವಾಯಿತಂತೆ ಮೊದಲು. ಏಕೆಂದರೆ ಕೆಲಸದಲ್ಲಿ ಸ್ವಲ್ಪ ವಿಕಾರವಾದರೂ ಜವಾಹರಲಾಲರು ಸಹಿಸುವುದಿಲ್ಲ. ಕಾಂಗ್ರೆಸ್ಸಿಗೆ ಮುಖ್ಯ ಕಾರ್ಯ ದರ್ಶಿಯಾಗಿದ್ದಾಗ ಬಿಹಾರ ಪ್ರಾಂತದ ಕಚೇರಿಯ ತನಿಖೆ ಮಾಡುತ್ತ ಬಿರುಸಾಗಿಯೇ ಅಲ್ಲಿಯ ರೀತಿಯನ್ನು ಆಕ್ಷೇಪ ಮಾಡಿದ್ದರಂತೆ. "ನಿಂತು ಕೊಳ್ಳಬೇಕಾದಾಗ ಕುಳಿತುಕೊಳ್ಳುವುದು, ಕುಳಿತುಕೊಳ್ಳಬೇಕಾದಾಗ ಮಲಗಿಯೇ ಬಿಡುವುದು. ಕಚೇರಿಯಲ್ಲಿ ಇರಬೇಕಾದ ವಸ್ತುಸಾಮಗ್ರಿ ಗಳೇ ಇಲ್ಲ. ಅವಶ್ಯವಾದ ಸಾಮಗ್ರಿಯನ್ನಿಟ್ಟುಕೊಳ್ಳದೆಯೇ ಕೆಲಸ ಸಾಗಿಸಲು ಪ್ರಯತ್ನ"ವೆಂದು ಎಷ್ಟೋ ಕಾಲ ಕಳೆದಬಳಿಕ ಸ್ಮರಿಸಿ ಕೊಂಡು ಆ ಸಂದರ್ಭವನ್ನು ವಿವರಿಸುವರು.

ಕಲಾಕೃತಿಯ ಸೌಂದರ್ಯವನ್ನು ಕೆಡಿಸುವುದು ವಿಕಾರವಾದರೆ ಕೃತಿಗೆ ಲೋಪವಾದುದೂ ವಿಕಾರವೇ. ನ್ಯಾಯಕ್ಕೆ ತಪ್ಪಿದರೂ ವಿಕಾರ

ದಂತೆಯೇ. ಜವಾಹರಲಾಲರ ನ್ಯಾಯಗ್ರಾಹಿತನ ಅತಿ ವಿಶಾಲಕ್ಷೇತ್ರದಲ್ಲಿ ಆಡತಕ್ಕದು; ಸಂಕುಚಿತವಾದುದಲ್ಲ. ಮೂಲತಃ ನ್ಯಾಯವೆಂದರೆ ಸಮಾನತೆ. ಸುಖ ದುಃಖಗಳಲ್ಲಿಯೂ ಭೋಗಭಾಗ್ಯಗಳಲ್ಲಿಯೂ ಮಾನಾವಮಾನಗಳಲ್ಲಿಯೂ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಸಮಾನವೆಂಬ ತತ್ವ ಜವಾಹರಲಾಲರ ಜೀವದ ಉಸಿರಿನಂತೆಯೆ ಇದೆ. ಜನ್ಮತಃ ಡೆಮೊಕ್ರಾಟ್ ಎಂದು ಕರೆಯುವುದು ಅದನ್ನೇ. ಯಾರಿಗಿಂತಲೂ ತಾನು ಹೆಚ್ಚಲ್ಲವೆಂಬ ಭಾವನೆ ಆತನ ಪ್ರಜ್ಞೆಯಲ್ಲಿ ಮಾತ್ರವಲ್ಲ; ರಕ್ತದಲ್ಲಿ ಸೇರಿಹೋಗಿದೆ. ಹಿಂದೆ ಮೋತಿಲಾಲರು ಮಗಳಿಗೆ ಅಜಿನಕವಚವನ್ನು ಕೊಂಡ ರೀತಿಯನ್ನು ತಿಳಿದು ಇತರರು ವಿನೋದಗೊಂಡ ಸಮಯದಲ್ಲಿ ಜವಾಹರಲಾಲರಿಗೆ ಕೋಪ ಬರಲು ಅದೇ ಕಾರಣ. ಆ ಸೆಲ್ಫ್ರಿಡ್ಜ್ ಅಂಗಡಿಯಲ್ಲಿದ್ದ ತರುಣಿಯರಿಗಾಬಗೆಯ ಕವಾಯತ್ ಮಾಡಿಸಲು ತಂದೆಗಾಗಲಿ ಯಾರಿಗಾಗಲಿ ಏನಧಿಕಾರ? ನ್ಯಾಯವಲ್ಲವೆಂಬ ನಿರ್ಣಯ ಆತನ ಮನಸ್ಸಿನಲ್ಲಿ ಹುಟ್ಟಿದುದೇ ಆಗ ತಂದೆಗೂ ಮಗನಿಗೂ ನಡೆದ ವಾಗ್ವಾದಕ್ಕೆ ಕಾರಣ.

ಬಿರುದುಗಳನ್ನಿಡುವುದು ಜವಾಹರಲಾಲರಿಗೆ ಸರಿಬೀಳುವುದಿಲ್ಲ. ಕಾಂಗ್ರೆಸ್ ಸೆಕ್ರೆಟರಿಯಾದ ಹೊಸದರಲ್ಲಿ ಅಂತಹ ಸಂಬೋಧನೆಗಳನ್ನು ವರ್ಜಿಸಬೇಕೆಂದು ಯತ್ನಮಾಡಿದವರಲ್ಲವೇ? ಮಹಾತ್ಮಾಜಿಯವರನ್ನು ಸುಮ್ಮನೆ ಗಾಂಧೀಜಿಯೆಂದು ಬರೆಯುವರು. ಅವರಿಗೆ ಮಾತ್ರ ಜೀಯೆಂಬುದನ್ನು ಸೇರಿಸಿಡುವರು. ಒಬ್ಬರಿಗಿಂತ ಮತ್ತೊಬ್ಬರೇನು ಹೆಚ್ಚು? ಒಬ್ಬರ ಕಾಲುಮುಟ್ಟಿ ಮತ್ತೊಬ್ಬರು ಸಾಷ್ಟಾಂಗವಿಡುವ ಅಂಶದಲ್ಲಿಯೂ ಜವಾಹರಲಾಲರಿಗೆ ಇದೇ ತೆರದ ಭಾವನೆ. ಮನುಷ್ಯನು ಮನುಷ್ಯನಿಗೆ ಸಾಷ್ಟಾಂಗವಿಟ್ಟು ಸಲ್ಲದ ಹೀನತೆಯನ್ನೇಕೆ ಕಟ್ಟಿಕೊಳ್ಳುವುದು? ತಲೆಯೆತ್ತಿಕೊಂಡು ಯಾರಿಗಾದರೂ ನಾನು ಸಮನಾದವನೆಂದು ಹೇಳಿಕೊಳ್ಳುವ ಪೌರುಷದ ಪ್ರಜ್ಞೆಗೆ ಅದರಿಂದ ಹಾನಿಯಾಗುವುದೆಂದು ಜವಾಹರಲಾಲರ ತೀರ್ಮಾನ.

ಕಾಂಗ್ರೆಸ್ ಜೊತೆಗಾರರೆಲ್ಲರೂ ಒಬ್ಬರಿಗೊಬ್ಬರು ಸಮಾನರು ಜವಾಹರಲಾಲರ ದೃಷ್ಟಿಯಲ್ಲಿ. ಫುಟ್ಬಾಲ್ ಆಟದಲ್ಲಿ ಆಟಗಾರರು

ಸರಿಸಮಾನರಾಗಿ ವರ್ತಿಸಿ ಆಟವಾಡುತ್ತ ಒಬ್ಬರನ್ನೊಬ್ಬರು ವಿನೋದ ಗೆಯ್ಯುತ್ತ ಕೆಲವೇಳೆ ಒರಟಾಗಿ ತೋರಬಹುದಾದ ಮಾತುಗಳನ್ನೂ ಪ್ರಯೋಗಿಸುತ್ತ ಇರುವಂತೆಯೇ ವರ್ಕಿಂಗ್ ಕಮಿಟಿಯವರೂ ಇರಬೇಕಾದುದು. ಒಬ್ಬರನ್ನೊಬ್ಬರು ಆಕ್ಷೇಪಿಸುವುದಕ್ಕೆ ಸರ್ವಸ್ವಾತಂತ್ರ್ಯವೂ ಸಮಾನಸ್ವಾತಂತ್ರ್ಯವೂ ಇರಬೇಕು. ಗುಂಪಾಗಿ ಕಾರ್ಯನಿರತರಾಗಿರುವಾಗ ಗುಂಪಿಗೆ ಸೇರಿದವರಲ್ಲಿ ಅನ್ಯೋನ್ಯತೆಯಿಂದ ಒಬ್ಬರ ದೋಷವನ್ನು ಮತ್ತೊಬ್ಬರು ತೋರಿಕೊಡದಿದ್ದರೆ ಕೆಲಸಕಾರ್ಯಗಳು ಸಮರ್ಪಕವಾಗಿ ನಡೆದಾವೇ? ಅಂತಹ ಆಕ್ಷೇಪಮಾಡಬೇಕಾದ ಸಂದರ್ಭಗಳಲ್ಲಿ ಪೀಠಿಕಾಪ್ರಕರಣ ಬೆಳೆಸಿ ವೃಥಾ ಕಾಲಹರಣವನ್ನೇತಕ್ಕೆಮಾಡಬೇಕು? ನೇರವಾಗಿ ಹೇಳಿಬಿಡುವುದುತಾನೇ! ಈ ಬಗೆಯ ಮನೋವೃತ್ತಿಯುಳ್ಳವರು ಇತರರನ್ನು ಉದ್ಘಾಟಿಸಲು ಹಿಂಜರಿಯಲಾರರು; ತಮ್ಮನ್ನು ಇತರರು ಉದ್ಘಾಟಿಸಿದಾಗ ಅಸಹನಕ್ಕೂ ಎಡೆಗೊಡಲಾರರು. ಜೊತೆಗಾರರಲ್ಲಿ ವರ್ತಿಸುವಾಗಲೂ ಸ್ವತಂತ್ರವಿರಬೇಡವೇ?

ವರ್ಕಿಂಗ್ ಕಮಿಟಿಯ ಸದಸ್ಯರೇ ಅಂತಹ ಜೊತೆಗಾರರು. ಅವರಲ್ಲಿ ಅನೇಕರು ಗಾಂಧೀಜಿ ನುಡಿದುದನ್ನು ವಿಮರ್ಶೆ ಮಾಡಿದಾಗ್ಗೂ ಅದಕ್ಕೆ ವಿರೋಧವೆಂಬುದನ್ನು ಚರ್ಚೆಯಲ್ಲಿಯೂ ಕಾಣಿಸುವುದಿಲ್ಲ. ನುಡಿಯುವುದಕ್ಕೆ ಮೊದಲೇ ಒಪ್ಪಿಗೆಯನ್ನು ಸೂಚಿಸತಕ್ಕವರು. ಅದನ್ನು ಒಂದು ವೇಳೆ ಎತ್ತಿಹಾಕುತ್ತ "ನೀವೆಲ್ಲರೂ ಗಾಂಧೀಜಿಯ ರಬ್ಬರ್ ಸ್ಟಾಂಪುಗಳು!" ಎಂದು ಒಂದು ಸಲ ಜವಾಹರಲಾಲರು ತಾಡಿಸಿದರು. ಮತ್ತೊಂದು ಸಲ ದೀರ್ಘಕಾಲ ಸಭೆ ನಡೆದಿತ್ತು; ಮುಕ್ತಾಯ ವೇಳೆಯಲ್ಲಿ "ನೀವೆಲ್ಲರೂ ಇಲ್ಲಿಗೆ ಬಂದು ಬಹಳ ಹೊತ್ತಾಯಿತು. ಇನ್ನು ನಡಿಯಿರಾಚೆಗೆ!" ಎಂದರು. ಇದು ಒರಟುತನವೆಂದು ಕಾಣಬಹುದಾದರೂ ಆಪ್ತಜೊತೆಗಾರರಲ್ಲಿ ನಡೆದುದು. ಅರ್ಧಪಾಲು ವಿನೋದದಾಸೆಯಿಂದ; ಅರ್ಧಪಾಲು ಕಾಲಹರಣವಾಯಿತೆಂಬ ಅಸಹನದಿಂದ.

ಯತಿಗಳಿಗೆ ಕೋಪವಿರಬಾರದು. ಸಾಮಾನ್ಯ ಮನುಷ್ಯರಿಗೆ ಕೋಪತಾಪಗಳೆರಡೂ ಇದ್ದೇ ಇರಬೇಕು. ರೋಷವಿಲ್ಲದ ಮನುಷ್ಯನಿಗೆ ಪೌರುಷವಿರಲಾರದೆಂದು ಲೋಕ ನುಡಿಯಿಲ್ಲವೇ? ಮೋತಿಲಾಲ

ರನ್ನು ಮೆಚ್ಚುವಾಗ ಅವರ ದೋಷವನ್ನಲ್ಲವೆ ನಿಜವಾಗಿ ನಾವು ಮೆಚ್ಚು ವುದು? ರೋಷಾತಿಶಯದಿಂದ ಪೌರುಷಾತಿಶಯಕ್ಕೆ ಅವಕಾಶ. ಮೋತಿಲಾಲರ ಏಕಮಾತ್ರ ಪುತ್ರನಿಗೆ ರೋಷವೂ ಕೋಪವೂ ಇಲ್ಲ ದಿದ್ದೀತೇ? ಜವಾಹರಲಾಲರಿಗೆ ಎಂತಹ ಸಮಯದಲ್ಲಿಯೂ ಕೋಪ ವಿಲ್ಲವೆಂದರೆ ನಮಗೆ ಆಶ್ಚರ್ಯಕ್ಕಿಂತ ಅಸಮಾಧಾನವೇ ಹೆಚ್ಚಾಗಿ ತೋರುವುದು. ಯತಿಯೋ ಯೋಗಿಯೋ ಆಗಿದ್ದರೆ ಆ ಮಾತು ಬೇರೆ. ಜವಾಹರಲಾಲರು ಯತಿಗಳಲ್ಲ. ವಕ್ರತೆಯನ್ನೂ ಹೇಡಿತನವನ್ನೂ ವಿಕಾರವೆಂದು ಸಹಿಸದ ಸೌಂದರ್ಯೋಪಾಸಕರು; ಮೃಗಬಲವನ್ನೊ ಲ್ಲದ ಶೌರ್ಯಸಾಧಕರು. ನೀಚತನವನ್ನೋ ಕ್ಷುದ್ರತನವನ್ನೋ ಕಂಡಾಗ ಅಂತಹವರ ಕೋಪ ಕೆರಳದಿರುವುದು ಸಹಜವೇನು? ಮಹ ತ್ತರ ಕಾರ್ಯವನ್ನು ಮುಂದಿಟ್ಟುಕೊಂಡು ಪ್ರತಿ ಕ್ಷಣವನ್ನೂ ಕೆಲಸಕ್ಕಾಗಿ ಕೊಡುತ್ತ ಲಕ್ಷ್ಯಸಾಧನೆಗಾಗಿ ತಪಿಸುತ್ತಲಿರುವವರಿಗೆ ಅಸಹನವೆಂಬುದು ಬಲಕೊಡುವ ಗುಣವೇ ಆಗುವುದಿಲ್ಲವೇ? ಕಾರ್ಯಸಾಧಕರಿಗೆ ಸಹನವೂ ಇರಬೇಕು; ಅಸಹನವೂ ಇರಬೇಕು. ಹೀಗಿರುವುದರಿಂದ ಜವಾಹರ ಲಾಲರಿಗೆ ಕೋಪ ಬಂದ ಸಂದರ್ಭಗಳ ವಿವರ ನಮಗೆ ಅತಿ ಸ್ವಾರಸ್ಯ ಪೂರಿತವಾಗಿರುವುದು. ಇನ್ನೂ ಆಗಾಗ್ಗೆ ಈತನು ಕೋಪ ಕಾಣಿಸಿ ಬಿರುಸು ಮಾತುಗಳಿಂದ ಪ್ರಹರಿಸುತ್ತಿರಬಾರದೇ ಎನಿಸುವುದು. ಯದ್ಯಪಿ ಜವಾಹರಲಾಲರು ಅತಿ ಸುಕುಮಾರ ಸ್ವಭಾವದ ಸ್ವರೂಪರಾಣಿಗೆ ಲಲ್ಲೆಯ ಮಗ. ಜವಾಹರಲಾಲರಿಗೆ ಕೋಪ ಬಂದ ಕ್ಷಣದಲ್ಲಿ ತಂದೆಯ ರೀತಿ ಕಾಣುವುದು; ಕೋಪವಿಳಿದ ಬಳಿಕ ತಾಯಿಯ ರೀತಿ ಕಾಣು ವುದು. ಇನ್ನು ಕೆಲವು ದೃಷ್ಟಾಂತಗಳು.

ಕೃಷ್ಣೆಗೂ ಜವಾಹರಲಾಲರಿಗೂ ಹದಿನೆಂಟು ವರ್ಷಗಳಷ್ಟು ಅಂತರ. ಚಿಕ್ಕಂದಿನಲ್ಲಿ ಕೃಷ್ಣೆಗೆ ಜವಾಹರಲಾಲರನ್ನು ಕಂಡಾಗ ಅಭಿಮಾನ ಗೌರವಗಳೊಂದಿಗೆ ಭಯವೂ ಇತ್ತು. ಮನೆಯಲ್ಲಿಯೇ ಕೃಷ್ಣೆಗೆ ವ್ಯಾಸಂಗವಾಗುತ್ತಿದ್ದ ಕಾಲ. ಗಣಿತವೆಂದರೆ ಅನಿಷ್ಟ. ಆದುದ ರಿಂದ ಜವಾಹರಲಾಲರು ಗಣಿತವನ್ನು ಹೇಳಿಕೊಡಲಾರಂಭಿಸಿದರು. ನಿತ್ಯವೂ ಕ್ಲೃಪ್ತವಾದ ಕಾಲಕ್ಕೆ ಗಣಿತ ಪಾಠ. ಕೃಷ್ಣೆಗೆ ಹೇಳಿಕೊಡುವ

ಪಾಠವನ್ನು ಸೊಗಸಾಗಿ ಹೇಳಿಕೊಡುತ್ತಿದ್ದರು; ಮುಂದಿನ ದಿವಸಕ್ಕೆ ಮಾಡಿಕೊಂಡು ಬರಲು ಲೆಕ್ಕಗಳನ್ನು ಕೊಡುತ್ತಿದ್ದರು. ಒಂದುದಿನ ಕೃಷ್ಣೆ ಆ ಲೆಕ್ಕಗಳನ್ನು ಮಾಡಲು ಮನಸ್ಸಿಲ್ಲದೆ ಯತ್ನಿಸಿ ಅರ್ಧರ್ಧವಾಗಿ ತೆಗೆದುಕೊಂಡು ಬಂದಿದ್ದಳು. ಜವಾಹರಲಾಲರು ನೋಡಿದರು; ಗಮನ ಕೊಟ್ಟಿಲ್ಲವೆಂದು ಸ್ಪಷ್ಟವಾಯಿತು. ಕೇಳಿದ ಪ್ರಶ್ನೆಗಳಿಗೆ ಉತ್ತರಗಳೂ ಹಾಗೆಯೆ ಬಂದವು. ಆಗ ಬಂತು ಕೋಪ! ಕೋಪವೇರಿದ್ದನ್ನು ಕಂಡು ಕೃಷ್ಣೆ ಮೂಗಿಯಾಗಿ ಹೋದಳು. ಜವಾಹರಲಾಲರು ಬಿರುಸಾಗಿಯೂ ಕ್ರೂರವಾಗಿಯೂ ಮಾತುಗಳನ್ನು ಪ್ರಯೋಗಿಸಿದರು; ಅತಿ ದೀನೆಯಾಗಿ ಕೃಷ್ಣೆ ತನ್ನಲ್ಲಿಯೆ 'ಒಂದು ದಿವಸ ಮಾತ್ರದ ಪಾಠವನ್ನು ಮರೆಯುವು ದಷ್ಟು ದೊಡ್ಡ ತಪ್ಪೇ' ಯೆಂದುಕೊಳ್ಳುತ್ತ ಅಸಮಾಧಾನಪಟ್ಟು ತನ್ನ ಪುಸ್ತಕಗಳನ್ನೆತ್ತಿಕೊಂಡು ಹೊರಡುತ್ತ ಉಕ್ಕಿಬಂದ ಕಣ್ಣೀರನ್ನು ತಡೆ ಯಲು ಪ್ರಯತ್ನಿಸುತ್ತಿದ್ದಳು. ಆ ಕಣ್ಣೀರು ಕಂಡಕೂಡಲೆ ಜವಾಹರರ ಕೋಪವಿಂಗಿತು. ಪಶ್ಚಾತ್ತಾಪಪಟ್ಟು ತಂಗಿಯನ್ನು ತಬ್ಬಿಕೊಂಡು ಎಷ್ಟೆಷ್ಟೋ ಸಮಾಧಾನಪಡಿಸಿದರು. ಆದರೆ ಆ ಬಳಿಕ ಆ ಪಾಠ ನಡೆಯಲೇ ಇಲ್ಲವಂತೆ.

ಮುಂಬಯಿ ಬೀದಿಯೊಂದರಲ್ಲಿ ಜವಾಹರಲಾಲರು ಕಾರಿನಲ್ಲಿ ಕುಳಿತು ಹೊರಡುತ್ತಿದ್ದಾಗ ಎದುರಿಗೆ ಅಡ್ಡವಾಗಿ ಒಬ್ಬ ವಾಲಂಟಿಯರ್ ನಿಂತು ಹಟಮಾಡುವ ಮೊಂಡುಮಗುವಿನಂತೆ ತನ್ನ ಮನಸ್ಸಿಗೆ ಸಮಾ ಧಾನವಾಗುವವರೆಗೂ ದಾರಿ ಬಿಡುವುದಿಲ್ಲವೆಂದನು. ಇದೇನೋ ಹುಡು ಗಾಟವೆನ್ನಿಸುವಂತಹ ಸಂದರ್ಭ. ಜವಾಹರಲಾಲರ ಅಸಹನ ಕೆರಳಿತು. ಕಾರನ್ನು ಕ್ಷಣಮಾತ್ರ ನಿಲ್ಲಿಸಿ ಇಳಿದು ಬಂದು ಆ ವಾಲಂಟಿಯರನ್ನು ಹಿಡಿದೆತ್ತಿ ಬೀದಿಯ ಪಕ್ಕದಲ್ಲಿ ಕುಕ್ಕಿದಂತೆ ಕುಳ್ಳಿರಿಸಿ ಪುನಃ ಕಾರನ್ನೇರಿ ಕೊಂಡು ಮುಂದೆ ಹೊರಟರು. ಇಟ್ಟುಕೊಂಡ ಕೆಲಸಕ್ಕೆ ಮಧ್ಯೆ ವಿಘ್ನ ದಂತೆ ತೋರಿದುದನ್ನು ಲಕ್ಷ್ಯವಿಲ್ಲದೆ ತಳ್ಳಿಬಿಡುವ ಆಗ್ರಹ. ಆದರೆ ಆ ತರುವಾಯ ಸಮಾಧಾನಗೊಳಿಸುವ ಪ್ರಯತ್ನವನ್ನೂ ನಡೆಸಿದರು.

ಪ್ರಾಯಶಃ ಜೀವನ ವೃತ್ತಾಂತದಲ್ಲೆಲ್ಲ ವೈಮರೆತಷ್ಟು ಕೋಪ ಬಂದುದು ಕಾಂಗ್ರೆಸ್ ಸಭೆಯಲ್ಲಿ. ಯಾವುದೋ ಸಂದರ್ಭದಲ್ಲಿ ವೃತ್ತ

ಪತ್ರಿಕೆಗಳ ಪ್ರತಿನಿಧಿಗಳು ಸಭಾಸ್ಥಾನದಲ್ಲಿರಲವಕಾಶವಿಲ್ಲವೆಂಬ ನಿಶ್ಚಯು ವಾಯಿತು. ಹೊರಗೆ ಹೊರಟುಬಿಡಲು ಆ ಗುಂಪಿಗಿಷ್ಟವಿಲ್ಲ; ಹೇಗಾದರೂ ಮಾಡಿ ಇದ್ದು ಬಿಡಬೇಕೆಂಬ ಚರ್ಯೆ ಬಲವಾಯಿತು. ಕಾಂಗ್ರೆಸ್ಸಿನ ಅಧ್ಯಕ್ಷರಾದ ಆಜ್ಞಾದರೇ ಸ್ವಯಂ ಆಜ್ಞೆ ಕೊಟ್ಟರು. ಆಗಲೂ ಪತ್ರಿಕಾ ಪ್ರತಿನಿಧಿಗಳು ಹೊರಡುವ ಚಿಹ್ನೆಯನ್ನು ಕಾಣಿಸಲಿಲ್ಲ. ಒಬ್ಬನಂತೂ ಮುಷ್ಕರ ತೋರುತ್ತ ನೆಲದಮೇಲೆ ಕಾಲುಗಳನ್ನು ಚಾಚಿ ಬೆನ್ನನ್ನೂರಿಕೊಂಡು ಅಸಭ್ಯವೆನ್ನಬಹುದಾದ ವರ್ತನೆಯನ್ನು ಕಾಣಿಸಿದನು. ಯಾವುದೋ ಪ್ರಸಿದ್ಧ ಪತ್ರಿಕೆಗೆ ಸೇರಿದವನು; ಜವಾಹರಲಾಲರಿಗೆ ಪರಿಚಿತನಾದವನೂ ಕೂಡ. "ಓಹೋ‌ಹೋ! ಬೇಕಾದದ್ದಾಗಲಿ! ನಾನಂತೂ ಹೊರಡುವುದೇ ಇಲ್ಲ"ವೆನ್ನುತ್ತ ಕೈಕಾಲುಗಳನ್ನಾತ ಚಾಚಿದ್ದನ್ನು ಕಂಡ ಜವಾಹರಲಾಲರಿಗೆ ಅಸಹ್ಯ ವಿಕಾರವಾಗಿ ಕಂಡಿತು. ಒಳ್ಳೆ ಮಾತಿನಲ್ಲಿ ಮರ್ಯಾದೆಯಿಂದ ಹೇಳಿಸಿಕೊಂಡು ಹೊರಡದೆ ಒರಟಾಟಕ್ಕೆ ತೊಡಗಿದ್ದುದೇ ಸಾಕಾಗಿತ್ತು; ಅಧ್ಯಕ್ಷರ ಆಜ್ಞೆಯನ್ನು ನಡೆಸದಿದ್ದುದು ಜವಾಹರಲಾಲರ ದೃಷ್ಟಿಯಲ್ಲಿ ಮಹಾಪರಾಧದಂತೆ ಕಂಡು ಉಗ್ರಕೋಪವೇರಿತು. ತಾವಿದ್ದೆಡೆ ಬಿಟ್ಟು ರಭಸದಿಂದ ನುಗ್ಗಿ ಬಂದು ಆತನನ್ನು ಅನಾಮತ್ತಾಗಿ ಎತ್ತಿ ಹೊರಕ್ಕೆ ಸಾಗಿಸಲು ತೊಡಗಿದರು! ಈ ಉಗ್ರತೆಯನ್ನು ಕಂಡವರೆಲ್ಲರೂ ಅಪ್ರತಿಭರಾದರು. ಪ್ರೆಸ್ ಗುಂಪಿನವರೆಲ್ಲರೂ ಹೊರಗೆ ಹೊರಟರು. ಕೋಪವಿಳಿದ ಬಳಿಕ ಜವಾಹರಲಾಲರಿಗೆ ಪ್ರಾಯಶಃ ತಾವು ಮೈಮರೆತು ಅತಿಯಾಗಿ ವರ್ತಿಸಿದ್ದಂತೆ ಕಂಡಿತು. ಆದಕ್ಕಾಗಿ ವ್ಯಸನಪಟ್ಟು ಕ್ಷಮಾಪಣೆ ಕೇಳಿದರು.

ಮಾರನೆ ದಿನವಂತೂ ಅನೇಕ ಪತ್ರಿಕೆಗಳಲ್ಲಿ "ಜವಾಹರಲಾಲರು ನಡೆಸಿದ ಅನ್ಯಾಯ! ಪ್ರೆಸ್ ಕೂಟಕ್ಕೆ ಅವಮಾನ!" ಮುಂತಾಗಿ ದೊಡ್ಡಕ್ಷರದ ಪ್ರಕಟನೆಗಳೂ ಟೀಕಾಟೂಕೆಗಳೂ ವಿಜೃಂಭಿಸಿದವು. ಅನೇಕರಿಗೆ ಜವಾಹರಲಾಲರದು ಅತಿ ಕೋಪವೆಂದೆನ್ನಿಸಿತು. ಘಟನೆ ಕಳೆದು ನಾಲ್ಕಾರು ವರ್ಷಗಳಾಗಿರುವ ಕಾರಣ ಈಗಲೀಗ ಸಮಾಧಾನವಾಗಿ ವಿಮರ್ಶೆಯನ್ನು ಮಾಡಿಯಾರೇನೋ! ಜವಾಹರಲಾಲರಿಗಷ್ಟು ಕೋಪಬರಲು ಕಾರಣವೇನು? ಅಧ್ಯಕ್ಷರ ಆಜ್ಞೆಯ ನಿರಾಕರಣೆ ಕಾರಣ.

ತಾವು ಸ್ವಯಂ ಆಡಿದ ಮಾತಿಗೆ ತೋರಿದ ವಿರೋಧಕ್ಕಷ್ಟು ಆಗ್ರಹವಿಲ್ಲ; ಸಭಾಸ್ಥಾನದಲ್ಲಿದ್ದವರೆಲ್ಲರೂ ಅತ್ಯವಶ್ಯಕವಾಗಿ ಒಪ್ಪಿಕೊಳ್ಳಬೇಕಾಗಿದ್ದ ಅಧ್ಯಕ್ಷರ ಅಧಿಕಾರಕ್ಕೆ ವಿರೋಧವನ್ನು ಕಾಣಿಸಿದುದಕ್ಕಾಗಿ ಆಗ್ರಹ. ಆಗ್ರಹದಲ್ಲಿಯೂ ಉದಾರತೆ ಕಾಣುವುದು. ಈಗ ಕೇಳಬೇಕಾದ ಪ್ರಶ್ನೆಯೇ ಬೇರೆ! ಜವಾಹರಲಾಲರಿಗೆ ಅಷ್ಟು ಕೋಪ ಬರುವತನಕ ಉಳಿದವರು ವಿನೋದ ನೋಡುತ್ತಿದ್ದರೇನು? ವಾಲಂಟಿಯರುಗಳ ಕರ್ತವ್ಯ ವೆಲ್ಲಿಹೋಗಿತ್ತು? ಸ್ವಯಂ ಜವಾಹರಲಾಲರೇ ವ್ಯಗ್ರತೆಯಿಂದ ನುಗ್ಗಿ ಬಂದಾಗ ಪ್ರೆಸ್ ಕೂಟದವರು ಅಪರಾಧಿಯನ್ನು ತಾವೇ ಹಿಡಿದೆತ್ತಿ ವಿಪರೀತಕ್ಕಾಸ್ಪದವಿಲ್ಲದಂತೇತಕ್ಕೆ ನಡೆಸಲಿಲ್ಲ? ಕೋಪಗೊಂಡುದಕ್ಕೆ ಜವಾಹರಲಾಲರಲ್ಲಿ ದೋಷವನ್ನು ಆರೋಪಿಸುವುದಾದರೂ ಹೇಗೆ? ಮಹಾನಾಯಕರಲ್ಲಿ ಗಣ್ಯನಾದಾತನು ಯಾವನೋ ಪತ್ರಿಕಾಪ್ರತಿನಿಧಿಗೆ ಸಮಾನನಂತೆ ವರ್ತಿಸಿ ತನ್ನ ಅಂತಸ್ತನ್ನು ತಾನು ಮರೆತನೆಂದಲ್ಲವೇ! ಸಾಮಾನ್ಯರಿಗೆ ಸಮಾನಮಾತ್ರನೆಂಬುದನ್ನು ಇತರರು ಮರೆತಾಗ್ಯೂ ಜವಾಹರಲಾಲರು ಮರೆಯತಕ್ಕವರಲ್ಲ. ತಮ್ಮ ಪದವಿಯೆಂಬುದಗ ಸ್ಮರಣೆ ಆತನಲ್ಲೆಂದಿಗೂ ಅಹಂಭಾವದ ರೂಪವನ್ನು ತಾಳುವುದಿಲ್ಲ. ಆಜ್ಞಾಬದ್ಧನಾಗಿ ವರ್ತಿಸುವ ಸಿಪಾಹಿ ತಾನೆಂಬ ಪ್ರಜ್ಞೆಯೇ ಹೆಚ್ಚು; ತಾನು ದೊಡ್ಡ ನಾಯಕನೆಂಬ ಪ್ರಜ್ಞೆಯಲ್ಲ. ಈ ಆರೋಪಣೆಯ ವಿಮರ್ಶೆಯಲ್ಲಿಯೂ ಜವಾಹರಲಾಲರ ನಿರಹಂಕಾರ ಗುಣ ಹೊರಬೀಳು ವುದೇ ವಿನಾ ದೋಷ ಕಾಣುವುದಿಲ್ಲ. ಅನ್ಯಾಯವನ್ನೂ ಆಕ್ರಮವನ್ನೂ ಕಂಡರೆ ಕೋಪಗೊಳ್ಳುವ ಲಕ್ಷಣವನ್ನು ಕೊನೆಗೂ ನಾವು ಮೆಚ್ಚಬೇಕಾಗಿಯೆ ಉಳಿಯುವುದು.

ಸ್ವಂತ ಜನರಲ್ಲಿ ಯಾರಾದರೂ ಸರಿಯೆ, ತಮ್ಮ ಯೋಗ್ಯತೆ ಸಾಮರ್ಥ್ಯಗಳಿಗೆ ತಕ್ಕಂತೆ ಕೆಲಸಕಾರ್ಯಗಳನ್ನು ನಡೆಸದೆಹೋದಾಗ ಜವಾಹರಲಾಲರಿಗೆ ಅಸಮಾಧಾನದಿಂದ ಅಧಿಕಾರವತ್ತಾದ ಕೋಪ ಸಹಜವಾದುದೇ. ಕೃಷ್ಣೆಗೆ ಲೆಕ್ಕವನ್ನು ಹೇಳಿಕೊಡುವ ಅಥವಾ ಷಿಯಿಂಗ್ ಹೇಳಿಕೊಡುವ ಸಂದರ್ಭವಲ್ಲದೆ ಕಮಲಾದೇವಿ ತನ್ನ ಆರೋಗ್ಯ ಪಾಲನೆಯಲ್ಲಿ ತಕ್ಕಷ್ಟು ಎಚ್ಚರಿಕೆಯನ್ನು ವಹಿಸದೆಹೋದಳೆಂದು

ಅಸಮಾಧಾನಪಟ್ಟ ಸಂದರ್ಭವೂ ಹಿಂದೆಯೇ ಬಂದಿತು. ಕೃಷ್ಣೆ ಅಣ್ಣನಿಗೆ ಕೋಪ ತಂದಿಟ್ಟ ಮತ್ತೊಂದು ಸಂದರ್ಭವೂ ಉಂಟು. ಮುಂಬಯಿಯಲ್ಲಿದ್ದಾಗ ಹತೀಸಿಂಗರ ಪರಿಚಯವನ್ನೂ ಆಪ್ತತೆಯನ್ನೂ ಕಟ್ಟಿ ಆತನನ್ನು ಮದುವೆಯಾಗುವ ನಿಶ್ಚಯಮಾಡಿಕೊಂಡು ಕೃಷ್ಣೆ ಪ್ರಯಾಗಕ್ಕೆ ಹಿಂತಿರುಗಿ ಬಂದಳು. ಅಕ್ಕನಿಗೂ ತಾಯಿಗೂ ತಿಳುಹಿಸಿ ಅಣ್ಣನವರಿಗೆ ಅರಿಕೆಮಾಡಿ ಅನುಮತಿ ಪಡೆಯುವ ಸಂದರ್ಭ. ಮನೆಯಲ್ಲಿ ಎಲ್ಲರೂ ಸುಸಂಸ್ಕೃತರಾದುದರಿಂದ ಸ್ವತಂತ್ರರೇನೋ ಹೌದು; ಜವಾಹರಲಾಲರು ಇತರರ ಸ್ವತಂತ್ರಕ್ಕೆ ಎಂದಿಗೂ ಅಡ್ಡಿಬಾರದವರು. ಹಿಂದೊಂದು ಸಂದರ್ಭದಲ್ಲಿ ಈ ತಂಗಿ ಯಾವುದೋ ಉದ್ಯೋಗವನ್ನಾರಿಸಿಕೊಂಡು ಅದರಿಂದ ಸ್ವಂತ ವೆಚ್ಚಕ್ಕೆ ಬೇಕಾಗುವಷ್ಟು ಸಂಪಾದನೆ ಮಾಡಿಕೊಳ್ಳಬೇಕೆಂದಿದ್ದಾಗ ಮೋತಿಲಾಲರು "ನೀನು ಸಂಪಾದನೆ ಮಾಡಬೇಕೇ?" ಎನ್ನುತ್ತ ಮಗಳನ್ನು ಗದರಿಸಿದ್ದರು; ಜವಾಹರಲಾಲರು ತಂಗಿಗಷ್ಟುಮಾತ್ರ ಸ್ವತಂತ್ರ ಸಲ್ಲಲೇಬೇಕೆಂದು ತಂದೆಯುವಗೊಡನೆ ವಾದಿಸಿ ಗೆದ್ದಿದ್ದರು. ಆದುದರಿಂದ ತನ್ನ ಪತಿಯನ್ನು ವರಿಸಿಕೊಳ್ಳುವ ಸ್ವಾತಂತ್ರ್ಯಕ್ಕೆ ಜವಾಹರಲಾಲರು ಕಿಂಚಿತ್ತಾದರೂ ತೊಂದರೆಯನ್ನೊಡ್ಡತಕ್ಕವರಾಗಿರಲಿಲ್ಲ.

ಮೊದಲು ಅಕ್ಕನಿಗೆ ಸಮಾಚಾರವನ್ನು ಹೇಳಿ ಕೃಷ್ಣೆ ಆಕೆಯನ್ನೇ ಅಣ್ಣನಿಗೆ ತಿಳಿಸುವಂತೆ ಕೇಳಿದಳು. ಜವಾಹರಲಾಲರಿಗೆ ತಿಳಿಯಿತು. ಆಗ ಕೃಷ್ಣೆಯನ್ನು ಮಾತನಾಡಿಸಿದ ಸಂದರ್ಭದ ವಿವರವನ್ನು ಕೃಷ್ಣೆ ಬರೆದಿರುವಂತೆಯೇ ಕಾಣಬಹುದು :—

"ರಾಜನ * ಪ್ರಸ್ತಾಪವನ್ನು ಜವಾಹರಲಾಲರು ನನ್ನೊಡನೆ ಎತ್ತಿದಾಗ ಸಹಜ ರೀತಿಯಲ್ಲೇ ಆರಂಭಿಸಿದರು. ಕಣ್ಣಿನ ನೋಟವನ್ನು ಸ್ವಲ್ಪ ಕುಣಿಸುತ್ತ "ಬೇಟಿ! ಮದುವೆಯಾಗುವ ಯೋಚನೆ ಮಾಡಿರುವಿಯಂತೆ! ಆ ಯುವಕನ ಸಮಾಚಾರ ಹೇಳುವಿಯ ಸ್ವಲ್ಪ?" ಎಂದಾಗ ನನಗೆ ಸ್ವಲ್ಪ ತೋಚದಂತಾದರೂ ಹೇಳುವೆನೆಂದೊಪ್ಪಿಕೊಂಡೆ. ರಾಜನೇನು ಉದ್ಯೋಗದಲ್ಲಿರುವನೆಂದು ಜವಾಹರರು ಕೇಳಿದಕ್ಕೆ ಆತನು ಬ್ಯಾರಿಸ್ಟರ್ ಎಂದೂ ಆಗ

---

* ಜಿ. ಪಿ. ಹತೀಸಿಂಗ್ ಎಂಬುದು ಆತನ ಹೆಸರು; ರಾಜನೆಂಬುದು ಲಲ್ಲೆಗೆ.

ತಾನೇ ಪ್ರಾರಂಭಿಸಿರುವನೆಂದೂ ಹೇಳಿದೆ. ಆತನ ಮನೆಯವರು ಯಾರೆಂದು ತರುವಾಯ ಕೇಳಿದರು; ನನಗೆ ಸ್ವಲ್ಪವಾದರೂ ಗೊತ್ತಿಲ್ಲವೆಂದು ಹೇಳಿದೆ. ಆತನಿಗೆ ಅಣ್ಣತಮ್ಮಂದಿರೋ ಅಕ್ಕತಂಗಿಯರೋ ಎಷ್ಟಿರುವರೆಂದು ಕೇಳಿದರು; ನಾನು ನಿರುತ್ತರೆಯಾದೆ. ಜವಾಹರರಿಗೆ ಕೋಪವೇರುತ್ತಿದ್ದ ಸೂಚನೆ ಕಂಡುಬಂತು; ಈ ಪ್ರಶ್ನೆಗಳನ್ನು ಮೊದಲೇ ಕೇಳಿ ರಾಜನಿಂದ ಉತ್ತರ ತಿಳಿಯದೆ ಹೋದ ನನ್ನ ಮುಟ್ಠಾಳತನಕ್ಕಾಗಿ ನನ್ನನ್ನೇ ನಾನು ಜರೆದುಕೊಳ್ಳಬೇಕಾಯಿತು. ಆಕ್ಸ್‌ಫರ್ಡಿನಲ್ಲಿ ರಾಜನಿದ್ದುದು ಯಾವ ಕಾಲೇಜಿನಲ್ಲಿ? ಅಲ್ಲಿ ಆತನು ಮಾಡಿದ್ದೇನು? ಇಂತಹ ಹತ್ತಾರು ಪ್ರಶ್ನೆಗಳನ್ನು ನನ್ನ ಮುಂದಿಟ್ಟರು. ಒಂದಕ್ಕಾದರೂ ನನಗೆ ಉತ್ತರ ತಿಳಿದಿರಲಿಲ್ಲ. ಕೊನೆಯಲ್ಲಿ ಜವಾಹರರು "ಆತನನ್ನು ನೀನು ರಾಜನೆಂದೇಕೆ ಕರೆಯುವುದು? ಜಿ. ಪಿ. ಎಂಬ ಅಕ್ಷರಗಳಿಂದ ಪ್ರಾರಂಭವಾಗಿದೆ ಆತನ ಹೆಸರು. ಜಿ. ಪಿ. ಎಂದರೇನು?" ಎಂದು ಕೇಳಿದರು. ಆಗ ಭಯಪಡುತ್ತ ನನಗೆ ಜ್ಞಾಪಕವಿಲ್ಲವೆಂದು ಅಣ್ಣನವರಿಗೆ ಹೇಳಿದೆ. ಜವಾಹರಲಾಲರಿಗೆ ಆ ವೇಳೆಗೆ ಪೂರಾ ಕೋಪವೇ ಬಂದಿತ್ತು. "ಎಲ್ಲಿಯಾದರೂ ಉಂಟೇ ಇಂಥ ಪ್ರಸ್ತಾಪ!" ಎನ್ನುತ್ತ ದಾಪು ಹೆಜ್ಜೆಯಿಡುತ್ತ ಅಲ್ಲಿಂದ ಹೊರಟೇ ಬಿಟ್ಟರು. ನನಗೆ ತೇಜೋಭಂಗವಾಯಿತು..."

ವಾಸ್ತವವಾಗಿ 'ರಾಜ' ಒಳ್ಳೆ ಗುಜರಾಥಿ ಮನೆತನಕ್ಕೆ ಸೇರಿದ್ದಾತನು. ಗಾಂಧೀಜಿಗೆ ಪರಿಚಿತನು. ಜವಾಹರಲಾಲರು ಗಾಂಧೀಜಿಗೆ ತಿಳಿಸಿದಾಗ ಗಾಂಧೀಜಿ ಆ ಮದುವೆಗೆ ತಥಾಸ್ತು ಎಂದರು; ಮದುವೆಯೂ ಆಯಿತು, 'ರಾಜ' ನೆಂಬಾತನು ಜೈಲಿಗೆ ಹೊರಟದ್ದೂ ನಡೆಯಿತು. ಪ್ರಕೃತ ವಿಷಯ ಜವಾಹರಲಾಲರ ಕೋಪ; ಯೋಗ್ಯತೆಗೆ ತಕ್ಕಂತೆ ವಿವೇಚನೆಯನ್ನು ವಹಿಸದಿದ್ದುದಕ್ಕೆ ಅಸಹನ. ಈ ದೃಷ್ಟಾಂತದಲ್ಲಿಯೂ ಇತರ ದೃಷ್ಟಾಂತಗಳಲ್ಲಿಯೂ ಕಾಣುವುದು ಅಹಂಭಾವಶೂನ್ಯವಾದ ಕೋಪ; ಕಾಲಹರಣಕ್ಕೋ ಅಕ್ರಮಕ್ಕೋ ಅಯೋಗ್ಯತೆಗೋ ಕೋಪ! ಆ ರೀತಿಯನ್ನು ಕಂಡು ರಾಜಯೋಗ್ಯವಾದ ಕೋಪವೆನ್ನಬೇಕು. ಆದರೆ ಚರಿತ್ರೆಯ ಕಡತದಲ್ಲಿ ನಾವು ಕಂಡು ಕೇಳಿದ ಎಷ್ಟು ರಾಜಪುರುಷರಿಗೆ ಇಂತಹ ಕೋಪವೇ ಇತ್ತು? ಜವಾಹರಲಾಲರ ಕೋಪ ನಮ್ಮ ಮೆಚ್ಚುಗೆಯನ್ನು ಸೂರೆಗೈಯುವ ಕೋಪ.

ನಾವು ಮೆಚ್ಚಿಕೊಳ್ಳಬಹುದು. ಜವಾಹರಲಾಲರು ಮೆಚ್ಚಿಕೊಳ್ಳುವುದಿಲ್ಲ. ತಮ್ಮ ಚಿತ್ತವೃತ್ತಿ ಶಾಂತವಾಗಿಯೂ ಸ್ಥಿತಪ್ರಜ್ಞನಂತೆಯೂ

ಇರಬೇಕೆಂಬ ಹಂಬಲ ಆತನ ಅಂತರಂಗದಲ್ಲುಂಟು. ಮಹತ್ಕಾರ್ಯ ವನ್ನು ಕಟ್ಟಿಕೊಂಡು ನಡೆಸುವವರೆಲ್ಲರಿಗೂ ಅಸಹನವೆಂಬುದಿಲ್ಲದಿಯೆ ಈ ಪೃಥ್ವಿಯಲ್ಲಿ ನಡೆಯಲು ಸಾಧ್ಯವೇ? ಗಾಂಧೀಜಿಯವರಿಗೂ ಅಸ ಹನವೇರಿ ಕೋಪದ ಮಾತುಗಳನ್ನಾಡಬೇಕಾದ ಸಂದರ್ಭಗಳೊದ ಗಿಲ್ಲವೇ ? ಅಸಹನವಿರುವುದರಿಂದಲೇ ಅಲ್ಲವೇ ಕಾರ್ಯಸಾಧನೆಯಾಗು ತ್ತಿರುವುದು ?

ಮೂಲತಃ ಜವಾಹರಲಾಲರು ಕೋಪಿಷ್ಠರಲ್ಲ; ಉಲ್ಲಾಸಿಗಳು, ಲವಲವಿಕೆಯನ್ನೂ ಉತ್ಸಾಹವನ್ನೂ ಉಂಟುಮಾಡತಕ್ಕವರು. ಕೋಪ ಮಾಡಿಕೊಂಡುದಕ್ಕೆ ಆ ತರುವಾಯ ವ್ಯಸನಗೊಳ್ಳುವುದಾದರೂ ಅನೇಕ ವೇಳೆ ತಾವೇ ಹಾಸ್ಯದಲ್ಲಿ ತೇಲಿಸಿಬಿಡುವರು. ಕಲ್ಕತ್ತೆಯಲ್ಲಿ ಕಾಂಗ್ರೆಸ್ ಕಮಿಟಿ ಸೇರುವ ಸಂದರ್ಭವೊಂದು. ಜವಾಹರಲಾಲರೇ ಅಧ್ಯಕ್ಷರು. ಆ ವೇಳೆಗೆ ಹಿಂದಾಗಿಯೆ ಕೆಲವು ವರದಿಗಳೂ ತೀರ್ಮಾನಗಳೂ ಅಚ್ಚಾಗಿ ಬರಬೇಕಾಗಿತ್ತು; ಮುದ್ರಣಾಲಯಕ್ಕೆ ಸಕಾಲದಲ್ಲಿ ಕೊಟ್ಟು ಕಳು ಹಿಸಿಯೂ ಇತ್ತು. ಅನಿರೀಕ್ಷಿತವಾದ ಎಂತಹುದೋ ಅನಿವಾರ್ಯ ಕಷ್ಟ ವೊದಗಿ ಬಂದು ಮುದ್ರಣಾಲಯದವರು ವೇಳೆಗೆ ಸರಿಯಾಗಿ ಕೊಡ ಲಾರದೆ ಹೋದರು. ಕಾಯದರ್ಶಿಗಳಾದ ಆಚಾರ್ಯ ಕೃಪಲಾನಿ ಯವರು ಬಹಳ ಕಳವಳಿಸಿದರು; ಏನು ಮಾಡುವುದಕ್ಕೂ ಸಾಧ್ಯವಿಲ್ಲದೆ ಹೋಯಿತು. ಬಂದರು ಆ ವೇಳೆಗೆ ಜವಾಹರಲಾಲರು, ಮುದ್ರಿತ ಸರ ಕೆಲ್ಲೆಂದು ಕೇಳುತ್ತ ಕೈಯೊಡ್ಡಿದರು! ಕೃಪಲಾನಿಯವರು ನಡೆದುದನ್ನು ತಿಳಿಸಿದರು. ಅಸಹನವೇರಿ ಪೂರಾ ಕೋಪ ಬಂತು ಜವಾಹರಲಾಲರಿಗೆ; ಐದು ನಿಮಿಷ ಕಾಲ ಪಟಪಟನೆ ವಾಕ್ಪ್ರಹಾರ ಸಿಡಿಯಿತು. ತರುವಾಯ ಕೋಪವಿಳಿಯಿತು. ಸಭೆಗೆ ವೇಳೆಯೂ ಆಯಿತು. ಸಭಾ ವೇದಿಕೆಯ ಮೇಲೆ ಬಂದು ನಿಂತು ಸಭಿಕರನ್ನುದ್ದೇಶಿಸಿ "ಸದಸ್ಯರಲ್ಲಿ ವಿಜ್ಞಾಪನೆ. ಈ ಅಧಿವೇಶನದಲ್ಲಿ ಕೆಲವು ವರದಿಗಳನ್ನೊಪ್ಪಿಸಿ ನಿಮ್ಮ ಅನುಮೋದನೆಯನ್ನು ಪಡೆಯಬೇಕಾಗಿತ್ತು. ಮುದ್ರಣಕ್ಕೆಂದು ಹೊರಟ ವರದಿಗಳು ಮುದ್ರಿತ ವಾಗದೆ ಇವೆ. ಇದಕ್ಕಾಗಿ ತಾವೆಲ್ಲರೂ ಕ್ಷಮಿಸಿಕೊಡಬೇಕು. ಬೇರೆ ಕೆಲವು ನಿಶ್ಚಯಗಳನ್ನು ಚರ್ಚಿಸುವ ಕೆಲಸವೂ ಇತ್ತು. ಅವುಗಳನ್ನೂ

ಮುದ್ರಣಕ್ಕಾಗಿ ಕೊಟ್ಟಿತ್ತು. ಅವಾದರೂ ಕೈಗೆ ಬಂದಿದ್ದರೆ ಅಷ್ಟನ್ನಾದರೂ ಎತ್ತಿಕೊಳ್ಳಬಹುದಾಗಿತ್ತು. ಈಗ ನಾನು ಶೂನ್ಯಹಸ್ತನಾಗಿ ಎದುರಿನಲ್ಲಿದ್ದೇನೆ. ಆದ್ದರಿಂದ ನೀವೇನುಬೇಕಾದರೂ ನಡೆಸಬಹುದು—ಹಾಡಬಹುದು, ನರ್ತಿಸಬಹುದು ಅಥವಾ ಪದ್ಯವನ್ನೊಪ್ಪಿಸಬಹುದು!" ಎಂದರು. ಸಭಿಕರಿಗಿಂತಹ ವಿನೋದವೆಂದೂ ಅನುಭವವೇ ಆಗಿರಲಿಲ್ಲ.

ವಿನೋದಕ್ಕೂ ಸಾಹಸಕ್ಕೂ ಅತ್ಯಾದರಗೊಳ್ಳುವ ಪ್ರಕೃತಿಯಾದುದರಿಂದ ಜವಾಹರಲಾಲರು ಲೇಖನಿ ಹಿಡಿದು ಬರೆದಾಗ ಆ ಎರಡು ಗುಣಗಳು ವಾಕ್ಯವಾಕ್ಯಕ್ಕೂ ಕಾಣುತ್ತವೆ. ಅವಿವೇಕವೆಂದು ತೋರಿದುದನ್ನು ವಿನೋದಬೀರುವ ಹಾಸ್ಯರೀತಿಯಿಂದಲೇ ಸ್ಪಷ್ಟಗೊಳಿಸುವರು; ಅಯೋಗ್ಯವೆಂದು ತೋರಿದುದನ್ನು ಪ್ರಚಂಡರೀತಿಯಲ್ಲಿ ಅಪಹಾಸ್ಯಗೈದು ಗಾಳಿಗೆ ತೂರಿಬಿಡುವರು. ಇದುವರೆಗಾಗಲೆ ಎಷ್ಟೋ ದೃಷ್ಟಾಂತಗಳನ್ನು ಕಂಡಿದ್ದಾಗ್ಗೂ ಮತ್ತೊಂದೆರಡನ್ನು ಕಾಣಬಹುದು.

ತಮ್ಮ ಬಟ್ಟೆಬರೆಗಳನ್ನು ಪ್ಯಾರಿಸ್ಸಿಗೆ* ಚಲುವೆಗಾಗಿ ಕಳುಹಿಸುತ್ತಾರೆಂಬ ವದಂತಿಯನ್ನು ಕುರಿತು—

"ಈ ವೃತ್ತಾಂತ ದಿಟವಲ್ಲವೆಂದು ಪದೇಪದೇ ನಾವು ಹೇಳಿದ್ದೇವೆ. ಆದಾಗ್ಗೂ ತಲೆಯೆತ್ತುತ್ತಲೇ ಇರುತ್ತದೆ. ಅದಕ್ಕಿಂತಲೂ ಆಭಾಸಕರವಾದ ಮರ್ಕಟ ಚೇಷ್ಟೆಯನ್ನು ಕಲ್ಪಿಸಿಕೊಳ್ಳುವುದಕ್ಕೂ ಅಸಾಧ್ಯ. ಧಿಮಾಕಿನಿಂದ ಸ್ವಂತ ಬೆಡಗನ್ನು ಬೀರುವ ಪ್ರಯತ್ನದಲ್ಲಿ ಯಾವ ಶೃಂಗಾರಶೇಖರನಾದರೂ ಇಂತಹ ವ್ಯರ್ಥಕಾರಕ ಬಿನ್ನಾಣದಲ್ಲಿ ಮಗ್ನನಾಗಿದ್ದರೆ ಅವಿವೇಕಿಶಿಖಾಮಣಿಗಳೆನಿಸುವ ತ್ವಾಷ್ಟಗಳಲ್ಲಿಯೂ ಅಗ್ರಗಣ್ಯನೆಂದೆಣಿಸಬೇಕು."

ಕಾಂಗ್ರೆಸ್ ಪರವಾಗಿ ಪ್ರಾಂತಗಳಲ್ಲಿ ಚುನಾವಣೆಗಳು ನಡೆಯುಬೇಕಾಗಿದ್ದಾಗ ಜವಾಹರಲಾಲರು ರಾಷ್ಟ್ರಪತಿ ಸ್ಥಾನದಲ್ಲಿದ್ದುಕೊಂಡು ಸಂಚಾರ ನಡೆಸುತ್ತಿದ್ದ ಕಾಲ. ಮದರಾಸ್ ಪ್ರಾಂತ ಸಂಚಾರ ಮಾಡುತ್ತ ಮೂರು ನಾಲ್ಕು ಮೈಲಿಯಷ್ಟು ದೂರವನ್ನು ಪುದುಕೋಟೆ ಸಂಸ್ಥಾನದಲ್ಲಿ ಕಳೆಯಬೇಕಾಗಿತ್ತು. ಆ ಸಂಸ್ಥಾನದಲ್ಲಿ ಆಡಳಿತ ನಡೆಸು

* ಯಾರೋ ಧನವಂತ ದಂಪತಿಗಳು ಒಂದಾನೊಂದು ಸಂದರ್ಭದಲ್ಲಿ ನೂರು ರೂಪಾಯಿಗಳ ನೋಟುಗಳನ್ನು ಸುಟ್ಟು ಟೀ ಕಾಸಿ ಅತಿಥಿಗಳಿಗೆ ಕೊಟ್ಟರಂತೆ; ಸರಿಹೋಲುವ ವೃತ್ತಾಂತ.

ತ್ತಿದ್ದವನು ಬ್ರಿಟಿಷ್ ಅಧಿಕಾರಿಯೊಬ್ಬಾತ; ಸಿಂಹಾಸನಾಧಿಪತಿಗೆ ಇನ್ನೂ ತಾರುಣ್ಯ. ಜವಾಹರಲಾಲರು ಬರುವರೆಂದು ಕೇಳಿದಾಗ ಅಧಿಕಾರಿಗಳು ಗಾಬರಿಗೊಂಡರು. ರಸ್ತೆಯ ಎರಡು ಪಕ್ಕಗಳಲ್ಲಿಯೂ ಸಂಸ್ಥಾನದ ಫೌಜನ್ನು ನಿಲ್ಲಿಸಿದರು. ಆ ಸಂದರ್ಭದ ವಿವಶವನ್ನು ಜವಾಹರಲಾಲರಿಂದಲೇ ಕೇಳಬೇಕು :—

"ಒಂದೇ ರೀತಿಯ ಸಂಗತಿಗಳು ಪುನಃ ಪುನಃ ಸಂಭವಿಸುತ್ತಿದ್ದರೆ ಮನಸ್ಸಿಗೆ ಬೇಜಾರು ; ಆಯಾಸ. ಪುದುಕೋಟೆ ಸಂಸ್ಥಾನ ಮಾತ್ರ ಹೊಸ ಬಗೆಯ ಸಂಭವ ನಡೆಸಿ ಮನಸ್ಸಿನ ಆಯಾಸವನ್ನು ನೀಗಿಸಿತು. ಪುದುಕೋಟೆ ಪಟ್ಟಣವನ್ನು ಸಮೀಪಿಸುತ್ತಿದ್ದಂತೆ ಅಲ್ಲಿ ರಸ್ತೆಯ ಎರಡು ಪಕ್ಕಗಳಲ್ಲಿಯೂ ಆ ಸಂಸ್ಥಾನದ ಸೇನಾ ವಿಭಾಗಗಳು ವ್ಯೂಹ ಬದ್ಧವಾಗಿ ನಿಂತಿದ್ದುದು ಕಣ್ಣಿಗೆ ಗೋಚರವಾಯಿತು. ಕುತೂಹಲ ಹುಟ್ಟಿತು. ಮುಂದೆ ಇನ್ನೂ ದೊಡ್ಡದಾದ ಸೇನೆ ಸಜ್ಜಾಗಿ ನಿಂತಿತ್ತು. ನನ್ನ ಕುತೂಹಲ ಹೆಚ್ಚಿತು. ಮೋಟಾರ್ ಕಾರಿನಿಂದ ಇಳಿದೆನು ; ಪೋಲೀಸ್ ಇಲಾಖಾಧ್ಯಕ್ಷನೋ ಸಮಸ್ತ ಸೇನಾಧಿಪತಿಯೋ ಆಗಿದ್ದವನಂತೆ ಕಂಡ ಅಧಿಕಾರಿಯನ್ನು ಸಮೀಪಿಸಿ "ಇಷ್ಟೆಲ್ಲ ಏತಕ್ಕೆ? ಸೇನಾವಿಭಾಗಗಳ ಅಭ್ಯಾಸವೇ ? ಅಂತರರಾಷ್ಟ್ರೀಯ ಪರಿಸ್ಥಿತಿಯಿಂದ ಸಂಸ್ಥಾನಕ್ಕೇನಾದರೂ ಪರಿಣಾಮ ತೋರಿದೆಯೇ ? ಆಸನ್ನ ಸಮಯಕ್ಕೆ ಸನ್ನಾಹವೇ ? ದಂಗೆ ನಡೆದೀತೆಂಬ ಊಹೆಯೇ ? ಏನಿರಬಹುದು ?" ಎಂದು ವಿಚಾರಿಸಿದೆ. ಜನರ ಗುಂಪಿನಿಂದ ನನ್ನ ಪ್ರಯಾಣಕ್ಕೆ ತೊಂದರೆಯಾಗದಂತೆ ನೆರವೇರಿಸಲು ಸೇನಾವಿಭಾಗಗಳು ಆ ರೀತಿ ಸಿದ್ಧವಾಗಿದ್ದುವೆಂದು ಉತ್ತರ ಬಂತು. ಕಾಂಗ್ರೆಸ್ ಅಧ್ಯಕ್ಷನಿಗೆ ಸಂಸ್ಥಾನದ ಆಡಳಿತಗಾರರು ಅಪೂರ್ವ ಮರ್ಯಾದೆ ನಡೆಸಿದಂತೆ ಆಯಿತಲ್ಲವೆ! ಇಂತಹ ಮರ್ಯಾದೆ ನನ್ನ ಅನುಭವಕ್ಕೆ ಹೊಸದು. ನಾನಾ ಬಗೆಯ ಜನ ಸಮುದಾಯಗಳವರು ನನಗೆ ಅದ್ಭುತವೆನ್ನಿಸುವ ಮರ್ಯಾದೆಯನ್ನು ಮಾಡಿ ಸತ್ಕರಿಸಿದ್ದರು. ಆದರೆ ರಸ್ತೆಯ ಎರಡು ಪಕ್ಕಗಳಲ್ಲಿಯೂ ಸೈನ್ಯ ನಿಲ್ಲಿಸಿ ಮಧ್ಯೆ ಸೇನಾವೃತನಾಗಿ ಹೊರಡುವಂತಹ ವೈಸರಾಯಿ ಮರ್ಯಾದೆಯನ್ನು ನಾನು ಅನುಭವಿಸಿರಲಿಲ್ಲ. ಲಭಿಸಿದ್ದನ್ನು ಬಿಡದೆ ಸಾಧ್ಯವಾದಷ್ಟೂ ಅನುಭವಿಸಿಬಿಡೋಣವೆಂದುಕೊಂಡೆ ; ಈ ಮಹಾ ಸಂಸ್ಥಾನದ ಭಾಗದಲ್ಲಿ ಸೇನಾಪರಿವೃತನಾಗಿ ಹೊರಡಲು ನಿಶ್ಚಯಿಸಿಕೊಂಡೆ. ಹಾಗೆಯೆ ಹೊರಟೆವು. ಹಿಂದುಗಡೆ ಗುಂಪುಗೂಡಿದ್ದ ಜನರು ಮೌನದಿಂದಲೇ ನೋಡುತ್ತಿದ್ದರು. ಒಂದು ಮೈಲಿ ದೂರ ನಾನು ಸೈನ್ಯದ ಮುಂದುಗಡೆ ಹೊರಟೆ. ದೃಶ್ಯ ಚನ್ನಾಗಿಯೇ ಇದ್ದಿರಬೇಕು ; ನಾನಂತೂ ಅಂತಹು

> ದನ್ನು ಕಾಣೆ. ಆ ವೇಳೆಗೆ ಹೊತ್ತು ಮೀರುತ್ತ ಬಂದ ಕಾರಣದಿಂದ ನಾನು ನನ್ನ ಕಾರಿನಲ್ಲಿ ಕುಳಿತು ತಿರುಚನಾಪಳ್ಳಿಗೆ ಹೊರಟುಬಿಟ್ಟೆನು.
>
> ಈ ಸಂಭವದ ತುಂಬ ಅರ್ಥವಿದೆ. ಬ್ರಿಟಿಷರು ಆಡಳಿತವನ್ನು ವಹಿಸಿಕೊಂಡ ಸಂಸ್ಥಾನಗಳಲ್ಲಿ ಕೆಲಸಕಾರ್ಯಗಳು ನಡೆಯುವ ರೀತಿ ಸ್ಪಷ್ಟವಾಗುತ್ತದೆ. ಕಾಲಹರಣ ಮಾಡದೆ ಸಂಸ್ಥಾನದ ರಸ್ತೆಯಲ್ಲಿ ವೇಗ ಸಂಚಾರವನ್ನಿಟ್ಟುಕೊಂಡಿದ್ದವನು ನಾನು. ಎಲ್ಲಿಯೂ ನಾನು ನಿಲ್ಲುತ್ತಿರಲಿಲ್ಲ. ಆದರೆ ಅಲ್ಲಿಯ ಆಡಳಿತಗಾರರು ಏನೇನನ್ನೋ ಭಾವಿಸಿಕೊಂಡು ನನ್ನಿಂದ ಸಾಧ್ಯವಾಗದಿದ್ದುದನ್ನು ತಾವೇ ಮಾಡಿಬಿಟ್ಟರು. ನಾನು ಬಂದು ಹೋಗುವ ವಿಷಯದಲ್ಲಿ ಸಂಸ್ಥಾನದಲ್ಲಿದ್ದವರಿಗೆಲ್ಲರಿಗೂ ಎಚ್ಚರಿಕೆಯನ್ನು ಕೊಟ್ಟು ಗುಂಪುಗೂಡಿಸಿದರು. ನನ್ನ ಮಟ್ಟಿಗೆ ನಾನು ಕೃತಜ್ಞ. ತಮ್ಮ ಸಂಸ್ಥಾನದಲ್ಲಿ ನಾನು ಹೊರಟಾಗ ನನಗಾಗಿ ಸೈನ್ಯ ಶಿಬ್ಬಂದಿಯನ್ನು ಒದಗಿಸಿಕೊಟ್ಟುದಕ್ಕಾಗಿ ನಾನು ಕೃತಜ್ಞನಾಗಿರುವೆನು. ಆ ಸಂದರ್ಭದಲ್ಲಿ ಹೂಮಾಲೆಗಳನ್ನರ್ಪಿಸುವುದನ್ನು ನಿಷೇಧಿಸುವ ಅಜ್ಞೆ ಹೊರಡಿಸಿ ಅಂತಹ ಪಲ್ಲಟಕಾರಕ ಕಾರ್ಯಗಳಿಂದ ಸಂಸ್ಥಾನದ ಸಮಸ್ತ ಆಡಳಿತವೂ ತಲೆಕೆಳಕಾದೀತೆಂದು ಎಚ್ಚರಕೊಟ್ಟಿದ್ದರೆಂದು ನನಗೆ ತಿಳಿಯಿತು. ಸಮಸ್ತ ಆಡಳಿತವೆಂಬ ಆ ಕಟ್ಟಡ ಪ್ರಾಯಶಃ ಗಾಳಿಬೀಸಿದರೆ ಹಾರಿಹೋಗುವುದೋ ಏನೋ! ಅದಕ್ಕೇ ಅಷ್ಟು ಕಳವಳ."

ಅಸಹನ ತೋರಿದ ಸಂದರ್ಭಗಳಲ್ಲಿ ನ್ಯಾಯವಾದ ಕೋಪವನ್ನು ಕಾಣಿಸುವುದಕ್ಕಿಂತ ಹೆಚ್ಚಾಗಿ ವಿನೋದಗೊಂಡು ಹಾಸ್ಯವನ್ನು ಕಾಣುವ ಸೂಕ್ಷ್ಮವಾದ ಮಾನಸಿಕ ಪರೀಕ್ಷೆ ಜವಾಹರಲಾಲರಿಗೆ ಸ್ವಭಾವದಲ್ಲಿ ಅಭ್ಯಾಸವಾಗಿರುವುದು. ಅಸಾಧಾರಣವೂ ಅನಿರೀಕ್ಷಿತವೂ ಆದ ಸಂದರ್ಭಗಳಲ್ಲಿ ಸಹನವನ್ನು ಬಲವಂತದಿಂದಲಾದರೂ ಮನಸ್ಸಿನಲ್ಲಿಟ್ಟುಕೊಳ್ಳಬೇಕಾದುದು ಸಾಮಾನ್ಯಜನರಿಗೂ ಅವಶ್ಯ. ದೊಡ್ಡದೊಡ್ಡದೂ ಹೊಸಹೊಸದೂ ಆದ ಕೆಲಸಕಾರ್ಯಗಳನ್ನು ಕಟ್ಟಿಕೊಂಡು ನಡೆಸಲುದ್ಯುಕ್ತರಾದವರಿಗೆ ಸಹನಪರೀಕ್ಷೆಯ ಸಂದರ್ಭಗಳೊದಗಿದಾಗ ಅತಿ ವಿಷಮವಾಗಿಯೇ ಇರುತ್ತದೆ. ಅಂತಹ ವೇಳೆಗಳಲ್ಲಿ ವಿನೋದವನ್ನೂ ಹಾಸ್ಯವನ್ನೂ ಕಾಣಬಲ್ಲ ಚಿತ್ತಪ್ರಕೃತಿಯಿದ್ದು ಸಂದರ್ಭವನ್ನು ಗೆಲ್ಲುವುದಾದರೆ ಕೇವಲ ಮರ್ತ್ಯಮಾತ್ರರೇ ಅಲ್ಲದೆ ಅಂತರಿಕ್ಷ ವಿಹಾರಿಗಳಾದ ದೇವ ಗಂಧರ್ವ ಕಿಂಪುರುಷರು ದುಂದುಭಿ ಮೊಳಗಿಸುತ್ತ ಪುಷ್ಪವೃಷ್ಟಿ ಗೆಯ್ಯಬೇಕು. ಜವಾಹರಲಾಲರ ಜೀವನ ಯಾತ್ರೆಯಲ್ಲಿ ಇದುವರೆಗೆ ತೋರಿ

ಕೊಂಡ ವಿಷಮ ಸಂದರ್ಭಗಳೆಷ್ಟೋ ಇರಬಹುದು; ತತ್ರಾಪಿ ತ್ರಿಪುರಿ ಕಾಂಗ್ರೆಸ್ ಸಮ್ಮೇಳನದಲ್ಲಿ ನಡೆದ ಒಂದು ಸಂದರ್ಭವನ್ನೇ ಅತಿ ವಿಷಮ ವೆನ್ನಬಹುದು.

ಸುಭಾಷಚಂದ್ರ ಬಾಬುವಿಗೂ ಇತರ ನಾಯಕರಿಗೂ ವಿರೋಧ ಮನಸ್ತಾಪಗಳು ಬಲಗೊಂಡಿದ್ದ ಕಾಲ. ಅಧ್ಯಕ್ಷಪದವಿಯಲ್ಲಿದ್ದ ಸುಭಾಷ ಬಾಬು ತೀರಾ ಅಸ್ವಸ್ಥರು. ಕಾಂಗ್ರೆಸ್ಸಿನ ವಿರಾಟ್ಸಭೆಯಲ್ಲಿ ಭಾಷಣ ಪ್ರತಿಭಾಷಣಗಳು ಉದ್ರಿಕ್ತರೀತಿಯಲ್ಲೇ ನಡೆಯುತ್ತಿದ್ದವು; ಒಳಗೊಳಗೆ ಎಂತೆಂತಹ ಪಿತೂರಿಗಳೋ ನಡೆಯುತ್ತಲಿವೆಯೆಂಬ ಕೂಗೆದ್ದು ಸಾಮಾನ್ಯ ಸದಸ್ಯರ ಸಮೂಹಕ್ಕೆ ಗುಮಾನಿ ಹೆಚ್ಚಿ ಯಾವುದಾದರೊಂದು ಪಕ್ಷದ ಪರವಾಗಿ ಆಗ್ರಹವೇರಿತ್ತು. ಸಣ್ಣವರನ್ನೂ ದೊಡ್ಡವರನ್ನೂ ತಮ್ಮ ಶ್ವಾಸಮಾತ್ರದಿಂದ ಸಮಾಧಾನ ಸ್ಥಿತಿಗೆ ತರಬಲ್ಲ ಪೂಜ್ಯ ಗಾಂಧೀಜಿಯವರು ಅಲ್ಲಿರಲಿಲ್ಲ. ಸುಭಾಷ್‌ಚಂದ್ರ ಬಾಬುವಿನಲ್ಲಿ ಅಸಹನ ವೊಂದು ಗುಂಪಿಗಾದರೆ ಮತ್ತೊಂದು ಗುಂಪಿಗೆ ಸರದಾರ್ ವಲ್ಲಭ್ಭಾಯಿ ಯುಂತಾದ ಇತರ ವರ್ಕಿಂಗ್ ಕಮಿಟಿಯವರಲ್ಲಿ ಪ್ರಬಲವಾದ ಅಸಹನ. ಎರಡು ಗುಂಪುಗಳಿಗೂ ವಿಶ್ವಾಸಪಾತ್ರರಾಗಿದ್ದವರು ಜವಾಹರಲಾಲರು; ಆದರೆ ಸುಭಾಷ ಬಾಬುವಿನ ವರ್ತನೆಯಲ್ಲಿ ದೋಷವಿತ್ತೆಂದು ಜವಾಹರ ಲಾಲರೂ ಹೇಳಿಬಿಟ್ಟಿದ್ದರು. ವೇದಿಕೆಯ ಮೇಲೆ ಯಾರನ್ನು ಕಂಡರೂ ಒಂದು ಪಕ್ಕದಿಂದಲ್ಲದಿದ್ದರೆ ಮತ್ತೊಂದು ಪಕ್ಕದಿಂದ ವಿರೋಧ ಧ್ವನಿ ಗಳೇ ಆಕಾಶಕ್ಕೆದ್ದು ಭಾಷಣ ಕೊಡುವುದೆಂಬುದೇ ಅಸಾಧ್ಯವಾಗಿಹೋ ಯಿತು. ಆ ವಿರಾಟ್ಸಭೆಯೆದುರಿನಲ್ಲಿ ನಿಂತು ಸಭಿಕರ ಕಿವಿಮುಟ್ಟುವಂತೆ ಮಾತನಾಡುವವರೇ ಇಲ್ಲವಾಯಿತು. ಅಂತಹ ವಿಷಮ ಸನ್ನಿವೇಶದಲ್ಲಿ ಜವಾಹರಲಾಲರು ವೇದಿಕೆಯನ್ನೇರಿ ನಿಂತರು; ಭಾಷಣವನ್ನು ಮಾಡಿ ಕಾಂಗ್ರೆಸ್ಸಿಗೆ ಅಪಕೀರ್ತಿ ತಂದಿಟ್ಟ ಸಂದರ್ಭವನ್ನು ತಪ್ಪಿಸುವ ಸಂಕಲ್ಪ ದಿಂದ ಧೀರದೃಷ್ಟಿಯನ್ನು ಸುತ್ತಲೂ ಬೀರಿ ಮಾತನ್ನು ಪ್ರಾರಂಭಿಸುವ ವೇಳೆಗೆ ಒಂದು ಪಾರ್ಶ್ವದಿಂದ ತುಮುಲನಿನಾದವೆದ್ದು ಕಿವಿ ಕಿವುಡಾಗು ವಂತೆಯೂ ಮನಸ್ಸಿಗೆ ಹುಚ್ಚು ಹಿಡಿಸುವಂತೆಯೂ ತಾರಸ್ಥಾಯಿ ಯಲ್ಲಿಯೆ ನಿಂತು ವಿಜೃಂಭಿಸಿ ಕ್ಷುಬ್ಧ ಜಲಧಿಯ ತರಂಗಗಳು ತೀರವನ್ನು

ಕ್ಷಣೇ ಕ್ಷಣೇ ಅಪ್ಪಳಿಸಿದಂತೆ ಆಕಾಶವನ್ನು ಪದೇ ಪದೇ ಆಲೋಡನ ಗೊಳಿಸಿತು.

ಬಂಗಾಲ ಪ್ರಾಂತದಿಂದ ಬಂದಿದ್ದ ಸದಸ್ಯರಿಗೆ ಸಹಜವಾಗಿ ಸುಭಾಷಬಾಬುವಿನಲ್ಲಿ ಪಕ್ಷಪಾತ; ಆ ಪಕ್ಷಪಾತದಿಂದ ತಮಗೆ ವಿರೋಧಿ ಗಳೆನಿಸಿದವರಲ್ಲಿ ಉದ್ರೇಕಗೊಂಡ ಅಸಹನ. ವರ್ಕಿಂಗ್ ಕಮಿಟಿಯ ಸಭಿಕರಾರು ಬಂದು ಮಾತನಾಡಿದರೂ ತಮ್ಮ ಪಕ್ಷಕ್ಕೆ ವಿರೋಧವಾಗಿ ಭಾಷಣಮಾಡಿಯಾರೆಂಬ ಪ್ರಬಲ ಶಂಕೆ ಅವರಲ್ಲಿ ಮೂಡಿತ್ತು. ಜವಾ ಹರಲಾಲರು ವೇದಿಕೆಯೇರಿದ್ದನ್ನು ನೋಡಿದರು; ಮುಖಭಾವದಲ್ಲಿ ಧೀರಲಕ್ಷಣಗಳನ್ನು ಗುರುತಿಸಿದರು. ಸಭಾಸ್ಥಾನದ ಇತರೆಡೆಗಳಲ್ಲಿದ್ದ ವರು ಸ್ತಬ್ಧರಾಗಿ ಭಾಷಣಕ್ಕೆ ಕಿವಿಗೊಡಲು ಸಿದ್ಧರಾದುದನ್ನು ಕಂಡರು. ಇನ್ನು ಜವಾಹರಲಾಲರು ಭಾಷಣಕೊಟ್ಟು ಗೆದ್ದುಬಿಟ್ಟಾರೆಂಬ ಶಂಕೆ ಯೂ ತಮ್ಮ ಪಕ್ಷವನ್ನು ಖಂಡಿಸಿಯಾರೆಂಬ ಅನುಮಾನವೂ ಅನೇಕ ಬಂಗಾಲಿಗಳ ಮನಸ್ಸಿನಲ್ಲಿ ತಾಂಡವವಾಡಿತು. ಸುಭಾಷಚಂದ್ರರ ಪಕ್ಷ ವನ್ನಂತೂ ವಹಿಸತಕ್ಕವರಲ್ಲವೆಂಬುದು ಗುಂಪಿನವರೆಲ್ಲರಿಗೂ ಸ್ಪಷ್ಟವಾ ಗಿತ್ತು. ಆತನ ಭಾಷಣವನ್ನು ಕೇಳುವುದೂ ಬೇಡ, ಇತರರಿಗೆ ಕೇಳಿ ಸುವುದೂ ಬೇಡವೆಂಬ ಒರಟುತನ ಅವರೆಲ್ಲರ ಮನಸ್ಸನ್ನೂ ಗೆದ್ದಿತು. ನಾನ್ನೂರು ಜನರೊಂದು ಗುಂಪಾಗಿ ಕುಳಿತಿದ್ದವರು ವಿಹಜ್ಮುಖರಾಗಿ ಬದ್ಧಮುಷ್ಟಿಗಳನ್ನೆದುರಿಗಾಡಿಸುತ್ತ ಗಂಟಲುಗಳನ್ನೆತ್ತಿ ಏಕಪ್ರಕಾರವಾಗಿ "ನೋ ನೋ! ನೋ ನೋ! ನೋ ನೋ!!" ಎಂದು ತಾಳಲಯಬದ್ಧ ವಾಗಿ ಆರ್ಭಟಿಸತೊಡಗಿ ನಲವತ್ತು ನಿಮಿಷಕಾಲ ಕವಾಯತ್ ನಡೆಸಿ ದಂತೆ ನಡೆಸಿದರು. ಒಂದು ಸಲವಲ್ಲ, ಎರಡು ಸಲವಲ್ಲ, ನಾಲ್ಕಾರು ಸಲ ಜವಾಹರಲಾಲರು ತಮ್ಮ ಕಂಠಧ್ವನಿಯನ್ನೆತ್ತಿ ಭಾಷಣವನ್ನುಪಕ್ರ ಮಿಸುವ ಯತ್ನ ಈ ಡ್ರಿಲ್ ಎದುರಿನಲ್ಲಿ ಸ್ವಲ್ಪವೂ ಸಾಗದಾಯಿತು. ಆವೇಶಪೂರಿತರಾಗಿದ್ದ ಬಂಗಾಳಿ ಸಮೂಹದವರ ಗಾಳಿಗುದ್ದಾಟನಿಂತು ಆವೇಶಕ್ಕೆ ಪ್ರತಿಯಾಗಿ ಆಯಾಸ ಸಮಾಧಾನಗಳು ಕಾಣುವವರೆಗೆ ವೇದಿಕೆಯ ಮೇಲೆಯೇ ನಿಂತಿರಬೇಕಾಯಿತು. ಸಭೆಯಲ್ಲಿದ್ದ ಅನೇಕ ರಿಗೆ ಬಲು ಹಿಂಸೆಯಾಯಿತು; ಆದರೆ ಮಾಡತಕ್ಕುದೇನು! ಕಡೆಗೆ ಆ

ಡ್ರಿಲ್ ನಿಂತಿತು. ಆಯಾಸ ಮಾತ್ರವಲ್ಲದೆ ಅವಮಾನವೂ ಹುಟ್ಟಲಾರಂಭವಾಯಿತು; ಸಮಸ್ತರೆದುರಿನಲ್ಲಿಯೂ ತಾವು ಅಯೋಗ್ಯರೀತಿಯಲ್ಲಿ ವರ್ತಿಸಲಾಯಿತೆಂಬ ಅವಮಾನ. ಗಂಟೆಲುಗಳ ಗರ್ಜನೆಯೊಂದಿಗೆ ಆಕಾಶ ತಾಡನೆಗಳೂ ನಿಲ್ಲುವ ವೇಳೆಗೆ ಸಭಿಕಬಾಹುಳ್ಯಕ್ಕೆ ಬ್ರಹ್ಮಕಲ್ಪವೊಂದು ಮುಕ್ತಾಯಗೊಂಡಂತೆ ಮನಸ್ಸಿಗೆ ತೋರಿರಬೇಕು. ಆಗ ಜವಾಹರಲಾಲರು ಮಾತನ್ನು ಮೊದಲಿಟ್ಟರು. ಸಮಾಧಾನವಾಗಿ ಮೊದಲಿಟ್ಟು ತಮ್ಮ ಸಮಸ್ತ ಚೈತನ್ಯವನ್ನೂ ವಾಣಿಯಲ್ಲಿ ಸೇರಿಸುತ್ತ ಮುಂದುವರಿಸಿದರು. ಅಮೃತವೃಷ್ಟಿಯುಂತಾಯಿತು. ದೃಢವಾದ ಆ ವಾಣಿಯ ಕಂಪಿತಸ್ವರದಿಂದಲೂ ಆ ದಿವ್ಯಶರೀರದ ಪುಳಕದಿಂದಲೂ ಸಭಿಕರು ರೋಮಾಂಚಗೊಂಡರು, ನಾಚಿದರು, ಕಡೆಗೆ ಭೂದೇವತೆಗಳಾಗಿ ಪರಿಣಮಿಸಿದರು.

ಈ ಸಂದರ್ಭವೇ ಪ್ರಾಯಶಃ ಜವಾಹರಲಾಲರಿಗೆ ಕಾಲಪುರುಷ ನೊಡ್ಡಿದ ಅತಿ ವಿಷಮಪರೀಕ್ಷೆ. ವೇದಿಕೆಯ ಮೇಲೆ ಧೀರ ಮೌನದಿಂದ ನಿಂತಿದ್ದ ವೇಳೆಯಲ್ಲಿ ಆತನ ಚಿತ್ತವರ್ತನೆಯಲ್ಲಿದ್ದುದೇನು? ಓಲಾಡಿದ ಯೋಚನಾತರಂಗಗಳೆಂತಹವು? ಸಮರ್ಥ ದಳಪತಿಯಾದವನು ಪ್ರತಿಸೈನ್ಯವ್ಯೂಹದ ಲಕ್ಷಣಗಳನ್ನು ಗುರುತಿಸಿದ ಬಳಿಕ ಇಂತಹ ಪರಿಣಾಮವೇ ನಡೆದೀತೆಂಬ ನಿಶ್ಚಯವನ್ನು ಮನಸ್ಸಿನಲ್ಲಿ ಮಾಡಿಕೊಂಡು ಸಮಯಸಿರೀಕ್ಷೆ ಮಾಡುತ್ತಿರುವ ವೇಳೆಯಲ್ಲಿ ಹೇಗಿದ್ದಾನು? ತನ್ನ ಸರ್ವಶಕ್ತಿಯನ್ನೂ ಹದಗೊಳಿಸಿಟ್ಟುಕೊಂಡು ಪ್ರಯೋಗದ ಕ್ಷಣಕ್ಕಾಗಿ ಕಾಯುತ್ತಲಿರುವಾಗ ಸೂಕ್ಷ್ಮರೀತಿಯ ವಿನೋದವೇ ಆತನ ಸ್ಥೈರ್ಯಕ್ಕೆ ಲಕ್ಷಣವೆನಿಸುವುದು.

ಅಕ್ರಮವಾದರೆ ರೀತಿಗೆಟ್ಟಿತೆಂದುಕೊಳ್ಳುವುದೇತಕ್ಕೆ ಸಾಮಾನ್ಯವಾಗಿ? ನಿರೀಕ್ಷಿಸಿದ್ದ ಪರಿಪೂರ್ಣತೆಯೋ ಸೌಂದರ್ಯವೋ ಕೆಟ್ಟಾಗಲಲ್ಲವೆ? ಸೌಂದರ್ಯವನ್ನು ಆಶಿಸುವ ಸ್ವಭಾವದವರಿಗೆ ಕೆಲಸಕಾರ್ಯಗಳಲ್ಲಿ ರೀತಿಗೆಟ್ಟಾಗ ಅಸಹನವೇ ಪ್ರಾಪ್ತಿ. ಆದರೆ ತಿಳಿದು ಮಾಡಿದ ತಪ್ಪಿತಕ್ಕೂ ತಿಳಿಯದೆ ಗೈದ ತಪ್ಪಿತಕ್ಕೂ ಅಂತರವುಂಟು. ನ್ಯಾಯಬುದ್ಧಿಯುಳ್ಳವರು ಈ ಅಂತರವನ್ನು ಮರೆಯಲಾರರು. ಕರ್ತವ್ಯ

ವನ್ನು ಮುಂದಿಟ್ಟುಕೊಂಡ ಭಾರತೀಯ ಜನರಿಗೆ ಸಾಮೂಹಿಕ ಶಿಸ್ತಿಯ ಅನುಭವವಿಲ್ಲ; ಅದರ ಸೌಂದರ್ಯವನ್ನವರು ಕಂಡವರಲ್ಲ. ಮನಸ್ಸಿಗೆ ತಿಳಿದವೇಲೂ ಅಭ್ಯಾಸವಿಲ್ಲದ ಕಾರಣದಿಂದ ಗುಂಪಿನ ಶಿಸ್ತೆಂಬುದರ ಪ್ರಾಪ್ತಿ ಬಲುತಡವಾಗಿ ಹೋಯಿತು. ಗುಂಪಾಗಿ ವರ್ತಿಸುತ್ತ ನಡೆಸಬೇಕಾದ ಕರ್ತವ್ಯ ಅತ್ಯಲ್ಪವಾಗಿದ್ದರೂ ಶಿಸ್ತಿಯಿಲ್ಲದ ಸ್ಥಿತಿಯಲ್ಲಿ ಅತಿ ದೊಡ್ಡದಾಗಿ ಕಾಣುವುದು; ಅತಿ ನಿದಾನವಾಗುವುದು. ಸ್ವಂತ ಜನರಾದ ಭಾರತೀಯರು ಗುಂಪುಕೂಡಿದಾಗಲೆಲ್ಲ ಶಿಸ್ತಿಯ ಲೋಪವೆಲ್ಲಿಯಾದರೂ ಪ್ರಕಟವಾಗಿಬಿಡುವುದು. ಕಾಣಿಸಿಕೊಳ್ಳುವ ಲೋಪಗಳು ಬಹುತರವಾಗಿ ತಿಳಿಯದೆ ಮಾಡಿದ ತಪ್ಪುಗಳಾಗಿಯೆ ಇರುತ್ತವೆ. ಪದೇಪದೇ ಗಾಂಧೀಜಿ ಮೊದಲ್ಗೊಂಡು ಎಲ್ಲ ರಾಷ್ಟ್ರ ನಾಯಕರೂ ಶಿಸ್ತಿಬೇಕು ಶಿಸ್ತಿಬೇಕೆಂದು ಹೇಳುತ್ತಿರುವುದಕ್ಕೆ ಅದೇ ಕಾರಣ. ಜವಾಹರಲಾಲರಿಗೆ ಶಿಸ್ತಿಯೆಂಬುದು ಶ್ವಾಸಕ್ಕೆ ಸಮ. ಸ್ವಲ್ಪಮಾತ್ರ ತಪ್ಪಿದರೂ ಸಹಿಸಲಾಗುವುದಿಲ್ಲ. ಸಮಯ ದೊರೆತಾಗಲೆಲ್ಲ ಶಿಸ್ತಿಪಾಲನೆಯಭ್ಯಾಸ ಜನರಿಗೆ ಅತ್ಯವಶ್ಯಕವೆಂದು ಹೇಳುತ್ತಲೇ ಇರುತ್ತಾರೆ; ಶಿಸ್ತಿಭಂಗ ಕಂಡಕೂಡಲೆ ತಾವೇ ಮೈಮರೆತಂತೆ ನುಗ್ಗಿ ಶಿಸ್ತಿಯುದ್ಧಾರ ಮಾಡಿಕೊಡುತ್ತಾರೆ.

ಲಾಹೋರ್ ಕಾಂಗ್ರೆಸ್ಸಿಗೆ ಜವಾಹರಲಾಲರು ಅಧ್ಯಕ್ಷರಾದ ಸಮಯದಲ್ಲಿಯೆ ವಿಚಿತ್ರವಾದರೂ ನಮಗೆ ಸರ್ವಸಾಮಾನ್ಯವಾಗಿ ಹೋಗಿರುವಂತಹ ಸಂದರ್ಭವೊದಗಿತು. ಕಾಂಗ್ರೆಸ್ಸಿನ ವಿರಾಟ್ಸಭೆಯನ್ನು ಕಾಣಲು ಎಲ್ಲರಿಗೂ ಆಸೆಯುಷ್ಟೆ! ಎಲ್ಲಿಯೋ ದೂರದ ಮೂಲೆಯಲ್ಲಿದ್ದುಕೊಂಡು ಕಾಣುವುದಕ್ಕಿಂತ ವೇದಿಕೆಗೆ ಸಮೀಪವಾದೆಡೆಯನ್ನು ದೊರಕಿಸಿಕೊಳ್ಳಲು ಆ ಸಮಯದಲ್ಲಿ ಎಂತಹ ಸಂಧಾನವನ್ನಾದರೂ ಜನರು ಮಾಡಲನುವಾಗುವರು. ಅಧ್ಯಕ್ಷರ ಕಡೆಯುವರೆಂದು ಚೀಟಿಯನ್ನು ತೋರಿಸಿ ವೇದಿಕೆಯ ಬಳಿಯಲ್ಲಿಯೇ ಸ್ಥಳ ಸಂಪಾದಿಸಿಕೊಳ್ಳುವ ಅವಕಾಶವಿದ್ದರೆ ಅದಕ್ಕಿಂತ ಬೇರೇನು ಬೇಕು! ಜವಾಹರಲಾಲರು ಅಧ್ಯಕ್ಷರಾದಾಗ ಬಂಧುವರ್ಗದವರನೇಕರು ಆ ಮಾರ್ಗವನ್ನು ಹಿಡಿಯುವ ಯೋಚನೆಯನ್ನು ಬೆಳಸಿದರು. ಅವರ ಪರವಾಗಿ ಬಂದು ಒಬ್ಬರಿಬ್ಬರು ರಾಷ್ಟ್ರಪತಿ

ಜವಾಹರಲಾಲರನ್ನು ಪ್ಯಾಸ್ ಬರೆದುಕೊಡಬೇಕೆಂದು ಕೇಳಿದರು; ಪಕ್ಕದಲ್ಲಿದ್ದವರು ವಿವರಿಸಿಯೂ ಕೊಟ್ಟರು. "ನಾನ್ಸೆನ್ಸ್! ಆಮಾತೆತ್ತ ಬೇಡಿ!" ಎಂದರು ಜವಾಹರಲಾಲರು. "ಅವರೆಲ್ಲರಿಗೂ ಬಹಳವಾದ ಆಸೆಯಿದೆ. ಪ್ಯಾಸನ್ನು ಹಿಂದಿನ ಅಧ್ಯಕ್ಷರೂ ಕೊಡುತ್ತಿದ್ದರು" ಮುಂತಾಗಿ ಅರ್ಜಿದಾರರು ಹೇಳಿಕೊಂಡರು. ಜವಾಹರಲಾಲರ ಅಸಹನ ಕ್ರಮಭಂಗದಂಶದಿಂದಲ್ಲದೆ ಬೇರೊಂದಂಶದಿಂದಲೂ ಕೆರಳಿತು. "ಇತರರಿಗಿಂತ ಯಾರೇನು ಹೆಚ್ಚು? ಪ್ಯಾಸ್ ಕೊಡುವುದು ಅಕ್ರಮ; ನಾನು ಅಕ್ರಮವನ್ನು ನಡೆಸಲಾರೆ! ವರ್ಷಕ್ಕೊಂದು ಸಲ ಕಾಂಗ್ರೆಸ್ಸಿಗೆ ಬರುವವಪರಿವರು! ಅಷ್ಟರಿಂದ ದೇಶಕ್ಕೆ ಸಲ್ಲಿಸಬೇಕಾದ ತಮ್ಮ ಕರ್ತವ್ಯ ಕೈಗೂಡಿತೆಂದು ಭಾವಿಸತಕ್ಕವರು! ಬರುವ ಆಸೆಯಿದ್ದರೆ ಇತರರಂತೆ ಇವರೂ ಬರಲಿ!" ಎನ್ನುವ ಮಾತುಗಳು ಬಿರಬಿರನೆ ಹೊರಟವು. ಶಿಸ್ತಿ ಪಾಲನೆಯಲ್ಲಿ ನಿರ್ದಾಕ್ಷಿಣ್ಯ ಗುಣ ಎಲ್ಲಕ್ಕಿಂತ ಪ್ರಧಾನವಾಗಿರಬೇಕಾದು ದಲ್ಲವೇ!

ಯುಕ್ತಪ್ರಾಂತದಲ್ಲಿ ವಾಲಂಟಿಯರ್ ಶಿಬಿರ ಶಿಕ್ಷಣ. ಅದಕ್ಕೆ ಜವಾಹರಲಾಲರು ಅಧಿಕಾರಿಗಳಾದರು. ವಯಸ್ಕರೂ ಕೂಡ ಆ ಗುಂಪಿನಲ್ಲಿ ಸೇರಿಕೊಂಡಿದ್ದರು. ಜವಾಹರಲಾಲರಿಗಿಂತ ಮೂರು ವರ್ಷ ಹಿರಿಯರಾಗಿರುವುದಲ್ಲದೆ ದೇಹದಾರ್ಢ್ಯವನ್ನು ಅಷ್ಟಾಗಿ ಪಡೆಯದ ಗೋವಿಂದವಲ್ಲಭ ಪಂಡಿತರೂ ಸೇರಿದ್ದರು. ಯಾರಾದರೇನು? ಎಲ್ಲರಂತೆ ಜುಬ್ಬ ಚಲ್ಲಣಗಳನ್ನು ಧರಿಸಬೇಕು, ಮೈಲಿಗಟ್ಟಲೆ ಜವಾಹರರೊಂದಿಗೆ ಹೆಜ್ಜೆ ಹಾಕುತ್ತಿರಬೇಕು. ಸೈನ್ಯಶಿಕ್ಷೆಯಲ್ಲಿ ಸಾರ್ಜೆಂಟ್ ಮಾಡತಕ್ಕ ಕೆಲಸವನ್ನು ಜವಾಹರಲಾಲರು ನಿರ್ದಾಕ್ಷಿಣ್ಯ ರೀತಿಮಾತ್ರದಿಂದಲ್ಲದೆ ನಿಷ್ಠುರವೆಂದು ತೋರಬಹುದಾದ ರೀತಿಯಿಂದಲೂ ಸಾಧಿಸಿಯೇ ಸಾಧಿಸಿದರು.

ರಾಷ್ಟ್ರಪತಿಯಾದ ಬಳಿಕ ಜವಾಹರಲಾಲರು ಮದರಾಸಿಗೆ ಬರುವ ಸಂದರ್ಭ. ಸೆಂಟ್ರಲ್ ಸ್ಟೇಷನ್ನಿನಲ್ಲಿ ವಾಲಂಟಿಯರ್ ಪಡೆ ಸಿದ್ಧವಾಗಿತ್ತು; ಜನರ ಗುಂಪನ್ನು ಕ್ರಮವಾಗಿ ನಿಲ್ಲಿಸುವ ಏರ್ಪಾಟೂ ನಡೆದಿತ್ತು. ಪ್ಲಾಟ್‌ಫಾರಮಿನಲ್ಲಿ ಸಾಕಾದಷ್ಟು ಸ್ಥಳ ಬಿಟ್ಟು ಸುತ್ತಲೂ ಅಂಚು ಕಟ್ಟಿ

ವಾಲಂಟಿಯರುಗಳು ಟಂಚನ್ ನಿಂತಿದ್ದರು. ರೈಲ್ ಬಂತು; ಜವಾಹರ ಲಾಲರಿಳಿದರು. ಜಯಕಾರಗಳು ವಿಜೃಂಭಿಸಿದವು. ಸ್ಥಳೀಯ ನಾಯಕರು ಹೂವಿನ ಮಾಲೆಯನ್ನು ಜವಾಹರಲಾಲರ ಕೊರಳಿಗೆ ಹಾಕುವ ಕ್ಷಣದಲ್ಲಿಯೆ ಜವಾಹರರು ಯಾವುದೋ ಒಂದು ಮೂಲೆಕಡೆಗೆ ವೇಗ ವೇಗವಾಗಿ ಹೆಜ್ಜೆಯಿಡುತ್ತ ಹೊರಟೇ ಬಿಟ್ಟರು. ಮಾಲೆಯನ್ನು ಕಯ್ಯಲ್ಲಿ ಹಿಡಿದಿದ್ದವರು ಹಾಗೆಯೆ ಅಪ್ರತಿಭರಾಗಿ ಕಾಣುತ್ತಾರೆ ಇದೇನೆಂದು! ಆ ಮೂಲೆಯಲ್ಲಿ ನಿಂತಿದ್ದ ವಾಲಂಟಿಯರಿಗೆ ಜನರನ್ನು ಶಾಂತರೀತಿಯಲ್ಲಿ ಮೇರೆದಪ್ಪದಂತೆ ನಿಲ್ಲಿಸಲು ಕಷ್ಟ ತೋರಿತ್ತು. ಗಾಡಿಯಿಂದಿಳಿದು ಸುತ್ತಲೂ ದೃಷ್ಟಿ ಬೀರಿದ ಜವಾಹರಲಾಲರಿಗೆ ಆ ಕಷ್ಟ ತಿಳಿಯಿತು; ತಕ್ಷಣವೇ ಹೊರಟಿದ್ದರು ಅತ್ತಕಡೆಗೆ. ಹೋದಕೂಡಲೆ ಕ್ರಮವನ್ನು ತಾವೇ ನೆಲೆಗೊಳಿಸಿ ಶಿಷ್ಟಿಯೆಂಬುದು ಜನರಾಶಿಗೆ ಬಲು ಆವಶ್ಯಕವೆಂದು ಎರಡು ವಾಕ್ಯಗಳನ್ನು ಹೇಳಿ ಹಿಂದಿರುಗಿ ಬಂದು ಆಮೇಲೆ ಹಾರ ತುರಾಯಿಗಳನ್ನು ಸ್ವೀಕರಿಸಿದರು.

ವಾಲಂಟಿಯರ್ ದಳವನ್ನು ಕಟ್ಟಿ ಕಾಂಗ್ರೆಸ್ಸಿನ ಅಂಗವಾಗಿ ಪೋಷಿಸಿಟ್ಟುಕೊಳ್ಳುವುದರಲ್ಲಿ ಜವಾಹರಲಾಲರು ಅಗ್ರಗಣ್ಯರಾದ ವಿಷಯವಾಗಲೇ ತಿಳಿದಂಶ. ವಾಲಂಟಿಯರ್ ಗುಂಪನ್ನೆಲ್ಲಿ ಕಂಡರೂ ಜವಾಹರ ಲಾಲರಿಗೆ ಅತ್ಯಾದರ. ಏತಕ್ಕೆ? ಭಾರತೀಯ ಜನರಿಗೆ ಸಾಮಾನ್ಯ ಜೀವನದಲ್ಲಿಯೆ ಶಿಷ್ಟಿಯತ್ಯವಶ್ಯವೆಂಬ ಅಭಿಪ್ರಾಯದಿಂದ ಹುಟ್ಟಿಬಂದ ಸಂಕಲ್ಪವೇ ಅದಕ್ಕೆ ಕಾರಣ. ಆ ಸಂಕಲ್ಪವನ್ನು ಅನುಸರಿಸುವುದರಲ್ಲಿ ವಿಕಾರವಾದರೆ ಜವಾಹರಲಾಲರಿಗೆ ಸಹಿಸದಿರುವುದಷ್ಟೇ ಅಲ್ಲ. ಇತರರಿಗೆಲ್ಲಿ ಪೂರ್ಣವಿರಾಮವೋ ಅಲ್ಲಿ ಜವಾಹರಲಾಲರಿಗೆ ಆರಂಭಸ್ಥಾನ; ಶಿಷ್ಟಿಸಾಧನೆಯೆಂಬುದು ಮೊದಲನೆ ಹೆಜ್ಜೆಮಾತ್ರ. ಮೊದಲನೆ ಹೆಜ್ಜೆಯನ್ನಿಟ್ಟ ಬಳಿಕ ಎರಡನೆ ಹೆಜ್ಜೆಯನ್ನಿಡದೆ ಅಲ್ಲಿಗೇ ವಿಶ್ರಮಿಸಲಾದೀತೇ?

ಆದರೆ ಗಾಂಧೀಜಿಯವರೋ ಜವಾಹರಲಾಲರೋ ಬರುವರೆಂದರೆ ಈಗ ಸೇರುವ ಜನಸಮೂಹವಾದರೂ ಎಷ್ಟು? ಹಿಂದೆಂದಾದರೂ ಎಲ್ಲಿಯಾದರೂ ಕಂಡಿದ್ದರೇನು ಯಾರಾದರೂ? ಲಕ್ಷೋಪಲಕ್ಷ ಜನರು ಸೇರುವುದಾದರೆ ಸ್ಥಳವನ್ನು ಹೇಗೆ ಹೊಂದಿಸಬೇಕು? ಜವಾಹರ

ಲಾಲರಿಗಾಗಿ ನೆರೆಯುವ ವಿರಾಟ್‌ಸಮೂಹಗಳ ವಿವರವೇ ಪತ್ರಿಕೆಗಳಲ್ಲಿ ತುಂಬಿಹೋಗುತ್ತದೆ. ಸುಶಿಕ್ಷಿತರಾಗಿ ಸಾವಿರಗಟ್ಟಲೆಯಾಗಿ ರಾಷ್ಟ್ರಸೇವಕರಿದ್ದು ಸಾಧ್ಯವಾದಷ್ಟು ಸಾಹಸಗೈದು ಕಟ್ಟೆ ಕಟ್ಟಿದರೂ ಆ ಕಟ್ಟೆಯೊಡದೇಹೋಗುತ್ತದೆ. ಮಹಡಿಮನೆ ಮೇಲೇರಿದ್ದ ಜನರಾಶಿಯು ಭಾರವನ್ನು ತಡೆಯುಲಾರದೆ ಆ ಮಹಡಿಯೇ ಕುಸಿದುಬಿತ್ತು! ಭಾಷಣಮಾಡಬೇಕಾಗಿದ್ದ ಜವಾಹರಲಾಲರು ತಾವೇ ಮುಂದೆ ನುಗ್ಗಿ ವಾಲಂಟಿಯರುಗಳ ದಳಪತಿತನವನ್ನು ನಿರ್ವಹಿಸಿದರು. ಮತ್ತೊಮ್ಮೆ ಹೆಂಗಸರು ಸೇರಿಕೊಂಡಿದ್ದ ಭಾಗದಲ್ಲಿ ಗುಜುಗುಂಪಲು! ವಾಲಂಟಿಯರುಗಳಿಗೆ ಸಾಧ್ಯವಾಗಲಿಲ್ಲ. ಆಗ ಜವಾಹರಲಾಲರು ತಾವೇ ವೇದಿಕೆಯಿಂದ ಧುಮುಕಿ ಮುಂದೆ ಹೊರಟು ಆಜ್ಞೆಗಳನ್ನು ಸಾರಿ ಅಲ್ಲಲ್ಲಿ ಕ್ರಮಗೊಳಿಸಿ ಬಂದು ಪುನಃ ವೇದಿಕೆಯನ್ನೇರಿಕೊಂಡು ತಮ್ಮ ಭಾಷಣವನ್ನು ಮಾಡಿ ಪೂರಯಿಸಿಕೊಟ್ಟರು.

ದೀನಬಂಧು ಆಂಡ್ರೂಸ್ ಜವಾಹರಲಾಲರ ಸ್ವಭಾವವನ್ನು ವಿವರಿಸುತ್ತ ಮಧ್ಯೆ ಸ್ಮರಿಸಿಕೊಳ್ಳುವ ವೃತ್ತಾಂತವೊಂದು ಎಲ್ಲರಿಗೂ ಸ್ಮರಣೀಯವಾಗಿದೆ. "ಗ್ರಾಮಾಂತರ ಪ್ರದೇಶಗಳಲ್ಲಿ ಜವಾಹರಲಾಲರು ಹಳ್ಳಿಯ ಜನಗಳಿಗೆ ಅಹಿಂಸಾಕ್ರಮವನ್ನು ತಿಳಿಯ ಹೇಳುತ್ತಿದ್ದರು. ಆ ಮುಗ್ಧ ಜನರಿಗೆ ಪೂರ್ತಿಯಾಗಿ ತಿಳಿಯಿತೋ ಇಲ್ಲವೋ ಎನ್ನುವ ಸಂದೇಹವಿತ್ತು. ಅವರಲ್ಲಿ ಮುಖಂಡರಾದವರನ್ನು ಮಾತನಾಡಿಸುತ್ತ ಜವಾಹರಲಾಲರು "ನಿಮ್ಮೆದುರಿನಲ್ಲಿರುವಾಗಲೇ ನನ್ನನ್ನು ಪೋಲೀಸ್ ಅಧಿಕಾರಿಗಳು ಹಿಡಿದು ಕೈಕೋಳಗಳನ್ನು ತೊಡಿಸಿದರೆ ನೀವೇನುಮಾಡುವಿರಿ?" ಎಂದು ಕೇಳಿದರು. ಅವರೆಲ್ಲರೂ ಒಟ್ಟಾಗಿ "ತಕ್ಷಣವೇ ಮುಂದೆ ನುಗ್ಗಿ ನಿಮ್ಮನ್ನು ಬಿಡಿಸಿಕೊಳ್ಳುತ್ತೇವೆ" ಎಂದುತ್ತರ ಕೊಟ್ಟರು. "ಛೆ, ಛೆ! ಏನು ಸಂಭವಿಸಿದರೂ ಅದನ್ನು ನೀವು ಮಾಡಬಾರದು. ನೀವೆಲ್ಲರೂ ಸಮಾಧಾನದಿಂದ ನೋಡುತ್ತಿರಬೇಕು. ಒಂದು ಹೆಜ್ಜೆಯನ್ನಾದರೂ ಮುಂದಕ್ಕಿಡಬಾರದು" ಎಂದಾಗ ಆ ಗ್ರಾಮಸ್ಥರು ದಿಗ್ಭ್ರಾಂತರಾದರು. ಜವಾಹರಲಾಲರು ಅತಿ ಸಹನವನ್ನು ತಾಳಿಕೊಂಡು ಅಹಿಂಸಾಧರ್ಮವನ್ನು ಉಪದೇಶಿಸುತ್ತ

ತಮ್ಮನ್ನು ಲಾಠಿಗಳಿಂದ ಹೊಡೆದ ಸಂದರ್ಭವಾದರೂ ಕೂಡ ಪ್ರತಿಯಾಗಿ ಯಾವತೆರನಾದ ಹಿಂಸೆಯನ್ನೂ ಎಸಗಬಾರದೆಂದರು. ಆಗ ಅವರು "ನಿಮ್ಮನ್ನು ಲಾಠಿಯಿಂದ ಹೊಡೆದಾಗಲೆ? ನಾವು ಹೇಗೆ ಸಹಿಸಿಕೊಂಡಿರುವುದು? ಆಗುವುದಿಲ್ಲ" ಎಂದರು. ಆಗ ಖಂಡಿತ ಸ್ವರದಿಂದ ಜವಾಹರಲಾಲರು "ಆಗುವುದಿಲ್ಲವೇ? ಆಗಲೇಬೇಕು. ನಿಮ್ಮ ಕೋಪವನ್ನೂ ಹಿಂಸೆಯನ್ನೂ ಸೈರಿಸಿಕೊಳ್ಳಲೇ ಬೇಕು" ಎನ್ನುತ್ತ ಪುನಃ ಅಹಿಂಸಾ ಕರ್ತವ್ಯದ ಪಾಠವನ್ನು ಮತ್ತೊಮ್ಮೆ ಮೊದಲಿಟ್ಟು ಹೇಳಿಕೊಟ್ಟರು."

ಶಿಷ್ಟಿಪಾಲನೆಯೇ ಜವಾಹರಲಾಲರಲ್ಲಿ ದೊಡ್ಡದಾದ ಗುಣವೆಂಬುದನ್ನು ತೋರಿಕೊಡತಕ್ಕುದು ಗಾಂಧೀಜಿಯೊಡನೆ ನಡೆಸಿದ ವ್ಯವಹಾರ. ತಮ್ಮ ಜೀವಮಾನದಲ್ಲೆಲ್ಲ ಅತಿ ಖಿನ್ನರಾದುದು ಅಸಹಯೋಗ ಕರ್ತವ್ಯಕ್ರಮ ಚಾರಿಚೌರದ ಸಲುವಾಗಿ ನಿಂತಾಗ ಅಥವಾ ಇರ್ವಿನ್ ಗಾಂಧೀಯೊಪ್ಪಂದ ನಡೆದಾಗ; ಆ ಎರಡು ಸಂದರ್ಭಗಳಲ್ಲಿಯೂ ಜವಾಹರಲಾಲರಿಗೆ ಗಾಂಧೀಜಿಯವರಲ್ಲಿಯೇ ಪ್ರಬಲವಾದ ಅಸಮಾಧಾನ. ಇತರ ನಾಯಕರಾರೂ ಇಷ್ಟು ಪರಿಮಾಣದಲ್ಲಿ ಅಸಮಾಧಾನಗೊಳ್ಳಲಿಲ್ಲ. ಪ್ರಾಯಶಃ ಆ ಕಾರಣದಿಂದಲೇ ಗಾಂಧೀಜಿಗೆ ಜವಾಹರಲಾಲರು ಅತಿ ಪ್ರಿಯರಾದುದು. ಪ್ರಬಲವಾದ ಅಸಮಾಧಾನ ಕಂಡಕಾರಣ ತಮಗಿಂತಲೂ ಜವಾಹರರಿಗೆ ಲಕ್ಷ್ಯಸಾಧನೆಯಲ್ಲಿ ತವಕವೆಂಬುದು ಗಾಂಧೀಜಿಯವರಿಗೆ ಸ್ಪಷ್ಟವಾಗಿರಬೇಕು. ಅತಿ ಪ್ರೀತಿಪಾತ್ರರಾದ ಜವಾಹರಲಾಲರಿಗೆ ಗಾಂಧೀಜಿಯವರಲ್ಲಿರುವ ಸಲಿಗೆ ಪ್ರಾಯಶಃ ದೇವದಾಸ ಗಾಂಧಿಯವರಿಗೂ ಇಲ್ಲ. ಕಾಗದ ಪತ್ರಗಳನ್ನು ಬರೆಯುವುದರಲ್ಲಿಯೂ ಅಷ್ಟೆ. ಒಂದು ಬಾರಿ ಯಾವನೋ ಸುದ್ದಿಗಾರ ಗಾಂಧೀಜಿಯೆದುರಿಗೆ ಕ್ಯಾಮಿರಾ ನಿಲ್ಲಿಸಿಟ್ಟು ನಯಭಯಗಳಿಂದಿದ್ದು ಪತ್ತೆ ಕೊಡದೆ ತನ್ನ ಕೆಲಸ ಮಾಡಿಕೊಳ್ಳುತ್ತಿದ್ದುದನ್ನು ಜವಾಹರಲಾಲರು ಗುರುತಿಸಿ ತಾವೇ ಅಲ್ಲಿಗೆ ಹೊರಟು ಮುಸುಕುಹಾಕಿಕೊಂಡು ಕ್ಯಾಮಿರವನ್ನು ಬಾಪುಜಿಯೆದುರಿಗೆ ತಿರುಗಿಸಿ ಹಿಡಿಯಲು ಬಾಪುಜಿ ಎದ್ದುಬಂದು "ಏನಿದು!" ಎನ್ನುತ್ತ ತಮ್ಮ ಕೋಲಿನಿಂದ ಆ ಪೆಟ್ಟಿಗೆಯನ್ನು ಚುಚ್ಚಿದರಂತೆ. ಬಾಪುಜಿಯ ಬಳಿ ಇಷ್ಟು ಸಲಿಗೆಯನ್ನು ಜವಾಹರಲಾಲರೂ ವಹಿಸಿಕೊಳ್ಳಲು

ಅವರ ಸ್ವತಂತ್ರಬುದ್ಧಿಯನ್ನು ಮೆಚ್ಚಿ ಬಾಪುಜಿ ಕೊಟ್ಟಿರುವ ಅವಕಾಶವೇ ಕಾರಣ. ಅಷ್ಟು ಸ್ವತಂತ್ರ ಸಂಕಲ್ಪಬಲವಿದ್ದವರಾದಾಗ್ಯೂ ಜವಾಹರ ಲಾಲರು ಅತ್ಯಸಮಾಧಾನಗೊಂಡಾಗಲೂ ಗಾಂಧೀಜಿಯವರಿಂದ ದೂರ ವಾಗದಿದ್ದುದಕ್ಕೆ ಕಾರಣವೇನಿರಬಹುದು? ಭಿನ್ನಾಭಿಪ್ರಾಯಗಳನ್ನು ಬೆಳೆಸಿದಾಗಲೂ ಕಲಹಕ್ಕೋ ಜಗಳಕ್ಕೋ ಆಸ್ಪದಕೊಡದಿರುವುದಕ್ಕೆ ಈ ಅನ್ಯೋನ್ಯ ಪ್ರೀತಿವಿಶ್ವಾಸಗಳು ಮಾತ್ರ ಕಾರಣವಲ್ಲ. ಗಾಂಧೀಜಿ ಯನ್ನು ಬಿಟ್ಟು ನಡೆಸುವಪ್ರಯತ್ನ ವ್ಯರ್ಥವೆಂಬ ಪರಿಜ್ಞಾನ ಜವಾಹರ ಲಾಲರಲ್ಲಿ ಬಲು ದೃಢವಾಗಿರುವುದಾದರೂ ಅಷ್ಟುಮಾತ್ರವೇ ಕಾರಣ ವಲ್ಲ. ಗಾಂಧೀಜಿಯನ್ನು ದಳಪತಿಯನ್ನಾಗಿ ಒಪ್ಪಿಕೊಂಡ ತರುವಾಯ ಶಿಷ್ಟನಾದ ಸಿಪಾಹಿಮಾತ್ರನಂತೆ ತಾವು ವರ್ತಿಸಬೇಕೆಂಬ ಸಂಕಲ್ಪ ನಿಜ ವಾದ ಕಾರಣ. ಒಪ್ಪಿಕೊಂಡ ಬಳಿಕ ದಳಪತಿಯನ್ನು ಬಿಟ್ಟುಕೊಡುವು ದೆಂದರೆ ಪರಮ ದ್ರೋಹ! ಅಂತಹ ದ್ರೋಹವನ್ನು ಕ್ಷಣಕಾಲವಾದರೂ ಜವಾಹರಲಾಲರು ಸಹಿಸಲಾರದವರು.

ಇಂಗ್ಲಿಷ್ ಜಾತಿಯ ಲೇಖಕನೊಬ್ಬಾತನು ಜವಾಹರಲಾಲರನ್ನು ವರ್ಣಿಸಿ ಕೊಡುತ್ತ ಅತಿ ವಿಸ್ಮಯಕಾರಕವಾದ ವೃತ್ತಾಂತವನ್ನು ವಿವರಿ ಸಿಟ್ಟಿರುವನು. ಒಂದಾನೊಂದು ದಿನ ಜವಾಹರಲಾಲರನ್ನು ಹುಡುಕಿ ಕೊಂಡು 25 ವರ್ಷ ವಯಸ್ಸಿನ ಇಂಗ್ಲಿಷ್ ಯುವಕನೊಬ್ಬನು ಬಂದನು; ಖಾದಿ ಯುಡುಪನ್ನು ಧರಿಸಿದ್ದನು. ವಿಶ್ವಾಸ ಸೆಳೆಯುವ ಮುಖವನ್ನೂ ನಿರ್ವಂಚಕತೆ ಬೀರುವ ನೇತ್ರಗಳನ್ನೂ ತೋರಿ ಜವಾಹರಲಾಲರಿಗೆ ತನ್ನ ವೃತ್ತಾಂತವನ್ನು ಅರಿಕೆಮಾಡಿದನು. "ನಾನು ಬ್ರಿಟಿಷ್ ಸೈನ್ಯ ದಲ್ಲಿ ಲೆಫ್ಟಿನೆಂಟ್ ಪದವಿಯಲ್ಲಿದ್ದವನು. ನನ್ನ ಪೂರ್ವಿಕರೆಲ್ಲರೂ ಸೈನ್ಯ ವನ್ನು ಸೇರಿ ಉದ್ಯೋಗಗೈದವರು. ವಿದ್ಯಾಭ್ಯಾಸ ಮುಗಿದ ತರುವಾಯ ನಾನೂ ಸೈನ್ಯದಲ್ಲಿ ಸೇರಿಕೊಂಡೆ. ಈಗ ವಿಶಾಲವಾದ ಯುದ್ಧ ವೊದ ಲಾಗಿದೆ. ಆದರೆ ಇತ್ತೀಚೆಗೆ ನಿಮ್ಮಂತಹವರ ಲೇಖನಗಳನ್ನೂ ಪುಸ್ತಕ ಗಳನ್ನೂ ಓದಿ ಈ ಬಗೆಯ ಯುದ್ಧವೆಷ್ಟು ಹೀನಾಯವೆಂಬುದು ಮನ ಸ್ಸಿಗೆ ತಿಳಿಯಿತು. ಈ ಉದ್ಯೋಗವೇ ಬೇಡವೆನ್ನಿಸಿತು. ನನ್ನ ಡ್ರೆಸ್ ಮುಂತಾದುವನ್ನು ಕಂಡು ಪರಮಾಸಹ್ಯವಾಯಿತು. ಅವುಗಳೆಲ್ಲವನ್ನೂ

ಕಿತ್ತೊಗೆದು ಬಿಟ್ಟು ಸೈನ್ಯವನ್ನು ತ್ಯಾಗಮಾಡಿ ಬಂದಿದ್ದೇನೆ. ಈಗ ನಾನೇನು ಮಾಡಿದರೆ ಯೋಗ್ಯ? ದಯೆಯಿಟ್ಟು ಹೇಳಿ" ಎಂದು ಹೇಳುತ್ತಿದ್ದಷ್ಟು ಹೊತ್ತು ಜವಾಹರಲಾಲರು ಮನಸ್ಸಿನಲ್ಲಿ ಯುವಕನ ನಿರ್ಮಲ ಸ್ವಭಾವವನ್ನೂ ಧರ್ಮಸಂಕಟವನ್ನೂ ಕುರಿತು ಯೋಚಿಸುತ್ತಿದ್ದರು. ಇಂಗ್ಲಿಷ್ ಜಾತಿಯ ಸೈನ್ಯಾಧಿಕಾರಿಯೇ ಅತೃಪ್ತಿಗೊಂಡು ಸೈನ್ಯ ಬಿಟ್ಟೋಡಿ ಬಂದ ಸಂದರ್ಭ; ಅದನ್ನು ಮತ್ತಾರಾದರೂ ಆಗಿದ್ದರೆ ಹತ್ತು ಹನ್ನೆರಡು ವಿಧಗಳಲ್ಲಿ ಉಪಯೋಗಿಸಿಕೊಳ್ಳಬಹುದಾಗಿತ್ತು. ಆದರೆ ಜವಾಹರಲಾಲರು ಜವಾಹರಲಾಲರು, ಮತ್ತಾರೋ ಅಲ್ಲ; ಗಾಂಧೀಜಿಯ ಆಪ್ತರಲ್ಲೊಬ್ಬರು. ಆ ಯುವಕನಲ್ಲಿ ಅನುಕಂಪವನ್ನು ವ್ಯಕ್ತಪಡಿಸಿದ ಬಳಿಕ "ಒಂದು ಧರ್ಮವನ್ನು ಬಿಟ್ಟು ಮತ್ತೊಂದನ್ನು ಸ್ವೀಕರಿಸುವುದರಲ್ಲಿ ಯಾವುದಕ್ಕೂ ದ್ರೋಹಗೈದಂತಾಗಬಾರದು. ಸೈನ್ಯತ್ಯಾಗಮಾಡಿ ಬಂದುದಕ್ಕಾಗಿ ನಿಮ್ಮ ಮೇಲೆ ದೊಡ್ಡ ಆಪಾದನೆ ಹೊರಿಸಿರುವರೆಂದು ನೀವೇ ಹೇಳುತ್ತಲಿರುವಿರಿ. ಅದನ್ನು ತಪ್ಪಿಸಿಕೊಂಡಿರುವುದು ಉತ್ತಮ ವರ್ತನೆಯೆನಿಸಲಾರದು. ನಿಮ್ಮ ನಿಶ್ಚಯವನ್ನು ಬರೆಗು ಕೊಟ್ಟಿರುವ ಕಾಗದದ ಇತ್ಯರ್ಥವಾಗುವವರೆಗೆ ಸೀವಲ್ಲಿಯೇ ಇರಬೇಕಾದುದು ನಿಮ್ಮ ಧೀರತೆಗೆ ಲಕ್ಷಣವೆಂದು ನನಗೆ ತೋರುತ್ತದೆ" ಎಂದು ಹೇಳಿದರು. ಗಾಂಧೀಜಿಗಿದನ್ನು ವಿವರಿಸಿ ಕೊಟ್ಟು ಜವಾಹರಲಾಲರು "ಆ ಯುವಕನು ನನ್ನ ಮಾತನ್ನು ಕೇಳಿ ಹಿಂದಕ್ಕೆ ಹೊರಟನು. ಈಗ ಪ್ರಾಯಶಃ ಶಿಕ್ಷೆಯನ್ನನುಭವಿಸುತ್ತಿದಾನೆ. ಆತನ ಮುಖವನ್ನು ನಾನು ಮರೆಯಲಾರೆನು" ಎಂದು ಕಾಗದವನ್ನು ಮುಗಿಸಿದ್ದರು. ತನ್ನ ಪುಸ್ತಕದಲ್ಲಿದನ್ನು ಬರೆಯುತ್ತ ಟಾಂಪ್ಸನ್ "ಜವಾಹರಲಾಲರನ್ನು ಇಂಗ್ಲಿಷ್ ಜಾತಿಯವರಾದ ನಾವುಗಳು ಎಷ್ಟು ಮೆಚ್ಚಿಕೊಂಡರೂ ಅಲ್ಪವೆನಿಸುತ್ತದೆ. ವಂಚಕತನವೆಂಬುದನ್ನು ಸ್ವಲ್ಪವಾದರೂ ಆತನು ಸಹಿಸಲಾರದವನು. ದ್ರೋಹವೆಂದರೂ ಹೇಡಿತನವೆಂದರೂ ಜವಾಹರಲಾಲರಿಗೆ ಅಸಹ್ಯ"ವೆಂಬುದಾಗಿ ವರ್ಣಿಸಿಕೊಂಡನು.

ಇಂತಹ ದೃಷ್ಟಾಂತಗಳನ್ನು ಬಾರಿಬಾರಿಗೂ ಕಾಣುತ್ತ ಹಿಂದೆ ಭರ್ತೃಹರಿ ಮೊದಲಾದವರು ನುಡಿದ "ಅದ್ಯೈವ ವಾ ಮರಣಮಸ್ತು

ಯುಗಾಂತರೇವಾ ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ", "ಪ್ರಾರಬ್ಧ ಮುತ್ತಮಜನಾ ನ ಪರಿತ್ಯಜಂತಿ", "ವಸುಧೈವ ಕುಟುಂಬಕಂ", "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಮುಂತಾದ ವಾಕ್ಯಗಳಿಗೆ ಉದಾಹರಣೆಗಳನ್ನು ಪ್ರತ್ಯಕ್ಷವಾಗಿ ಕಂಡಂತಾಗುತ್ತದೆ. ಅವುಗಳನ್ನು ರಚಿಸಿಟ್ಟ ಹಿಂದಿನ ಕಾಲದ ಉದ್ದಾಮಕವಿಗಳು ಗಾಂಧೀಜಿಯವರನ್ನೋ ಜವಾಹರಲಾಲರನ್ನೋ ತಮ್ಮೆದುರಿಗೆ ಕಣ್ಣಾರೆ ಕಂಡಿದ್ದ ಪಕ್ಷದಲ್ಲಿ 'ಸಂತಸ್ಸಾಶ್ಚರ್ಯ ಚರ್ಯಾಃ' ಎಂಬುದನ್ನು ಮತ್ತಷ್ಟು ಸೊಗಸಾಗಿ ಬಣ್ಣಿಸುತ್ತಿದ್ದರೆನ್ನಲು ಸಂದೇಹವೇನು?

ಶಿಷ್ಟಿಪಾಲನೆಯೇ ಸೈನ್ಯದ ಬಲ; ಆ ಬಲದಷ್ಟೇ ಅವಶ್ಯವಾದುದು ದಳಪತಿಯಾದವನ ದಕ್ಷತೆ. ಇಟ್ಟುಕೊಂಡ ಗುರಿಯನ್ನು ಸಾಧಿಸುವವರೆಗೂ ಒಳ್ಳೆ ದಳಪತಿಗೆ ವಿಶ್ರಾಂತಿಯಿರಲಾಗದು; ಉಪಾಯ ಚಾತುರ್ಯದೊಂದಿಗೆ ನಾನಾಬಗೆಯ ಸಿದ್ಧತೆಯನ್ನೂ ಆತನು ಕಟ್ಟಿಕೊಂಡಿರಬೇಕು. ಆಟಕ್ಕೆಂದೋ ವಿಹಾರಕ್ಕೆಂದೋ ಹೊರಡುವ ಸಂದರ್ಭಗಳಲ್ಲಿ ಕೂಡ ಜವಾಹರಲಾಲರು ಸರ್ವಸಿದ್ಧರಾಗಿಯೆ ಹೊರಡತಕ್ಕವರೆಂದು ತಂಗಿ ಗುರುತಿಸುತ್ತಾಳೆ. ಭಾರತದಂತಹ ವಿಶಾಲ ಭೂಭಾಗದ ಸ್ವಾತಂತ್ರ್ಯಸಾಧನೆಯ ಲಕ್ಷ್ಯವನ್ನಿಟ್ಟುಕೊಂಡು ನಾಲ್ವತ್ತು ಕೋಟಿ ಜನರನ್ನು ತಮ್ಮ ದಳವೆಂದು ಸ್ವೀಕರಿಸಿ ಕಾಂಗ್ರೆಸ್ಸೆಂಬ ಸೇನಾಗ್ರವನ್ನು ಶಿಕ್ಷಿಸುವುದರಲ್ಲಿಯೂ ನಡೆಸುವುದರಲ್ಲಿಯೂ ಎಷ್ಟು ದೊಡ್ಡ ಕರ್ತವ್ಯ ಭಾರವನ್ನು ಹೊರಬೇಕು! ವ್ಯವಸ್ಥಾಪಕನಾದ ದಳಪತಿಯ ದಕ್ಷತೆಯೆಷ್ಟು ಅಪಾರವಾಗಿರಬೇಕು! ಎಂತಹ ಸಂಭವವಾದರೂ ಎಂತಹ ಸಮಯವಾದರೂ ಮತಿಭ್ರಂಶನವೆಂಬುದು ಜವಾಹರರಲ್ಲಿಲ್ಲ. ಜವಾಹರಲಾಲರ ವ್ಯವಸ್ಥಾಪಕ ಸಾಮರ್ಥ್ಯಕ್ಕೆ ಒಂದು ನಿದರ್ಶನ ಸಾಕು ಸದ್ಯಕ್ಕೆ. ಬ್ರಿಟಿಷ್ ಹಿಂದುಸ್ಥಾನದ ಜನಬಲ 27 ಕೋಟಿಗಳಲ್ಲಿ ಯುಕ್ತಪ್ರಾಂತದ ಬಲ 5 ಕೋಟಿಗಳಿಗೆ ಸ್ವಲ್ಪ ಕಡಿಮೆ; ಕಾಂಗ್ರೆಸ್ ಬಲ 60 ಲಕ್ಷಗಳಲ್ಲಿ ಜವಾಹರಲಾಲ ಪ್ರಾಂತದ್ದು 15 ಲಕ್ಷ. ಇದು 1936ರಲ್ಲಿ; ಇನ್ನೂ ಜವಾಹರಲಾಲರು ದಳಪತಿಗಳಲ್ಲೊಬ್ಬರೆನಿಸಿದ್ದ ಕಾಲದಲ್ಲಿ.

ಪೂರ್ವಯೋಚನೆಯನ್ನೋಡಿಸಿ ವ್ಯವಸ್ಥೆಗೊಳಿಸುವುದರಲ್ಲಿ ಜವಾಹರಲಾಲರನ್ನು ಮೀರಿಸಿದವರೆಂದು ಸೂಚಿಸಬಹುದಾದುದು ಪ್ರಾಯಶಃ ಸರ್ದಾರ್ ವಲ್ಲಭ್ಬಾಯಿ ಪಟೇಲರೊಬ್ಬರನ್ನೇ! ಗಾಂಧೀಜಿಯವರ ಎಡಬಲಗಲ್ಲಿರತಕ್ಕ ದಂಡನಾಯಕರಲ್ಲಿ ಹಿಡಿದ ಪಟ್ಟನ್ನು ಬಿಡದೆ ಮಂದರಾದ್ರಿಯಂತೆ ಸ್ಥಿರಗೊಂಡು ದಕ್ಷತೆ ಕಾಣಿಸುವವರು ಸರ್ದಾರರು. ಆದರೆ ಗಾಂಧೀಜಿಯವರು ಹೇಳಿದುದಕ್ಕೆ ಪ್ರತಿಯಾಗಿ ಒಂದು ಮಾತನ್ನಾದರೂ ಆಡದವರು. ಯೋಚನೆಯನ್ನು ಗಾಂಧೀಜಿಗೆ ಬಿಟ್ಟುಕೊಟ್ಟು ನಿರ್ದಿಷ್ಟ ಕರ್ತವ್ಯವನ್ನು ಕಟ್ಟಿಕೊಂಡು ಅದನ್ನು ಸಾಧಿಸುವುದರಲ್ಲಿಯೇ ಸಕಲ ಚೈತನ್ಯವನ್ನೂ ಒಡ್ಡತಕ್ಕವರು. ಗಾಂಧೀಜಿ ಹೇಳಿದುದೇ ಆತನಿಗೆ ಪರಮ ಪ್ರಮಾಣ. ಜವಾಹರಲಾಲರು ತಮ್ಮ ಸ್ವಾತಂತ್ರ್ಯವನ್ನು ಆ ರೀತಿಯಲ್ಲಿ ಬಿಟ್ಟುಕೊಡತಕ್ಕವರೇ ಅಲ್ಲ. ತಂದೆ ಮೋತಿಲಾಲರೊಂದಿಗೆ ವಾದಿಸುತ್ತ ತಮ್ಮ ಬುದ್ಧಿಗೊಪ್ಪಿದುದನ್ನೇ ಸಾಧಿಸಬೇಕೆಂಬ ಸಂಕಲ್ಪಬಲವನ್ನು ಹಿಂದೆಯೇ ಕಾಣಿಸಿದ್ದವರಲ್ಲವೆ! ತಂದೆಗಿಂತಲೂ ಗಾಂಧೀಜಿಯವರು ಜವಾಹರಲಾಲರಿಗೆ ನೂರುಪಾಲು ಹೆಚ್ಚಾದವರು. ಗಾಂಧೀಜಿಯ ಮಹತ್ವವನ್ನು ಜವಾಹರಲಾಲರು ವರ್ಣಿಸಿ ಲೋಕಕ್ಕೆ ತೋರಿಕೊಟ್ಟಂತೆ ಬೇರಾರೂ ತೋರಿಕೊಟ್ಟಿಲ್ಲ. ಆ ಪುಣ್ಯಮೂರ್ತಿ ಬೋಧಿಸಿದ ಅಹಿಂಸಾಮಾರ್ಗವೆಷ್ಟು ಶ್ರೇಷ್ಠತಮವಾದುದೆಂದು ವಿವರಿಸಿಕೊಡುವುದರಲ್ಲಿ ಜವಾಹರರು ಜ್ಞಾನಲವದುರ್ವಿದಗ್ಧರನ್ನೋ ಅಲ್ಪವಿದ್ಯಾಮಹಾಗರ್ವಿಗಳನ್ನೋ ಧ್ವಂಸಗೊಳಿಸಿದಂತೆ ಬೇರಾರೂ ನೆರವೇರಿಸಲಿಲ್ಲ. ಲಂಡನ್ನಿನಲ್ಲಿ ಜವಾಹರಲಾಲರೊಮ್ಮೆ ಉಪನ್ಯಾಸಕೊಡುತ್ತಿದ್ದರು; ಕಾಂಗ್ರೆಸ್ ಕರ್ತವ್ಯಕಲಾಪಗಳನ್ನು ವಿವರಿಸುತ್ತಿದ್ದರು. ಅಹಿಂಸಾಮಾರ್ಗಕ್ಕೆ ಜವಾಹರಲಾಲರೊಪ್ಪಿದವರಲ್ಲವೆಂಬ ಮಿಥ್ಯಕಲ್ಪನೆಯಿಂದಲೋ ಸ್ವಂತ ಪ್ರಗಲ್ಭದಿಂದಲೋ ಪ್ರೇರಿತನಾದ ಭಾರತೀಯ ಯುವಕನೊಬ್ಬನು ಆ ಸಭೆಯಲ್ಲಿದ್ದನು. ಅಹಿಂಸಾಮಾರ್ಗದ ಪ್ರಸ್ತಾಪವೆತ್ತಿದಕೂಡಲೆ "ಷೇಮ್ ಷೇಮ್!" ಎಂದು ಕೂಗಿಯೇ ಬಿಟ್ಟನು! ಪ್ರಾಯಶಃ ಜವಾಹರಲಾಲರಿಗದರಿಂದ ಉತ್ತೇಜನವಾಗುವುದೆಂದಿದ್ದನೋ ಏನೋ! ಆದರೆ ಆದುದೇನು? ಆ ಕೂಗನ್ನು ಕೇಳಿದ ಕೂಡಲೆ

ಜವಾಹರಲಾಲರು ಕೆರಳಿದರು "ಷೇವ್ ಎನ್ನುವವರು ಯೋಚನೆ ನಡೆಸಿರುವರೋ? ಶಾಂತರೀತಿಯ ವರ್ತನೆ ಸಾಧನೆಗಳನ್ನು ಅವಮಾನಕರವೆಂದು ಭಾವಿಸುವವರೂ ಇದ್ದಾರೆಯೆ? ಶಾಂತತೆಯಲ್ಲಿ ಅವಮಾನವನ್ನು ಕಾಣುವವರ ಬುದ್ಧಿ ನನಗತಿ ವಿಸ್ಮಯವಾಗಿ ಕಾಣುತ್ತದೆ. ಶಾಂತಮಾರ್ಗವನ್ನು ಅವಲಂಬಿಸಿದ ಗಳಿಗೆಯಿಂದ ದೇಶೀಯರು ಎಷ್ಟು ಚೈತನ್ಯವನ್ನು ಪಡೆದಿದ್ದಾರೆಂಬುದರ ಸ್ಮರಣೆಯಿದೆಯೋ?" ಎಂದು ಮುಂತಾಗಿ ಪ್ರಹರಿಸಿಬಿಟ್ಟರು.

ಗಾಂಧೀಜಿಯವರಲ್ಲಿ ಜವಾಹರಲಾಲರಿಗೆ ಪರಮ ಗೌರವ ಪ್ರೀತಿಗಳುಂಟು. ಆದರೆ ಗಾಂಧೀಜಿ ಹೇಳಿದುದೆಲ್ಲವನ್ನೂ ತಾವು ಸ್ವಂತ ವಿಚಾರವಿಲ್ಲದೆ ಒಪ್ಪತಕ್ಕವರಲ್ಲ. ತಮ್ಮ ಬುದ್ಧಿಯ ತೇಜಸ್ಸನ್ನು ಸಮಯ ಸಂದರ್ಭಗಳಲ್ಲಿ ಕಾಣಿಸದಿರಲು ಸಾಧ್ಯವಿಲ್ಲ. ಏಕೆಂದರೆ ಸ್ವಭಾವತಃ ಜವಾಹರಲಾಲರದು ತೀಕ್ಷ್ಣವಾದ ಬುದ್ಧಿ; ಸ್ವತಂತ್ರ ಸಾಮರ್ಥ್ಯವುಳ್ಳ ಚೈತನ್ಯ. ಹೊರಗಿನ ಜಗತ್ತನ್ನು ಕಂಡು ಆ ಸಂಬಂಧವನ್ನು ಬಿಡದವರು; ನಾನಾ ರಾಷ್ಟ್ರಗಳ ಮಧ್ಯೆ ಭಾರತಕ್ಕಿರಬೇಕಾದ ಸ್ಥಾನಮಾನಗಳನ್ನು ಸ್ಫುಟವಾಗಿ ಮನಸ್ಸಿನಲ್ಲಿ ಕಾಣುವವರು. ಸ್ವಾತಂತ್ರ್ಯವೇ ಧ್ಯೇಯವಾಗಿರಬೇಕೆಂದು ವಾದ ಬೆಳೆಸಿ ಮೋತಿಲಾಲರನ್ನು ಮಾತ್ರವಲ್ಲದೆ ಗಾಂಧೀಜಿಯನ್ನೇ ಗೆದ್ದರು. ಗಾಂಧೀಜಿ ದೇಶಸ್ಥರಿಗೆ ವಿವರಿಸಿಟ್ಟ ರಚನಾತ್ಮಕ ವಿನಾಶಾತ್ಮಕ ಕರ್ತವ್ಯಗಳಿಗೆ ಜವಾಹರಲಾಲರು ಹೊಸ ಬಣ್ಣಕೊಟ್ಟಂತೆ ನಡೆಸಿರತಕ್ಕವರು. ಕರಾಚಿ ಕಾಂಗ್ರೆಸ್ಸಿನಲ್ಲಿ ಆಧಾರಭೂತ ಹಕ್ಕುಗಳ ವಿವರಕ್ಕೆ ಜವಾಹರಲಾಲರೇ ಕಾರಣಕರ್ತರಲ್ಲವೆ? ಹಾಗೆಯೆ ಇತ್ತೀಚಿಗೆ ಕಾನ್‌ಸ್ಟಿಟ್ಯುಯೆಂಟ್ ಅಸೆಂಬ್ಲಿ ಅಥವಾ ರಾಷ್ಟ್ರರೂಪವನ್ನು ಇತ್ಯರ್ಥಮಾಡಿ ಸ್ಥಾಪನೆಯನ್ನು ನಿರ್ಣಯಿಸಿ ಕೊಡುವ ಸರ್ವಜನ ಪ್ರತಿಮೆಯಾದಂತಹ ಸಭಾರಚನೆಯ ಗುರಿಯನ್ನು ಗಾಂಧೀಜಿಯ ಮುಂದಿಟ್ಟು ಆತನ ಒಪ್ಪಿಗೆಯನ್ನು ಕಟ್ಟಿದುದು ಜವಾಹರಲಾಲರೇ ಅಲ್ಲವೆ? ಕಾಂಗ್ರೆಸ್ ಉದ್ಯೋಗಿಗಳ ತಂಡವೊಂದು ಸಿವಿಲ್ ಸರ್ವಿಸ್ ಗುಂಪಿನಂತೆಯೆ ಇರಬೇಕಾದ ಅಂಶವೋ ಸಿವಿಲ್ ಲಿಬರ್ಟೀಸ್ ಯೂನಿಯನ್ ಎಂಬ ಯೋಜನೆಯೋ ನ್ಯಾಷನಲ್ ಪ್ಲಾನಿಂಗ್ ಎಂಬ ಅರ್ಥಾ

ಭ್ಯುದಯ ಕ್ರಮನಿರ್ಣಯ ಪ್ರಯತ್ನವೋ ಜವಾಹರಲಾಲರ ಸ್ವಂತ ಬುದ್ಧಿ ಪ್ರಯತ್ನಗಳಿಂದ ಹುಟ್ಟಿದುದೇ ವಿನಾ ಬೇರಲ್ಲ. ರಾಷ್ಟ್ರದ ಇತಿಹಾಸದಲ್ಲಿ ವಿಸ್ತಾರ ವಿಮರ್ಶೆಯಾಗತಕ್ಕ ವಿಚಾರವಿದು.

ಕೆಲಕಾಲ ಗಾಂಧೀಜಿಯನ್ನೂ ಜವಾಹರಲಾಲರನ್ನೂ ಪರಸ್ಪರ ಹೋಲಿಸುತ್ತ ಇಬ್ಬರಿಗೂ ಇರುವ ಅಂತರವನ್ನು ಬಿತ್ತರಿಸುತ್ತ ಇಬ್ಬರಿಗೂ ವ್ಯತ್ಯಾಸರೂಪದಲ್ಲಿ ಕಾಣಬಹುದಾದುದನ್ನು ಪರಸ್ಪರ ವಿರೋಧವೆಂದು ಭಾವಿಸಿಕೊಳ್ಳುವ ಭ್ರಾಂತಿ ಹಲಕೆಲವರಿಗೆ ಹಿಡಿಯಿತೋ ಎಂತೋ! ಪರಸ್ಪರ ವಿರೋಧವೆಂದು ಭಾವಿಸಿಕೊಂಡರೆ ನಮ್ಮನ್ನು ನಾವೇ ವಂಚಿಸಿಕೊಂಡಂತೆ ಪರಿಣಮಿಸುವುದು. ಮೇಲೆ ಮೇಲೆ ಗೋಚರಿಸುವ ಲಕ್ಷಣ ಭೇದಗಳನ್ನು ಗುರುತಿಟ್ಟುಕೊಂಡು ಮರುಳರಾಗುವುದು ತರವಲ್ಲ. ಒಬ್ಬರಲ್ಲೊಬ್ಬರು ಎಷ್ಟು ವಿಶ್ವಾಸ ಪ್ರೀತಿ ಬೆಳೆಸಿರುವರೆಂಬುದನ್ನು ತಿಳಿಯಲು ಯಾವ ಕಷ್ಟವೂ ಇಲ್ಲ. ಜವಾಹರಲಾಲರನ್ನು ಗಾಂಧೀಜಿ ವರ್ಣಿಸಿರುವುದನ್ನೋ ಗಾಂಧೀಜಿಯನ್ನು ಜವಾಹರಲಾಲರು ವರ್ಣಿಸಿರುವುದನ್ನೋ ಕೂಡಿಸಿಟ್ಟರೆ ಉತ್ತಮ ಗ್ರಂಥವೇ ಆದೀತು. ಜವಾಹರಲಾಲರಿಗೆ ಗಾಂಧೀಜಿ ತಂದೆಗಿಂತ ಹೆಚ್ಚು;* ಗಾಂಧೀಜಿಗೆ ಜವಾಹರಲಾಲರು ಮಗನಿಗಿಂತ ಹೆಚ್ಚು. ಇಂತಹ ತಂದೆ ಮಕ್ಕಳ ವಿಶ್ವಾಸ ಸಮಸ್ತ ಪೃಥ್ವಿಗೆ ಮಂಗಲಕಾರಕವೂ ಹೌದು, ಆಶ್ಚರ್ಯಕಾರಕವೂ ಹೌದು. ಹಿಂದೆ ಇಂತಹ ವ್ಯಕ್ತಿಗಳಾಗಲಿ ಇಂತಹ ಸಂಬಂಧವಾಗಲಿ ಲೋಕದಲ್ಲಿ ಕಾಣಲಿಲ್ಲ; ಮುಂದೆ ಕಾಣುವುದೂ ಇಲ್ಲ. ನಭೂತೋ ನಭವಿಷ್ಯತಿ! ಪದೇ

---

*ಲಾಹೋರ್ ಕಾಂಗ್ರೆಸ್ (1929) ಸಭೆಯಲ್ಲಿ ಮೋತಿಲಾಲರು ಅಧ್ಯಕ್ಷ ಪದವಿಯಿಂದ ಇಳಿದು ಬಂದು ಜವಾಹರಲಾಲರನ್ನು ಕೈಹಿಡಿದು ಕರೆದೊಯ್ದು ಆ ಪೀಠದಲ್ಲಿ ಕುಳ್ಳಿರಿಸಿ ರಾಷ್ಟ್ರಪತಿಯಧಿಕಾರವನ್ನು ಒಪ್ಪಿಸಿದ ಕೂಡಲೆ ಸ್ವರೂಪರಾಣಿಮಾತಾ ಮುಂದೆ ಬಂದು ಮಗನ ತಲೆಯನ್ನು ಹಸ್ತಗಳಿಂದ ಸವರಿ ಆಶ್ವಾಸನಗೈದರು. "ಇದೇನು ಹೆಂಗಸರ ಚರ್ಯೆ!" ಎನ್ನುತ್ತ ಜವಾಹರಲಾಲರು ತರುಣ ಚಾಪಲ್ಯದ ಅಸಹನ ಸೂಚಿಸತೊಡಗಿದರು. ಪಕ್ಕದಲ್ಲಿಯೇ ಇದ್ದ ಗಾಂಧೀಜಿ "ಸುಮ್ಮನೆ ಕುಳಿತುಕೋ! ಆಕೆ ನಿನ್ನ ತಾಯಿ! ನಿನ್ನನ್ನಾಶೀರ್ವದಿಸಲು ಆಕೆಗಿಂತ ಮತ್ತಾರಿಗೂ ಅಧಿಕಾರವಿಲ್ಲ!" ಎಂದರು. ಆಗ ಜವಾಹರಲಾಲರು ಮೃದುವಾಗಿ ನಕ್ಕುಬಿಟ್ಟರು.

ಪದೇ ಸ್ಮರಿಸಿ ಪುನಃ ಪುನಃ ವಿವರಿಸಿಕೊಂಡು ಸಾಮಾನ್ಯ ಜನರಾದ ನಮ್ಮಂತಹವರು ಚಿತ್ತಶುದ್ಧಿಯನ್ನು ಪಡೆಯತಕ್ಕುದು. ಎಷ್ಟು ಸಾರಿ ಹೇಳಿಕೊಂಡರೂ ಹಳಿಯದೆನ್ನಿಸುವುದೇ ಇಲ್ಲ. ವಾಸ್ತವವಾಗಿ ಇಬ್ಬರ ನಡುವೆ ಕಾಣುವ ಅಂತರ ಪರಸ್ಪರ ವಿರೋಧಸೂಚಕವಾದುದಲ್ಲ; ಪರಸ್ಪರ ಪೋಷಕವಾದುದು, ಪರಸ್ಪರ ಪೂರಕವಾದುದು. ಈರ್ವರೂಗೂಡಿ ಒಂದೇ ಶಕ್ತಿ; ಲೋಕೋದ್ಧಾರಕ ದಿವ್ಯ ಚೈತನ್ಯ. ಗಾಂಧೀಜಿಯಲ್ಲಿಲ್ಲದಿರಬಹುದಾದುದು•ಜವಾಹರಲಾಲರಲ್ಲುಂಟು ; ಜವಾಹರಲಾಲರಲ್ಲಿಲ್ಲದಿರಬಹುದಾದುದು ಗಾಂಧೀಜಿಯಲ್ಲುಂಟು. ಒಬ್ಬರ ಲೋಪವನ್ನು ಮತ್ತೊಬ್ಬರು ಪೂರ್ತಿಗೊಳಿಸುತ್ತ ಒಂದೇ ಕರ್ತವ್ಯದಲ್ಲಿ ನಿರತರಾದವರು. ಭಿನ್ನರಾಶಿಗಿಂತ ಏಕವಾಗಿರುವುದೇ ಬಲು ದೊಡ್ಡ ಭಾಗ. ಒಬ್ಬರನ್ನು ಸೂರ್ಯನಿಗೂ ಮತ್ತೊಬ್ಬರನ್ನು ಚಂದ್ರನಿಗೂ ಹೋಲಿಸಿಕೊಳ್ಳುವ ಚಾಪಲ್ಯ ನಮಗಿಷ್ಟವಾಗಬಹುದು. ಆದರೆ ಸೂರ್ಯನು ಅನೇಕ ವೇಳೆ ಶೀತ ಕಿರಣನಾಗಿಯೂ ಚಂದ್ರನು ತೀಕ್ಷ್ಣಾಂಶುವಾಗಿಯೂ ಪ್ರಕಾಶಿಸುತ್ತಾರೆ.

ಮೂಲತಃ ಗಾಂಧೀಜಿ ದೈವಭಕ್ತರು; ದಾರಿತಪ್ಪಿ ಬಂದಂತೆ ರಾಜಕೀಯ ರಂಗದಲ್ಲಿ ಕಾಣತಕ್ಕವರು. ಜವಾಹರಲಾಲರು ಮೂಲತಃ ಕವಿಹೃದಯವನ್ನು ಹೊತ್ತ ರಸಜ್ಞರು; ಅನಿವಾರ್ಯವಾಗಿ ರಾಜಕೀಯ ಕ್ಷೇತ್ರದಲ್ಲಿಳಿದವರು. ಭಕ್ತಿಮಾರ್ಗದಿಂದ ಸತ್ಯವನ್ನಾರಾಧಿಸುವವರೊಬ್ಬರಾದರೆ ಮತ್ತೊಬ್ಬರು ಸೌಂದರ್ಯೋಪಾಸಕರಾಗಿ ಸತ್ಯವನ್ನೇ ಆರಾಧಿಸತಕ್ಕವರು. ಸತ್ಯವೊಂದನ್ನೇ ಅಲಂಕಾರವಾಗಿ ಕಾಣುವ ಗಾಂಧೀಜಿ ಬಳಿಗೆ ಸುಳಿಯಲು ಮಿಥ್ಯವೆಂಬುದಕ್ಕೆ ವೇಷಧರಿಸುವ ಅಲಂಕಾರವೇ ದೊರಕುವುದಿಲ್ಲ; ಉಪಮಾರೂಪಕ ಪ್ರತೀಪಾದಿಗಳು ಅಲ್ಲಲ್ಲಿ ಅಡಗಿಕೊಂಡಿದ್ದು ಈತನ ಲೇಖನಿಮೇಲೆ ಕೂರಲು ಕ್ಷಣಮಾತ್ರದಾಸ್ಪದವಾದರೂ ದೊರಕೀತೇ ಎಂದು ದೂರದಿಂದಲೇ ತಪಿಸುತ್ತಿರಬೇಕು. ಜವಾಹರಲಾಲರಾದರೆ ಆ ಅಲಂಕಾರ ದೇವತೆಗಳ ಸೊಬಗನ್ನು ಪರೀಕ್ಷಿಸಿ ದುರ್ಬಲದೇವತೆಗಳನ್ನು ತಳ್ಳಿ ಸಮರ್ಥದೇವತೆಗಳನ್ನಾರಿಸಿ ಕಯ್ಯಲ್ಲಿ ಹಿಡಿದು ಮಾಯಾಮಿಥ್ಯಗಳನ್ನು ಭ್ರಷ್ಟಗೊಳಿಸುತ್ತಾರೆ. ಗಾಂಧೀಜಿಯ ಶೈಲಿಗೆ ಶಾಂತಿ ಅಧಿದೇವತೆಯಾದರೆ ಜವಾಹರಲಾಲರ ಶೈಲಿಗೆ ದಾಂತಿ

ಅಧಿದೇವತೆ. ಪ್ರಮಾಣತಃ ಶಾಂತಿಯಿಲ್ಲದೆ ದಾಂತಿಯಿಲ್ಲ; ದಾಂತಿಯಿಲ್ಲದೆ ಶಾಂತಿಯಿಲ್ಲ. ಪ್ರಾಕ್ತನ ಭಾರತದ ರಾಮರಾಜ್ಯವನ್ನೋ ಋಷಿವಾಕ್ಯಗಳನ್ನೋ ಪ್ರಮಾಣಭೂತವೆಂದು ಗಾಂಧೀಜಿ ಸ್ಮರಿಸಿ ಭಾರತೀಯರ ಉದ್ಧಾರಕ್ಕಾಗಿ ದುಡಿಯುವವರು; ಭವಿಷದ್ಭಾರತದ ತೇಜಸ್ವಿನ ರೂಪವನ್ನು ತಮ್ಮ ದೂರದೃಷ್ಟಿಯಿಂದ ಕಂಡು ಸಮೀಪಕ್ಕೆ ಬರಮಾಡಿಕೊಳ್ಳಲು ಜವಾಹರಲಾಲರು ಶ್ರಮಿಸುವವರು. ಧರ್ಮತತ್ತ್ವಗಳನ್ನು ಬಿಡಿಸಿ ಬಿತ್ತರಿಸಿಕೊಂಡ ತರುವಾಯ ಗಾಂಧೀಜಿ ರಾಜಕೀಯ ಕರ್ಮಕ್ಷೇತ್ರದಲ್ಲಿ ಆ ತತ್ತ್ವಗಳನ್ನು ನೆಲೆಗೊಳಿಸಲು ಯತ್ನಿಸುತ್ತಾರೆ; ಅದೇ ಕ್ಷೇತ್ರದಲ್ಲಿ ನ್ಯಾಯವಿಮರ್ಶಾಬುದ್ಧಿಯಿಂದ ಅವಿರತ ಕಾರ್ಯನಿರತರಾಗಿ ಲಕ್ಷ್ಯಸಾಧನೆಯವೇಳೆಗೆ ಅದೇ ಧರ್ಮತತ್ತ್ವಗಳಿಗೆ ಸರ್ವೋತ್ಕೃಷ್ಟ ನಿದರ್ಶನಗಳನ್ನೊದಗಿಸಲು ಜವಾಹರಲಾಲರು ಯತ್ನಿಸುತ್ತಾರೆ. ಪ್ರತಿಕ್ಷಣವೂ ಭಗವಂತನನ್ನು ಸ್ಮರಿಸುತ್ತ ಗಾಂಧೀಜಿ ಸಂಧ್ಯಾಸಮಯ ತಪ್ಪದೆ ಪ್ರಾರ್ಥನೆ ಸಲ್ಲಿಸುತ್ತಾರೆ; ಭಗವಂತನ ನಾಮಸ್ಮರಣೆಯನ್ನೂ ಮಾಡದಂತೆ ಕಾಣಿಸುತ್ತ ಜವಾಹರಲಾಲರು ಭಗವದ್ರೂಪದಿಂದಲೇ ಕಾಣುತ್ತಿರುತ್ತಾರೆ. ತಪಿಸುವ ಹೃದಯದ ಮೊರೆಗೆ ಪ್ರತಿಫಲವಾಗಿ ದೊರೆತ ದೃಢವಾದ ಬಾಹುವಿನಂತೆ ಗಾಂಧೀ ಜವಾಹರಲಾಲರ ಸಂಬಂಧ. ಭಾರತದ ಅಂತಃಕರಣವೇ ಗಾಂಧೀಜಿಯ ರೂಪವನ್ನು ಪಡೆದಿರುವುದಾದರೆ ಭಾರತದ ಚಾಪಲ್ಯ ಚಾಟುಲ್ಯಗಳು ಜವಾಹರಲಾಲರೆಂಬ ಮನೋಹರರೂಪವನ್ನು ಪಡೆದಿರುವುದು. ಜೇಡಿ ಮಣ್ಣನ್ನು ಕಯ್ಯಲ್ಲಿ ಹಿಡಿದು ಬಂಗಾರಗೊಳಿಸಿದ ಇಂದ್ರಜಾಲಿಕನ ಮಹಿಮೆಯಿಂದ ಹೇಡಿಗಳಿಗೆ ಪೌರುಷದ ಉಸಿರುತುಂಬಿ ಬೆನ್ನುಮೂಳೆ ಬಲಗೊಂಡಿತು; ಬಂಗಾರದ ರಾಶಿಯನ್ನು ರಕ್ಷಿಸಿಕೊಡತಕ್ಕ ಕುಬೇರಪುತ್ರ ನಳಕೂಬರನಂತೆಯೋ ಇಂದ್ರಕುವರ ಜಯಂತನಂತೆಯೋ ಕಾಣಿಸಿ ಬೆನ್ನು ಮೂಳೆಯನ್ನು ಕಯ್ಯಲ್ಲಿ ಹಿಡಿದು ಪ್ರಯೋಗಿಸಬಲ್ಲ ಶಕ್ತಿಧರನೂ ಆ ಇಂದ್ರಜಾಲಿಕನ ಮಹಿಮೆಯಿಂದಲೇ ಸನ್ನದ್ಧನಾಗಿರುವನು.

ಇನ್ನೂ ವಿಶದವಾಗಿಯೂ ಸ್ವಾರಸ್ಯವಾಗಿಯೂ ಈ ಋಷಿ ಗಾಂಧಿಯನ್ನೂ ರಾಜಸೂನು ಜವಾಹರಲಾಲರನ್ನೂ ವರ್ಣಿಸಿಕೊಡುವ ಕೆಲಸ

ಈಗ ಹುಟ್ಟಿರುವ ಅಥವಾ ಮುಂದೆ ಹುಟ್ಟಲಿರುವ ಕವಿಗಳಿಗಿರಲಿ. ಇಬ್ಬರನ್ನೂ ಆಪ್ತರೀತಿಯಿಂದ ಬಲ್ಲವರಾದ ಡಾ|| ಪಟ್ಟಾಭಿಸೀತಾರಾಮಯ್ಯನವರೊಮ್ಮೆ ಸೂಚಿಸಿದ ಹೋಲಿಕೆ ನಮಗೆ ಸಾಕು; "ಇಬ್ಬರೂ ಗಂಗಾ ಯಮುನಾ ನದಿಗಳ ಹಾಗೆ. ನಿರ್ಮಲೋದಕವನ್ನು ಹೊತ್ತು ಗಂಭೀರವಾಗಿ ಹರಿದುಬರುವ ಗಂಗಾನದಿಯಂತೆ ಗಾಂಧೀಜಿಯ ಅಹಿಂಸಾಧರ್ಮ; ವ್ಯಾಕುಲ ವ್ಯಾಮೋಹಗಳ ವೇಗದಿಂದ ಕೂಡಿ ಹರಿವ ಕಾಳಿಂದಿಯಂತೆ ಜವಾಹರಲಾಲರ ಚಟುಲರಭಸ. ಕೊನೆಗೆರಡೂ ಒಟ್ಟುಗೂಡಬೇಕಾದುದೇ! ಒಟ್ಟುಗೂಡಿದಾಗಲೇ ಆಳದೊಂದಿಗೆ ವಿಶಾಲವೂ ಹೆಚ್ಚುವುದು, ಶಾಸ್ತ್ರದೊಂದಿಗೆ ಧರ್ಮವೂ ಬೆರೆಯುವುದು, ಐಹಿಕವೆಂಬುದು ಪಾರಲೌಕಿಕದೊಂದಿಗೆ ಮಿಳಿತವಾಗುವುದು." ರವೀಂದ್ರನಾಥರು ಜಾಹ್ನವಿ ಜಮುನೆಗಳನ್ನು ಪುಣ್ಯಪಿಯುಶ್ಯೂಷಸ್ತನ್ಯ ವಾಹಿನಿಗಳೆಂದರಲ್ಲವೆ! ಪುಣ್ಯಸಾರವನ್ನು ಗಾಂಧೀಜಿಯಲ್ಲಿಯೂ ಸುಧಾಸಾರವನ್ನು ಜವಾಹರಲಾಲರಲ್ಲಿಯೂ ತುಂಬಿ ಭಾರತ ಭೂದೇವಿಯೇ ಲೋಕಕ್ಕೆತ್ತಿಹಿಡಿದಂತೆ ಭಾಸವಾಗುವುದಿಲ್ಲವೆ?

ಇಂದಿಗೆ ಐವತ್ತಾರು ವರ್ಷಗಳು ತುಂಬಿ ಐವತ್ತೇಳನೆಯ ವರ್ಷ ಮೊದಲಾಯಿತು ಜಯಂತ್ಯುತ್ಸವ ಸಂತೋಷತರುವುದಾದರೂ ವೃದ್ಧಾಪ್ಯ ಸಮೀಪಿಸುತ್ತಿದೆಯೆಂಬ ನೆನಪನ್ನೂ ಉಂಟುಮಾಡಿ ಕೊಡುವುದು. ಮೊನ್ನೆ ಚೀನಾ ಪ್ರವಾಸದಲ್ಲಿರುವಾಗಲೆ ಯಾವುದೋ ಮೆಟ್ಟಲುಗಳನ್ನೇರುವ ಉತ್ಸಾಹದ ಸಂದರ್ಭದಲ್ಲಿ ಜವಾಹರಲಾಲರ ದೇಹಕ್ಕೆ ಆಯಾಸವೇ ಆದ ಪರಿಣಾಮವನ್ನು ಮರೆಯತಕ್ಕುದಲ್ಲ. ದಿವ್ಯಾತ್ಮ ಜವಾಹರಲಾಲರ ಮನಸ್ಸಿಗೆ ನೋವನ್ನೋ ಶರೀರಕ್ಕೆ ಆಯಾಸವನ್ನೋ ಪ್ರಾಪ್ತಿಸದಂತೆಸಗುವ ನಮ್ಮ ಎಚ್ಚರ ತಗ್ಗದಿರಲೆಂದು ನಾವು ಬಯಸಿಕೊಳ್ಳಬೇಕು.

ಮೋತಿಲಾಲರು ವಿಧಿವಶರಾದಾಗ ಸಾಕ್ಷಾತ್ ಗಾಂಧೀಜಿ ತಮ್ಮ ಬಲಬಾಹು ನಷ್ಟವಾಯಿತೆಂದು ಆಕ್ರಂದನ ಮಾಡಿದರು. ಆ ನಷ್ಟದಿಂದ ಪಾರಾಗುವ ಸಾಧ್ಯತೆಯೇ ಆಗ ತೋರದಾಯಿತು. ಸಿಡಿಲು ಬಡಿದಂತೆ ಸಂಭವಿಸಿದ ಆ ದುಃಖವನ್ನು ಪೂಜ್ಯ ಗುರುವೂ ಇತರರೂ ಮರೆಯು

ವಂತೆ ಧೀರತನದಿಂದಲೂ ಸುಕುಮಾರತನದಿಂದಲೂ ವರ್ತಿಸಿದ ಜವಾಹರಲಾಲರ ಭವಿಷ್ಯದಲ್ಲಿ ಇನ್ನೂ ಮಹತ್ತರವಾದ ದುಃಖವನ್ನು ತಾಳಿಕೊಳ್ಳಲು ದೇಶಬಾಂಧವರಿಗೆ ಧೈರ್ಯಕೊಡುವ ಸನ್ನಿವೇಶ ಇನ್ನೂ ದೂರವಾಗಿಯೆ ಇರಲಿ! ಗಾಂಧೀಜಿಗೂ ಜವಾಹರಲಾಲರಿಗೂ ವಯಸ್ಸಿನಲ್ಲಿ ಇಪ್ಪತ್ತು ವರ್ಷಗಳ ಅಂತರ. ಕಾಲಪುರುಷನು ವಿಪರೀತವನ್ನಾಚರಿಸದಿದ್ದು ನಮ್ಮನ್ನು ಅನುಗ್ರಹಿಸಲಿ!

> ಪೂರ್ವದಲ್ಲಿ ವೃತ್ರನೆಂಬ ಘೋರಾಕಾರವುಳ್ಳ ರಾಕ್ಷಸನಿದ್ದನಂತೆ. ಎಷ್ಟೋ ಮಹದರಣ್ಯಗಳನ್ನೂ ಭಯಂಕರ ಗುಹೆಗಳನ್ನೂ ಹೊತ್ತುಕೊಂಡ ಪರ್ವತದಂತೆಯೇ ಆತನ ದೇಹವಿತ್ತು. ದೇವತೆಗಳೆಲ್ಲರೂ ಆ ಕಾಲದಲ್ಲಿ ಗೋವುಗಳನ್ನು ಕಾಪಾಡುತ್ತ ಅವುಗಳ ಕ್ಷೀರವನ್ನು ಸೇವಿಸುತ್ತ ಇದ್ದರು. ಆ ಗೋವುಗಳಿಗಾಸೆಪಟ್ಟು ವೃತ್ರಾಸುರನು ಸಮಯ ಹೊಂಚಿ ಅವುಗಳನ್ನು ಹಿಡಿದು ತನ್ನ ಮೈಯೊಳಗಿನ ಕಗ್ಗತ್ತಲೆ ತುಂಬಿದ ಗುಹೆಗಳಲ್ಲಿಯೇ ಬಚ್ಚಿಟ್ಟುಕೊಂಡನು. ಮಹಾಹಿಯೊಂದು ಭೃತ್ಯನಂತಾಗಿ ಆ ಗುಹೆಗಳ ದ್ವಾರಗಳನ್ನು ಕಾಯಲು ಸಿದ್ಧವಾಗಿ ತನ್ನ ದೀರ್ಘ ದೇಹದಿಂದ ಎಲ್ಲವನ್ನೂ ಮುಚ್ಚಿಕೊಂಡಿತು. ಅರ್ಥಾತ್ ನೀರಡಿಕೆಯಿಂದ ಬೆಂದ ಭೂಮಿಯ ಮೇಲೆ ವೃಷ್ಟಿಗರೆಯಲು ಹೊರಟ ಪಯೋನಿಧಿಗಳಾದ ಮೇಘಗಳನ್ನು ಅಂತರಿಕ್ಷದಲ್ಲಿ ಅಡ್ಡಿಮಾಡಿದ ಮಹಾ ಪರ್ವತವೇ ಆ ವೃತ್ರಾಸುರ. ತಮ್ಮ ಧೇನುಗಳನ್ನು ಕಾಣದೆ ದಿಕ್ಕೆಟ್ಟು ದೇವತೆಗಳೆಲ್ಲೆಲ್ಲಿಯೂ ಹುಡುಕಿದರು; ತಾಪದಿಂದ ಕಂಗಾಲಾದ ಭೂಮಿಯೊಣಗಿತು. ವಿಶಾಲ ವ್ಯಾಪ್ತಿಯುಳ್ಳವನೂ ಉನ್ನತನೂ ಆದ ವೃತ್ರನೆಂಬ ಕಳ್ಳ ರಾಕ್ಷಸನು ಗೋವುಗಳನ್ನು ಕದ್ದಿದ್ದ ಸಮಾಚಾರ ಕಡೆಗೆ ಇಂದ್ರನಿಗೆ ತಿಳಿಯಿತು. ಆ ವೃತ್ರನನ್ನು ಗೆಲ್ಲುವುದು ಹೇಗೆಂದು ಚಿಂತಿಸಿ ಚಿಂತಿಸಿ ಸತ್ಯಲೋಕಾಧಿಪತಿಯಾದ ಬ್ರಹ್ಮನ ಬಳಿಗೆ ಹೊರಟು ಕೇಳಿದನು. ಬ್ರಹ್ಮನಾಗ "ಆ ವೃತ್ರನು ವಿಶೇಷವಾದ ವರಗಳನ್ನು ಪಡೆದಿರುವನು; ಆ ರಾಕ್ಷಸನನ್ನು ನೀನು ಸುಲಭವಾಗಿ ಗೆಲ್ಲಲಾರೆ. ಜಗದಾಶ್ಚರ್ಯಕರವಾದ ಆಯುಧವನ್ನು ಸಂಪಾದಿಸಿದ ಹೊರತು ನಿನ್ನಿಂದ ಅತಿಬಲಾನ್ವಿತನಾದ ಆ ಅಸುರನನ್ನು ಜಯಿಸಲು ಶಕ್ಯವಿಲ್ಲ. ಸರಸ್ವತೀ ತೀರದಲ್ಲಿ ಆಶ್ರಮವಾಸಿಯಾದ ದಧೀಚ ಮಹರ್ಷಿಯ ಅನುಗ್ರಹವನ್ನು ನೀನು ಪಡೆಯಬೇಕು. ಆತನ ಅಸ್ಥಿಗಳನ್ನು ನೀನು ಯಾಚಿಸಬೇಕು; ಅಸ್ಥಿಸಮೂಹದಿಂದ ಹೊಸ ಆಯುಧವನ್ನು ನಿರ್ಮಿಸಿಕೊಳ್ಳಬೇಕು" ಎಂದ ಮಾತನ್ನು ಅನುಸರಿಸಿ ದೇವೇಂದ್ರನು ಆ ಆಶ್ರಮಕ್ಕೆ ಹೊರಟು ದಧೀಚ ಮಹರ್ಷಿಯೆದುರಿಗೆ ನಿಂತು ಭಿಕ್ಷೆಬೇಡಿದನು.

ಆತನು " ಇಷ್ಟು ಮಾತ್ರವನ್ನೇ ನೀನು ಕೇಳುತ್ತಿರುವುದು ? ನನ್ನ ಅಸ್ಥಿಗಳಿಂದ ದೇವತೆಗಳಿಗೂ ಧೇನುಗಳಿಗೂ ಸ್ವಲ್ಪ ಮಾತ್ರ ಪ್ರಯೋಜನವಾಗುವು ದಾದರೂ ಸಂತೋಷದಿಂದ ಕೊಡುವೆ"ನೆನ್ನುತ್ತ ಆಚಮನಾದಿಗಳಿಂದ ಶುದ್ಧಿ ಗೊಳಿಸಿ ತನ್ನ ಪವಿತ್ರ ದೇಹವನ್ನು ಬಿಟ್ಟುಕೊಟ್ಟನು. ಬೆನ್ನೆಲುಬನ್ನೂ ಇತರ ಮೂಳೆಗಳನ್ನೂ ಸೇರಿಸಿ ದೇವೇಂದ್ರನು ವಜ್ರವೆಂಬ ಆಯುಧವನ್ನು ನಿರ್ಮಿಸಿ ಕೊಂಡು ವೃತ್ರನೊಡನೆ ಯುದ್ಧಕ್ಕೆ ಹೊರಟನು. ವಜ್ರಾಘಾತದಿಂದ ವೃತ್ರನ ಬೆನ್ನು ಮುರಿಯಿತು; ಘೋರಾಹಿಯು ಉಸಿರು ಕಟ್ಟಿತು. ಕತ್ತಲೆಯೆಲ್ಲ ಬೆಳ ಕಾಗಿ ಗೋವುಗಳು ಆದರದಿಂದ ಹೊರಕ್ಕೆ ಬಂದು ಪಯೋವೃಷ್ಟಿಗರೆದವು. ದೇವತೆಗಳು ತೃಪ್ತರಾದರು; ಸಮಸ್ತ ಪೃಥ್ವಿಯೂ ಸಂತಸವನ್ನು ತಾಳಿತು.

ಹಳೆಯ ಕಥೆಯಾದರೂ ಇದು ಸೊಗಸಾದ ರೂಪಕ. ದಧೀಚನಂತೆ ಗಾಂಧೀಜಿ; ವಜ್ರಾಯುಧದಂತೆ ಜವಾಹರಲಾಲ್. ಇಂದಿನ ಘಟನೆಗಳನ್ನು ಮುಂದೆ ವಿವರಿಸಿಕೊಳ್ಳುವ ಪ್ರಧಾನ ಭಾರತವರ್ಷದ ನಿವಾಸಿಗಳು ಮಾತ್ರರಲ್ಲದೆ* ಉಪಭಾರತ ವರ್ಷಗಳ ನಿವಾಸಿಗಳೂ ಈ ರೂಪಕವನ್ನೇ ಅವಲಂಬಿಸಬಹುದು.

ಮೊನ್ನೆ ಪುಣೆಯಲ್ಲಿ ಗಾಂಧೀಜಿಯ ಬಳಿಯಲ್ಲಿಯೇ ಜವಾಹರಲಾಲರೂ ಇದ್ದರು. ಸಂಜೆಯ ಪ್ರಾರ್ಥನೆ ನಡೆಯಿತು. ಎಷ್ಟೋ ಮಂದಿ ಮೈದಾನದಲ್ಲಿ ಪ್ರಾರ್ಥನೆಗೆಂದು ಬಂದಿದ್ದವರು ಪ್ರಾರ್ಥನೆ ಮುಗಿದರೂ ಸ್ಥಳ ಬಿಟ್ಟು ಕದಲದೆ ಜವಾಹರಲಾಲರ ದರ್ಶನವನ್ನು ಕೇಳಿಯೇ ಬಿಟ್ಟರು. ಒಳಗಡೆ ಯಾವುದೋ ಕೆಲಸದಲ್ಲಿದ್ದ ಜವಾಹರಲಾಲರು ಬಲವಂತಕ್ಕೊಳಗಾಗಿ ಎರಡು ಕ್ಷಣ ಹೊರಗೆ ಬಂದು ಮುಖವನ್ನು ತೋರಿಸಿ ಹೊರಟುಬಿಟ್ಟರು. ಗಾಂಧೀಜಿಯವರು ಜನರ ಮೇಲೆ ಸಿಟ್ಟುಮಾಡಿ ಪರುಷವಾಕ್ಯಗಳನ್ನಾಡಿ "ದೇಶಕ್ಕಾಗಿ ಹಗಲಿರುಳೂ ದುಡಿಯುತ್ತಿರುವ ಪುಣ್ಯಜೀವಿಗಳ ಮನಸ್ಸಿಗೆ ಹಿಂಸೆಯನ್ನು ನಿಯೋಜನೆಯಾಗಿ ಒಡ್ಡುವ ನಿಮ್ಮಲ್ಲಿ ವಿವೇಕವೂ ಇಲ್ಲ, ದಾಕ್ಷಿಣ್ಯವೂ ಇಲ್ಲ. ಜವಾಹರಲಾಲರ ಜೀವನದಲ್ಲಿ ಪ್ರತಿಕ್ಷಣವೂ ಎಷ್ಟು ಅಮೂಲ್ಯವಾದು

---

* " ಭಾರತಸ್ಯಾಸ್ಯವರ್ಷಸ್ಯ ನವಭೇದಾನ್ನಿಬೋಧತ " ಎಂಬುದು ಪುರಾಣ ವಾಕ್ಯ. ಆಸೇತು ಹಿಮಾಚಲವಾಗಿರುವುದು ಪ್ರಧಾನ; ಇನ್ನೂ ಪೂರ್ವಕ್ಕೆ ಉಪ ಭಾರತ ವರ್ಷಗಳು.

ದೆಂಬುದನ್ನು ನೀವರಿತಿಲ್ಲವೋ? ಅರಿತಿದ್ದರೆ ಮರೆತು ಈ ರೀತಿಯಲ್ಲಿ ಸ್ವಾರ್ಥವನ್ನೂ ದುಷ್ಟತನವನ್ನೂ ಏಕೆ ಕಟ್ಟಿಕೊಂಡಿರಿ? ಹೀಗಾದರೆ ಸಹಿಸುವುದಕ್ಕಾಗುವುದಿಲ್ಲ!" ಎಂದರು. ನಿಜವಾಗಿ ಎಷ್ಟು ಸುಂದರ ದೃಶ್ಯವಿದು! ಜವಾಹರಲಾಲರ ರಕ್ಷೆಯನ್ನು ಗಾಂಧೀಜಿ ಹೊತ್ತುಕೊಂಡು ಜನರನ್ನು ಮರ್ದಿಸುವುದು! ತಾವು ನಡೆಸಿದ ಪ್ರಾರ್ಥನೆಗೆ ಜವಾಹರಲಾಲರು ಬಾರದಿದ್ದುದಕ್ಕಾಗಿ ಗಾಂಧೀಜಿ ಕೋಪಗೊಂಡರೆಂದು ಯಾರಾದರೂ ಭಾವಿಸುವುದಾದರೆ ಎಷ್ಟು ಅನರ್ಥ!

ಜವಾಹರಲಾಲರು ಪ್ರಾರ್ಥನಾ ಸಮಯಗಳಲ್ಲಿ ಸೇರಿಕೊಳ್ಳುವುದೇ ಇಲ್ಲ. ದೇವರ ಹೆಸರನ್ನೆತ್ತುವುದೂ ಇಲ್ಲ. ಹಾಗಾದರೇನು ಜವಾಹರಲಾಲರು ನಾಸ್ತಿಕಶಿಖಾಮಣಿಗಳೋ ಎಂದು ಕೇಳಿದರೆ ಖಂಡಿತವಾಗಿಯೂ ನಾಸ್ತಿಕರಲ್ಲವೆಂಬ ಉತ್ತರ ಬರುವುದು. ಪೂರ್ವಾಚಾರನಿಷ್ಠೆಯಿಲ್ಲದ ಆಸ್ತಿಕರಾಗಿರಬಹುದೋ ಎಂದು ಕೇಳುವುದಾದರೆ ಅದಕ್ಕುತ್ತರ ಅಲ್ಲವೆಂದು. ನಾಸ್ತಿಕರಂತೂ ಅಲ್ಲ, ಆಸ್ತಿಕರಲ್ಲಿಯೂ ಸೇರಿಸತಕ್ಕದ್ದಲ್ಲವೆಂದರೆ ಮತ್ತೇನು? ಇದಕ್ಕೆ ವಿಶದವಾದ ಸಮಾಧಾನ ಸದ್ಯಕ್ಕೆ ಬೇಡ. ಅಜ್ಞೇಯವಾದಿಗಳೆಂಬ ಜ್ಞಾಪಕವಿದ್ದರೆ ಸಾಕು. ಆ ವಾದವನ್ನು ಆಶ್ರಯಿಸಿದ ಬುದ್ಧದೇವನನ್ನು ಸಾಮಾನ್ಯರು ಭಗವತ್ಸ್ವರೂಪನೆಂದೇ ಭಾವಿಸಿಕೊಂಡರು. ವಿವೇಕಾನಂದರನ್ನು ಯಾರೋ ಬುದ್ಧದೇವನ ವಿಚಾರವಾಗಿ ಕೇಳಿದಾಗ "ಬುದ್ಧನು ದೇವರ ಹೆಸರನ್ನು ಸ್ಮರಿಸಬೇಕಾಗಿರಲಿಲ್ಲ. ಪ್ರತಿ ನರದಲ್ಲಿಯೂ ದೇವರನ್ನು ತುಂಬಿಕೊಂಡು ಭಗವನ್ಮತ್ತನಾಗಿದ್ದಾತ ನಾಮಸ್ಮರಣೆ ಮಾಡಬೇಕಾಗಿರಲಿಲ್ಲ" ಎಂದರು. ದೇವರ ಹೆಸರನ್ನೆತ್ತದೆ ಇರುವ ಜವಾಹರಲಾಲರು ಭಗವಂತನ ನಾಮೋಚ್ಚಾರ ಮಾಡಬೇಕಾಗಿಯೇ ಇಲ್ಲವೆಂದರೆ ಯಾವ ಅಪಚಾರವೂ ಕಾಣುವುದಿಲ್ಲ. ನಾಳೆ ನಮ್ಮೂರಿಗೆ ಜವಾಹರಲಾಲರು ಬಂದಾಗ ಜನರೆಲ್ಲರೂ ಸೇರಿ ಮೆರವಣಿಗೆ ನಡೆಸುವ ಸಮಯದಲ್ಲಿ ತಾಯಂದಿರು ತಮ್ಮ ಮಕ್ಕಳಿಗೆ "ಅಕೋ ದೇವರು! ನೋಡಿ ಕೈಮುಗಿ ಪುಟ್ಟ!" ಎಂದರೆ ಅಡ್ಡಿಪಡಿಸುವವರು ಯಾರು, ಅಡ್ಡಿ ಪಡಿಸಬಲ್ಲವರು ಯಾರು? ಆ ಮಾತು ಯಥಾರ್ಥವಲ್ಲವೆಂದು ಶಂಕಿಸಲು ಯಾರಿಗೆ ಸಾಧ್ಯ?

ಬುದ್ಧ ದೇವನಾದರೆ ಮೋಕ್ಷಸಾಧನೆಗೆಂದು ಸಂಸಾರ ತ್ಯಾಗ ಮಾಡಿದನು. ಜವಾಹರಲಾಲರು ಲೋಕಸಂಸಾರದ ಹಿತಕ್ಕಾಗಿಯೆ ಸಂಕಲ್ಪಿಸಿ ನಡೆಸಿದ ಸಾಧನೆಯಲ್ಲಿ ವಿಧಿಕೃತದಿಂದ ತಮ್ಮ ಸ್ವಂತ ಸಂಸಾರ ವಿಮುಕ್ತರಾದರು. ತಂದೆ ಮೋತಿಲಾಲರು ಕಾಲವಶರಾದಾಗ ಮಾತೆಯನ್ನೂ ತಂಗಿಯನ್ನೂ ಕುರಿತು "ಇನ್ನು ಮುಂದೆ ಆನಂದಭವನ ಮುಂತಾದುದೆಲ್ಲವೂ ನಿಮ್ಮದೆಂದು ತಿಳಿಯಬೇಕು; ನನ್ನದೆಂದು ಭಾವಿಸ ಬಾರದು, ನನಗಾಗಲಿ ಕಮಲೆಗಾಗಲಿ ಬೇಡ"ವೆಂದು ಬರೆದಿದ್ದರು. ಕಮಲಾದೇವಿಯನ್ನು ವಿಧಿ ನುಂಗಿತು; ಮತ್ತೆ ಹಲವು ವರ್ಷಗಳಲ್ಲಿ ತಾಯಿಯವರೂ ಬೀಬಿ ಅಮ್ಮನೂ ಬಿಟ್ಟು ಹೊರಟರು. ಇಂದಿರೆಯೂ ಮದುವೆಯಾಗಿ ಸ್ವಂತ ಸಂಸಾರ ಕಟ್ಟಿಕೊಂಡಳು. ಒಂದೊಂದಾಗಿ ಈ ವಿಯೋಗದುಃಖವೊದಗಿದಂತೆ ಒಂದೊಂದಾಗಿ ಬಂಧನಗಳೂ ಕಳಚಿಕೊಂಡವು. ತನ್ನ ಎಲ್ಲ ಮಕ್ಕಳನ್ನೂ ತಬ್ಬಿಕೊಂಡಂತೆ ಜವಾಹರಲಾಲರನ್ನು ಬಿಡಲಾರೆನೆಂದು ತಬ್ಬಿಕೊಂಡಿರುವ ಭಾರತದ ಪ್ರೇಮ ಬಂಧ ಮಾತ್ರ ಮತ್ತಷ್ಟು ಭದ್ರಗೊಳ್ಳುತ್ತ ಬಂದಿತು.

ಇಂದು ಭಾರತದ ಚೈತನ್ಯವೇ ಜವಾಹರಲಾಲ್ ಎಂಬ ರೂಪದಲ್ಲಿ ಓಡಾಡುತ್ತಲಿದೆ. ಭಾರತಕ್ಕೆ ಮಾತ್ರವೇ ಆತನಮೇಲೆ ಅಧಿಕಾರ; ಭಾರತಿಯ ಪ್ರೀತಿಯೊಂದೇ ಆತನ ಅಂತರಂಗದ ಪ್ರೀತಿ. ಪ್ರೀತಿ ನೆಲೆಸಿದ ಹೃದಯ ಯಾವುದಾದರೂ ಸುಖವುಂಟು, ದುಃಖವೂ ಉಂಟು. ಆದುದರಿಂದ ಭಾರತಕ್ಕೆ ಮೇಲಾದಾಗಲೆ ಜವಾಹರರಿಗೆ ಸುಖ; ಕೀಳಾದಾಗಲೆ ದುಃಖ. ಆ ಸೂಕ್ಷ್ಮ ಹೃದಯದ ಪ್ರೀತಿಗೆ ಪಾತ್ರರಾದ ಭಾರತೀಯರು ಸಂತೋಷವನ್ನು ಜವಾಹರರಿಗೆ ಕೊಡಬಲ್ಲರು; ಹಾಗೆಯೆ ನೋವನ್ನೂ ಉಂಟುಮಾಡಬಲ್ಲವರು. ತೇಜಸ್ಸಿಗೆ ಕುಂದನ್ನು ಕೊಡುವ ನೋವನ್ನು ನೀಡುವುದು ಪ್ರೀತಿಪಾತ್ರರಿಗೆ ಮಾತ್ರವೇ ಸಾಧ್ಯ! ಜವಾಹರಲಾಲರ ತೇಜಸ್ಸು ಭಾರತೀಯರ ಭಾಗ್ಯ ಸರ್ವಸ್ವವಾಗಿರುವ ಸಂದರ್ಭದಲ್ಲಿ ಅದನ್ನು ಕಾಪಾಡಿಕೊಳ್ಳುವ ಭಾರ ಭಾರತೀಯರದು; ಅಗತ್ಯವೂ ಭಾರತೀಯರದೇ. ಏಕೆಂದರೆ ಮುಂದಿನ ಭಾರತ ಚರಿತ್ರೆಯೆಲ್ಲವೂ ಜವಾಹರಲಾಲಮಯವಾಗಿಯೇ ಇರತಕ್ಕುದು. ಮುಂದಿರುವ

ವರ್ಷಗಳಲ್ಲಿ ಆತನು ನಡೆಸುವ ಜೀವನಯಾತ್ರೆಯು ಪ್ರತಿಕ್ಷಣವೂ ಲಕ್ಷ ಆಯುಷ್ಯಗಳ ತೂಕವುಳ್ಳದು. ಇದುವರೆಗೆ ಕಳೆದಿರುವ ಭಾಗಕ್ಕಿಂತ ಇನ್ನು ಮುಂದೆ ಕಳೆಯಬೇಕಾದುದು ದೊಡ್ಡದು, ಮಹಿಮಾನ್ವಿತವಾದುದು. ಇದುವರೆಗಿನ ಜವಾಹರಲಾಲರ ಜೀವನ ವೃತ್ತಾಂತ ತಿಳಿದು ಪುಷ್ಪಾಂಜಲಿಗೆ ಮೊದಲು ಬಾಷ್ಪಾಂಜಲಿಯನ್ನು ಸಲ್ಲಿಸುವವರೆಲ್ಲರೂ ಸಮೀಪಕಾಲದಲ್ಲಿಯೇ 'ಗಾಯನ್ತಿ ದೇವಾಃ ಕಿಲ ಗೀತಿಕಾನಿ ಧನ್ಯಾಸ್ತುತೇ ಭಾರತ ಭೂಮಿ ಭಾಗೇ' ಎಂದು ಹಾರ್ಮೋನಿಯಮ್ಮಿನ ಹಾವಳಿಯಿಲ್ಲದೆ ಹಾಡಿಕೊಳ್ಳಬಹುದು.

तमाम् शुध्